ನಾನು ಒಪ್ಪುವುದಿಲ್ಲ. ತಮ್ಮ ಹಣವನ್ನು ತಾವೇ ತೆಗೆದುಕೊಳ್ಳಿ."

"ಹೋಗಲಿ! ಹಣವನ್ನು ನೀನೇ ಇಟ್ಟುಕೋ! ನಾನು ಬೇಗಂ ಸಾಹೇಬಳಲ್ಲಿ ಮಾತನಾಡಿ ಬರುತ್ತೇನೆ."

"ಮಾತನಾಡಿ ಬನ್ನಿರಿ! ಅದಕ್ಕೇನು ?" ಎಂದು ಗುಡಿಸಲಿನ ಹತ್ತಿರ ಕರೆದು ಕೊಂಡು ಹೋದನು

ಮಿರ್ ಸಾದಕನು ಆ ಗುಡಿಸಲಿನ ಬಾಗಿಲಿನಲ್ಲಿ ಹೋಗಿ ನಿಂತನು. ಫಾತಿಮಳು ಮಾತನಾಡಲಿಲ್ಲ.

"ಫಾತಿಮಾ! ಏನು ಮಾಡುತ್ತಿ?"

ಫಾತಿಮಳು ತಲೆ ಎತ್ತಿ ನೋಡಿ ಗುರ್ತಿಸಿದಳು "ಕಳ್ಳನೆ! ನೀನು ಇಲ್ಲಿಗೂ ಬಂದೆಯಾ! ಏಕೆ ಬಂದೆ ?" ಎಂದಳು.

"ಫಾತಿಮಾ! ನಿನ್ನ ದುರವಸ್ಥೆಯನ್ನು ನೋಡಲಾರದೇ ಬಂದೆ ನನ್ನೊಡನೆ ಬಾ! ನಿನ್ನನ್ನು ರಾಜವೈಭವದಲ್ಲಿಡುತ್ತೇನೆ ದಿವಾನರ ಕಥೆಯು ಪೂರ್ತಿಯಾಗಿ ಹೋಯಿತು. ಇನ್ನು ನಾನೇ ನಿನಗೆ ಸ್ವಾಮಿ. ಸುಲ್ತಾನರು ನೆಪಮಾತ್ರಕ್ಕೆ ಈ ಗುಲಾಮನಿಗೆ ನಿನ್ನನ್ನು ಕೊಟ್ಟರು ನಿಜವಾಗಿಯೂ ಅವರು ನನಗಾಗಿಯೇ ನಿನ್ನನ್ನು ಕೊಟ್ಟದ್ದಾರೆ. ನನ್ನೊಡನೆ ಬಂದುಬಿಡು ನಾವು ಇಂದೇ ನಿಕಾಮಾಡಿಕೊಳ್ಳೋಣ"

ಫಾತಿಮಳು ಎದ್ದು ನಿಂತಳು. "ಪಾತಕಿಯೆ! ಇಲ್ಲಿಂದ ಹೊರಡು ಒಂದು ನಿಮಿಷವೂ, ಇಲ್ಲಿ ನಿಲ್ಲಬೇಡ ನನ್ನನ್ನು ಹಾಳುಮಾಡಿದವನು ನೀನು—ಮತ್ತೂ ಪಾಪದಲ್ಲಿಡುವುದಕ್ಕೆ ಬಂದೆಯಾ ? ದೂರ ಹೋಗು" ಎಂದಳು

ಕರೀಮನು "ಸ್ವಾಮಿ! ನೀವು ಶುದ್ಧ ಅಯೋಗ್ಯರಂತೆ ಕಾಣುತ್ತೀರಿ ತಾವು ಇಲ್ಲಿಂದ ಹೊರಡಿ" ಎಂದು ಮಿರ್ ಸಾದಕನನ್ನು ಹೊರದೂಡಿದನು.

ಮಿರ್ ಸಾದಕನು ಕೂಗಿಕೊಂಡನು.

ಅಷ್ಟರಲ್ಲಿ ನಾಲ್ವರು ಶಿದ್ದಿಗಳು ಓಡಿಬಂದರು.

ಅವರು ಬರುತ್ತಲೇ ಮಿರ್ ಸಾದಕನು "ಈ ಹೆಂಗಸನ್ನು ಹಿಡಿದುಕೊಳ್ಳಿ" ಎಂದು ಅಪ್ಪಣೆ ಮಾಡಿದನು.

ಅವರು ಗುಡಿಸಲಿನೊಳಕ್ಕೆ ನುಗ್ಗುವುದಕ್ಕೆ ಹೋದರು. ಕರೀಮನು ತಡೆದನು ಅವರವರಿಗೆ ದೊಡ್ಡ ಹೊಡೆದಾಟವಾಯಿತು. ಶಿದ್ದಿಯೊಬ್ಬನು ದೊಣ್ಣೆಯಿಂದ ಕರೀಮನ ತಲೆಯ ಮೇಲೆ ಒಂದೇಟು ಹೊಡೆದನು

ಕರೀಮನು ಅಸುವನ್ನು ನೀಗಿ—ನೆಲದಮೇಲೆ ಉರುಳಿದನು. ಶಿದ್ದಿಗಳು ಗುಡಿಸಿಲಿನೊಳಗೆ ನುಗ್ಗಿದರು. ಫಾತಿಮಳನ್ನು ಹಿಡಿದೆಳೆದರು. ಅವಳು ಬಹಳ ಹೋರಾ

ಡಿದಳು ಮಿರ್ಸಾದಕನನ್ನು ಬೈದಳು. ಏನೂ ಫಲವಾಗಲಿಲ್ಲ ಶಿದ್ದಿಗಳು ಅವಳ ಬಾಯಿಗೆ ಬಟ್ಟೆ ತುರುಕಿದರು ಕಣ್ಣು ಕಟ್ಟಿದರು. ಕೈಕಾಲುಗಳನ್ನು ಕಟ್ಟಿ ಹೊತ್ತು ಕೊಂಡರು ಮಿರ್ಸಾದಕನು ಮುಂದೆ ಮುಂದೆ ಹೋದನು. ಅವರು ಹಿಂದೆ ಹಿಂದೆ ನಡೆದರು ಬಹುದೂರದಲ್ಲಿ ಒಂದು ಚಿಕ್ಕ ದೇವಾಲಯ ಆ ದೇವಾಲಯದ ಸಮೀಪಕ್ಕೆ ಹೋದರು ಬಾಗಿಲು ಹಾಕಿತ್ತು ಒಡೆದು ತೆಗೆದರು ಒಳಗೆ ದೇವರೇ ಇರಲಿಲ್ಲ ಪಾಳು ದೇವಾಲಯ ಅಲ್ಲಿ ಫಾತಿಮಳನ್ನು ಇಳಿಸಿದರು

ಮಿರ್ಸಾದಕನು ಬಂದು ಕಟ್ಟುಗಳನ್ನು ಬಿಚ್ಚಿದನು "ಫಾತಿಮಾ ! ನೀನು ನನ್ನನ್ನು ವರಿಸಬೇಕು ಇಲ್ಲವೇ ಇಲ್ಲಿ ಅನ್ನಾಹಾರಗಳಿಲ್ಲದೆ ಸಾಯಬೇಕು" ಎಂದು ಕೇಕೆ ಹಾಕಿ ನಕ್ಕನು.

ಫಾತಿಮಳು "ನಾನು ಸಾಯುತ್ತೇನೆ" ಎಂದಳು

ಮಿರ್ಸಾದಕನು ಎಷ್ಟೋ ಹೆಣಗಾಡಿದನು ಫಾತಿಮಳು ಆಸ್ಪದ ಕೊಡಲಿಲ್ಲ ಮಿರ್ಸಾದಕನು ನಿರ್ವಿಣ್ಣನಾಗಿ ಹೊರಗೆ ಹೊರಡುತ್ತಾ-ಆ ಬಾಗಿಲಿಗೆ ಒಳಗಡೆ ಚಿಲಕವಿದೆಯೇ ಎಂದು ನೋಡಿದನು ಒಂದು ಚಿಲಕವಿತ್ತು ಅದನ್ನು ಕಿತ್ತುಹಾಕಿಸಿದನು. ಆ ಶಿದ್ದಿಗಳನ್ನು "ನೀವು ಇಲ್ಲೇ ಕಾದಿರಿ ನಾನು ಬೆಳಗಾಗುವುದರೊಳಗಾಗಿ ಬರುತ್ತೇನೆ" ಎಂದು ಹೇಳಿ-ಅವರಿಗೆ ಎರಡೆರಡು ಚಿನ್ನದ ವರಹಾಗಳನ್ನು ಕೊಟ್ಟು ಹೊರಟನು.

ವಾಚಕರೆ! ಈ ಮಿರ್ಸಾದಕನು ಹೀಗೇ ಅಲೆಯುತ್ತಿರಲಿ ಮಿರ್ಸಾದಕ್ ಮತ್ತು ಫಾತಿಮಳ ಕಥೆಯು ಇನ್ನೂ ಎಷ್ಟೋ ಇದೆ ಅವರನ್ನು ಇಲ್ಲೇ ಬಿಟ್ಟು— ನಾವು ಸುಲ್ತಾನರ ಅವಸ್ಥೆ ಏನಾಗಿದೆಯೆಂದು ನೋಡೋಣ ಇಂದು ದಿವಾನರನ್ನು ವಧೆ ಮಾಡುವ ದಿನ ಅಲ್ಲೇನು ನಡೆಯುತ್ತಿದೆಯೆಂಬುದನ್ನು ನೋಡೋಣ

ದರ್ಬಾರು ಮುಗಿಯುತ್ತಲೇ ಸುಲ್ತಾನನು ಅಂದು ಶಿಬಿರಕ್ಕೆ ಹೋಗಿ ತನ್ನ ಅಂತರ್ಗೃಹದಲ್ಲಿ ಮಲಗಿದನು ಅವನು ಚೈತನ್ಯಶೂನ್ಯನಾಗಿ ಹೋಗಿದ್ದಾನೆ. ಅಧಿಕಾರಬಲದಿಂದ ದಿವಾನರ ವಧೆಗೆ ಆಜ್ಞೆ ಮಾಡಿದ. ಆದರೆ ಅಂತರಾತ್ಮವು ಕುದಿಯುತ್ತಿದೆ ಮಂತ್ರಿಗಳ ಮಾತಿನಲ್ಲಿ ತಪ್ಪೇನಿದೆ ? ನಾವು ನಗರವನ್ನು ಎಲ್ಲಿ ಜಯಿಸಿದ್ದೇವೆ? ಇಯಜ್‌ಖಾನನು ಸಿಕ್ಕಲೇ ಇಲ್ಲ ಖಾಸಿಂಖಾನನನ್ನು ಗುಂಡಿನ ಬಾಯಿಗೆ ಕಟ್ಟಿಸಿದೆವು. ಅದರಿಂದ ಯಾವ ಕಾರ್ಯಸಾಧನೆಯಾಯಿತು ಇಂದು ನಮ್ಮ ದಿವಾನರ ಬಲಿ ಎಂತಹ ಅಘಟನಾಘಟನೆಗಳು ಮಿರ್ಸಾದಕನು ಎಂಥಾ ಪಾಪಿ. ಬೇಗಂಸಾಹೇಬಳ ಮೇಲೆ ಅತ್ಯಾಚಾರ ನಡೆಸಿದ್ದಾನೆ ಮಧ್ಯದಲ್ಲಿ ವಿಧಿಯು ಮಹಮದಾಲಿಯವರ ಬಾಯಿಂದ ಅಡ್ಡಬಂದು, ವಿಚಾರಣೆಯನ್ನು ಅರ್ಧದಲ್ಲಿ ಮುಗಿಸಿಬಿಟ್ಟಿತು ಇಲ್ಲದಿದ್ದರೆ ಮಿರ್ಸಾದಕನ ಗತಿ ಏನಾಗುತ್ತಿತ್ತು ಫಾತಿಮಾಬೇಗಂ ಎಂಥಾ ಚೆಲುವೆ. ರಾಜ

ಸಭೆಯಲ್ಲಿ ಇಂದು ಅವಳು ಎಷ್ಟು ಅವಿನಯದಿಂದ ವರ್ತಿಸಿದಳು ಇದೆಲ್ಲಾ ಏನು ಪ್ರಮಾದ. ಮೈಸೂರು ರಾಜ್ಯಕ್ಕೆ ಇದರಿಂದ ಎಳ್ಳಷ್ಟಾದರೂ ಪ್ರಯೋಜನ ಉಂಟೇ? ಮಹಮುದಾಲಿಯವರು ತಾವಾಗಿ ತಪ್ಪಿ—ತಪ್ಪಿನ ಮೇಲೆ ತಪ್ಪು ಮಾಡಿ ಪ್ರಾಣಕ್ಕೆ ಆಪತ್ತು ತಂದುಕೊಂಡರು ಇದರಲ್ಲಿ ಯಾರ ತಪ್ಪು ಏನಿದೆ ? ಘಾತಿಮಳು ತಾನಾಗಿ ನರಕದಲ್ಲಿ ಧುಮುಕಿದಳು ಅದಕ್ಕೆ ಯಾರೇನು ಮಾಡಲಾದೀತು ? ಅಲ್ಲಿಂದ ಬಂದು ಈ ರಾಜಸಭೆಯಲ್ಲಿ ಅಗ್ನಿಕುಂಡದಲ್ಲಿ ಹಾರಿದಳು ನಾನೇನು ಮಾಡಬಲ್ಲೆ ಹೀಗೆ ಆಲೋಚನೆ ಮಾಡುತ್ತಿದ್ದನು ಆದರೇನು, ಅವನ ಮನಸ್ಸಿಗೆ ಶಾಂತಿ ಇರಲಿಲ್ಲ ತನ್ನ ದೇನೂ ತಪ್ಪಿಲ್ಲವೆಂದು ನೂರು ಬಾರಿ ಅಂದುಕೊಂಡರೂ ನಡೆದ ಘಟನೆಗಳೆಲ್ಲಾ ವಿಪರೀತವಾದವುಗಳೆಂದು ಅವನಿಗೆ ಚಿಂತೆ ಅವನಿಗೆ ಎಲ್ಲವೂ ಶೂನ್ಯವಾಗಿ ತೋರಲಾರಂಭಿಸಿತು. ಎಷ್ಟೋ ಪ್ರಯತ್ನಪಟ್ಟನು. ನಿದ್ರೆ ಹತ್ತಲಿಲ್ಲ. ರಾತ್ರಿ ಭೋಜನಕ್ಕೆ ಏಳಲೇ ಇಲ್ಲ.

ಸುಮಾರು ರಾತ್ರಿ ಹನ್ನೊಂದು ಘಂಟೆಯ ಹೊತ್ತಿರಬಹುದು ಮಹಮುದಾಲಿಯವರು ಇಷ್ಟು ಹೊತ್ತಿಗೆ ಪರಲೋಕಪ್ರವಾಸ ಮಾಡಿರಬಹುದು ಎಂದು ಚಿಂತಿಸುತ್ತಿದ್ದನು. ಯಾರೋ ಕುದುರೆಯನ್ನು ದೌಡಾಯಿಸುತ್ತ ಬಂದರು. ಕುದುರೆಯ ಖುರಪುಟವು ಸುಲ್ತಾನರಿಗೆ ಕೇಳಿಸಿತು ಕುದುರೆಯಿಂದ ಇಳಿದವಳು ಹೆಂಗಸು. ಅವಳು—ಸುಲ್ತಾನರ ಅಂತರ್ಗೃಹಕ್ಕೆ ಹೋಗಬೇಕೆಂದು ಹೇಳಿದಳು. ಪಹರೆಯವರು ಬಿಡಲಿಲ್ಲ.

ಅವಳು ಅವಸರ ಅವಸರದಿಂದ "ಸುಲ್ತಾನರನ್ನೆಬ್ಬಿಸಿ" ಎಂದು ಹೇಳಿದಳು

ಯಾರೂ ಎಬ್ಬಿಸಲು ಸಾಧ್ಯವಿಲ್ಲವೆಂದು ಉತ್ತರ ಕೊಟ್ಟರು

ಅವಳು "ನಾನೇ ಕೂಗಿಕೊಳ್ಳುತ್ತೇನೆ" ಎಂದಳು

"ಕೂಗಿದರೆ ಹಿಡಿದು ಖೈದಿನಲ್ಲಿಡುತ್ತೇವೆ ಹೆಂಗಸಾಗಿ ಎಷ್ಟು ಧೈರ್ಯವೇ ನಿನಗೆ. ಈ ಮಧ್ಯರಾತ್ರಿಯಲ್ಲೇನು ಕೆಲಸ ಸುಲ್ತಾನರನ್ನೆಬ್ಬಿಸಬೇಕಂತೆ ಇವಳೇ ಕೂಗುತ್ತಾಳಂತೆ. ಕಬರದಾರ್ !" ಎಂದು ಹೆದರಿಸಿದನು

ಹೆಂಗಸು ಅಸಡ್ಡೆಯಿಂದ ಕೇಕೆ ಹಾಕಿ ನಕ್ಕಳು.

ಇದನ್ನು ಟಿಪ್ಪೂಸುಲ್ತಾನನು ಒಳಗಿನಿಂದ ಕಿವಿಗೊಟ್ಟು ಕೇಳುತ್ತಿದ್ದನು. ಅವನು ಆ ಧ್ವನಿಯನ್ನು ಹಿಂದೆ ಕೇಳಿದ್ದನು, ಅದೇ ನಗುವನ್ನು ಕೇಳಿದ್ದನು ಅದು ಜ್ಞಾಪಕಕ್ಕೆ ಬಂತು ತಟ್ಟನೆದ್ದು ಹೊರಗೆ ಬಂದನು. ಬಂದು ಆ ಹೆಂಗಸಿನ ಕೈ ಹಿಡಿದುಕೊಂಡು, "ರಾಧಾರಾಣಿಯವರೇ ದಯಮಾಡಿಸಿ!" ಎಂದು ತನ್ನ ಗುಡಾರದೊಳಗೆ ಕರೆದುಕೊಂಡು ಹೋದನು. ಅಲ್ಲಿ ಅವಳನ್ನು ಆಸನದಮೇಲೆ ಕೂಡಿಸಿದನು.

ರಾಧೆಯು ಗಾಬರಿಯಾಗಿ, "ಇಂದು ಸಾವಧಾನವಾಗಿ ಮಾತನಾಡಲು ಅಸ್ಪದ

ವಿಲ್ಲ. ದೌಲತ್‌ರಾಣಿಯವರ ಪ್ರಾರ್ಥನೆಯ ಮೇಲೆ ನಾನು ತಮ್ಮ ಶಿಬಿರಕ್ಕೆ ಬಂದಿದ್ದೇನೆ. ಇಂದೇ ತಮಗೆ – ದೌಲತ್‌ರಾಣಿಯವರ ಭೇಟಿ ಮಾಡಿಸುತ್ತೇನೆ. ಅವರು ತಮ್ಮಲ್ಲಿ ಒಂದು ಪ್ರಾರ್ಥನೆ ಮಾಡುತ್ತಾರೆ ಅದನ್ನು ಸಲ್ಲಿಸಿಕೊಡಬೇಕು. ದಿವಾನ್ ಮಹಮುದಾಲಿಯವರನ್ನು ಬಿಡುಗಡೆ ಮಾಡಬೇಕು ಬಿಡುಗಡೆ ಮಾಡದಿದ್ದರೂ, ಇಂದು ಅವರನ್ನು ವಧೆ ಮಾಡಕೂಡದು ನಾಳೆಯದಿನ ಬಡಾಫಕೀರರು ಬರುತ್ತಾರೆ. ಅವರು, ಮಹಮುದಾಲಿಯವರು ಅಪರಾಧಿಗಳೆಂದು ತೀರ್ಮಾನಿಸಿದರೆ ಶಿಕ್ಷೆ ಮಾಡಬಹುದು ಇದು ದೌಲತ್‌ರಾಣಿಯವರು ತಮ್ಮಲ್ಲಿ ಮಾಡುವ ಯಾಚನೆ !" ಎಂದಳು

"ರಾಧಾರಾಣಿಯವರೇ ! ತಪ್ಪು ನಿಮ್ಮದು ಅಪರಾಧವು ದೌಲತ್‌ರಾಣಿಯದು ಎಲ್ಲರಿಗಿಂತ ಹೆಚ್ಚು ಬಡಾಫಕೀರರದು. ಅವರು ಮೊದಲೇ ಏಕೆ ಆಜ್ಞೆಮಾಡಲಿಲ್ಲ. ದೌಲತ್ತಳು ಮಧ್ಯಾಹ್ನವೇ ಏಕೆ ಹೇಳಿಕಳುಹಿಸಲಿಲ್ಲ. ನೀವು ಸಂಧ್ಯಾಕಾಲವೇ ಏಕೆ ಬರಲಿಲ್ಲ ಹನ್ನೊಂದು ಗಂಟೆಗೆ ಸರಿಯಾಗಿ ಮಹಮುದಾಲಿಯವರಿಗೆ ಘೋರ ವಿಷವನ್ನು ಕೊಟ್ಟು ಕೊಲ್ಲುವಂತೆ ಆಜ್ಞೆಯಾಗಿದೆ"

ರಾಧೆಯು ನಡುಗುತ್ತಾ "ಏಳಿರಿ, ಹನ್ನೊಂದು ಇನ್ನೂ ಹೊಡೆದಿಲ್ಲ. ನಮ್ಮ ಕಾರ್ಯಗಳ ನಡುವೆ ಭಗವಂತನ ಸೂತ್ರವು ಇದೆ ಅವನೇನಾದರೂ ಉಳಿಸುತ್ತಾನೋ ನೋಡೋಣ." ಎಂದಳು

ಟಿಪ್ಪೂಸುಲ್ತಾನನು ಎದ್ದು ಹೊರಟನು. ಹೊರಗೆ ಬಂದು ಕುದುರೆಯನ್ನೇರಿದನು. ರಾಧೆಯೂ ಕುದುರೆಯನ್ನು ಹತ್ತಿ ಚಪ್ಪರಿಸಿದಳು ಕುದುರೆಗಳು ವಾಯು ವೇಗದಿಂದ ಮಹಮುದಾಲಿಯವರನ್ನು ಬಂಧನದಲ್ಲಿಟ್ಟಿದ್ದ ಸೈನ್ಯ ಶಿಬಿರದ ಹತ್ತಿರ ಬಂದವು ಇಬ್ಬರೂ ಬಂಧನಾಗಾರದ ಬಾಗಿಲಿಗೆ ಇಳಿದುಬಂದರು

ಪಹರೆಯವರು ಖಾಸ್ ಸನ್ನಿಧಾನವು ಬಂದಿದ್ದು ನೋಡಿ, ಪರಾಕ್ ಹೇಳಿದರು.

ಒಳಗೆ ಮಹಮುದಾಲಿಯು ದೇವರ ನಾಮವನ್ನು ಸ್ಮರಣೆ ಮಾಡುವುದು ಕೇಳಿಸಿತು. ರಾಧೆಯು—"ಇನ್ನೂ ಇಲ್ಲ, ಬದುಕಿದ್ದಾರೆ" ಎಂದಳು. ಇಬ್ಬರೂ—ಜೈಲಿನ ಬಾಗಿಲಿಗೆ ಹೋದರು ಪಹರೆಯವರೆಲ್ಲಾ ಸಡಗರದಿಂದ ದಾರಿಬಿಟ್ಟರು. ಜೈಲಿನ ಬಾಗಿಲು ತೆಗೆಯಿತು ಬಾಗಿಲು ತೆಗೆಯುವಷ್ಟರಲ್ಲಿ ಮಹಮುದಾಲಿಯು—ವಿಷದ ಪಾತ್ರೆಯಿಂದ ವಿಷವನ್ನು ಪೂರ್ತಿಯಾಗಿ ಪಾನಮಾಡಿಬಿಟ್ಟನು "ಅಲ್ಲಾ ಹೋ. ಅಕ್ಬರ್" ಎಂದು ಕೂಗುತ್ತಾ ಪಾತ್ರೆಯನ್ನು ಬಿಸಾಡಿದನು. ಅಷ್ಟರಲ್ಲಿ ರಾಧೆಯು ಮುಂದೆ ಬಂದು ನಿಂತಳು

ಮಹಮುದಾಲಿಯು ಗುರ್ತಿಸಿದನು. "ರಾಧಾರಾಣಿಯವರೇ, ಒಳ್ಳೆ ಸಮಯಕ್ಕೆ ಬಂದಿರಿ. ಎಲ್ಲರಿಗೂ ನನ್ನ ವಂದನೆಗಳು" ಎಂದು ಹೇಳಿ ಕಣ್ಣು ಮುಚ್ಚಿದನು, ನೆಲದಲ್ಲಿ ಉರುಳಿದನು.

ರಾಧಾರಾಣಿಯು ಗಟ್ಟಿಯಾಗಿ ಅಳತೊಡಗಿದಳು

ಮಹಮುದಾಲಿಯು "ದಾಹ! ದಾಹ! ಎಂದು ಕೂಗಿದನು ಪರಿಚಾರಕರು ನೀರುತಂದರು. ರಾಧೆಯು ಕುಡಿಸಿದಳು ಮಹಮುದಾಲಿಯ ಶರೀರವು ಒದ್ದಾಡಿತು ಸುಲ್ತಾನನು ಕಣ್ಣು ಎವೆಇಕ್ಕದೆ ನೋಡುತ್ತ ನಿಂತಿದ್ದನು. ಬಡಾಫಕೀರರು ಜೈಲು ಖಾನೆಯನ್ನು ಪ್ರವೇಶಿಸಿದರು ಹೋಗಿ ಮಹಮುದಾಲಿಯ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು, ಮುಖದಮೇಲೆ ಮುಖವನ್ನಿಟ್ಟು ಚುಂಬಿಸಿದರು. ಪ್ರಾಣವು ಹಾರಿಹೋಯಿತು ಬಡಾಫಕೀರರ ಕಣ್ಣುಗಳಲ್ಲಿ ತಟತಟನೆ ನೀರು ಸುರಿಯಿತು.

ಸುಲ್ತಾನನು ಎಲ್ಲವನ್ನೂ ನೋಡುತ್ತಾ ಕಲ್ಲುಕಂಬದಂತೆ ನಿಂತಿದ್ದನು.

ಬಡಾಫಕೀರರು "ರಾಧಾರಾಣಿಯವರೇ! ತಾವು ನನಗೊಂದು ಉಪಕಾರವನ್ನು ಮಾಡಬಲ್ಲಿರಾ?" ಎಂದರು.

ರಾಧೆಯು "ಫಕೀರಜೀ! ಅಪ್ಪಣೆಯಾಗಲಿ" ಎಂದಳು

"ಈ ಪುಣ್ಯಾತ್ಮನ ಶರೀರವನ್ನು ನಗರದಲ್ಲಿ ಗೋರಿ ಮಾಡಿಸಬೇಕು ಮಹಮುದಾಲಿಯವರ ಬೇಗಂ ಸಾಹೇಬಳನ್ನು ಪತ್ತೆಮಾಡಿಸಿ ಕೊಡಬೇಕು"

"ಅಪ್ಪಣೆ!"

ಬಡಾಫಕೀರರು ಮಹಮುದಾಲಿಯವರ ತಲೆಯನ್ನು ಕೆಳಗಿಟ್ಟು ಎದ್ದು ನಿಂತರು. —ಎರಡು ಹೆಜ್ಜೆ ಮುಂದೆ ಇಟ್ಟರು. ಸುಲ್ತಾನನು ಬಂದು ಸಲಾಂ ಮಾಡಿದನು

ಬಡಾಫಕೀರರು ಮಾತನಾಡಲಿಲ್ಲ. ಸುಲ್ತಾನನು ಅವರ ಕಾಲಿಗೆ ಬಿದ್ದು ಕ್ಷಮಾ ಪ್ರಾರ್ಥನೆ ಮಾಡಿದನು.

ಫಕೀರನು—"ಸುಲ್ತಾನರೇ! ನಾನು ಕ್ಷಮಿಸುತ್ತೇನೆ ಈ ಲೋಕವು ನಿಮ್ಮನ್ನು ಕ್ಷಮಿಸದು. ಅಲ್ಲಾನ ಮುಂದೆ ನೀವು ನಿಮ್ಮ ತಪ್ಪನ್ನು ಒಪ್ಪಿಕೊಳ್ಳಲೇಬೇಕಾಗುವುದು ಈ ತಪ್ಪು ಮಹಾಪುರುಷನಾದ ಮಹಮುದಾಲಿಯದು ಅವನು ವಿರಕ್ತ ಪುರುಷ! ದೇವರಭಕ್ತ! ಅವನಿಗೇಕೆ ದಿವಾನಗಿರಿ? ಅವನಿಗೇಕೆ ಯುದ್ಧವಿಗ್ರಹಗಳು? ಅವನು ದಾರಿಕಾಣದೆ ಅಲೆಯುತ್ತಿದ್ದನು ದೇವರು ದಾರಿ ತೋರಿಸಿ, ಕರೆದುಕೊಂಡನು. ನೀವು ಕೊಲ್ಲಬೇಕೆಂದರೆ ಕೊಲ್ಲಲಾದೀತೆ? ಈಗ ಮಹಮುದಾಲಿಯವರನ್ನು ಬದುಕಿಸಬೇಕೆಂದೇ ಇಲ್ಲಿಗೆ ಓಡಿಬಂದಿರಿ! ಬದುಕಿಸುವುದು ನಿಮ್ಮಿಂದ ಸಾಧ್ಯವಾಯಿತೆ? ಸಾವು ಬದುಕುಗಳು—ಆ ಭಗವಂತನ ಅಧೀನ!" ಎಂದುಹೇಳಿ ಹೊರಟು ಹೋದನು

ಅಲ್ಲಿ ರಾಧಾರಾಣಿಯೂ ಸುಲ್ತಾನನು ಹೊರತಾಗಿ ಮತ್ತಾರೂ ಇರಲಿಲ್ಲ ಅವರಿಬ್ಬರೂ ಮಹಮುದಾಲಿಯ ಶವವನ್ನು ಎತ್ತಿ ಮಂಚದ ಮೇಲೆ ಮಲಗಿಸಿದರು. ರಾಧಾರಾಣಿಯು ಹೊರಟಳು. ಅವಳನ್ನು ಅನುಸರಿಸಿ ಸುಲ್ತಾನನೂ ಹೊರಟನು.

ಶಿಬಿರದಿಂದ ಹೊರಗೆ ಬರುತ್ತಲೇ—"ರಾಧಾರಾಣಿ ! ನೀವೆಲ್ಲಿಗೆ ಹೋಗುವಿರಿ ?" ಎಂದು ಸುಲ್ತಾನನು ಕೇಳಿದನು.

"ಸುಲ್ತಾನ್ ! ನಾನು ಫಾತಿಮಾಬೇಗಂಳನ್ನು ಹುಡುಕುವುದಕ್ಕೆ ಹೋಗುತ್ತೇನೆ "

"ಈ ನಿಶಿರಾತ್ರಿಯಲ್ಲಿ ನೀವೆಲ್ಲಿ ಹುಡುಕುತ್ತೀರಿ ? ನಾನು ಬಂದು ಫಾತಿಮಳನ್ನು ಪತ್ತೆ ಮಾಡಿಸಿ ಕೊಡುತ್ತೇನೆ." ಎಂದು ಹೇಳಿ ಸುಲ್ತಾನನೂ ಹೋದನು ವಧ್ಯ ಮರದ ಹತ್ತಿರ ಹೋಗಿ, ಆ ಗುಡಿಸಲಿನ ಹತ್ತಿರ ನೋಡಿದನು ಕರೀಮನ ಶವವು ಬಾಗಿಲಲ್ಲಿ ಬಿದ್ದಿತ್ತು ಗುಡಿಸಲಿನೊಳಗೆ ಹೋಗಿ ನೋಡಿದನು. ಶೂನ್ಯವಾಗಿತ್ತು.

"ದೇವಿ ! ಯಾರೋ ಕಳ್ಳರು ಫಾತಿಮಾಬೇಗಂರವರನ್ನು ಅಪಹರಿಸಿಕೊಂಡು ಹೋಗಿದ್ದಾರೆ" ಎಂದು ಸುಲ್ತಾನನು ಹೇಳಿದನು

"ಇನ್ನು ನೀವು ಹುಡುಕಲಾರಿರಿ ! ನಾನು ಹುಡುಕಿಕೊಂಡು ಬರುತ್ತೇನೆ" ಎಂದು ಹೇಳಿ ಸುಲ್ತಾನನನ್ನು ಶಿಬಿರಕ್ಕೆ ಕಳಿಸಿ—ತಾನು ಏಕಾಕಿನಿಯಾಗಿ ಶಿಬಿರಕ್ಕೆ ಹೊರಟಳು

ಕಾಡಿನಲ್ಲಿ ದೇವಾಲಯದ ಬಳಿ ಮನುಷ್ಯರು ಮಾತನಾಡುವ ಸದ್ದು ಕೇಳಿಸಿತು ಕುದುರೆಯ ಕಾಲು ಸದ್ದು ಕೇಳಿ, ಶಿದ್ದಿಗಳು ಹೆದರಿದರು ರಾಧೆಯು ದೇವಾಲಯದ ಹತ್ತಿರ ಹೋಗಿ ಕುದುರೆಯನ್ನು ನಿಲ್ಲಿಸಿದಳು ಕುದುರೆಯ ಮೇಲೆ ಬಂದಿರುವವಳು ಹೆಂಗಸೆಂದು ತಿಳಿದು, ಶಿದ್ದಿಗಳು ಧೈರ್ಯದಿಂದ ಬಂದು "ನೀನಾರು ? ಇಲ್ಲಿಗೇಕೆ ಬಂದೆ ? ಹೊರಟು ಹೋಗು !" ಎಂದು ಗದ್ದರಿಸಿದರು.

ರಾಧೆಯು ನಗುತ್ತಾ, "ಈ ದೇವಾಲಯವು ನನ್ನದು ! ನೀವು ಒಳ್ಳೇಮಾತಿನಲ್ಲಿ ಹೊರಟುಹೋಗಿರಿ ಇಲ್ಲದಿದ್ದರೆ ಪ್ರಾಣಕ್ಕೆ ಸಂಚಕಾರ ಬಂದೀತು" ಎಂದಳು.

ಶಿದ್ದಿಗಳು "ಹೆಂಗಸು, ಹಿಂದೂ ಹೆಂಗಸು. 'ಉಫ್' ಎಂದರೆ ಹಾರಿಹೋಗುವ ಹಾಗಿದ್ದಾಳೆ. ಭಯವಿಲ್ಲದೆ ನಮ್ಮೊಡನೆ ಮಾತನಾಡುತ್ತಾಳೆ" ಎಂದು ಹಾಸ್ಯಮಾಡಿದರು "ನೋಡಿರಿ, ಅಮ್ಮನವರೇ! ಒಳಗೊಬ್ಬ ಅಮ್ಮನವರು ಇದ್ದಾರೆ ಅವರು ಮುಸಲ್ಮಾನರು, ನೀವು ಹಿಂದೂಗಳು ನಿಮ್ಮನ್ನೂ ಹಿಡಿದು ಒಳಗೆ ಕೂಡುತ್ತೇವೆ. ನಮಗೆ ಹೆಚ್ಚು ದುಡ್ಡು ಸಿಕ್ಕುತ್ತೆ" ಎಂದರು

ರಾಧೆಯು "ಒಳಗಿರುವವರು ಯಾರು ? ಧೈರ್ಯವಾಗಿ ನಿನ್ನ ಹೆಸರು ಹೇಳು" ಎಂದು ಕೂಗಿದಳು

"ನನ್ನ ಹೆಸರು ಫಾತಿಮಾ ! ಫಾತಿಮಾ !"

"ನೀವು ಕರೀಂನನ್ನು ಕೊಂದು ಈ ಹೆಂಗಸನ್ನು ಇಲ್ಲಿ ತಂದಿಟ್ಟದ್ದೀರೋ?" ಎಂದು ಘಾತುಕರನ್ನು ಹೆದರಿಸಿದಳು.

"ಕರೀಂನನ್ನು ಕೊಂದವರು ನಾವಲ್ಲ. ಈ ಹೆಂಗಸನ್ನು ತಂದವರು ನಾವು."

"ಈ ಹೆಂಗಸನ್ನೇಕೆ ಇಲ್ಲಿಗೆ ತಂದು ಮುಚ್ಚಿಟ್ಟದ್ದೀರಿ ?"

"ನಮ್ಮ ಸುಲ್ತಾನರ ಅಪ್ಪಣೆಯಂತೆ !"

"ಸುಳ್ಳು ! ಸುಲ್ತಾನರು ಹೆಂಗಸನ್ನು ಕದಿಯುವ ಕಳ್ಳರಲ್ಲ ನಿಮ್ಮ ನಾಲಿಗೆಯನ್ನು ಸೀಳಿಸುತ್ತೇನೆ "

" ಎಷ್ಟು ಉದ್ದ ಉದ್ದದ ಮಾತುಗಳನ್ನಾಡುತ್ತೀಯೇ ನೀನು? ಒಂದುಕೈಯಿಂದ ಹಿಸುಕಿದರೆ ಚಟ್ನಿಯಾಗಿ ಹೋಗುತ್ತಿ" ಎಂದು ಹೇಳುತ್ತಾ ಒಬ್ಬನು ಕುದುರೆಯ ಕಡಿವಾಣವನ್ನು ಹಿಡಿಯುವುದಕ್ಕೆ ಹೋದನು ಮತ್ತೊಬ್ಬನು ರಾಧೆಯ ಕಾಲು ಹಿಡಿದು ಎಳೆಯುವುದಕ್ಕೆ ಹೋದನು ರಾಧೆಯು ಕುದುರೆಯನ್ನು ಕಾಲಿನಿಂದ ತಿವಿದಳು. ಕುದುರೆಯು ಹಾರಿ ಒಬ್ಬನ ಮೇಲೆ ಬಿತ್ತು. ಅವನು ನೆಲದಮೇಲೆ ಬೀಳುವಷ್ಟರಲ್ಲಿ ರಾಧೆಯು ಕತ್ತಿಯನ್ನು ಬೀಸಿದಳು ಅವನ ತಲೆಯು ನೆಲದಮೇಲೆ ಕಳಚಿ ಬಿತ್ತು. ಉಳಿದ ಮೂವರು ಸರಿದು ನಿಂತರು ದೂರದಿಂದ ಕಲ್ಲುಗಳನ್ನು ಬೀಸಲಾರಂಭಿಸಿದರು ಕ್ಷಣಾರ್ಧದಲ್ಲಿ ರಾಧೆಯು ಕುದುರೆಯನ್ನು ಹಾರಿಸಿ ಮತ್ತೊಬ್ಬನನ್ನು ಆಕ್ರಮಣಮಾಡಿದಳು. ಅವನು ಕುದುರೆಯ ಕಾಲಿಗೆ ಸಿಕ್ಕಿ ಕೂಗುತ್ತಾ ನೆಲದಲ್ಲಿ ಉರುಳಿದನು. ಮತ್ತಿಬ್ಬರು ಸ್ತಂಭೀಭೂತರಾಗಿ ನಿಂತರು.

ರಾಧೆಯು ಕೆಳಗಿಳಿದು ಅವರಿಬ್ಬರ ಮುಂದೆ ನಿಂತಳು "ನೀವು ಈಗ ಖೈದಿಗಳು. ಅತ್ತಿತ್ತ ಅಲುಗಿದರೆ—ಯಮನ ಪಟ್ಟಣಕ್ಕೆ ಕಳುಹಿಸುತ್ತೇನೆ" ಎಂದು ಹೇಳಿದಳು ಅವರು ನಡುಗುತ್ತ ನಿಂತರು. ಕುದುರೆಯ ಹಗ್ಗದಿಂದ ಅವರ ಕೈ ಕಟ್ಟಿ ಮರಕ್ಕೆ ಬಿಗಿದಳು. ದೇವಾಲಯದ ಬಾಗಿಲು ತೆಗೆದು "ಫಾತಿಮಾಬೇಗಂ, ನನ್ನೊಡನೆ ನಡೆಯಿರಿ" ಎಂದು ಹೇಳಿದಳು

ಫಾತಿಮಳು "ನೀನಾರು ತಾಯಿ ? ಇಷ್ಟು ಚಿಕ್ಕ ವಯಸ್ಸಿನವಳಾದರೂ ಇಷ್ಟೊಂದು ಪರಾಕ್ರಮಶಾಲಿಯಾಗಿರುವೆ ? ನಿನಗಿರುವ ಶಕ್ತಿಯು ನನಗಿದ್ದಿದ್ದರೆ ಇಷ್ಟು ಪ್ರಮಾದವೇ ಆಗುತ್ತಿರಲಿಲ್ಲ ನೀನಾರು ಹೇಳು ?" ಎಂದಳು.

"ಬೇಗಂಸಾಹೇಬ್, ನಾನಾರೆಂದು ಹೇಳಿದರೂ ಈಗ ಫಲವಿಲ್ಲ. ನಿನಗೆ ಗೊತ್ತಾಗುವುದಿಲ್ಲ ನೀವು ಯಾರೆಂಬುದನ್ನು ನಾನು ಬಲ್ಲೆ. ನಿಮ್ಮ ಅನ್ವೇಷಣೆಗಾಗಿಯೇ ನಾನು ಇಲ್ಲಿಗೆ ಬಂದೆ. ಸದ್ಯಕ್ಕೆ ನೀವು ನನ್ನ ಬಂದಿಗಳು. ನಾನು ಹೇಳಿದ ಹಾಗೆ ಕೇಳಬೇಕು. ಅಷ್ಟೆ."

ಫಾತಿಮಳಿಗೆ ದಿಕ್ಕು ತೋಚದಾಯಿತು. ಈ ಘಾತುಕರ ಕೈಲಿರುವುದಕ್ಕಿಂತ ಈ ಪರಾಕ್ರಮಶಾಲಿಯಾದ ಹೆಂಗಸಿನ ಬಂಧಿಯಾಗಿರುವುದು ಮೇಲು ಎಂದುಕೊಂಡು ಮುಂದೆ ಸರಿದಳು.

ರಾಧೆಯು "ಬೇಗಂಸಾಹೇಬ್, ತಮಗೆ ಕುದುರೆಯನ್ನು ಹತ್ತುವುದಕ್ಕೆ ಬರುತ್ತದೋ ?" ಎಂದು ಕೇಳಿದಳು

ಫಾತಿಮಳು "ಬರುತ್ತದೆ" ಎಂದುತ್ತರವಿತ್ತಳು.

ರಾಧೆಯು ಕುದುರೆಯ ಮೇಲೆ ನೆಗೆದು ಹತ್ತಿದಳು. ಫಾತಿಮಳಿಗೆ ಕೈ ಕೊಟ್ಟು ಮೇಲಕ್ಕೆ ಎಳೆದುಕೊಂಡಳು. ಒಂದು ಕೈಯಿಂದ ಅವಳನ್ನು ಬಲವಾಗಿ ಹಿಡಿದುಕೊಂಡಳು ಮತ್ತೊಂದು ಕೈಯಿಂದ ಕುದುರೆಯನ್ನು "ಕಾಳ, ನಡೆ" ಎಂದಳು. ಕುದುರೆಯು ಓಡಲಾರಂಭಿಸಿತು ರಾಧೆಯು ಮರಕ್ಕೆ ಕಟ್ಟಿದ್ದ ಸಿದ್ದಿಗಳ ಕಡೆಗೆ ತಿರುಗಿ "ನಿಮ್ಮ ಸುಲ್ತಾನರು ಬಂದರೆ-ರಾಧಾರಾಣಿಯವರು ಬಂದು ನಿಮ್ಮ ಷಿಕಾರಿಯನ್ನು ಅಪಹರಿಸಿಕೊಂಡು ಹೋದರೆಂದು ತಿಳಿಸಿರಿ ಅವರಿದ್ದಿದ್ದರೆ ಅವರನ್ನು ಈ ಕುದುರೆಯ ಕಾಲಿಗೆ ಕಟ್ಟಿ ಎಳಕೊಂಡು ಹೋಗುತ್ತಿದ್ದೆ" ಎಂದು ಹೇಳಿ ಕಟಕಟನೆ ಹಲ್ಲು ಕಡಿದಳು

ಕುದುರೆಯು ಹೊರಟುಹೋಯಿತು

ಬಹಳ ಹೊತ್ತಾದ ಮೇಲೆ ಮಿರ್‌ಸಾದಕನು ಒಂದು ಮ್ಯಾನಾ ತೆಗೆಸಿಕೊಂಡು ಬಂದನು ಆ ಕತ್ತಲಿನಲ್ಲಿ ದೇವಾಲಯದ ಮುಂದೆ ಒಂದು ಹೆಣವು ಕಾಲಿಗೆ ತಗುಲಿತು. ಅದನ್ನು ಬಗ್ಗಿ ನೋಡಿದನು. ಅದೊಬ್ಬ ಶಿದ್ದಿಯ ಹೆಣ. ಮತ್ತೊಬ್ಬನು ಆರ್ತನಾದ ಮಾಡುತ್ತಾ ಹೆಣಗಾಡುತ್ತಿದ್ದನು. ಸಮೀಪದಲ್ಲಿ ಮರಕ್ಕೆ ಇಬ್ಬರನ್ನು ಕಟ್ಟಿತ್ತು. ಮಿರ್‌ಸಾದಕನು ಹೋಗಿ ಬಿಚ್ಚಿದನು. ಅವರು ನಡೆದ ವಿದ್ಯಮಾನವನ್ನೆಲ್ಲಾ ಹೇಳಿದರು ನಾಲ್ವರು ಒಬ್ಬ ಹೆಂಗಸನ್ನು ಹಿಡಿಯಲಾರದೆ ಹೋದಿರಾ ? ಎಂದು ಮೂದಲಿಸಿದನು. ಅವರಿಗೆ ದುಡ್ಡು ಕೊಟ್ಟು ಕಳುಹಿಸಿದನು ಅವರು ಆ ಮುಮೂರ್ಷು ಅವಸ್ಥೆಯಲ್ಲಿದ್ದ ಸ್ನೇಹಿತನನ್ನು ಹೊತ್ತುಕೊಂಡು ಶಿಬಿರಾಭಿಮುಖವಾಗಿ ಹೋದರು ಮಿರ್‌ಸಾದಕನು ಆ ಮ್ಯಾನಾದವರಿಗೆ ಬಹಳ ದುಡ್ಡು ಕೊಡುವುದಾಗಿ ಒಪ್ಪಿಸಿ, ಅಲ್ಲಿಂದಲೇ ಶ್ರೀರಂಗಪಟ್ಟಣದ ಕಡೆಗೆ ಪ್ರಯಾಣ ಮಾಡಿದನು.

ರಾಧೆಯು ಸುಲ್ತಾನನ ಶಿಬಿರಕ್ಕೆ ಬಂದು ಇಳಿದಳು

ಬೇಗಂಸಾಹೇಬಳು "ರಾಣಿಯವರೇ, ನನ್ನನ್ನು ಪುನಃ ಈ ಶಿಬಿರಕ್ಕೆ ತಂದಿರಾ ?" ಎಂದು ಕೇಳಿದಳು.

"ಬೇಗಂಸಾಹೇಬ್ ! ಈಗ ನೀವು ನನ್ನ ಬಂದಿ. ನನ್ನ ಷಿಕಾರಿ ಯಾರಿಗೂ ಭಯಪಡುವ ಕಾರಣವಿಲ್ಲ. ಧೈರ್ಯವಾಗಿರಿ" ಎಂದು ಹೇಳಿ ಸುಲ್ತಾನನ ಗುಡಾರಕ್ಕೆ ಹೋದಳು.

ಅಲ್ಲಿ ಸುಲ್ತಾನನು ಚಿಕ್ಕ ಹುಡುಗನಂತೆ ಅಳುತ್ತಾ ಹೊರಳಾಡುತ್ತಿದ್ದನು.

ರಾಧೆಯು "ಸುಲ್ತಾನರೇ, ನೀವು ಧೈರ್ಯಗೆಡಬೇಡಿರಿ. ನಿಮ್ಮ ತಪ್ಪೇನಿದೆ ? ನೀವು ನಿಮ್ಮ ದರ್ಬಾರಿನ ಪದ್ಧತಿಯಂತೆ ಎಲ್ಲವನ್ನೂ ಮಾಡಿದ್ದೀರಿ" ಎಂದು ಸಮಾಧಾನ ಮಾಡಿದಳು

ಅನಂತರ "ಸುಲ್ತಾನರೇ! ನಾನು ಫಾತಿಮಾಬೇಗಂರವರನ್ನು ಪತ್ತೆಮಾಡಿ ಕರೆತಂದಿದ್ದೇನೆ ಅವರನ್ನು ನನ್ನ ಜತೆಯಲ್ಲಿ ಕರೆದುಕೊಂಡು ಹೋಗಲು ಅಪ್ಪಣೆ ಕೊಡಿ" ಎಂದು ಬೇಡಿದಳು.

"ರಾಣಿಯವರೇ ನನ್ನ ಅಪ್ಪಣೆಯೇಕೆ ?"

"ರಾಜಯೋಗ್ಯವಾದ ಮ್ಯಾನ ಬೇಕು. ಯಾರೂ ಕಳ್ಳರು ಬಂದು ಮೇಲೆಬೀಳದಂತೆ ಬಂದೋಬಸ್ತು ಬೇಕು. ಈ ಶಿಬಿರದಲ್ಲಿರುವ ಫಾತಿಮಳ ವಸ್ತ್ರಾಭರಣಗಳು ಬೇಕು ಅದೆಲ್ಲಾ ತಮ್ಮ ಅಪ್ಪಣೆಯಿಲ್ಲದೇ ನಮ್ಮಂಥಾ ಭಿಕಾರಿಗಳಿಗೆ ಹೇಗೆ ದೊರೆಯಬೇಕು ?"

"ರಾಣಿಯವರೇ! ತಾವು ನನ್ನನ್ನು ಅಪಹಾಸ್ಯ ಮಾಡುತ್ತೀರೋ ? ಪರೀಕ್ಷೆ ಮಾಡುತ್ತೀರೋ ? ತಿಳಿಯುವ ಹಾಗಿಲ್ಲ ಹೇಗೂ ಈಗ ನಾನು ತಮ್ಮ ಆಜ್ಞಾಧಾರಕ. ಎಲ್ಲವನ್ನೂ ಏರ್ಪಾಡು ಮಾಡಿಕೊಡುತ್ತೇನೆ. ನಾನೊಮ್ಮೆ ಫಾತಿಮಾ ಬೇಗಂರವರನ್ನು ನೋಡಿ ಕ್ಷಮಾ ಪ್ರಾರ್ಥನೆ ಮಾಡಬೇಕೆನ್ನಿಸುತ್ತದೆ. ಅಪ್ಪಣೆ ಕೊಡುವಿರಾ ?"

"ಇಲ್ಲ! ತಾವು ಯಾರಿಗೂ ತೀರಿಬಾಗಕೂಡದು. ನಾಳೆ ದಿನ ಸಂಧ್ಯಾಕಾಲ ಸೋನಾ ಮಹಲಿಗೆ ಬನ್ನಿರಿ ತಾವು ಫಾತಿಮಾಬೇಗಂರವರನ್ನು ಅಲ್ಲೇ ನೋಡಬಹುದು. ದೌಲತ್‌ರಾಣಿಯವರನ್ನೂ ಭೇಟಿ ಮಾಡಬಹುದು"

ಸುಲ್ತಾನನು ಭಕ್ಷಿಯವರನ್ನು ಕರೆಸಿ, ಈ ರಾಧಾರಾಣಿಯವರು ಹೇಳುವ ಎಲ್ಲಾ ಏರ್ಪಾಡುಗಳನ್ನೂ ಮಾಡಿಸಿಕೊಡಬೇಕೆಂದು ಅಪ್ಪಣೆ ಮಾಡಿದನು ರಾಧಾರಾಣಿಯು ದಿವಾನರ ಗುಡಾರದಲ್ಲಿದ್ದ ಬೇಗಂಸಾಹೇಬಳ ವಸ್ತ್ರಾಭರಣಗಳನ್ನೂ, ನಗನಾಣ್ಯಗಳನ್ನೂ, ಸೇವಕಿಯರನ್ನೂ, ಸಾಗಿಸಲು ಏರ್ಪಾಡುಮಾಡಿದಳು. ಎಲ್ಲವನ್ನೂ ಮುಂಚೆ ಕಳುಹಿಸಿದಳು. ಮ್ಯಾನಾ ಸಿದ್ಧವಾಯಿತು ಬೇಗಂಸಾಹೇಬಳಿಗೆ ಮ್ಯಾನಾ ಹತ್ತುವಂತೆ ಅಪ್ಪಣೆ ಮಾಡಿದಳು. ಅವಳು ಹತ್ತಿ ಕುಳಿತಳು ರಾಧೆಯು ಕುದುರೆಯ ಮೇಲೆ ಕುಳಿತು, ಮ್ಯಾನಾ ಜೊತೆಯಲ್ಲಿ ನಡೆದಳು ಶಿಬಿರವನ್ನು ದಾಟುವಷ್ಟರಲ್ಲಿ ಬೇಗಂಸಾಹೇಬಳು "ರಾಣೀಸಾಹೇಬ್, ಈ ಶಿಬಿರದ ಬಂದೀಖಾನೆಯಲ್ಲಿ ಮಹಮುದಾಲಿಯವರಿದ್ದಾರೆ. ದಯವಿಟ್ಟು ನನಗೊಮ್ಮೆ ಅವರ ಚರಣದರ್ಶನವನ್ನು ಮಾಡಿಸಲಾರಿರಾ ?" ಎಂದು ಬೇಡಿದಳು

ರಾಧೆಯು "ಮಾಡಿಸುತ್ತೇನೆ. ಈಗ ಉಸರೆತ್ತಬೇಡ—ನಡೆ" ಎಂದು ಗದ್ದರಿಸಿದಳು

ಬೇಗಂಸಾಹೇಬಳು ಮೌನವಾಗಿ ಮ್ಯಾನಾದಲ್ಲಿ ಕುಳಿತಳು ಮ್ಯಾನಾ ನಗರದ ಕಡೆಗೆ ಹೋಯಿತು.

ನಗರದಿಂದ ರಾಜಮರ್ಯಾದೆಯೊಡನೆ ಪಲ್ಲಕ್ಕಿಯು ಸುಲ್ತಾನರ ಶಿಬಿರಕ್ಕೆ ಬಂತು ಅದರಲ್ಲಿ ಮಹಮದಾಲಿಯವರ ಶವವನ್ನು ಅಲಂಕರಿಸಿಟ್ಟು ನಗರಕ್ಕೆ ಸಾಗಿಸಿದರು ಬಲು ವೈಭವದಿಂದ ಶವವನ್ನು ದರಿಯಾಬಾಗಿನಲ್ಲಿ ಗೋರೀಮಾಡಿಸಿದರು. ಆ ಗೋರಿಯ ಮೇಲೆ ಒಂದು ತಳಿರು ಚಪ್ಪರವು ಹಾಕಲ್ಪಟ್ಟಿತ್ತು ಆ ಚಪ್ಪರದಲ್ಲಿ ಬಡಾಫಕೀರರು ಕುಳಿತಿದ್ದರು ಅವರು ಫಾತಿಮಾಬೇಗಂರವರಿಗೆ ಹೇಳಿಕಳಿಸಿದರು.

ರಾಧೆಯು ಅವಳನ್ನು ಕರೆತಂದಳು.

ಬಡಾಫಕೀರರು ಫಾತಿಮಳನ್ನು ಕುರಿತು "ಮಗಳೇ, ನೀನು ಆಮರಣಾಂತ ಈ ಗೋರಿಯನ್ನು ಸೇವಿಸುತ್ತಿರು ನಿನ್ನ ಪಾಪವು ಪರಿಹಾರವಾಗುವುದು" ಎಂದು ಆಜ್ಞೆ ಮಾಡಿದರು.

ಫಾತಿಮಳು ಕಣ್ಣೀರುಗರೆಯುತ್ತಾ ನಿಂತಿದ್ದಳು

ಬಡಾಫಕೀರರು ಅವಳ ತಲೆಯ ಮೇಲೆ ಕೈಯ್ಯಿಟ್ಟು ಆಶೀರ್ವದಿಸಿದರು. ತಮ್ಮ ಬೆರಳಿನಿಂದ ಆ ಗೋರಿಯ ಮೇಲೆ "ಮೈಸೂರಿನ ಖಡ್ಗ" ಎಂದು ಬರೆದರು. ತಮ್ಮ ಕಂಬಳಿಯನ್ನು ಆ ಗೋರಿಯಮೇಲೆ ಹೊದ್ದಿಸಿ, ಆ ಗೋರಿಯನ್ನು ಮುಟ್ಟಿ ಕಣ್ಣೊತ್ತಿಕೊಂಡು—ಆ ಮೃತ್ತಿಕೆಯನ್ನು ತಲೆಯಮೇಲಿಟ್ಟುಕೊಂಡು ಹೊರಟರು.

ಅಷ್ಟರಲ್ಲಿ ದೌಲತ್ತಳೂ, ರಾಧೆಯೂ, ಕೃಷ್ಣವೇಣಿಯೂ,-ಬಂದು ವಂದಿಸಿದರು. ಅವರನ್ನು ಬಡಾಫಕೀರರು ಹರಸಿದರು. ಬಡಾಫಕೀರರ ಎರಡು ಕಣ್ಣುಗಳಲ್ಲಿಯೂ ನೀರು ಸುರಿಯುತ್ತಿತ್ತು

ರಾಧೆಯು"—ದಾದಾ! ನೀವೇಕೆ ಪಾಮರರಂತೆ ಅಳುತ್ತೀರಿ?" ಎಂದಳು.

ಬಡಾಫಕೀರರು "ತಾಯೀ! ನಾನೂ ನಿಮ್ಮಂತೆ ಮಾನವಪ್ರಾಣಿ ನಾನು ಮಹಮದಾಲಿಗಾಗಿ ಅಳುವುದಿಲ್ಲ ಅವನು ಅಲ್ಲಾನ ಲೋಕದಲ್ಲಿ ನಗುತ್ತಿದ್ದಾನೆ. ಈ ಲೋಕದಲ್ಲಿರುವ ಪಾಪಿಗಳಿಗಾಗಿ, ಅತ್ಯಾಚಾರಿಗಳಿಗಾಗಿ ಅಳುತ್ತೇನೆ" ಎಂದು ಹೇಳಿ ಹೊರಟು ಹೋದರು.

ಅವರೆಲ್ಲಿಗೆ ಹೋದರೋ ಯಾರಿಗೂ ಗೊತ್ತಿಲ್ಲ. ಅಂಥಾ ಮಹಾಪುರುಷರು ಭೂಮಿಗೆ ಬರುವುದಿಲ್ಲವೆಂದರೇನು? ಬರುತ್ತಾರೆ. ಆಗಾಗ ಬರುತ್ತಾರೆ.

# ಪುನರ್ದರ್ಶನ

ಟಿಪ್ಪೂಸುಲ್ತಾನನ ಶಿಬಿರವು ಇಂದು ಪ್ರಶಾಂತವಾಗಿದೆ. ಈ ಶಾಂತಿಯು ಉತ್ಸಾಹ ಸಂತೋಷಭರಿತವಾದ ಸುಖಶಾಂತಿಯಲ್ಲ ಸಮುದ್ರದಂತಹ ಗಂಭೀರ ಶಾಂತಿಯಲ್ಲ ಇದು ಸ್ಮಶಾನಶಾಂತಿ ಸೈನಿಕರ ಹೃದಯಗಳು ದಿಕ್ಕೆಟ್ಟಂತೆ ತಲ್ಲಣಿಸುತ್ತಿವೆ ಸರದಾರರೆಲ್ಲರೂ ಭಯಭೀತರಾಗಿದ್ದಾರೆ ಒಬ್ಬರೊಡನೊಬ್ಬರು ಧೈರ್ಯವಾಗಿ ಮಾತನಾಡುತ್ತಿಲ್ಲ. ಸರ್ವತ್ರ ಮೌನ ಆದರೆ ಮನೋರಾಜ್ಯದಲ್ಲಿ ಪ್ರಬಲವಾದ ಕ್ಷೋಭೆ ಮಂತ್ರಿಗಳು, ಸೇನಾನಾಯಕರು, ಖಾಜಿಗಳು ಎಲ್ಲರ ಮನಸ್ಸಿನಲ್ಲಿಯೂ ದ್ವಂದ್ವ ಸರಿ, ತಪ್ಪು, ಸರಿ, ತಪ್ಪು ಎಂದು ಎಲ್ಲರ ಮನಸ್ಸೂ ಬಡಿದುಕೊಳ್ಳುತ್ತಿದೆ. ಪಹರೆಯವರು, ನೌಕರರು, ಅಧಿಕಾರಿಗಳು ಎಲ್ಲರೂ ಸೂತ್ರದ ಬೊಂಬೆಯಂತೆ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿದ್ದಾರೆ ಎಲ್ಲರ ಮನಸ್ಸೂ ದುಃಖಸಾಗರದಲ್ಲಿ ಮುಳುಗಿದೆ. ಯಾರೇನು ಮಾಡಬಲ್ಲರು ? ಟಿಪ್ಪೂಸುಲ್ತಾನನ ಅಪ್ರತಿಹತವಾದ ಅಧಿಕಾರ

ಸುಲ್ತಾನನಾದರೂ ಸುಖಿಯಾಗಿದಾನೇನು ? ಇಲ್ಲ, ಸರ್ವಥಾ ಇಲ್ಲ ಸುಲ್ತಾನನು ಪ್ರಾತರ್ವಿಧಿಗಳನ್ನು ಪೂರೈಸಿಕೊಂಡು ಡೇರೆಯಿಂದ ಹೊರಗೆ ಬಂದು ನೋಡಿದನು ಒಂದು ಬಾರಿ ಆಕಾಶದ ಕಡೆ ತಲೆ ಎತ್ತಿ ನೋಡಿದನು ದಿನಮಣಿಯ ಕಿರಣಗಳು ಕಣ್ಣು ಕುಕ್ಕಿದುವು. ಆ ಪ್ರಖರ ಕಿರಣಗಳನ್ನು ದಿಟ್ಟತನದಿಂದ ಎದುರಿಸಿ ಗಗನಮಂಡಲವನ್ನೇ ನೋಡುತ್ತಿದ್ದನು. ಅದು ಶೂನ್ಯಾಕಾಶದಂತೆ ಭಾಸವಾಗುತ್ತಿತ್ತು ಆಕಾಶದಲ್ಲಿ ಸೂರ್ಯನೇ ಇಲ್ಲದೇ ಅಂಧಕಾರ ಕವಿದಂತೆ ಬೋಧೆಯಾಗುತ್ತಿತ್ತು. ಹಿಂದಿರುಗಿ ತನ್ನ ಸೈನ್ಯದ ಕಡೆ ನೋಡುತ್ತಾನೆ, ಅಪಾರವಾದ ಸೈನ್ಯ ಆ ಸೇನಾವಾಯಿನಿಯು ಜೀವಕಳೆಯಿಲ್ಲದ ಮಹಾ ಶ್ಮಶಾನದಂತೆ ಭೀಕರವಾಗಿ ಗೋಚರವಾಗುತ್ತಿದೆ. ಇದನ್ನೆಲ್ಲ ಧೈರ್ಯವಾಗಿ ನೋಡಲು ಸುಲ್ತಾನನಿಂದ ಸಾಧ್ಯವಾಗಲಿಲ್ಲ ಮಂತ್ರಿವಧೆಯ ಮಹಾಪಾತಕವು ಸುಲ್ತಾನನ ಹೃದಯದಲ್ಲಿ ಶ್ಯಲ್ಯವೇದನೆಯ್ನುಂಟುಮಾಡುತ್ತಿದೆ ಆ ದೀನಾವಸ್ಥೆಯಲ್ಲಿ ಸುಲ್ತಾನನು ತನ್ನ ವಾಸಗೃಹಕ್ಕೆ ಹಿಂತಿರುಗಿದನು ಪರ್ಯಂಕದ ಮೇಲೆ ಬಿದ್ದು ಹೊರಳತೊಡಗಿದನು ಅದು ರಾತ್ರಿಯೋ, ಹಗಲೋ ಅವನಿಗೆ ಬೋಧೆಯಾಗಲಿಲ್ಲ ದೀರ್ಘವಾದ ನಿಟ್ಟುಸಿರು ಬಿಟ್ಟು "ಅಯ್ಯೋ ! ವಿಧಿಯೇ ಎಂಥಾ ಕಾರ್ಯವನ್ನು ಮಾಡಿಸಿಬಿಟ್ಟೆ" ಎಂದು ಹಂಬಲಿಸಿದನು. ಸುಲ್ತಾನನ ಮನಸ್ಸಿನಲ್ಲಿ ಸಮುದ್ರ ತರಂಗಗಳಂತೆ ವಿಚಾರ ತರಂಗಗಳೆದ್ದುವು ಸಮುದ್ರ ತರಂಗಗಳು ಕ್ಷೋಭಾಯಮಾನವಾಗಿದ್ದರೂ ಅದು ನಿರ್ಜೀವ. ಅದರಲ್ಲಿ ಸುಖವಿಲ್ಲ, ದುಃಖವಿಲ್ಲ, ಕ್ರೋಧವಿಲ್ಲ. ವ್ಯಸನವ್ಯಗ್ರತೆಗಳಿಲ್ಲ ಟಿಪ್ಪುವಿನ ಮನಸ್ತರಂಗಗಳು ಜ್ವಾಲಾಮಾಲಾಕುಲವಾಗಿ ಉರಿಯುತ್ತಿರುವ ಅರಣ್ಯದಂತೆ. ಅದು ಬಣ್ಣ ಬಣ್ಣ ! ಮನಸ್ಸಿನಲ್ಲಿ

ದೌಲತ್ತಳ ಮೋಹಕರೂಪವು ಮೂರ್ತಿಮತ್ತಾಗಿಬಂದಂತೆ ಭಾಸವಾಗುತ್ತದೆ. ಪ್ರಣಯ ತರಂಗಗಳೇಳುತ್ತವೆ ಆ ಮೋಹನ ರೂಪವು ನಗುತ್ತ, ನಲಿಯುತ್ತ ಮುಂದೆ ಬಂದು ನಿಲ್ಲುತ್ತದೆ ಮುನಿಸಿಕೊಂಡು ಹಿಂದೆ ಸರಿದು ಮೇಘಾವೃತವಾದ ಆಕಾಶದಲ್ಲಿ ಅಂತ ರ್ಧಾನವಾಗುತ್ತದೆ ಇಯಜ್‌ಖಾನನ ಮೂರ್ತಿಯು ಪ್ರತ್ಯಕ್ಷವಾಗುತ್ತದೆ. ಕ್ರೋಧಾ ನಲವೆದ್ದು ಭೂಮ್ಯಾಕಾಶಗಳನ್ನು ವ್ಯಾಪಿಸಿ ಗಹಗಹಿಸಿ ನಗುತ್ತದೆ ರಾಧೆಯ ಮಿಂಚಿ ನಂತಹ ಪ್ರೇಮಮೂರ್ತಿಯು ಮುಂದೆ ನಿಂತು ಮಧುರ ವಾಣಿಯಿಂದ ಸಂತೈಸುತ್ತದೆ. ಖಾಸಿಂಖಾನನ ವೀರಮುದ್ರೆಯು ಕಾಣಿಸಿಕೊಂಡು ಉದ್ವೇಗವನ್ನೆಬ್ಬಿಸುತ್ತದೆ, ಕೆಣಕು ತ್ತದೆ ಮಹಮದಾಲಿಯವರ ಗಂಭೀರವದನವು ಹೃದಯಾಕಾಶದಲ್ಲಿ ವಿರಾಜಮಾನ ವಾಗುತ್ತದೆ ಸುಲ್ತಾನನ ಹೃದಯವು ಝಲ್ಲೆನಿಸುತ್ತದೆ ಬಡಾಫಕೀರನ ಪ್ರಶಾಂತ ಗಂಭೀರಾಕೃತಿಯು ಮುಂದೆ ನಿಂತು ತನ್ನನ್ನು ತಿರಸ್ಕರಿಸುತ್ತಿರುವಂತೆ ಕಾಣುತ್ತದೆ. ಪಾಪವು ಶಮನವಾಗಲೆಂದು ಅಲ್ಲಾವಿನಲ್ಲಿ ಮೊರೆಯಿಡುತ್ತದೆ ಸುಲ್ತಾನನು ಮೋಹ, ಕ್ರೋಧ, ಭ್ರಾಂತಿ, ದ್ವೇಷ, ದೈನ್ಯಭಾವಗಳಿಂದ ಜರ್ಝರಿತನಾಗಿದ್ದಾನೆ ಮನಸ್ಸಿನ ಬಣ್ಣವನ್ನು ಬಣ್ಣಿಸಬಲ್ಲವರಾರು ? ಈಗ ಖಾಸಿಂಖಾನನು ಸುಲ್ತಾನನ ಎದುರಿನಲ್ಲಿ ಪ್ರತ್ಯಕ್ಷವಾಗಿ ಬಂದು ನಿಂತಿದ್ದರೆ ಅವನನ್ನು ಆಲಿಂಗಿಸಿ "ನೀನು ವೀರನಹುದು-ಕ್ಷಮಿಸಿದ್ದೇನೆ ಹೋಗು" ಎಂದು ಹೇಳುತ್ತಿದ್ದನು ಮಹಮದಾಲಿಯು ಮುಂದೆ ಬಂದಿದ್ದರೆ "ನನ್ನ ಅಪರಾಧವನ್ನು ಕ್ಷಮಿಸಿರಿ" ಎಂದು ಕೈ ಮುಗಿದು ಕೇಳಿಕೊಳ್ಳು ತ್ತಿದ್ದನು ಬಡಾಫಕೀರನು ದರ್ಶನವಿತ್ತಿದ್ದರೆ ಅವರ ಪಾದಾರವಿಂದಕ್ಕೆರಗಿ "ನನ್ನ ಪಾಪವನ್ನು ಪರಿಹರಿಸಿರಿ" ಎಂದು ಬೇಡಿಕೊಳ್ಳುತ್ತಿದ್ದನು. ಇಯಜ್‌ಖಾನನನ್ನು ಕಂಡಿ ದ್ದರೆ "ಈ ನಗರವು ನಿನ್ನದು ! ತೆಗೆದುಕೋ" ಎಂದು ಪ್ರಾರ್ಥಿಸುತ್ತಿದ್ದನು. ದೌಲ ತ್ತಳು ಸಾನ್ನಿಧ್ಯವಿತ್ತಿದ್ದರೆ ಶಿರಗೊಡ್ಡಿ ಪ್ರಣಯಭಿಕ್ಷೆಯನ್ನು ಯಾಚಿಸುತ್ತಿದ್ದನು ಇದೆ ಲ್ಲವೂ ಈಗೆಲ್ಲಿ ?

ಸುಲ್ತಾನನು ನಿಟ್ಟುಸಿರು ಬಿಟ್ಟು—"ನಾನೇಕೆ ದುಃಖಿಸಲಿ! ನನಗಾಗಿ ದುಃಖಿ ಸುವವರಾರು ? ನನ್ನ ಸ್ನೇಹಕ್ಕೆ ಸೌಜನ್ಯವೆಲ್ಲಿದೆ ? ದೈನ್ಯಕ್ಕೆ ಪ್ರಸಾದವೆಲ್ಲಿದೆ ?" ಎಂದು ಕೊಂಡನು

ನಿಜ ! ಅವನ ಕಠೋರಹೃದಯ, ಕ್ರೂರವಾದ ಕರವಾಳ ಇವೆರಡು ಮಾತ್ರ ಅವನನ್ನು ಓಲೈಸುತ್ತಿವೆ. "ಇಯಜ್‌ಖಾನನನ್ನು ಹಿಡಿದು ಬಂಧಿಸಿ, ಶ್ರೀರಂಗಪಟ್ಟ ಣಕ್ಕೆ ಕೊಂಡುಹೋಗಬೇಕು ದೌಲತ್ತಳನ್ನು ಪ್ರಣಯಬಂಧನದಿಂದ ಬಂಧಿಸಿ ಕರೆ ದೊಯ್ಯಬೇಕು. ಇವೆರಡು ಪಣಗಳನ್ನು ಸಾಧಿಸದಿದ್ದರೆ ನಾನು ಸುಲ್ತಾನನೇ !" ಎಂದು ಮತ್ತೊಮ್ಮೆ ಶಪಥಮಾಡಿದನು.

ಮಧ್ಯಾಹ್ನ ಭೋಜನೋತ್ತರ ಸುಲ್ತಾನನ ಅಪ್ಪಣೆಯಂತೆ ದರಬಾರು ಸೇರಿತು,

ಮಂತ್ರಿಗಳೊಡನೆಯೂ, ಸೇನಾನಾಯಕರೊಡನೆಯೂ, ರಾಜಕಾರ್ಯಗಳನ್ನಾಲೋಚಿಸಿದನು ಸೈನ್ಯವು ಮಂಗಳೂರಿಗೆ ಹೋಗಬೇಕೆಂದೂ, ಫರಂಗಿಯವರನ್ನು ಹೊಡೆದೋಡಿಸಿ ಮಂಗಳೂರನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದೂ ನಿಶ್ಚಯವಾಯಿತು ನಗರದಲ್ಲಿ ಹತ್ತು ಸಹಸ್ರ ಸೈನ್ಯವು ಕಾವಲಾಗಿರಬೇಕೆಂದೂ, ಜಲಾಲುದ್ದೀನರವರು ನಗರದ ದಿವಾನರಾಗಿರಬೇಕೆಂದೂ ಹುಕ್ಕುಂ ಆಯಿತು ಸುಲ್ತಾನನೇ ಸ್ವಯಂ ಮಂಗಳೂರಿನ ಯುದ್ಧಕ್ಕೆ ಹೋಗುವುದಾಗಿ ಅಪ್ಪಣೆ ಮಾಡಿದನು

ಈ ಸಮಾಚಾರವು ಶಿಬಿರದಲ್ಲೆಲ್ಲಾ ಹರಡಿತು ಎಲ್ಲೆಲ್ಲಿಯೂ ಕೋಲಾಹಲ! ಗುಡಾರಗಳನ್ನೆಲ್ಲಾ ಕಿತ್ತರು ಅಂಗಡಿಗಳನ್ನೆಲ್ಲಾ ಕಟ್ಟಿದರು ಆಟದವರು, ಐಂದ್ರಜಾಲಕರು ತಮ್ಮ ತಮ್ಮ ಗುಡಾರಗಳನ್ನೆಲ್ಲಾ ಕಿತ್ತುಕೊಂಡು ಹೊರಟೇಬಿಟ್ಟರು ನಟರೂ, ನರ್ತಕಿಯರೂ ತಮ್ಮ ಸ್ನೇಹಿತರನ್ನು ಬೀಳ್ಕೊಂಡು ಪ್ರಯಾಣ ಬೆಳೆಸಿದರು ಸಂಧ್ಯಾಕಾಲ ಮಂಗಳೂರಿಗೆ ಹೊರಡುವ ಸೈನ್ಯವು ಸಿದ್ಧವಾಯಿತು ಮುಂದೆ ಆನೆಗಳು, ಕಾಲಾಳುಗಳ ದಳ, ಆ ಸೈನ್ಯದ ಹಿಂದೆ ಕುದುರೆ ಸವಾರರ ದಳ, ಅದರ ಹಿಂದೆ ತೋಪಿನ ಗಾಡಿಗಳು, ಎಲ್ಲದಕ್ಕೂ ಹಿಂದೆ ಒಂಟೆಯ ರಾವುತರ ದಳ, ನಗಾರಿ ನೌಪತ್ತು ಎಲ್ಲವೂ ಹೊರಡಲು ತಯಾರಾಗಿ ನಿಂತವು ಜಮಾದಾರರು, ರಿಸಾಲ್‌ದಾರರು ರಿಜಿಮೆಂಟುದಾರರು ತಮ್ಮ ತಮ್ಮ ತುಕಡಿಗಳಿಗೆ ಹುಷಾರ್‌ಕೊಟ್ಟು ಸಜ್ಜಾಗಿ ಸೈನ್ಯವನ್ನು ನಿಲ್ಲಿಸಿಕೊಂಡು ನಿಂತರು.

ಸ್ವಯಂ ಸುಲ್ತಾನರವರು ಶ್ವೇತಾಶ್ವವನ್ನೇರಿ ಸಾಲಾಗಿ ನಿಂತಿರುವ ಸೈನ್ಯದಳಗಳ ಬಲಪಾರ್ಶ್ವದಲ್ಲಿ ಉದ್ದಕ್ಕೂ ನೋಡಿಕೊಂಡು ಮುಂದೆ ಬಂದು ವಾಮಪಾರ್ಶ್ವಕ್ಕೆ ತಿರುಗಿ ಕುದುರೆಯನ್ನು ನಿಲ್ಲಿಸಿದರು ಕೊಂಬು ಕಹಳೆಯವರು ರಣವಾದ್ಯಗಳನ್ನು ಊದಿದರು ರಣಭೇರಿಯು ಬಾರಿಸಲ್ಪಟ್ಟಿತು ಸುಲ್ತಾನನು ಕತ್ತಿಯನ್ನು ಹಿರಿದು ಬೀಸಿದನು ಸೈನ್ಯವು ಮುಂದುವರಿದು ಹೊರಟಿತು. ಈ ಮಹಾ ಸೈನ್ಯದ ಹಿಂದೆ ಖಾಜಿಗಳು, ದಿವಾನರುಗಳು ಮ್ಯಾನಾಗಳಲ್ಲಿ ಕುಳಿತು ಹೊರಟರು. ಹೀಗೆ ಸೈನ್ಯವನ್ನೆಲ್ಲಾ ಮಂಗಳೂರಿಗೆ ಸಾಗುಹಾಕಿ ಸುಲ್ತಾನನು ತನ್ನ ಬಿಡಾರಕ್ಕೆ ಬಂದನು ಪರಿಜನರು ಬಂದು ಸುಲ್ತಾನನ ದಿರಸನ್ನು ಬಿಚ್ಚಿದರು ಸುಲ್ತಾನನು ಸುಖಾಸನದಲ್ಲಿ ಕುಳಿತನು ಬೀಸಣಿಗೆಯವರು ಉಭಯ ಪಾರ್ಶ್ವಗಳಲ್ಲಿಯೂ ನಿಂತು ವ್ಯಜನಗಳಿಂದ ಬೀಸುತ್ತಿದ್ದರು.

ಸುಲ್ತಾನನು ಆಲೋಚಿಸ ತೊಡಗಿದನು. ಇಂದು ನಾನೇನು ಮಾಡತಕ್ಕದ್ದಿದೆ. ಸೋನಾಮಹಲಿಗೆ ಹೋಗಬೇಕು ದೌಲತ್‌ರಾಣಿಯನ್ನು ನೋಡಿ ಮಾತನಾಡಬೇಕು. ರಾಧಾರಾಣಿಯು ದೌಲತ್ತಳನ್ನು ಭೇಟಿ ಮಾಡಿಸುವುದಾಗಿ ಹೇಳಿಲ್ಲವೇ ? ರಾಧಾರಾಣಿಯು ಬಂದು ಮಹಮದಾಲಿಯವರ ಪ್ರಾಣದಾನ ಮಾಡಬೇಕೆಂದು ಬೇಡಿದಳು.

ಆ ಬೇಡಿಕೆಯನ್ನು ಸಫಲಗೊಳಿಸಲು ನನ್ನಿಂದ ಆಯಿತೇನು ? ಅಲ್ಲಿ ಸೋನಾಮಹಲಿನಲ್ಲಿ ದೌಲತ್ತಳೇನೆಂದಾಳು ? ಮಂತ್ರಿವಧೆಗೆ ಕಾರಣವೇನೆಂದು ಹೇಳಲಿ ? ರಾಧೆಯು ತಿರಸ್ಕರಿಸಿದರೆ ನಾನೇನು ಮಾಡಲಿ ? ಅಲ್ಲಿ ಫಾತಿಮಾಬೇಗಂ ಇದ್ದಾಳೆ ಅವಳಿಗೆ ನಾನು ಹೇಗೆ ಮುಖವನ್ನು ತೋರಿಸಲಿ. ಅವಳ ಮೇಲೆ ಎಷ್ಟೊಂದು ಕಠೋರ ಅತ್ಯಾಚಾರಗಳು ನಡೆದಿವೆ ? ನಾನು ಬೇಗಂ ಸಾಹೇಬಳಲ್ಲಿ ಕ್ಷಮಾ ಪ್ರಾರ್ಥನೆ ಮಾಡಬಹುದು ಆ ಅಪರಾಧಗಳು ಕ್ಷಮಿಸುವಂತಹವುಗಳೇನು ? ಸಹಸ್ರ ಸಹಸ್ರ ಕ್ಷಮಾಭಿಕ್ಷೆಯನ್ನು ಬೇಡಿದರೂ ಬೇಗಂ ಸಾಹೇಬಳನ್ನು ಸಂತೈಸುವುದು ಹೇಗೆ ? ಬಡಾಫಕೀರರು ಅಜ್ಞಾತವಾಸದಲ್ಲಿದ್ದಾರೆ ಎಲ್ಲವೂ ನನಗೆ ಪ್ರತಿಕೂಲವೇ ಆಗಿದೆಯೇನು ? ಯಾರು ಪ್ರತಿಕೂಲವಾದರೇನು ? ಯಾರು ಅನುಕೂಲವಾದರೇನು ? ಹೀಗೆ ಯೋಚಿಸುತ್ತಾ ಆ ಸೋನಾಮಹಲಿಗೆ ಹೋಗುವುದನ್ನು ನಿಶ್ಚಯಿಸಿದನು ಸೂರ್ಯದೇವನು ಅಸ್ತಾಚಲವನ್ನು ಸಾರುತ್ತಿದ್ದಾನೆ ಪಶ್ಚಿಮಘಟ್ಟಗಳ ಮೇಲೆ ಅಸ್ತಾಚಲವನ್ನೇರುತ್ತಿರುವ ಆದಿತ್ಯನ ಅರುಣಪ್ರಭೆಯು ಆಹ್ಲಾದವನ್ನುಂಟುಮಾಡುವಂತಿದೆ ಸುಲ್ತಾನನು ಅಶ್ವಾರೂಢನಾಗಿ ನಗರದ ಕಡೆಗೆ ಹೊರಟನು ನಾಲ್ಕಾರು ಮೈಗಾವಲಿನವರು ಹಿಂದೆ ಹಿಂದೆ ಸರಿಯುತ್ತಾ ಹಿಂಬಾಲಿಸಿದರು

ಸೋನಾಮಹಲು ಈ ಪಾಳಯಕ್ಕೆ ಹತ್ತು ಮೈಲಿಗಳಿದೆ. ಅಲ್ಲಿ ತನಗೇನಾದರೂ ಅಪಾಯ ಸಂಭವಿಸಬಹುದೇ ? ಇಯಜ್‌ಖಾನನ ಗುಪ್ತ ತಂತ್ರವೇನಾದರೂ ಇದ್ದೀತೆ ? ರಾಧಾರಾಣಿಯು ಆಹ್ವಾನ ಕೊಟ್ಟಿದ್ದಾಳೆ ಮಹಮುದಾಲಿಯವರ ಪವಿತ್ರ ಸಮಾಧಿಯ ಮುಂದೆ ದೌಲತ್‌ರಾಣಿಯ ಭೇಟಿ ಮಾಡಿಸುವುದಾಗಿ ಹೇಳಿದ್ದಾಳೆ ಆದರೂ ಮೈಗಾವಲಿನ ಭದ್ರತೆಯು ಇರಲೇಬೇಕು ಎಂದು ಐನೂರು ಸೈನಿಕರನ್ನು ಗದ್ದಲವಿಲ್ಲದೇ ಸೋನಾಮಹಲಿನ ಸುತ್ತುವಳಯದಲ್ಲಿ ಅಡಗಿರುವಂತೆ ಆಜ್ಞೆಮಾಡಿ, ಸೋನಾಮಹಲಿನ ಕಡೆಗೆ ಕುದುರೆಯನ್ನು ಲಗುಬಗೆಯಿಂದ ಓಡಿಸಿದನು.

ಟಿಪ್ಪೂಸುಲ್ತಾನನು ಇಂದು ಸೋನಾಮಹಲನ್ನು ನೋಡಲು ಹೊರಟಿದ್ದಾನೆ. ಅಲ್ಲಿ ದೌಲತ್ತಳನ್ನು ದರ್ಶನ ಮಾಡುತ್ತೇನೆಂಬ ಸಂತಸ ರಾಧಾರಾಣಿಯ ಸ್ನೇಹ ವಿಶ್ವಾಸಗಳಲ್ಲಿ ಪೂರ್ಣ ಭರವಸೆ ಇತ್ತೀಚೆಗೆ ನಡೆದ ಘಟನೆಗಳನ್ನೆಲ್ಲಾ ಪ್ರಯತ್ನಪುರಸ್ಸರವಾಗಿ ಮರೆತುಬಿಟ್ಟಿದ್ದಾನೆ ಒಂದೊಂದು ಬಾರಿ ಇಂಥಾ ಮರೆವಿನಿಂದ ಎಷ್ಟೋ ಆಹ್ಲಾದವಾಗುತ್ತದೆ ಈಗ ಸುಲ್ತಾನನ ಅಂತರಂಗವು ಪ್ರಸನ್ನವಾಗಿದೆ

ಇಂದು ಸೋನಾಮಹಲಿನಲ್ಲಿ ಬಹು ಗದ್ದಲ. ಮಹಮುದಾಲಿಯವರ ಆತ್ಮಶಾಂತಿಗಾಗಿ ದೌಲತ್ ರಾಣಿಯವರು ಬಡಬಗ್ಗರಿಗೆ ಅನ್ನ ವಸ್ತ್ರ ಧನ ಧಾನ್ಯಗಳನ್ನು ದಾನ ಮಾಡುತ್ತಾರೆ. ಈ ದಾನ ಸಮಾರಂಭವು ಆ ಪ್ರಾಂತದಲ್ಲೆಲ್ಲಾ ಎಲ್ಲರಿಗೂ ತಿಳಿದಿದೆ. ದರಿಯಾಬಾಗಿನಲ್ಲಿ ಬಹುಜನರು ನೆರದಿದ್ದಾರೆ. ಪ್ರಾತಃಕಾಲದಿಂದಲೂ ದರಿಯಾಬಾಗಿ

ನಲ್ಲಿ ಬಡವರಿಗೆ ಅನ್ನ ಸಂತರ್ಪಣೆಯು ನಡೆಯುತ್ತಲೇ ಇದೆ ದರಿಯಾಬಾಗೆಲ್ಲವೂ ತಳಿರು ತೋರಣಗಳಿಂದ ಅಲಂಕೃತವಾಗಿದೆ ಸೋನಾಮುಹಲಿನ ವಿಸ್ತಾರವಾದ ಪಡಸಾಲೆಯ ಮೇಲೆ ಆಢ್ಯವಾದ ಬೆಳ್ಳಿಯ ಸಿಂಹಾಸನವು ಅಲಂಕರಿಸಲ್ಪಟ್ಟಿದೆ ಎಡಬಲ ಭಾಗದಲ್ಲಿ ಬಡವರಿಗೆ ದಾನ ಮಾಡುವುದಕ್ಕಾಗಿ ರಾಶಿ ರಾಶಿಯಾಗಿ ವಸ್ತ್ರಗಳು ಅಣಿಯಾಗಿ ಇಡಲ್ಪಟ್ಟಿವೆ ದೊಡ್ಡ ದೊಡ್ಡ ಹರಿವಾಣಗಳಲ್ಲಿ ಚಿಕ್ಕ ಮಕ್ಕಳಿಗೆ ಕೊಡುವುದಕ್ಕಾಗಿ ಮಿಠಾಯಿ- ಬತ್ತಾಸು ಖರ್ಜೂರ-ಬಾದಾಮಿ ಮುಂತಾದ ತಿಂಡಿಯ ದಿನಸುಗಳು ತುಂಬಿವೆ ಗೂಡೆ ಗೂಡೆಗಳಲ್ಲಿ ಹಣ್ಣುಗಳನ್ನು ಇಟ್ಟಿದ್ದಾರೆ. ಎಡಬಲ ಪಾರ್ಶ್ವಗಳಲ್ಲಿ ಮುತ್ತೈದೆಯರಿಗೆ ಕೊಡಲು ಅರಸಿನ ಕುಂಕುಮ ಪುಷ್ಪಗಳು ತಟ್ಟೆಗಳಲ್ಲಿ ಇಡಲ್ಪಟ್ಟಿವೆ ಸಿಂಹಾಸನದ ಮುಂದೆ ಬೆಳ್ಳಿಯ ಕಾಲುಮಣೆಗಳನ್ನಿಟ್ಟು ದೊಡ್ಡ ದೊಡ್ಡ ಬೆಳ್ಳಿಯ ಬಟ್ಟಲುಗಳಲ್ಲಿ ಚಿನ್ನದ ಮೊಹರುಗಳನ್ನು, ಬಳ್ಳಿಯ ರೂಪಾಯಿಗಳನ್ನು ತುಂಬಿಟ್ಟಿದ್ದಾರೆ ಸಿಂಹಾಸನದ ಉಭಯ ಪಾರ್ಶ್ವಗಳಲ್ಲಿಯೂ ಎತ್ತರವಾದ ಬೆಳ್ಳಿಯ ದೀಪಸ್ತಂಭಗಳನ್ನಿಟ್ಟು, ದೀಪಗಳನ್ನು ಹಚ್ಚಿದ್ದಾರೆ ದರಿಯಾಬಾಗಿನಲ್ಲೆಲ್ಲಾ ದೀವಟಿಗೆಗಳನ್ನು ಹಚ್ಚಿ ಬೆಳಕು ಮಾಡಿದ್ದಾರೆ ಸೋನಾಮುಹಲೆಲ್ಲಾ ದೀಪಮಾಲೆಗಳಿಂದ ಅಲಂಕೃತವಾಗಿದೆ ಸೋನಾಮುಹಲಿಗೆ ಸ್ವಲ್ಪ ದೂರದಲ್ಲಿರುವ ಮಹಮುದಾಲಿಯವರ ಗೋರಿಯ ಸುತ್ತಲೂ ರೇಸಿಮೆಯನ್ನುಹಾಸಿ ಪುಷ್ಪದಾನಗಳನ್ನು ಇಟ್ಟಿದ್ದಾರೆ. ಸುತ್ತಲೂ ದೀಪಮಾಲೆಗಳಿಂದ ಅಲಂಕರಿಸಿದ್ದಾರೆ ಗೋರಿಯು ಪುಷ್ಪಗಳಿಂದ ಮುಚ್ಚಿಹೋಗಿದೆ. ಸುತ್ತಲೂ ಬೆಳ್ಳಿಯ ಅಗ್ಗಿಷ್ಟಿಕೆಗಳನ್ನಿಟ್ಟು ಸುಗಂಧಪೂರಿತವಾದ ಲೋಭಾನದ ಹೊಗೆಯನ್ನು ಹಾಕಿದ್ದಾರೆ. ನೆಲದ ಮೇಲೆಲ್ಲಾ ಪನ್ನೀರನ್ನು ಚುಮುಕಿಸಿದ್ದಾರೆ ಗೋರಿಯು ಮೇಲೆ ಎರಚಿರುವ ಅತ್ತರುಗಳ ಗಮಗಮ ವಾಸನೆಯೂ, ಊದುಬತ್ತಿಗಳ ಸುಗಂಧವೂ ದರಿಯಾಬಾಗಿನಲ್ಲೆಲ್ಲಾ ತುಂಬಿದೆ

ದೌಲತ್ತಳು ಬಿಳಿಯ ಪತ್ತಲವನ್ನುಟ್ಟು, ಕೇಸರಿಯ ಬಣ್ಣದ ಕಂಚುಕವನ್ನು ತೊಟ್ಟಿದ್ದಳು ತಲೆಯ ಕೂದಲು ಕಟ್ಟಿ ಹುವ್ವು ಮುಡಿದಿದ್ದಳು ಮೇಲೆ ತೆಳುವಾದ ಜರತಾರಿಯ ಮೇಲುದುವನ್ನು ಹೊದ್ದಿದ್ದಳು ಸೋನಾಮುಹಲಿನಿಂದ ಸಖಿಯರೊಡಗೂಡಿ, ಹೊರಗೆ ಬಂದು ಮಹಮುದಾಲಿಯವರ ಗೋರಿಯ ಸಮೀಪಕ್ಕೆ ಹೋಗಿ ಅಗ್ಗಿಷ್ಟಿಕೆಯಲ್ಲಿ ಲೋಭಾನವನ್ನು ಹಾಕಿ, ಬೊಗಸೆಯಲ್ಲಿ ಪುಷ್ಪಗಳನ್ನು ಸಮರ್ಪಿಸಿ, ಗೋರಿಗೆ ವಂದಿಸಿ ಕಣ್ಣೊಗೊತ್ತಿಕೊಂಡು ಹಿಂತಿರುಗಿ, ಒಂದೊಂದಾಗಿ ಮೆಟ್ಟಿಲುಗಳನ್ನು ಹತ್ತಿ ಸಿಂಹಾಸನದ ಮುಂದೆ ನಿಂತಳು ರಾಧೆಯು ದೌಲತ್ತಳನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದಳು ಇಡೀ ದರಿಯಾಬಾಗೆಲ್ಲವೂ ಜಯಧ್ವನಿಯಿಂದ ತುಂಬಿಹೋಯಿತು ಬಡಜನರು ಸಾಲು ಸಾಲಾಗಿ ಬಂದು ದಾನವನ್ನು ಸ್ವೀಕರಿಸುತ್ತಿದ್ದರು. ದೌಲತ್ತಳ ಸಖಿಯರು ಬಟ್ಟೆಬರೆಗಳನ್ನೂ, ಹುಡುಗರಿಗೆ ಮಿಠಾಯಿ ಹಣ್ಣುಗಳನ್ನೂ

ಧಾರಾಳವಾಗಿ ದಾನ ಮಾಡುತ್ತಿದ್ದರು ದೌಲತ್ತಳು ಮೊಹರಾಗಳನ್ನು ದಾನ ಮಾಡು ತ್ತಿದ್ದಳು

ರಾಧಾರಾಣಿಯು ಇಂದು ಟಿಪ್ಪೂಸುಲ್ತಾನನಿಗೆ ಸೋನಾಮಹಲಿಗೆ ಬರುವಂತೆ ಆಹ್ವಾನವನ್ನು ಕೊಟ್ಟಿದ್ದಳು. ಸುಲ್ತಾನನ ಬರುವನ್ನು ನಿರೀಕ್ಷಿಸುತ್ತಾ ದರಿಯಾಬಾಗಿನ ಹೊರವಳಯದಲ್ಲಿ ಸುಳಿದಾಡುತ್ತಿದ್ದಳು ಟಿಪ್ಪೂಸುಲ್ತಾನನು ದರಿಯಾಬಾಗಿನ ಸಮೀಪಕ್ಕೆ ಬರುತ್ತಲೇ ದೂರದಿಂದಲೇ ಅಲ್ಲಿ ನಿಂತಿರುವವಳು ರಾಧಾರಾಣಿಯೆಂದುಗುರುತಿಸಿದನು ಸಮೀಪಕ್ಕೆ ಬರುತ್ತಲೇ ಕೆಳಗಿಳಿದು ರಾಧೆಯನ್ನು ವಂದಿಸಿದನು ರಾಧಾರಾಣಿಯು ಆದರದಿಂದ ಸ್ವಾಗತಿಸಿ ಟಿಪ್ಪೂಸುಲ್ತಾನನನ್ನು ದರಿಯಾಬಾಗಿನ ಒಳಕ್ಕೆ ಕರೆದೊಯ್ದಳು ಅಂದಿನ ಆ ಸಂಭ್ರಮವನ್ನು ನೋಡಿ, ಸುಲ್ತಾನನಿಗೆ ಆಶ್ಚರ್ಯವಾಯಿತು ದೂರದಿಂದಲೇ ಸಿಂಹಾಸನದ ಮೇಲೆ ಮಂಡಿಸಿರುವ ದೌಲತ್ ರಾಣಿಯವರನ್ನು ಕಂಡು ಆಶ್ಚರ್ಯ ಚಕಿತನಾದನು

ಸುಲ್ತಾನ್—ರಾಧಾರಾಣಿಯವರೇ! ಇಂದು ಇಲ್ಲಿ ಇಷ್ಟೊಂದು ಸಡಗರಕ್ಕೆ ಕಾರಣವೇನು? ನಾನು ದರಿಯಾಬಾಗಿನ ದಾನ-ಧರ್ಮಗಳನ್ನು ಎಷ್ಟೋ ಕೇಳಿದ್ದೇನೆ. ಆದರೆ ಇಷ್ಟು ಅಗಾಧವಾದುದೆಂದು ನನಗೆಂದೂ ಮನವರಿಕೆಯಾಗಿರಲಿಲ್ಲ

ರಾಧೆ—ಸುಲ್ತಾನರವರೇ! ದೌಲತ್ತಳಂತೆ ಬಡವರಿಗೆ ದಾನ-ಧರ್ಮ ಮಾಡುವವರನ್ನು ನಾನು ಕಂಡು ಕೇಳಿಲ್ಲ ಅವಳ ಸುಖ ಸಂತೋಷಗಳೆಲ್ಲವೂ ದಾನ ಧರ್ಮಗಳಲ್ಲಿಯೇ! ಆದರೆ ಇಂದು ಮಹಮದಾಲಿಯವರ ಪುಣ್ಯಸ್ಮರಣೆಗಾಗಿ ಇಷ್ಟೊಂದು ಮಹಾದಾನಗಳು ನಡೆಯುತ್ತಿವೆ

ಸುಲ್ತಾನ್—ರಾಣಿಯವರೇ! ದೌಲತ್ತಳು ನಿಜವಾಗಿಯೂ ದೌಲತ್ ರಾಣಿಯಂತೆಯೇ ಕಂಗೊಳಿಸುತ್ತಾಳೆ ಹತ್ತಿರ ಹೋಗಿ ಕಣ್ಣು ದಣಿಯುವಂತೆ ಆ ದಿವ್ಯ ಮೂರ್ತಿಯನ್ನು ನೋಡಬೇಕೆನ್ನಿಸುತ್ತದೆ ನಾನೂ ಆ ರಾಣಿಯ ಮುಂದೆ ಕೈಯೊಡ್ಡಿ ಭಿಕ್ಷೆ ತೆಗೆದುಕೊಳ್ಳೋಣವೆನ್ನಿಸುತ್ತದೆ

ರಾಧೆ—(ನಗುತ್ತಾ) ಶ್ರೀರಂಗಪಟ್ಟಣದ ಸುಲ್ತಾನರವರು ಭಿಕ್ಷ ಬೇಡುವುದೇ?

ಸುಲ್ತಾನ್—ನಾನು ತಮ್ಮಲ್ಲಿ ಭಿಕ್ಷ ಬೇಡುವುದಕ್ಕಾಗಿಯೇ ಬಂದಿದ್ದೇನೆ

ರಾಧೆ—ಬಲ್ಲೆ! ಅದನ್ನು ಬಲ್ಲೆ. ನಾನು ತಮಗೆ ಭಿಕ್ಷೆ ನೀಡುತ್ತೇನೆ!

ಸುಲ್ತಾನ್—ನನ್ನನ್ನು ಮಹಮದಾಲಿಯವರ ಗೋರಿಯ ಸನ್ನಿಧಾನಕ್ಕೆ ಕರೆದುಕೊಂಡು ಹೋಗುವಿರಾ? ಅಲ್ಲೊಂದು ಬಾರಿ ದೇವರಲ್ಲಿ ಕ್ಷಮಾಪ್ರಾರ್ಥನೆ ಮಾಡುತ್ತೇನೆ.

ರಾಧೆ—ಅಗತ್ಯವಾಗಿ ನಾನು ತಮ್ಮನ್ನು ಅಲ್ಲಿಗೆ ಕರೆದೊಯ್ಯುತ್ತೇನೆ. ಆದರೆ...... ಆದರೆ ಒಂದು ಮಾತು! ಅಲ್ಲಿ ಫಾತಿಮಾಬೇಗಂರವರಿದ್ದಾರೆ.

ಸುಲ್ತಾನ್—ಒಳ್ಳೆಯದೇ ಆಯಿತು ನಾನು ಅವರನ್ನು ದರ್ಶನ ಮಾಡಿ ಎರಡು ಮಾತನಾಡಬೇಕೆಂದಿದ್ದೇನೆ.

ರಾಧೆ—ತಾವು ಅವರನ್ನು ನೋಡಬಲ್ಲಿರಾ? ನೋಡಿ, ಮಾತನಾಡಬಲ್ಲಿರಾ?

ಸುಲ್ತಾನ್—ಹೌದು! ರಾಣಿಯವರೇ ಮೊದಲು ಅವರಲ್ಲಿ ನಾನು ಕ್ಷಮಾ ಪ್ರಾರ್ಥನೆ ಮಾಡಲೇಬೇಕು ಅದು ನನ್ನ ಕರ್ತವ್ಯ.

ರಾಧೆ—ಹಾಗಾದರೆ ನಡೆಯಿರಿ! ಖತಿಗೊಂಡ ನಾರಿಯ ಮುಂದ ತಮ್ಮ ಧೈರ್ಯವೆಷ್ಟಿದ ಯೆಂಬುದನ್ನು ನಾನು ನೋಡುತ್ತೇನೆ.

ಸುಲ್ತಾನನು ಒಂದು ಬಾರಿ ನಕ್ಕು, ಮುಂದಕ್ಕೆ ಹೆಜ್ಜೆ ಇಟ್ಟನು ರಾಧೆಯು ಆ ಜನಸಂದಣಿಯಲ್ಲಿ ಸುಲ್ತಾನನನ್ನು ಕರೆದುಕೊಂಡು ಹೋಗಿ ಮಹಮುದಾಲಿಯುವರ ಗೋರಿಯ ಮುಂದೆ ನಿಲ್ಲಿಸಿದಳು ಸುಲ್ತಾನನು ಆ ಗೋರಿಯ ಮುಂದೆ ಮಂಡಿಯೂರಿ ಕುಳಿತು ವಂದಿಸಿದನು. ಅನಂತರ ಪುಷ್ಪಗಳನ್ನು ಏರಿಸಿ, ಪುನಃ ಆ ಗೋರಿಯನ್ನು ಕಣ್ಣಿಗೊತ್ತಿಕೊಂಡನು. ಎದ್ದು ಕೈಮುಗಿದು ನಿಂತನು ಮಹಮದಾಲಿಯವರೇ ತನ್ನ ಮುಂದೆ ಬಂದು ನಿಂತಂತೆ ಭಾಸವಾಯಿತು ಸುಲ್ತಾನನ ಕಣ್ಣುಗಳಲ್ಲಿ ಕಣ್ಣೀರು ಹರಿಯಲಾರಂಭಿಸಿತು ಅಳಲಾರಂಭಿಸಿದನು ಸುಲ್ತಾನನು ಎಂದೂ ಅಷ್ಟು ದುಃಖ ವಿಹ್ವಲನಾದುದಿಲ್ಲ. ಕಲ್ಲೆದೆಯು ಕರಗಿ ನೀರಾಗಿ ಹರಿಯುತ್ತಿದೆ.

"ಅಯ್ಯೋ ದೇವರೇ! ಎಂಥಾ ಘಟನೆಯನ್ನು ತಂದೊಡ್ಡಿದೆ ಮಹಮುದಾಲಿಯು ಹಳೆಯ ಮನುಷ್ಯ! ದೇವರಂಥಾ ಮನುಷ್ಯ! ಖಾಸಿಂಖಾನನಿಗೆ ವಾಗ್ದಾನವನ್ನು ಕೊಟ್ಟು ನಮ್ಮ ಶಿಬಿರಕ್ಕೆ ಕರೆತಂದ! ಮಹಮುದಾಲಿಯು ವಾಗ್ದಾನವಿಲ್ಲದಿದ್ದರೆ ಖಾಸಿಂಖಾನನು ನಮ್ಮ ಶಿಬಿರಕ್ಕೆ ಬರುತ್ತಿದ್ದನೆ? ಆ ಖಾಸಿಂಖಾನನಿಗಾಗಿಯೇ ಮಹಮುದಾಲಿಯು ತನ್ನ ಪ್ರಾಣವನ್ನೊಪ್ಪಿಸಿದನು ಅಂದು ದರಬಾರಿನಲ್ಲಿ ಯಾವುದು ನ್ಯಾಯವೆಂದು ನನಗೆ ತೋರಿತೋ, ಯಾವುದು ರಾಜಧರ್ಮವೆಂದು ಹೊಳೆಯಿತೋ—ಇಂದು ಅದು ಪಾಪವೆಂದೂ, ದೇಶದ್ರೋಹವೆಂದೂ ನನಗೇ ತೋರುತ್ತಿದೆ. ಆದರೆ ಇದಕ್ಕೆ ಪರಿಹಾರವೆಲ್ಲಿದೆ? ನನ್ನ ಪಾಪಕ್ಕೆ ಆಮರಣಾಂತ ಪ್ರಾಯಶ್ಚಿತ್ತವೇ ಇಲ್ಲ" ಎಂದು ಹಂಬಲಿಸುತ್ತಿದ್ದುವು

ಹೀಗೆ ಬಹಳ ಹೊತ್ತಾದಮೇಲೆ ಹಿಂದಿರುಗಿ ನೋಡಿದನು ಹಸಿದ ಸಿಂಹದಂತೆ ಉರಿಯುವ ಕಣ್ಣುಗಳಿಂದ ದುರದುರನೆ ನೋಡುತ್ತಾ ಒಂದು ವ್ಯಕ್ತಿಯು ನಿಂತುಕೊಂಡಿದ್ದಿತು. ಸುಲ್ತಾನನು ಆ ವ್ಯಕ್ತಿಯನ್ನು ಗುರ್ತಿಸಿ "ಫಾತಿಮಾ, ಫಾತಿಮಾಬೇಗಂ!" ಎಂದು ಅರ್ಧೋಕ್ತಿಯಲ್ಲಿ ತೊದಲುತ್ತ ಅವಳಿಗೆ ಕೈಮುಗಿದು "ಬೇಗಂಸಾಹೇಬ್!

ನನ್ನನ್ನು ಕ್ಷಮಿಸಿರಿ ತಮ್ಮ ಮೇಲೆ ಬಹಳ ಅತ್ಯಾಚಾರ ನಡೆದಿದೆ ಘೋರವಾದ ಅಪರಾಧವು ನನ್ನಿಂದ ನಡೆದಿದೆ ತಾಯಿ ಕ್ಷಮಿಸಿರಿ" ಎಂದನು

ಫಾತಿಮಾಬೇಗಂಳು "ಸುಲ್ತಾನನೇ! ನನ್ನ ಹೃದಯದಲ್ಲಿ ದ್ರವವಿಲ್ಲ ಅದು ಕಲ್ಲಿಗಿಂತ ಕಠೋರವಾಗಿದೆ. ಕಾದ ಕಬ್ಬಿಣದಂತೆ ಉರಿಯುತ್ತಿದೆ. ನಿನ್ನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು, ನಿನ್ನ ಪ್ರಾಣಗಳನ್ನು ಹಿಂಡಬೇಕಂದು ನನ್ನ ವೇದನಾ ಮಯವಾದ ಹೃದಯವು ಪ್ರೇರಿಸುತ್ತಿದ ನಾನು ಕ್ಷಮಿಸುವುದೇ? ಸುಳ್ಳು! ನೀನು ಈ ಮಹಾಪುರುಷನ ಗೋರಿಯೊಳಗೆ ನನ್ನನ್ನೂ ಈಗಲೇ ಗೋರಿಮಾಡಿಸಿದರೂ ನಾನು ಪಿಶಾಚಿಯಾಗಿ ನಿನ್ನ ಪ್ರಾಣಾಪಹರಣ ಮಾಡುತ್ತೇನೆ" ಎಂದುತ್ತರವಿತ್ತಳು

"ತಾಯಿ! ಬೇಗಂಸಾಹೇಬ! ಮಹಮದಾಲಿಯವರು ನಿಮಗಿಂತಲೂ ನನಗೆ ಹೆಚ್ಚು. ಈ ಇಡೀ ಮೈಸೂರಿನ ರಕ್ಷಣೆಯ ಭಾರವು ಅವರ ಮೇಲೆ ಇತ್ತು ಇಂದು ಈ ರಾಜ್ಯಕ್ಕೆ ರಕ್ಷಕರಿಲ್ಲವೆಂದು ನನ್ನ ಹೃದಯವು ಪರಿತಪಿಸುತ್ತಿದೆ ರಾಜಕಾರಣವು ಎದ್ದು ಬಂದು ಮಾಯೆಯನ್ನು ಹೂಡಿ, ನನ್ನನ್ನೂ- ಮಹಮದಾಲಿಯವರನ್ನೂ ಮೋಸಮಾಡಿ, ಅವರನ್ನು ಕೊಂಡುಹೋಯಿತು ನಾನು ಅಪರಾಧ ಮಾಡಿದೆ. ಅಕ್ಷಮ್ಯವಾದ ಅಪರಾಧ"

"ಸುಲ್ತಾನರೇ! ಪ್ರಜೆಗಳು ಅಪರಾಧ ಮಾಡಿದರೆ ರಾಜರು ಶಿಕ್ಷೆ ಮಾಡುತ್ತಾರೆ. ಸ್ವಯಂ ರಾಜರೇ ಅಪರಾಧ ಮಾಡಿದರೆ ಅವರಿಗೆ ಶಿಕ್ಷಕರೇ ಇಲ್ಲವೋ?"

"ಉಂಟು. ದೇವರು ಜಗದೀಶನು ಶಿಕ್ಷೆ ಮಾಡುತ್ತಾನೆ"

"ನಾನು ದೇವರನ್ನು ನಂಬುವುದಿಲ್ಲ! ದೇವರಿಲ್ಲ ಆ ದೇವರಿದ್ದಿದ್ದರೆ ಹೀಗೆ ಆಗುತ್ತಲೇ ಇರಲಿಲ್ಲ ನೀವು ಅಪರಾಧ ಮಾಡಿ ಶಿಕ್ಷೆಕೊಡುವಾಗ ಆ ದೇವರ ಹೆಸರು ಹೇಳಿ ತಪ್ಪಿಸಿಕೊಳ್ಳಲು ನೋಡುತ್ತೀರಿ ನಾನು ಮುಖಾ ಮುಖಿಯಾಗಿ ತಮ್ಮನ್ನು ನೋಡಿ ನನ್ನ ಮನಸ್ಸಿನ ದುಗುಡವನ್ನು ತಮ್ಮ ಮುಂದಿಟ್ಟು ಶಪಥ ಮಾಡಬೇಕೆಂದಿದ್ದೆ. ಅಂದು ಆ ದರಬಾರಿನಲ್ಲಿ, ಆ ಘೋರ ಪ್ರಕರಣದಲ್ಲಿ ಮಹಾಪುರುಷರಾದ ಮಹಮ ದಾಲಿಯವರು ನನ್ನನ್ನು ಧಿಕ್ಕರಿಸಿ ತಡೆದು ಬಿಟ್ಟರು. ಇಂದು ಈ ಪವಿತ್ರವಾದ ಗೋರಿಯ ಸನ್ನಿಧಾನದಲ್ಲಿ ಪ್ರತಿಜ್ಞೆ ಮಾಡುತ್ತೇನೆ ಸುಲ್ತಾನರೇ! ನಿಮ್ಮ ಅಸು ವನ್ನು ಹೀರಿ, ಈ ಸುಲ್ತಾನೀ ಅಧಿಕಾರವನ್ನು ಮಣ್ಣು ಪಾಲು ಮಾಡಿದಲ್ಲದೇ ನಾನು ಶಾಂತಳಾಗುವುದೇ ಇಲ್ಲ ನನ್ನ ಈ ಅಪವಿತ್ರ ದೇಹದಲ್ಲಿ ಪ್ರಾಣವಿರುವವರೆಗೆ ನಾನು ತಮ್ಮ ಶತ್ರು! ಇದರಿಂದ ತಪ್ಪಿಸಿಕೊಳ್ಳಬೇಕಾದರೆ, ಈ ಖಡ್ಗದಿಂದ ನನ್ನನ್ನು ಒಂದೇ ಏಟಿಗೆ ತುಂಡುಮಾಡಿಬಿಡಿ! ಈ ಗೋರಿಯ ಸಮಿಾಪದಲ್ಲಿ ನನ್ನ ಗೋರಿಯೂ ಆಗಲಿ! ಆ ಗೋರಿಯೊಳಗೆ ಮಹಮದಾಲಿಯವರನ್ನು ಆರಾಧಿಸುತ್ತಾ ಅನಂತಕಾಲ ಕಳೆ ಯುವುವೆನು."

"ತಾಯಿ! ನನ್ನ ಅಪರಾಧವನ್ನು ಕ್ಷಮಿಸು! ಮೈಸೂರಿನ ರಾಜಕೀಯವು ನನ್ನ ಕೈಯಿಂದ ಮಹಾಪರಾಧವನ್ನು ಮಾಡಿಸಿತು ಮಹಮದಾಲಿಯವರ ವಿಯೋಗಕ್ಕಾಗಿ ಈ ಜಗತ್ತಿನಲ್ಲಿ ಎಲ್ಲರಿಗಿಂತಲೂ ಅಧಿಕವಾಗಿ ಪರಿತಪಿಸುತ್ತಿರುವವನು ನಾನು. ನನ್ನ ಹೃದಯದಲ್ಲಿ ಆಗುತ್ತಿರುವ ದಾರುಣವಾದ ಯಾತನೆಯನ್ನು ನೀನೇನು ಬಲ್ಲೆ? ಕ್ಷಮಿಸು, ತಾಯಿ ನನ್ನ ಅಪರಾಧಗಳನ್ನು ಮನ್ನಿಸು!" ಎಂದು ಸುಲ್ತಾನನು ನಾನಾ ವಿಧವಾಗಿ ಪ್ರಾರ್ಥಿಸಿದನು

ಫಾತಿಮಳ ದುಃಖವು ಉಕ್ಕಿಬಂದು ಮೂರ್ಛಿತಳಾಗಿ ಬಿದ್ದಳು

ರಾಧೆಯು ಸುಲ್ತಾನನ ಕೈಹಿಡಿದು ಸೋನಾಮಹಲಿನ ಕಡೆಗೆ ಕರೆದುಕೊಂಡು ಹೋದಳು ಅಷ್ಟರಲ್ಲಿ ದೌಲತ್ತಳ ದಾನಧರ್ಮಗಳೆಲ್ಲವೂ ಪೂರೈಸಿತ್ತು. ಜನರೆಲ್ಲರೂ ಸಂತುಷ್ಟಚಿತ್ತರಾಗಿ ಹೊರಟುಹೋಗುತ್ತಿದ್ದರು ದೌಲತ್‌ರಾಣಿಯು ಸೋನಾಮಹಲಿನೊಳಗೆ ಹೊರಟುಹೋಗುತ್ತಿದ್ದಳು ಸುಲ್ತಾನನು ಆ ಹಜಾರದಲ್ಲಿ ವಿರಾಜಿಸುತ್ತಿದ್ದ ಸಿಂಹಾಸನವನ್ನು ನೋಡುತ್ತಾ ನಿಂತನು ಅವನ ಮನಸ್ಸಿನಲ್ಲಿ ಅನೇಕ ಆಲೋಚನೆಗಳು ಮೂಡಿದವು ದೌಲತ್ತಳು ನಿಜವಾದ ರಾಣಿಯಂತೆ ವಿರಾಜಿಸುತ್ತಾಳೆ. ಅಪಾರವಾದ ದಾನಧರ್ಮಗಳನ್ನು ಮಾಡುತ್ತಾಳೆ ಇಷ್ಟೊಂದು ಹಣವು ಇವರಿಗೆಲ್ಲಿ ಬರಬೇಕು? ಇದೆಲ್ಲಾ ನಗರದ ಭಂಡಾರದಿಂದಲೇ ಬಂದಿರಬೇಕು. ಹಾಗಾದರೆ, ಈ ದೌಲತ್ತಳು ಇಯಜ್‌ಖಾನನ ಪ್ರೇಯಸಿಯೇನು? ಈ ರಾಧೆಯಾರು? ಇವರುಗಳು ಇಯಜ್‌ಖಾನನ ಆತ್ಮೀಯರಾದರೆ ರಾಜ್ಯಚ್ಯುತಿಯಾದ ಮೇಲೂ, ಇಲ್ಲಿ ಇಷ್ಟೊಂದು ಸಂತೋಷ ಸಂಭ್ರಮಗಳಿಗೆ ಕಾರಣವೇನು? ಇದರಲ್ಲೆಲ್ಲಾ ಏನೋ ಒಂದು ಅಭೇದ್ಯವಾದ ಅಂತರಂಗವಿದೆ ಈ ಫಾತಿಮಳೂ ಇಲ್ಲಿ ಬಂದು ಸೇರಿದ್ದಾಳೆ. ಈ ಬೇಗಂ ಸಾಹೇಬಳು ಈದಿನ ಇಷ್ಟೊಂದು ಕ್ರೋಧಾವೇಶದಿಂದ ಮಾತನಾಡಿದಳು. ಇವರೆಲ್ಲರೂ ನಮ್ಮ ಶತ್ರುತ್ವವನ್ನು ಸಾಧಿಸುವವರೇ ಇರಬಹುದೆ? ಬಡಾಫಕೀರರವರಿಗೆ ಈ ಅಂತರಂಗವೆಲ್ಲವೂ ಗೊತ್ತಿದೆ ಅವರಿಗೆ ನಮ್ಮ ಮೇಲೆ —ನಮ್ಮ ಸಿಂಹಾಸನದ ಮೇಲೆ ಪರಮಾನುಗ್ರಹ! ಇದೆಲ್ಲಾ ಅಭೇದ್ಯವಾಗಿದೆ ಇಂದು ಎಲ್ಲವೂ ಬಯಲಾಗಿಹೋಗುತ್ತದೆ. ದೌಲತ್ತಳು ನನ್ನಲ್ಲಿ ಪ್ರೀತಿಯುಳ್ಳವಳು ರಾಧಾರಾಣಿಯು ಅವಳ ಸ್ನೇಹಿತಳು. ಇಯಜ್‌ಖಾನನು ನಮ್ಮ ಪರಮ ವಿರೋಧಿ. ಫಾತಿಮಾಬೇಗಂಳು ಅವನ ಜೊತೆಗೇ ಸೇರಿಕೊಳ್ಳಲಿ. ನನ್ನವಳಾದ ದೌಲತ್ತಳನ್ನು ನಾನು ಕರೆದುಕೊಂಡುಹೋಗುತ್ತೇನೆ ಹೀಗೆ ಯೋಚಿಸುತ್ತಾ ಸೋನಾಮಹಲನ್ನು ಪ್ರವೇಶಮಾಡಿದನು

ಸುಲ್ತಾನನು ರಾಧಾರಾಣಿಯ ಕಡೆ ತಿರುಗಿ ನೋಡಿ, — "ರಾಣಿಯವರೇ! ನನ್ನ ಮೇಲೆ ತಮ್ಮ ಅನುಗ್ರಹವು-ಅಪಾರವಾದುದು ತಮ್ಮ ಮನಸ್ಸಿಗೆ ವಿರೋಧವನ್ನುಂಟುಮಾಡುವ ಎಷ್ಟೋ ಘಟನೆಗಳು ನನ್ನಿಂದ ನಡೆದುಹೋಗಿದ್ದರೂ, ತಾವಿಷ್ಟು

ಆದರಾತಿಶಯಗಳಿಂದ ನನಗೆ ಆಹ್ವಾನ ಕೊಟ್ಟಿರಿ! ಇಂದು ದೌಲತ್‌ರಾಣಿಯನ್ನು ನೋಡಿ ಮಾತನಾಡಿಕೊಂಡು ಹೋಗುವ ಸಂಧಿಯು ಲಭಿಸಿದೆ ಅದು ತಮ್ಮ ವಿಶ್ವಾಸದಿಂದ! ನಾನು ತಮಗೆ ಚಿರಋಣಿಯಾಗಿದೇನೆ' ಎಂದು ಹೇಳಿದನು

ರಾಧೆಯೊಡನೆ ಸುಲ್ತಾನನು ಹೀಗೆ ಮಾತನಾಡುತ್ತಿರುವಾಗಲೇ ದೌಲತ್ತಳು ಹಜಾರಕ್ಕೆ ಬಂದಳು ಟಿಪ್ಪುವು ಅತ್ತ ಕಡೆಗೆ ತಿರುಗಿ ನೋಡಿದನು ದೌಲತ್ತಳನ್ನು ನೋಡಿ ಬಹುದಿನಗಳಾಗಿವೆ ಈಗ ಟಿಪ್ಪುವಿನ ಮುಂದೆ ನಿಂತಿರುವವಳು ಆ ಕಿಶೋರಾವಸ್ಥೆಯ ಮುಗ್ಧೆಯಲ್ಲ! ಇಂದು ಪ್ರಗಲ್ಭ ತಾರುಣ್ಯದಿಂದ ಶೋಭಿಸುತ್ತಿರುವ ಸುರಸುಂದರಿ! ಬಿಳಿಯಮಜಲಿನ್ನಿನ ಲಂಗವನ್ನುಟ್ಟು ಬಿಳಿಯ ರೇಶಿಮೆಯ ಕಂಚುಕವನ್ನು ತೊಟ್ಟು ಜರಿಯ ಮೇಲುದುವನ್ನು ಹೊದ್ದಿದ್ದಾಳೆ. ಕಂಠದಲ್ಲಿ ಒಂದೆಳೆಯ ಮುತ್ತಿನ ಹಾರವು ಕಂಗೊಳಿಸುತ್ತಿದೆ ಸ್ವರ್ಣಲತೆಯಂತೆ ಬಳುಕುತ್ತಿರುವ ಶರೀರ ಆ ಶರೀರ ಕಾಂತಿಯು ತೆಳುವಾದ ಮಜಲಿನ್ನಿನ ವಸ್ತ್ರಗಳಿಂದ ತೂರಿ ಹೊಮ್ಮುತ್ತಿದೆ ಶರತ್ಕಾಲದ ಚಂದ್ರ ಬಿಂಬದಂತೆ ದೌಲತ್ತಳ ಮುಖಾರವಿಂದವು ಬೆಳಗುತ್ತಿದೆ ವಿಶಾಲವಾದ ತರಳ ನೇತ್ರಗಳು ಎಳಸಾದ ನಾಸಿಕ ಕನ್ನಡಿಯಂತೆ ಥಳಥಳಿಸುವ ಕಪೋಲಗಳು.ಮುದ್ದಾದ ಕೆಂದುಟಿ ಸಣ್ಣ ಮುತ್ತುಗಳಂತೆ ಶೋಭಿಸುವ ದಂತಪಂಕ್ತಿ ಬೆಳದಿಂಗಳಿನ ಪ್ರಭೆಯನ್ನು ಚೆಲ್ಲುತ್ತಿರುವ ಮಂದಹಾಸ! ಮನೋಹರವಾದ ಕೈಕಾಲುಗಳು ಪದ್ಮದಂತಹ ಪಾದಯುಗ್ಮ ,ದುಂಬಿಗಳ ಹಿಂಡಿನಂತೆ ಶರೀರನೆಲ್ಲವನ್ನೂ ಮುಚ್ಚುತ್ತಿರುವ ಕೇಶದಾಮ. ಮಿಂಚಿನಂತಹ ಕಟಾಕ್ಷ ಅಮೃತದಂತಹ ಮಧುರವಾಣಿ ಸುಲ್ತಾನನು ದೌಲತ್ತಳ ರೂಪಸಾಗರದಲ್ಲಿ, ವಾಕ್ಸುಧೆಯಲ್ಲಿ, ಕಟಾಕ್ಷದ ತೆರೆಗಳಲ್ಲಿ, ತೇಲುತ್ತ ತನ್ನನ್ನು ತಾನು ಮರತಿದಾನೆ ಅವನಿಗೆ ಜಗತ್ತೆಲ್ಲವೂ ಸೌಂದರ್ಯ ಮಯಿ-ಸುಹಾಸಮಯಿ-ವಿಲಾಸಮಯಿ-ದೌಲತ್ತಳೇ ಆಗಿದೆ

ದೌಲತ್ತಳು ಉಪಚಾರೋಕ್ತಿಗಳಿಂದ ಸುಲ್ತಾನನನ್ನು ಸ್ವಾಗತಿಸಿದಳು ಸುಲ್ತಾನನುಹಸನ್ಮುಖದಿಂದ, “ರಾಣಿಯವರೇ, ಎಷ್ಟೋ ದಿವಸಗಳಿಂದ ತಮ್ಮ ದರುಶನಕ್ಕಾಗಿ ತವಕ ಪಡುತ್ತಿದ್ದೆ ಈ ರಾಧಾರಾಣಿಯವರ ಸೌಜನ್ಯದಿಂದ ಇಂದು ಅದು ಲಭಿಸಿತು. ಈ ಪ್ರಾಂತದಲ್ಲಿ ತಮ್ಮ ಹೆಸರು ಪ್ರಸಿದ್ಧಿಯಾಗಿದೆ ಎಲ್ಲರೂ ದೌಲತ್ ರಾಣಿ, ದೌಲತ್ ರಾಣಿ ಎನ್ನುತ್ತಾರೆ ಆ ರಾಣೀ ಗಿರಿಯು ಬಲು ಚೆನ್ನಾಗಿ ಒಪ್ಪುತ್ತದೆ ಆದರೆ ಬಾಲ್ಯದ ನೆನಪು ಸುಖಮಯವಾದುದು. ಅಂದಿನಂತೆ ಇಂದೂ ನಿಮ್ಮನ್ನು “ದೌಲತ್” ಎಂದು ಕರೆಯಲು ನನಗೆಷ್ಟೋ ಆಶೆ.

ದೌಲತ್—ಸುಲ್ತಾನರೇ ನಾನು ಅಂದಿನವಳೇ ಆಗಿದ್ದೇನೆ ತಾವು ಮಾತ್ರ ಹಾಗಲ್ಲ. ಮೈಸೂರಿನ ರಾಜ್ಯ ಧುರವನ್ನು ಹೊತ್ತ ಸತ್ವಶಾಲಿಗಳಾದ ಸುಲ್ತಾನರು

ತಾವು! ತಮ್ಮ ಆಜ್ಞಾಧಾರಕರಾದ ಬಂಧುಗಳು ನಾವು.

ಸುಲ್ತಾನ್—ದೌಲತ್! ಶ್ರೀರಂಗಪಟ್ಟಣದ ನವಾಬರ ಅರಮನೆಯಲ್ಲಿ ಬೆಳೆದ ರಾಜಹಂಸಿಯು ನೀನು. ನೀನು ನಿನ್ನ ಈ ರಾಣಿಗಿರಿಯ ವೈಭವವನ್ನು ಅಲ್ಲಿಯೇ ನಡೆಸ ಬಾರದೇಕೆ?

ರಾಧೆ—ಸುಲ್ತಾನರೇ ನೀವಿಬ್ಬರೂ ಪಿತೂರಿಯನ್ನು ನಡೆಸುತ್ತಿರುವಂತಿದೆ ನೀವು ದೌಲತ್ ರಾಣಿಯವರನ್ನು ಪುಸಲಾಹಿಸಿ ಹಾರಿಸಿಕೊಂಡು ಹೋಗುವಂತಿದೆ ನೀವಿಬ್ಬರೂ ಶ್ರೀರಂಗಪಟ್ಟಣಗವರು ಆ ಪಟ್ಟಣದ ಚಾತುರ್ಯವು ಈ ನಗರದಲ್ಲಿ ಸಾಗುವುದಿಲ್ಲ. ದೌಲತ್ ರಾಣಿಯವರು ಸುಲ್ತಾನರ ಜೊತೆಯಲ್ಲಿ ಓಡಿಹೋಗುವುದನ್ನು ನಾನೊಪ್ಪುವುದಿಲ್ಲ ಸುಲ್ತಾನರವರೇ ಈ ನಗರದಲ್ಲಿ ರಾಜ್ಯಭಾರ ಮಾಡಬಾರದೇಕೆ?

ದೌಲತ್— (ನಗುತ್ತಾ) ರಾಧಾರಾಣಿಯವರೇ! ಈ ನಗರದ ರಾಜ್ಯವು ತಮ್ಮದೇನು?

ರಾಧೆ—ನಗರವು ನನ್ನದಾಗಿದ್ದರೆ-ಹೀಗೆ ಬಿಟ್ಟುಕೊಡುತ್ತಿದ್ದೆನೆ? ನಗರವು ನನ್ನದಲ್ಲದಿದ್ದರೂ—ನಾನು ನಗರದವಳು!

ಸುಲ್ತಾನ್—ಏಕೆ! ರಾಧಾರಾಣಿಯವರು ನಗರದ ರಾಣಿಗಿರಿಗೆ ಅರ್ಹರಾದವರು ಅವರು ಸ್ವೀಕರಿಸುವುದಾದದರೆ, ಈ ನಗರದ ಪಟ್ಟವನ್ನು ಇಂದೇ ಅವರಿಗೆ ಕಟ್ಟುವೆನು

ರಾಧೆ—ಸುಲ್ತಾನರೇ, ತಾವು ಯಾರನ್ನು ಬೇಕಾದರೂ ಸಿಂಹಾಸನದಲ್ಲಿ ಕೂಡಿಸಬಲ್ಲಿರಿ. ಈ ದೌಲತ್ ರಾಣಿಯವರು ರಾಣಿಗಿರಿಗೆ ನನಗಿಂತಲೂ ಅರ್ಹರು ಇವರು ಮಹಾರಾಣಿಯಾಗಬೇಕೆಂಬ ಹಂಬಲವು ನನಗಿದೆ ನೀವು ಇವರನ್ನೇ ನಗರದ ರಾಜ್ಯದ ರಾಣಿಯಾಗಿ ಮಾಡಿರಿ ಸುಲ್ತಾನರವರೇ! ತಾವು ರಾಜ್ಯವನ್ನು ನಮಗೆ ಕೊಡುವುದಕ್ಕಿಂತ ಮೊದಲು ನಮ್ಮ ಆತಿಥ್ಯವನ್ನು ಸ್ವೀಕರಿಸಿರಿ ತಾವು ಹಿಂದೊಂದು ಬಾರಿ ಈ ಸೋನಾಮಹಲಿಗೆ ಬಂದಿರಿ. ವೇಷಾಂತರದಿಂದ ಬಂದು ಅಂದು ನಮ್ಮ ಆತಿಥ್ಯವನ್ನು ಸ್ವೀಕರಿಸದೇ ಹೊರಟು ಹೋದಿರಿ. ನೋಡಿರಿ! ಸುಲ್ತಾನರೇ ಅಂದು ನಮ್ಮಲ್ಲಿ ನಿಮಗೆ ಸಂದೇಹ ನಿಮ್ಮ ದೌಲತ್ ರಾಣಿಯವರಿರುವ ಸ್ಥಳದಲ್ಲಿ ನಿಮಗೆ ಸಂದೇಹವೇಕೆ?

ಸುಲ್ತಾನ್—ರಾಣಿಯವರೇ, ಅಂದು ತಪ್ಪು ಮಾಡಿದೆ. ನಿಮ್ಮ ಸಾಮರ್ಥ್ಯವು ನನಗೆ ಅಂದು ಪ್ರತ್ಯಕ್ಷವಾಗಿರಲಿಲ್ಲ ತಮ್ಮ ಪೂರ್ವೋತ್ತರವೆಲ್ಲವನ್ನೂ ಕೇಳಿ ತಿಳಿದಿದ್ದೆ. ಆದರೆ ತಮ್ಮ ಸ್ನೇಹಸೌಹಾರ್ದಗಳು ನನಗೆ ಲಭಿಸುವುದೆಂದು ನಾನು ನಂಬಿರಲಿಲ್ಲ. ಇಂದು ನಾನು ತಮ್ಮ ಆಜ್ಞಾಧಾರಕನಾಗಿ ವರ್ತಿಸುತ್ತೇನೆ

ರಾಧೆ—ಸುಲ್ತಾನರೇ, ನಾವು ಈ ಮೈಸೂರಿನ ಸೇವೆಗಾಗಿ ನನ್ನ ಪ್ರಾಣವನ್ನು

ಅರ್ಪಿಸುವುದಾಗಿ ದೊಡ್ಡ ನವಾಬರಲ್ಲಿ ಪ್ರಮಾಣವಚನವನ್ನು ಕೊಟ್ಟಿದ್ದೇನೆ. ನನ್ನಲ್ಲಿ ತಾವು ಎಂದೂ ಸಂಶಯಪಡುವ ಕಾರಣವಿಲ್ಲ

ಸುಲ್ತಾ೯—ಕ್ಷಮಿಸಿರಿ ! ರಾಣಿಯವರೇ ಕ್ಷಮಿಸಿರಿ !

ರಾಧೆಯು ಸುಲ್ತಾನನನ್ನು ಸೋನಾಮಹಲಿನ ಮೇಲಂತಸ್ತಿಗೆ ಕರೆದುಕೊಂಡು ಹೋದಳು ಅಲ್ಲಿ ಪ್ರಶಸ್ತಾಸನದಲ್ಲಿ ಕುಳ್ಳಿರಿಸಿದಳು ದೌಲತ್ತಳೂ, ರಾಧೆಯೂ ಎಷ್ಟೋ ಉಪಚಾರೋಕ್ತಿಗಳಿಂದ ಸುಲ್ತಾನನನ್ನು ಆದರಿಸಿದರು. ಬಹಳ ಹೊತ್ತು ಮಾತುಕಥೆಗಳು ನಡೆದುವು ಇಯಜ್‌ಖಾನನ ಮಾತಾಗಲೀ, ಮಹಮದಾಲಿಯುವರ ಮಾತಾಗಲೀ, ಬರಬಹುದೆಂದು ಸುಲ್ತಾನನು ಚಿಂತಿಸುತ್ತಿದ್ದನು. ದೌಲತ್ತಳಾಗಲೀ, ರಾಧೆಯಾಗಲೀ ಆ ಮಾತನ್ನೇ ಎತ್ತಲಿಲ್ಲ.

ಸುಲ್ತಾ೯—ರಾಧಾರಾಣಿಯವರೇ ! ನಾನು ತಮ್ಮಲ್ಲಿ ಒಂದೆರಡು ಅಂಶಗಳನ್ನು ಕೇಳಬೇಕಾಗಿದೆ.

ರಾಧೆ—ಸುಲ್ತಾನರೇ ! ತಮಗೇನು ಬೇಕೋ ಅದನ್ನು ಕೇಳಿರಿ.

ಸುಲ್ತಾ೯—ಈ ಫಾತಿಮಾಬೇಗಂರವರು ಇಲ್ಲಿ ಏಕೆಇದ್ದಾರೆ? ಅವರು ಇಲ್ಲಿಯೇ ಇರುತ್ತಾರೇನು ?

ರಾಧೆ—ಹೌದು ಅವರು ಇಲ್ಲಿಯೇ ಇರಬೇಕೆಂದು ಬಡಾಫಕೀರರ ಅಪ್ಪಣೆಯಾಯಿತು ಅಂದು ಮಹಮದಾಲಿಯವರು ಮರಣೋನ್ಮುಖರಾಗಿದ್ದಾಗ ಬಡಾಫಕೀರರು ನನ್ನೊಡನೆ ಹೇಳಿದರು.

ಸುಲ್ತಾ೯—ಒಳ್ಳೆಯದು ! ರಾಣಿಯವರೇ, ಇಯಜ್‌ಖಾನರವರು ಎಲ್ಲಿದ್ದಾರೆಂಬುದನ್ನು ತಾವು ಬಲ್ಲಿರಾ ?

ರಾಧಾ—ಅವರು ನಗರದ ಶೀಮೆಯಲ್ಲಿಯೇ ಇದಾರೆಂದು ಕೇಳಿದ್ದೇನೆ. ಅವರು ರಾಜ್ಯತ್ಯಾಗ ಮಾಡಿದಂದಿನಿಂದ ನಾನು ಅವರನ್ನು ಕಂಡುದಿಲ್ಲ.

ಸುಲ್ತಾ೯—ತಾವು ಇಯಜ್‌ಖಾನರ ಪಕ್ಷಪಾತಿಗಳೋ?

ರಾಧೆ—ಸುಲ್ತಾನರವರೇ, ತಾವೂ ಇಯಜ್‌ಖಾನರೂ ನನಗೆ ಸಮಾನ ಅವರು ನನ್ನ ಬಂಧುಗಳು. ಏಕೆ, ಸುಲ್ತಾನರೇ ! ರಾಜ್ಯಭ್ರಷ್ಟರಾದ ಇಯಜ್‌ಖಾನರನ್ನು ನಮ್ಮ ಸಹಾಯದಿಂದ ಹಿಡಿಯಬೇಕೆಂದು ಬಯಸುತ್ತೀರೋ ?

ಸುಲ್ತಾ೯—ಇಲ್ಲ ! ರಾಣಿಯವರೇ, ಹಾಗಿಲ್ಲ ಅವರು ರಾಜ್ಯಭ್ರಷ್ಟರಾಗಿದ್ದಾರೆಂದು ನಾವು ನಂಬಿಲ್ಲ ಅವರನ್ನು ತಮ್ಮ ಮೂಲಕವಾಗಿ ಹಿಡಿಯಬೇಕೆಂಬ ಕುಸಂಧಿಯೂ ನನಗಿಲ್ಲ ಅವರೊಡನೆ ಯುದ್ಧಮಾಡಬೇಕೆಂದು ಈ ನಗರಕ್ಕೆ ಬಂದೆ, ಇನ್ನೂ ಅದೇ ಆಶೆ.

ರಾಥೆ—ನಿಮಗೂ, ಇಯಜ್‌ಖಾನರಿಗೂ ಯುದ್ಧವಾಗುವ ಹಾಗಿಲ್ಲ ಅದಕ್ಕೆ ಈ ದೌಲತ್‌ರಾಣಿಯವರು ಪ್ರತಿಬಂಧಕ!

ಸುಲ್ತಾನ್—ನಮ್ಮಿಬ್ಬರ ವೀರಸಂಗ್ರಾಮವನ್ನು ದೌಲತ್‌ರಾಣಿಯವರೇಕೆ ಅಡ್ಡಿಪಡಿಸುತ್ತಾರೆ ?

ರಾಥೆ—ಅದು ದೊಡ್ಡ ನವಾಬರ ಆಜ್ಞೆ!

ಸುಲ್ತಾನ್—ಇಲ್ಲ! ಅದನ್ನು ನಾನು ನಂಬುವುದಿಲ್ಲ ಅದಕ್ಕೆ ರುಜುವಾತೇನಿದೆ ?

ದೌಲತ್—ರುಜುವಾತು? ನಾನು ಬಡಾಫಕೀರರು ಸಾಕ್ಷಿ!!

ಟಿಪ್ಪುವು ನಿರ್ವಿಣ್ಣನಾಗಿ ಕುಳಿತನು ರಾಥೆಯು ಹೊರಟುಹೋದಳು. ದೌಲತ್ತಳು ಟಿಪ್ಪೂಸುಲ್ತಾನನ ಪಕ್ಕದಲ್ಲಿಯೇ ಕುಳಿತಿದ್ದಳು.

ಸುಲ್ತಾನ್—ದೌಲತ್! ನಾನು ನಿಜವಾಗಿಯೂ ಇಯಜ್‌ಖಾನನೊಡನೆ ಯುದ್ಧಮಾಡಲು ಇಲ್ಲಿಗೆ ಬರಲಿಲ್ಲ ಹೇಗಾದರೂ ನಿನ್ನನ್ನು ಕರೆದೊಯ್ಯಬೇಕೆಂದು ಬಂದೆನು ಈಗ ಯುದ್ಧವು ಅನಿವಾರ್ಯ ದೌಲತ್! ನಾನು ನಗರಕ್ಕೆ ಬಂದುದು ನಿನಗಾಗಿ! ಹತ್ತು ವರ್ಷಗಳಿಂದ ದಹಿಸುತ್ತಿರುವ ಹೃದಯವನ್ನು ಶಮನಗೊಳಿಸುವುದಕ್ಕಾಗಿ! ಅದರಿಂದ ಎಂಥಾ ದುರ್ಘಟಪ್ರಸಂಗವು ಪ್ರಾಪ್ತವಾದರೂ ಅದನ್ನು ಎದುರಿಸಲು ನಾನು ಸಿದ್ಧನಾಗಿದ್ದೇನೆ ಇಯಜ್‌ಖಾನನು ಪ್ರತಿಭಟಿಸಿ ರಣಕ್ಷೇತ್ರದಲ್ಲಿ ನನ್ನೊಡನೆ ಯುದ್ಧ ಮಾಡಿದ್ದರೆ ಎಷ್ಟೋ ಸಂತೋಷವಾಗುತ್ತಿತ್ತು

ದೌಲತ್—ಹೌದು, ಸುಲ್ತಾನರವರೇ! ನೀವು ನನಗಾಗಿ ಬರುತ್ತಿರುವುದನ್ನು ನಾನು ಬಲ್ಲೆ ಇಯಜ್‌ಖಾನರು ದೊಡ್ಡ ನವಾಬರ ಮೇಲಿನ ಗೌರವದಿಂದ, ನನ್ನ ಮಾತಿನ ನಿರ್ಬಂಧದಿಂದ ರಾಜ್ಯಪರಿತ್ಯಾಗ ಮಾಡಿದರು ಅಲ್ಲದೇ ನೀವಿಬ್ಬರೂ ರಣಕ್ಷೇತ್ರದಲ್ಲಿ ಯುದ್ಧಕ್ಕೆ ನಿಂತಿದ್ದರೆ ನಾನು ಅಂದೇ ವಿಷಪಾನ ಮಾಡಿ ಪ್ರಾಣವನ್ನು ಒಗೆಯುತ್ತಿದ್ದೆನು

ಸುಲ್ತಾನ್—ವೀರಪುರುಷರು ಯುದ್ಧ ಮಾಡುವುದು ಸಹಜ! ಕೋಮಲಾಂಗಿಯಾದ ನೀನು ವಿಷಪಾನ ಮಾಡುವುದು ಉಚಿತವೇ ?

ದೌಲತ್—ನೀವಿಬ್ಬರೂ ವೀರರು ಹೌದು ಸಮಸಮ ಪರಾಕ್ರಮಿಗಳೂ ಹೌದು ದೊಡ್ಡ ನವಾಬರ ಪುತ್ರರಾದ ನೀವುಗಳು ಪರಸ್ಪರ ಯುದ್ಧ ಮಾಡುವುದು ಯೋಗ್ಯವಲ್ಲ, ಯಾವ ರಾಜ್ಯವನ್ನು ಜಯಿಸುವುದಕ್ಕಾಗಿ ನೀವಿಬ್ಬರೂ ಯುದ್ಧಮಾಡಬೇಕು ?

ಸುಲ್ತಾನ್—ದೌಲತ್! ಈ ಮೈಸೂರಿಗೆ ಇಬ್ಬರು ನವಾಬರು ಇರಕೂಡದು.

ದೌಲತ್—ಸುಲ್ತಾನರೇ ಈ ಮೈಸೂರು ರಾಜ್ಯವನ್ನು ಕಟ್ಟಿದವರು ದೊಡ್ಡ

ನವಾಬರು ಈ ರಾಜ್ಯವು ಅವರದು ಅವರು ನಿಮ್ಮಿಬ್ಬರ ಯುದ್ಧದಿಂದ ಮೈಸೂರಿಗೆ ಕ್ಷೇಮವಾಗುವುದಿಲ್ಲವೆಂದು ಖಡಾಖಂಡಿತವಾಗಿ ಹೇಳಿದ್ದಾರೆ ನಿಮ್ಮಿಬ್ಬರಿಗೂ ಯುದ್ಧವಾಗದಂತೆ ತಡೆಯಲು ನನ್ನನ್ನು ನೇಮಿಸಿರುತ್ತಾರೆ

ಸುಲ್ತಾನ್—ದೌಲತ್ ! ನಮ್ಮಿಬ್ಬರನ್ನೂ ನೀನು ಹೇಗೆ ತಡೆಯಬಲ್ಲೆ ?

ದೌಲತ್—ಈ ನಶ್ವರವಾದ ಪ್ರಾಣವನ್ನು ಬಲಿದಾನ ಮಾಡಿ ತಡೆಯುತ್ತೇನೆ.

ಸುಲ್ತಾನ್—ದೌಲತ್ ! ನೀನು ವೀರರಮಣಿಯೇ ಹೌದು ! ಬಾಲ್ಯದಿಂದಲೂ ನಾನು ನಿನ್ನಲ್ಲಿ ಅನುರಕ್ತನಾಗಿದ್ದೇನೆಂಬುದನ್ನು ನೀನು ಬಲ್ಲೆ ನೀನು ನನ್ನಲ್ಲಿ ಎಷ್ಟೋ ಸ್ನೇಹವನ್ನಿಟ್ಟದ್ದೆ ಎಷ್ಟೋ ಪ್ರೇಮವನ್ನು ಬೆಳೆಸಿದ್ದೆ ನೀನು ನನ್ನಲ್ಲಿ ಅನುಗ್ರಹಿಸು! ನೀನು ನನ್ನ ರಾಣಿಯಾದರೆ ನಾನು ಈ ಸಾಮ್ರಾಜ್ಯವನ್ನು ಸ್ಥಾಪಿಸಬಲ್ಲೆ

ದೌಲತ್—ಸುಲ್ತಾನನೇ ! ನಾನು ವಿವಾಹಿತಳಾಗುವವರೆಗೆ ವೀರರಮಣಿಯೇ ಹೌದು ನನಗೆ ಮದುವೆಯಾದರೆ ಅಂದಿನಿಂದ ಅಂತಃಪುರದ ವಿಲಾಸಿನಿ. ನೀನು ನನ್ನಲ್ಲಿ ಎಷ್ಟು ಅನುರಕ್ತನಾಗಿರುವಿ ಎಂಬುದನ್ನೂ, ನನ್ನ ಮೋಹಕ್ಕಾಗಿ ಸರ್ವಸ್ವವನ್ನೂ ಪರಿತ್ಯಾಗ ಮಾಡುವಿ ಎಂಬುದನ್ನೂ ನಾನು ಚೆನ್ನಾಗಿ ಬಲ್ಲೆ. ಶತ್ರುಗಳು ಬಂದು ನಮ್ಮ ರಾಜ್ಯವನ್ನು ಸೂರೆ ಮಾಡುತ್ತಿದ್ದರೆ ನೀನು ಅಂತಃಪುರದಲ್ಲಿ ವಿಲಾಸಮಗ್ನನಾಗಿರುವೆ ಮೈಸೂರಿಗೆ ಸುತ್ತಲೂ ಶತ್ರುಗಳು ಮೈಸೂರಿನ ರಾಜ್ಯಶ್ರೀಯು ಹಾಗೆ ಮಣ್ಣುಪಾಲಾಗುವುದನ್ನು ನೋಡಿ ನಾನು ಸಹಿಸಲಾರೆ ಅದಕ್ಕೆ ನಾನೇ ಕಾರಣಳಾಗುವುದಂತೂ ಅಚಿಂತ್ಯವಾದುದು ಅದಕ್ಕಿಂತ ನಾನೇ ಸಾಯುವುದು ಶ್ರೇಯಸ್ಕರ

ಸುಲ್ತಾನ್—ದೌಲತ್ ! ನಾನು ಕಾಮಲೋಲುಪನಾಗಿ ಅಂತಃಪುರದ ಪಾರಿವಾಳವಾಗಿ ಬದುಕುವುದಿಲ್ಲ ! ನಿನ್ನ ಸಾನ್ನಿಧ್ಯವಿದ್ದರೆ ನನ್ನ ಉತ್ಸಾಹವು ಇಮ್ಮಡಿಯಾಗುತ್ತದೆ ನೀನು ಅನುಗ್ರಹ ಮಾಡಿ ನನ್ನ ರಾಣಿಯಾದರೆ ಪ್ರತಿಯೊಂದು ಯುದ್ಧದಲ್ಲಿಯೂ ಜಯಶ್ರೀಯನ್ನು ತರುವೆನು !

ದೌಲತ್—ಸುಲ್ತಾನನೇ ? ಪ್ರತಿಯೊಂದು ಯುದ್ಧದಲ್ಲಿಯೂ ನಾನು ನಿನ್ನ ಜೊತೆಯಲ್ಲಿಯೇ ಇರುವೆನು ರಣಕ್ಷೇತ್ರದಲ್ಲಿ ಲಭಿಸುವ ಜಯವು ನನ್ನದು. ಆದರ ಶ್ರೀಮಂತನು ನೀನು ನೀನು ವೀರಸ್ವರ್ಗಕ್ಕೇರಿದರೆ ನಾನು ಮುಂದೆ ಹೋಗಿ ನಿನಗಾಗಿ ಸ್ವಾಗತಿಸುವೆನು

ಸುಲ್ತಾನ್ — ದೌಲತ್ ! ನೀನು ಶ್ರೀರಂಗಪಟ್ಟಣದಲ್ಲಿಯೇ ಇದ್ದರೆ ನಾನು ಧನ್ಯನಾಗುವೆನು ದೇವಿ ! ಅನುಗ್ರಹಿಸು ಇಲ್ಲದಿದ್ದರೆ ಈ ನಗರದಲ್ಲೇ ಇರಲು ನನಗೆ ಅಪ್ಪಣೆಕೊಡು !

ದೌಲತ್—ಸುಲ್ತಾನನೇ! ನಿನ್ನ ಬುದ್ಧಿಗೆ ಇಂಥಾ ಗ್ರಹಣ ಹಿಡಿದಿದೆಯೆಂದು ತಿಳಿದಿರಲಿಲ್ಲ ನೀನು ಇಲ್ಲಿದ್ದರೆ ನಗರವು ಸ್ವಾಧೀನವಾಗುವುದೂ ಇಲ್ಲ ಶ್ರೀರಂಗ ಪಟ್ಟಣವೂ ಒಂದೇದಿನದಲ್ಲಿ ಕೈತಪ್ಪಿ ಹೋಗುವುದು

ಸುಲ್ತಾನ್—ದೇವೀ! ಈ ರಾಜ್ಯವು ನನಗೆ ಬೇಡ! ಈ ಯುದ್ಧ ವಿಗ್ರಹಗಳಲ್ಲಿ ನನಗೆ ಅಭಿರುಚಿಯಿಲ್ಲ ನಿಜವಾಗಿಯೂ, ಸತ್ಯವಾಗಿಯೂ ಈ ರಾಜ್ಯವನ್ನು ಇಯಜ್ ಖಾನನಿಗೆ ಕೊಟ್ಟುಬಿಡುತ್ತೇನೆ. ನನಗೆ ಜಗನ್ಮೋಹಿನಿಯಾದ ನೀನೊಬ್ಬಳಲ್ಲದೆ ಈ ಜಗತ್ತಿನಲ್ಲಿ ವಾಂಛಿತವಸ್ತುವೇ ಬೇರೊಂದಿಲ್ಲ

ದೌಲತ್—ಸುಲ್ತಾನನೇ! ದೊಡ್ಡನವಾಬರವರು ಈ ರಾಜ್ಯವನ್ನು ಕಟ್ಟಲು ಈ ರಾಜ್ಯವನ್ನು ಆಳಲು ನೀನು ದಕ್ಷನೆಂದೇ ನಿನಗೆ ಒಪ್ಪಿಸಿದರು. ಇಂದು ನನಗಾಗಿ ರಾಜ್ಯತ್ಯಾಗ ಮಾಡುವುದಾದರೆ ಈ ರಾಜ್ಯದ ಕ್ಷೇಮಕ್ಕಾಗಿ ನಾನು ಪ್ರಾಣವನ್ನು ಪರಿತ್ಯಾಗಮಾಡುವೆನು

ಸುಲ್ತಾನ್—ದೇವಿ! ದೌಲತ್! ಸಂಧ್ಯಾಕಾಲದಲ್ಲಿ ಅಷ್ಟೊಂದು ಕರುಣಾಮಯಿಯಾಗಿ, ಪ್ರೇಮಮಯಿಯಾಗಿ ಬಡಬಗ್ಗರನ್ನು ಅನುಗ್ರಹಿಸಿದ ನೀನು ನನ್ನಲ್ಲೇಕೆ ಇಷ್ಟು ಕಠಿನ ಹೃದಯದವಳಾಗಿರುವೆ ನಾನು ಬಾಲ್ಯದಿಂದಲೂ ನನ್ನ ಹೃದಯ ಸಿಂಹಾಸನದಲ್ಲಿ ನಿನ್ನ ಮೋಹನ ಮೂರ್ತಿಯನ್ನು ಆರಾಧಿಸುತ್ತಿದ್ದೇನೆ ನೀನು ಪ್ರಸನ್ನಳಾಗು! ಎಂದು ದೌಲತ್ತಳ ಎರಡು ಕೈಗಳನ್ನೂ ಹಿಡಿದು ಬೇಡಿದನು

ದೌಲತ್—(ಟಿಪ್ಪುವಿನ ಭುಜದ ಮೇಲೆ ಕೈಯ್ಯಿಟ್ಟು) ಸುಲ್ತಾನನೇ! ನಾನು ಪ್ರೇಮಮಯಿಯೂ ಅಲ್ಲ! ಕರುಣಾಮಯಿಯೂ ಅಲ್ಲ. ನಾನು ದೊಡ್ಡನವಾಬರ ಪಾಲಿತ ಪುತ್ರಿ! ಅವರು ನನ್ನನ್ನು ಪಣವಾಗಿಟ್ಟಿದ್ದಾರೆ ನೀನು ಮೈಸೂರು ರಾಜ್ಯದಲ್ಲಿ ಸುಲ್ತಾನೀ ಚಕ್ರಾಧಿಪತ್ಯವನ್ನು ಸ್ಥಾಪಿಸಿದರೆ ಅಂದು ನಾನು ಸ್ವಯಂವರದಿಂದ ನಿನ್ನನ್ನು ವರಿಸುವೆನು ಅದು ದೊಡ್ಡ ನವಾಬರು ಕಟ್ಟಿದ ಪಣ! ನೀನು ಪರಾಕ್ರಮದಿಂದ ಆ ಪಣವನ್ನು ಜಯಿಸು!

ಟಿಪ್ಪುವು ದೌಲತ್ತಳ ಸಾನ್ನಿಧ್ಯಸ್ಪರ್ಶದಿಂದ ಉನ್ಮತ್ತನಂತಾದನು ದೌಲತ್ತಳ ಮಾತುಗಳು ಅವನಿಗೆ ಅರ್ಥವಾಯಿತೋ ಇಲ್ಲವೋ ಹೇಳುವುದು ಕಷ್ಟ! "ನಿನ್ನನ್ನು ಸ್ವಯಂವರದಿಂದ ವರಿಸುತ್ತೇನೆ." ಎಂಬ ನುಡಿಯು ಮಾತ್ರ ದಿವ್ಯ ಸಂಗೀತದಂತೆ ಅವನಿಗೆ ಬೋಧೆಯಾಯಿತು. ಪ್ರೇಮವಿಹ್ವಲನಾದ ಸುಲ್ತಾನನು ದೌಲತ್ತಳನ್ನು ಬಿಗಿ ಹಿಡಿದನು. ದೌಲತ್ತಳು ಆ ಬಾಹುಬಂಧನದಿಂದ ತಪ್ಪಿಸಿಕೊಳ್ಳುವಷ್ಟರಲ್ಲಿ ಟಿಪ್ಪುವು ಬಲಾತ್ಕಾರದಿಂದ ಅವಳ ವದನವನ್ನು ಚುಂಬಿಸಿದನು. ಚಂದನ ವೃಕ್ಷವನ್ನು ಸುತ್ತಿ ಬಿಗಿದಿರುವ ಘಟಸರ್ಪದಂತೆ ದೌಲತ್ತಳನ್ನು ಬಿಗಿದು ಆಲಿಂಗಿಸದನು ದೌಲತ್ತಳು ಬಲ ಪ್ರಯೋಗದಿಂದ ಸುಲ್ತಾನನನ್ನು ತಳ್ಳಿದಳು. ಸುಲ್ತಾನನು ಕೆಳಗೆ ಬಿದ್ದನು.

ದೌಲತ್ತಳು ದುರದುರನೆ ನೋಡುತ್ತಾ ನಿಂತಳು. ರಾಧೆಯು ಏನೋ ಅಚಾತುರ್ಯ ನಡೆದಿದೆಯೆಂದು ಗಾಬರಿಯಿಂದ ಬಂದು ನೋಡಿದಳು ಶಿಲಾಮೂರ್ತಿಯಂತೆ ನಿಂತಿದ್ದ ದೌಲತ್ತಳ ಕಡೆಗೆ ತಿರುಗಿ ನೋಡಿದಳು, ರಾಧೆಯು ದೌಲತ್ತಳನ್ನು ನೋಡಿ ನಕ್ಕಳು. ದೌಲತ್ತಳು ಅಲುಗಾಡದೆ ಸುಲ್ತಾನನ ಕಡೆಗೇ ನೋಡುತ್ತಿದ್ದಳು ರಾಧೆಯು ಸುಲ್ತಾನನ ಅವಸ್ಥೆಯನ್ನು ನೋಡಿದಳು ಅವನು ಜ್ಞಾನಶೂನ್ಯನಾಗಿದ್ದನೇನು ? ಇಲ್ಲ! ಕಣ್ಣುಗಳನ್ನು ಬಿಟ್ಟುಕೊಂಡಿಲ್ಲವೇನು ? ಬಿಟ್ಟುಕೊಂಡು ನೋಡುತ್ತಿದ್ದಾನೆ ಆದರೆ ಅವನಿಗೇನು ಕಾಣುತ್ತದೆ ? ಎದುರಿನಲ್ಲಿ ನಿಂತಿರುವ ಆ ಮೋಹಿನೀರೂಪವು ಅವನ ಕಣ್ಣುಗಳಲ್ಲಿ ತುಂಬಿದೆ "ದೌಲತ್! ದೌಲತ್, ನನ್ನಲ್ಲಿ ಪ್ರಸನ್ನಳಾಗು, ನನ್ನನ್ನು ಅನುಗ್ರಹಿಸು" ಎಂದು ದೀನವಾಣಿಯಿಂದ ಬೇಡಿಕೊಳ್ಳುತ್ತಿದ್ದಾನೆ ರಾಧೆಯು ಸುಲ್ತಾನನ ಪಕ್ಕದಲ್ಲಿ ಕುಳಿತುಕೊಂಡು ಎಷ್ಟೋ ಶೈತ್ಯೋಪಚಾರವನ್ನು ಮಾಡಿದಳು. ಸುಲ್ತಾನನು ಏಳಲಿಲ್ಲ ಶಿಲಾಮೂರ್ತಿಯಂತೆ ನಿಂತಿದ್ದ ದೌಲತ್ತಳು ಬಂದು ಸುಲ್ತಾನನ ಮೈ ತಡವಿದಳು ಸಂಜೀವನ ಸ್ಪರ್ಶವಾದಂತೆ ಸುಲ್ತಾನನು ಎದ್ದು ಕುಳಿತನು. ರಾಧೆಯು ಶೀತಳ ಪಾನೀಯವನ್ನುತಂದು ಸ್ವೀಕರಿಸುವಂತೆ ಸುಲ್ತಾನನನ್ನು ಪ್ರಾರ್ಥಿಸಿದಳು. ಸುಲ್ತಾನನು ಸ್ವೀಕರಿಸಿದನು. ರಾಧೆಯು ಸುಲ್ತಾನನನ್ನು ಹಜಾರದಿಂದ ಚಂದ್ರಶಾಲೆಗೆ ಕರೆದುಕೊಂಡು ಹೋದಳು. ದೌಲತ್ತಳು ಅವರ ಜೊತೆಯಲ್ಲೇ ಚಂದ್ರಶಾಲೆಗೆ ಹೋದಳು ಅಲ್ಲಿ ಅಮೃತಶಿಲಾ ಮಂಟಪದಲ್ಲಿ ಮೂವರೂ ಕುಳಿತರು. ಮಾತಿಗೆ ಮೊದಲಿಡುವುದಕ್ಕೆ ಆರಂಭಿಸುವಷ್ಟರಲ್ಲಿ, ರಾಧೆಯು ಪರಿಹಾಸ್ಯ ವಚನಗಳಿಗೆ ಪೀಠಿಕೆ ಹಾಕುವಷ್ಟರಲ್ಲಿ ದೌಲತ್ತಳ ಮುಖದಲ್ಲಿ ನಾಚಿಕೆಯೂ ಸಂಕೋಚಭಾವವೂ ಅಳಿಸಿ ನವಪ್ರಕಾಶವು ಉದಯವಾಗುವಷ್ಟರಲ್ಲಿ, ಸುಲ್ತಾನನು ತನ್ನ ಉನ್ಮಾದಾವಸ್ಥೆಯ ಪರಿಣಾಮವನ್ನು ಅರಿತುಕೊಳ್ಳುವಷ್ಟರಲ್ಲಿ ದೂರದ ವನಪ್ರದೇಶದಲ್ಲಿ "ಢಂ! ಢಂ!" ಎಂದು ಫಿರಂಗಿಯ ಶಬ್ದವಾಯಿತು ಅದನ್ನು ಕೇಳಿ ಮೂವರೂ ಬೆಚ್ಚಿಬಿದ್ದರು

ಸುಲ್ತಾನನು ಘಾಬರಿಯಿಂದ ಎದ್ದು ಸುತ್ತಲೂ ನೋಡಿದನು ಏನೂ ಕಾಣಲಿಲ್ಲ. ರಾಧೆಯ ಕಡೆ ತಿರುಗಿ "ರಾಣಿಯವರೇ, ಇದೇನು ಕೌತುಕ!" ಎಂದನು. ರಾಧೆಯು ನೋಡಿದಳು, ಆಲೋಚನೆ ಮಾಡಿದಳು ಏನೂ ತಿಳಿಯಲಿಲ್ಲ. ಮತ್ತೊಂದಾವರ್ತಿ ಫಿರಂಗಿಯ ಸದ್ದು ಕೇಳಿಸಿತು.

ಸುಲ್ತಾನನು—ರಾಣಿಯವರೇ! ಇಂದಿನ ಪ್ರಸಂಗವು ಸುಮುಖವಾಗಿ ಕಾಣುವುದಿಲ್ಲ ನಾನು ಆ ಶಬ್ದ ಕೇಳಿಸುವಲ್ಲಿಗೆ ಹೋಗುತ್ತೇನೆ.

ರಾಧೆ—ಸುಲ್ತಾನರೇ, ನೀವು ಏಕಾಏಕಿಯಾಗಿ ಅಲ್ಲಿಗೆ ಹೋಗಿ ಏನು ಮಾಡುತ್ತೀರಿ? ನಿಮ್ಮ ಶಿಬಿರವು ಒಂದು ಯೋಜನದೂರದಲ್ಲಿದೆ.

ಸುಲ್ತಾನ್—ದೇವಿ! ನಾನುಸ್ವಲ್ಪ ಸೈನ್ಯವನ್ನು ಇಲ್ಲಿಗೆ ತಂದಿದ್ದೇನೆ.

ರಾಧೆ—ನೀವು ಸೈನ್ಯವನ್ನೇಕೆ ಇಲ್ಲಿಗೆ ಕರೆತಂದಿರಿ?

ಸುಲ್ತಾನ್—ಸಂದರ್ಭವು ಬಂದರೆ ಆತ್ಮರಕ್ಷಣೆಗಾಗಿ!

ರಾಧೆ-ಸುಲ್ತಾನರೇ, ನೀವು ಗುಪ್ತಸೈನ್ಯವನ್ನು ತಂದಿರುವುದನ್ನು ನಾನು ಬಲ್ಲೆ! ನೀವು ಇಯಜ್‌ಖಾನರು—ಈ ಸೋನಾಮಹಲಿನಲ್ಲಿರಬಹುದೆಂದು, ಅವರನ್ನು ಸುಲಭವಾಗಿ ಸುತ್ತುಕಟ್ಟಬಹುದೆಂದು ಸೈನ್ಯವನ್ನು ತಂದಿರಿ! ಇಲ್ಲವೇ ಈ ಸೋನಾಮಹಲನ್ನು ಹೊತ್ತುಕೊಂಡು ಹೋಗಲು ಈ ಸೈನ್ಯವನ್ನು ತಂದಿದ್ದೀರಿ!

ಸುಲ್ತಾನ್—ದೇವಿಯವರೇ, ನೀವು ಯಾವಾಗಲೂ ಹಾಸ್ಯಮಯಿ! ನೀವು ನಿರ್ಭಯವಾಗಿರುವುದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ

ರಾಧೆ—ಸಾಕ್ಷಾತ್ ಸುಲ್ತಾನರವರು ಸಮ್ಮುಖದಲ್ಲಿರುವಾಗ ನಮಗೆ ಭಯವೆಲ್ಲಿ ಬಂತು? ಆದರೆ ಸುಲ್ತಾನರೇ ತಮ್ಮ ಹಾಗೆ ನಾನೂ ಆತ್ಮರಕ್ಷಣೆಯನ್ನು ಸಿದ್ಧಮಾಡಿಕೊಂಡೇ ಇದ್ದೇನೆ ನೋಡಿರಿ!

ರಾಧೆಯು ಮೇಲಿನ ಉಪ್ಪರಿಗೆಯ ಮೇಲೆ ಏರಿ ತುತ್ತೂರಿಯನ್ನು ಬಾರಿಸಿದಳು ಆ ವನ ಮಧ್ಯದಿಂದ ಇರುವೆಯ ಹಿಂಡಿನಂತೆ ಕೆಂಪು ಉಷ್ಣೀಷದ ಸೈನ್ಯಿಕರು ಸಾಲುಸಾಲಾಗಿ ಬರಲಾರಂಭಿಸಿದರು ಸುಲ್ತಾನನು ಆ ಸೈನ್ಯವನ್ನು ನೋಡಿ ಬೆರಗಾದನು.

ಸುಲ್ತಾನ್—ರಾಣಿಯವರೇ! ಈ ನಿಮ್ಮ ಸೈನ್ಯವೆಷ್ಟಿದೆ

ರಾಧೆ—ಸುಮಾರು ಎರಡು ಸಹಸ್ರವಿದೆ

ಸುಲ್ತಾನ್—ಶತೃಗಳ ಸೈನ್ಯವು ಇನ್ನೂ ಬಲವಾಗಿದ್ದರೆ?

ರಾಧೆ—ನಗರದ ರಾಜ್ಯದವರಾರೂ ನಮ್ಮ ಸೈನ್ಯದ ಮೇಲೆ ಯುದ್ಧವನ್ನು ಮಾಡುವುದಿಲ್ಲ. ಹೊರಗಿನವರದು ಹತ್ತು ಸಹಸ್ರ ಸೈನ್ಯವಿದ್ದರೂ ಈ ಬೆಟ್ಟ ಗುಡ್ಡಗಳಲ್ಲಿ, ಈ ನಿಶಿರಾತ್ರಿಯಲ್ಲಿ ನಮ್ಮ ಸೈನ್ಯದೊಡನೆ ಯಾರೂ ಯುದ್ಧವನ್ನು ಮಾಡಲಾರರು ಬೆಳಗಾಗುವುದರೊಳಗಾಗಿ ನಾವು ಯುದ್ಧವನ್ನು ಪೂರೈಸಿಬಿಡುತ್ತೇವೆ. ರಾತ್ರಿ ಯುದ್ಧದಲ್ಲಿ ಯಾವಾಗಲೂ ಜಯವು ನಮ್ಮದು

ಸುಲ್ತಾನ್—ಈ ಸೈನ್ಯವನ್ನು ತೆಗೆದುಕೊಂಡು ಹೋಗಿ ಶತ್ರುಗಳೊಡನೆ ಯುದ್ಧ ಮಾಡುವವರಾರು?

ರಾಧೆ—(ಎದೆತಟ್ಟಿ) ನಾನು!

ಸುಲ್ತಾನನು ಅವಾಕ್ಕಾದನು!

ರಾಧೆಯು ಕೆಳಗಿಳಿದು ಹೋಗಿ ಯುದ್ಧಕ್ಕೆ ಅನುವಾದ ಉಕ್ಕಿನ ಅಂಗಿಯನ್ನು ತೊಟ್ಟು, ಉಕ್ಕಿನ ಉಷ್ಣೀಷವನ್ನು ಧರಿಸಿ, ಸೊಂಟಕ್ಕೆ ಕತ್ತಿಯನ್ನು ಕಟ್ಟಿಕೊಂಡು,

ಕೈಯ್ಯಲ್ಲಿ ಗುರಾಣಿಯನ್ನು ಹಿಡಿದುಕೊಂಡು ಸುಲ್ತಾನನ ಮುಂದೆ ಬಂದು ನಿಂತಳು. ನಗುಮೊಗದಿಂದ ದೌಲತ್ತಳನ್ನು ನೋಡಿ "ಅಕ್ಕ! ಯುದ್ಧಕ್ಕೆ ಅನುಜ್ಞೆಯನ್ನು ಕೊಡಿರಿ!" ಎಂದು ಹೇಳಿ ಸುಲ್ತಾನರ ಕಡೆ ತಿರುಗಿ "ಸುಲ್ತಾನರೆ! ಈ ದೌಲತ್ತಳನ್ನು ರಕ್ಷಣೆಮಾಡಿಕೊಂಡಿರಿ!" ಎಂದಳು.

ಸುಲ್ತಾನನು "ಯುದ್ಧ ಪ್ರಸಂಗ ಒದಗಿರುವಾಗ ರಾಧಾರಾಣಿಯವರೊಬ್ಬರನ್ನು ಶತ್ರು ಸೈನ್ಯದ ಮುಂದೆ ಕಳಿಸಿ ನಾನು ಇಲ್ಲಿ ಹೇಡಿಯಂತೆ ಕುಳಿತಿರಲು ಒಪ್ಪುವುದಿಲ್ಲ ನಾನು ರಾಧಾರಾಣಿಯವರ ಸಹಾಯಕ್ಕೆ ಹೊರಡುತ್ತೇನೆ." ಎಂದು ಹೇಳಿ ಎದ್ದನು.

ದೌಲತ್ತಳು ಮೌನವಾಗಿ ಕೆಳಗಿಳಿದು ತಾನೂ ಯುದ್ಧದ ದಿರಸನ್ನು ಧರಿಸಿ ರಾಧೆಯ ಜೊತೆಗೆ ಬಂದು ನಿಂತಳು

ರಾಧೆಯು ಸುಲ್ತಾನರನ್ನು ಕುರಿತು "ಸುಲ್ತಾನರೇ ನಾವಿಬ್ಬರೂ ಯುದ್ಧಕ್ಕೆ ಹೋಗುತ್ತೇವೆ ತಾವು ತಮ್ಮ ಶಿಬಿರಕ್ಕೆ ಹೋಗಿರಿ!" ಎಂದು ಹೇಳಿದಳು.

ಸುಲ್ತಾನನು "ನಿಮ್ಮಿಬ್ಬರನ್ನೇ ಶತ್ರುಸೈನ್ಯ ಮಧ್ಯಕ್ಕೆ ಕಳಿಸಿ ನಾನು ನನ್ನ ಶಿಬಿರಕ್ಕೆ ಹೋಗಿ ಸೇರಿಕೊಳ್ಳುವುದು ಉಚಿತವೇ?" ಎಂದು ಹೇಳಿ ರಾಧೆಯೊಡನೆ ಕೆಳಗಿಳಿದು ಸೋನಾಮಹಲಿನ ನೆಲಮಾಳಿಗೆಗೆ ಹೋದನು

ಅಲ್ಲಿದ್ದ ಅಸ್ತ್ರಾಸ್ತ್ರಗಳ ಅಚ್ಚುಕಟ್ಟನ್ನು ನೋಡಿ ಆಶ್ಚರ್ಯ ಚಕಿತನಾದನು. ತನಗೆ ಅನುವಾದ ಯುದ್ಧ ಕವಚವನ್ನು ಧರಿಸಿದನು ರಾಧೆಯು ದರಿಯಾಬಾಗಿನ ಹೊರವಳಯದಲ್ಲಿ ದಾಟಿಹೋಗಿ ಎರಡು ಬಿಳೀ ಕುದುರೆಗಳನ್ನೂ ಒಂದು ಕಪ್ಪು ಕುದುರೆಯನ್ನೂ ಸಜ್ಜುಮಾಡಿ ತಂದು ಸೋನಾಮಹಲಿನ ಪಾವಟಿಗೆಗಳ ಹತ್ತಿರ ನಿಲ್ಲಿಸಿದಳು. ರಾಧೆಯೂ, ದೌಲತ್ತಳೂ ಲಾಘವದಿಂದ ಹಾರಿ ಕುದುರೆಗಳನ್ನು ಹತ್ತಿದರು ಸುಲ್ತಾನನು ಕುದುರೆಯನ್ನು ಹತ್ತಿ ತನ್ನ ಕುದುರೆಯನ್ನು ಮುಂದೆ ನಡೆಸಿದನು. ರಾಧೆಯು ಮುಂದೆ ಮುಂದೆ ಹೋಗಿ ತುತ್ತೂರಿಯನ್ನು ಊದಿದಳು. ಕೆಂಪು ಉಷ್ಣೀಷದ ಸೈನ್ಯಿಕರು ವ್ಯೂಹರಚನೆಯಿಂದ ಹಿಂದೆ ಹೊರಟರು

ದೌಲತ್ತಳೂ, ರಾಧಾರಾಣಿಯೂ ಶ್ವೇತಾಶ್ವಗಳನ್ನು ಏರಿ ಸೈನ್ಯವನ್ನು ನಡೆಸಿಕೊಂಡು ಹೋಗುತ್ತಿದ್ದರು ಟಿಪ್ಪೂಸುಲ್ತಾನನು ಅವರೊಡನೆ ಹೊರಟನು

## ನಗರದ ರಣಕ್ಷೇತ್ರದಲ್ಲಿ

ಸುಲ್ತಾನ್—ರಾಣಿಯವರೇ! ತಾವು ಯುದ್ಧಕ್ಕೆ ಹೊರಟಿದ್ದೀರಿ! ಈ ದರಿಯಾಬಾಗಿನ ರಕ್ಷಣೆಗೇನು ಏರ್ಪಾಟು ಮಾಡಿರುತ್ತೀರಿ? ಇಲ್ಲಿ ಅಪಾರವಾದ ಧನಕನಕಗಳಿವೆ.

ರಾಧೆ—ಸುಲ್ತಾನರೇ! ಇಲ್ಲಿ ಒಂದು ಕುರುಡು ಕಾಸೂ ಇಲ್ಲ ದೌಲತ್ ರಾಣಿಯವರೂ, ನಾನೂ ಇಲ್ಲಿ ಇಲ್ಲದ ಮೇಲೆ ಈ ದರಿಯಾಬಾಗಿನ ಹಂಬಲ ಏಕೆ? ಈ ದರಿಯಾಬಾಗಿಗೆ ಶತ್ರುಗಳೇ ಇಲ್ಲ ಇಲ್ಲಿ ನಡೆಯುವ ದಾನಧರ್ಮಗಳೇ ಈ ಮಹಲನ್ನು ರಕ್ಷಿಸುತ್ತವೆ

ಸುಲ್ತಾನ್—ತಾವು ಈ ಸೈನ್ಯವನ್ನು ಎಲ್ಲಿಗೆ ನಡೆಸುತ್ತೀರಿ?

ರಾಧೆ—ಆ ಫಿರಂಗಿ ಶಬ್ದ ಕೇಳಿದ ಲಕ್ಷ್ಯವನ್ನು ಹಿಡಿದು ನಡೆಸುತ್ತೇನೆ

ಸುಲ್ತಾನ್—ಅದೆಷ್ಟು ದೂರವಿದೆ?

ರಾಧೆ—ಸುಮಾರು ಮೂರು ನಾಲ್ಕು ಮೈಲಿಗಳ ದೂರವಿರಬಹುದು

ಸುಲ್ತಾನ್—ಎತ್ತ ಕಡೆ?

ರಾಧೆ—ತಮ್ಮ ಶಿಬಿರದ ಕಡೆ

ಸುಲ್ತಾನ್—ಇಲ್ಲ! ನಮ್ಮ ಶಿಬಿರವು ಉತ್ತರದ ಕಡೆಗಿದೆ. ಈ ಸದ್ದು ದಕ್ಷಿಣದ ಕಡೆಯಿಂದ ಸ್ಪಷ್ಟವಾಗಿ ಕೇಳಿಸಿತು

ರಾಧೆ—ತಮ್ಮ ಶಬ್ದ ಗ್ರಹಣವು ತಪ್ಪು ಶಬ್ದವಾದುದು ಉತ್ತರ ದಿಕ್ಕಿನಲ್ಲಿಯೇ! ಈ ಪರ್ವತಶ್ರೇಣಿಗಳಲ್ಲಿ ಪ್ರತಿ ಧ್ವನಿಯಾಗಿ ದಕ್ಷಿಣದಲ್ಲಿ ಶಬ್ದವಾದಂತೆ ಕೇಳಿಸುತ್ತದೆ

ಸುಲ್ತಾನ್—ನಮ್ಮ ಶಿಬಿರದ ಕಡೆ ಶತ್ರುಗಳ ಸೈನ್ಯವು ಬರುವುದಕ್ಕೆ ಕಾರಣವಿಲ್ಲ. ಬೇಹುಗಾರರು ಸಂಧ್ಯಾಕಾಲದವರೆಗೆ ಪರಸೈನ್ಯದ ಸುಳಿವಿಲ್ಲವೆಂದು ವರದಿ ಮಾಡಿರುತ್ತಾರೆ

ರಾಧೆ— ತಮ್ಮ ಬೇಹುಗಾರರು ಈ ಪ್ರಾಂತದ ಅನುಭವವಿಲ್ಲದವರು ಯಾರೋ ಈ ಪ್ರಾಂತದ ಅನುಭವವನ್ನು ಚೆನ್ನಾಗಿ ಅರಿತವರೇ ಈ ಸಮರ ಸನ್ನಾಹವನ್ನು ಮಾಡಿದಾರೆ. ಆದ್ದರಿಂದ ನಿಮ್ಮ ಬೇಹುಗಾರರು ಮೋಸ ಹೋಗಿರಬೇಕು

ಮಾತನಾಡುತ್ತಾ ಆಡುತ್ತಾ ರಾಧೆಯು ಕುದುರೆಯನ್ನು ದೌಡಾಯಿಸಿದಳು ಅಷ್ಟರಲ್ಲಿ ಬೇಹುಗಾರರು ಓಡುತ್ತ ಬಂದರು ಅವರು ಸುಲ್ತಾನನ ಬೇಹುಗಾರರು ಸುಲ್ತಾನನು ಸಮಾಚಾರವೇನೆಂದು ವಿಚಾರಿಸಿದನು ಅವರು "ದೊಡ್ಡ ಸೈನ್ಯ ಒಂದು ನಮ್ಮ ಶಿಬಿರದ ಮೇಲೆ ಬರುತ್ತಿದೆಯೆಂದೂ, ಆ ಸೈನ್ಯದಲ್ಲಿ ಫಿರಂಗಿಗಳು–ಬಂದೂಕುಗಳೂ ಹೇರಳವಾಗಿವೆಯೆಂದೂ, ಶತ್ರು ಸೈನ್ಯವು ಬಲು ದೊಡ್ಡದೆಂದೂ, ಶಿಸ್ತಿನಿಂದ ಬರುತ್ತಿದೆಯೆಂದೂ ಅರಿಕೆ ಮಾಡಿದರು ಸಮಾಚಾರವನ್ನು ಶಿಬಿರಕ್ಕೂ ತಿಳಿಸಿ, ಹುಜೂರಿಗೆ ಅರಿಕೆ ಮಾಡಲು ಬರುತ್ತಿದ್ದೇವೆಂದು" ಬಿನ್ನಹ ಮಾಡಿದರು

ರಾಧೆಯು "ಸುಲ್ತಾನರವರೇ ತಮ್ಮ ಮೇಲೆ ಯುದ್ಧ ಮಾಡಲು ಯಾರೋ ಮಹಾ ಸೈನ್ಯವನ್ನು ತರುತ್ತಿದ್ದಾರೆ ಇಂದು ರಾತ್ರಿ ತಮ್ಮ ಶಿಬಿರದ ಮೇಲೆ ಘೋರ ಆಕ್ರಮಣವಾಗಬಹುದು ತಾವು ತಮ್ಮ ಶಿಬಿರಕ್ಕೆ ಹೊರಡಿರಿ ಯುದ್ಧದ ಹಂಬಲ

ವಿಲ್ಲದೇ ಸೈನ್ಯವೆಲ್ಲವೂ ಅಸ್ತವ್ಯಸ್ತವಾಗಿರಬಹುದು ನೀವು ಹೋಗಿ ಅದನ್ನು ಲಗುಬಗೆ ಯಿಂದ ಸಿದ್ಧಗೊಳಿಸಿರಿ ನಾವು ಅಷ್ಟರಲ್ಲಿ ಅಡ್ಡದಾರಿಯಿಂದ ಆ ಸೈನ್ಯವನ್ನು ತಡೆಯುವೆವು. ಅವರಲ್ಲಿ ಫಿರಂಗಿಗಳೂ, ಬಂದೂಕಗಳೂ ಇದ್ದರೆ ನಾವು ಜಯಿಸಲಾರೆವು. ಆದರೆ ಬೆಳಕು ಹರಿಯುವವರಗೆ ಅವರನ್ನು ತಡೆಯಬಲ್ಲೆವು ಅಷ್ಟರಲ್ಲಿ ಬೆಳಕು ಹರಿದುಬಿಟ್ಟರೆ ಇಂದಿನ ಯುದ್ಧದಲ್ಲಿ ತಮ್ಮ ಜಯವು ಸಿದ್ಧ !" ಎಂದಳು

ಸುಲ್ತಾನನು ತನ್ನ ಶಿಬಿರದ ಕಡೆ ಹೊರಟನು.

ರಾಧೆಯೂ, ದೌಲತ್ತಳೂ ಅಡ್ಡದಾರಿಯಿಂದ ತಮ್ಮ ಸೈನ್ಯವನ್ನು ನಡೆಸಿಕೊಂಡು ಹೋದರು ಅವರು ಉತ್ತರ ದಿಕ್ಕಿನಲ್ಲಿ ಬರುತ್ತಿದ್ದ ಮಹಾ ಸೈನ್ಯವನ್ನು ಮುಖಭಾಗ ದಿಂದ ಎದುರಿಸದೇ ಪಕ್ಕದಿಂದ ನುಗ್ಗಿ ಹೋರಾಟವನ್ನು ಆರಂಭಿಸಿದರು. ಸೇನಾಧಿ ಪತಿಯು ತನ್ನ ಸೈನ್ಯದಿಂದ ಒಂದು ತುಕ್ಕಡಿಯನ್ನು ವಿಭಾಗಿಸಿ ರಾಧೆಯ ಸೈನ್ಯದೊಡನೆ ಯುದ್ಧ ಮಾಡಲು ಬಿಟ್ಟು ದೊಡ್ಡ ಸೈನ್ಯವನ್ನು ಮುಂದುವರಿಸಿದನು ಅರ್ಧ ಗಂಟೆಯು ಹೊತ್ತು ಎರಡು ಸೈನ್ಯಗಳಿಗೂ ಯುದ್ಧವಾಯಿತು ಅಷ್ಟರಲ್ಲಿ ಮಹಾ ಸೈನ್ಯವು ಮುಂದು ವರಿದು ಹೋಯಿತೆಂದು ಗೊತ್ತಾಯಿತು ಆ ಸೈನ್ಯದ ಅಗ್ರೇಸರನು ಇಯಜ್‌ಖಾನ ನೆಂದು ವರ್ತಮಾನವು ಬಂತು! ರಾಧೆಯೂ, ದೌಲತ್ತಳೂ ಯುದ್ಧ ಕ್ಷೇತ್ರದಿಂದ ಐನೂರು ಬಾರು ದೂರ ಹಿಂದಕ್ಕೆ ಸರಿದು ಬಿಳಿಯ ಬಾವುಟವನ್ನು ಎತ್ತಿ ಹಿಡಿದು ಯುದ್ಧವನ್ನು ನಿಲ್ಲಿಸಬೇಕೆಂದು ತಮ್ಮ ಸೈನಿಕರಿಗೆ ಅಪ್ಪಣೆ ಮಾಡಿದರು.

ದೌಲತ್ತಳು ಸೇನಾನಾಯಕನನ್ನು ಕುರಿತು "ಹುಸೇಖಾ ನಾವಿಬ್ಬರೂ ಸೋತಿದ್ದೇವೆ ತಾವು ನಮ್ಮಿಬ್ಬರನ್ನು ಸೆರೆ ಹಿಡಿಯಬಹುದು" ಎಂದಳು.

ಹುಸೇ—ರಾಣಿ ಸಾಹೇಬರವರೇ! ಕೆಂಪು ಉಷ್ಣೀಷಗಳನ್ನು ಕಾಣುತ್ತಲೇ ನಾವು ಯುದ್ಧವನ್ನು ನಿಲ್ಲಿಸಿಯೇ ಬಿಟ್ಟಿದ್ದೇವೆ. ತಾವು ನೂರಾಮಹಲಿಗೆ ಚಿತ್ತೈಸ ಬಹುದು. ನಾವು ಮಹಲನ್ನು ರಕ್ಷಣೆ ಮಾಡುತ್ತೇವೆ

ದೌಲತ್—ಹುಸೇಖಾ! ಇಯಜ್‌ಖಾನರವರು ಎಲ್ಲಿದ್ದರು? ಎಲ್ಲಿಂದ ಇಷ್ಟು ಮಹಾಸೈನ್ಯವನ್ನು ಸಿದ್ಧಗೊಳಿಸಿ ತಂದರು? ಯಾತಕ್ಕಾಗಿ? ಯಾರ ಮೇಲೆ ಯುದ್ಧ ಮಾಡುವುದಕ್ಕಾಗಿ?

ಹುಸೇ—ಹುಜೂರು! ಟಿಪ್ಪೂಸುಲ್ತಾನರವರು ತಮ್ಮನ್ನು ಸೆರೆಹಿಡಿಯುವ ರೆಂದು ಸಮಾಚಾರವು ಬಂದಿತು ಟಿಪ್ಪೂಸುಲ್ತಾನರ ಮೇಲೆ ಒಂದು ಕೈ ನೋಡಲೇ ಬೇಕೆಂದು ನಮ್ಮ ಸೈನ್ಯವೆಲ್ಲವೂ ಸಿದ್ಧವಾಗಿತ್ತು!

ದೌಲತ್—ನಮ್ಮನ್ನು ಟಿಪ್ಪೂಸುಲ್ತಾನರು ಸೆರೆ ಹಿಡಿಯುತ್ತಾರೆಂಬುದಕ್ಕೆ ನಿಮಗೆ ಆಧಾರವೇನಿತ್ತು?

ಹುಸೇ೯—ಮೈಸೂರು ಸೈನ್ಯದ ಒಂದುಸಾವಿರ ದಂಡು ದರಿಯಾಬಾಗಿನ ಹೊರ ವಳಯದಲ್ಲಿ ಸಜ್ಜಾಗಿದ್ದ ಸಮಾಚಾರವು ನನಗೆ ಬಂದಿತು ನನ್ನನ್ನು ದರಿಯಾಬಾಗಿನ ರಕ್ಷಣೆಗೆ ಕಳುಹಿಸಿ, ಇಯಜ್ ಖಾನರವರು ಖುದ್ದಾಗಿ ಟಿಪ್ಪೂಸುಲ್ತಾನರ ಪಾಳಯದ ಮೇಲೆ ದಂಡೆತ್ತಿ ಹೋಗಿದ್ದಾರೆ

ದೌಲತ್—ಸೇನಾಧಿಪತಿಗಳೇ ! ಸೋನಾಮಹಲಿಗೆ ಏನೂ ಭಯವಿಲ್ಲ ನಮ್ಮ ಗಳಿಗೆ ಏನೂ ಅಪಾಯವಿಲ್ಲ ನೀವು ಭರವಸೆಯಿಂದ ಹೋಗಬಹುದು.

ಹುಸೇ೯ಖಾನನು ಇಬ್ಬರಿಗೂ ಸಲಾಂ ಮಾಡಿ ತನ್ನ ಕುದುರೆಯನ್ನು ಸುಲ್ತಾನನ ಶಿಬಿರದ ಕಡೆಗೆ ತಿರುಗಿಸಿದನು.

ಸುಲ್ತಾನನಿಗೆ ರಾಧೆಯು ಹೇಳಿದಷ್ಟು ಅವಕಾಶವು ದೊರೆಯಲೇ ಇಲ್ಲ ಅವನು ತನ್ನ ಶಿಬಿರವನ್ನುತಲುಪಿ ವಿದ್ಯುದ್ವೇಗದಿಂದ ಸೈನ್ಯವನ್ನು ಎಚ್ಚರಿಸಿದನು ಈ ಮೈಸೂರು ಸೈನ್ಯದ ವ್ಯೂಹ ರಚನೆಯಾಗುವಷ್ಟರಲ್ಲಿ ಶತ್ರು ಸೈನ್ಯವು ಶಿಬಿರವನ್ನು ಹೊಕ್ಕುಬಿಟ್ಟಿತು ಒಂದು ಕಡೆ ಇಯಜ್ ಖಾನನೂ, ಮತ್ತೊಂದು ಕಡೆ ಹುಸೇ೯ಖಾನನೂ ಮೈಸೂರು ಸೈನ್ಯದ ಮೇಲೆ ಬಿದ್ದರು ಇಯಜ್ ಖಾನರಿಗೆ ಎದುರಾಗಿ ಜನಾಲುದ್ದೀನರು ಯುದ್ಧ ಮಾಡುತ್ತಿದ್ದರು. ಹುಸೇ೯ಖಾನನಿದ್ದೆಡೆ ಸ್ವಯಂ ಸುಲ್ತಾನರೇ ಯುದ್ಧ ಮಾಡುತ್ತಿದ್ದರು. ಯುದ್ಧವು ಬಹಳ ಬಿರುಸಿನಿಂದಲೇ ನಡೆಯಿತು ಹುಸೇ೯ಖಾನನ ರಣಶೌರ್ಯವನ್ನು ನೋಡಿ ಸುಲ್ತಾನರು ಬೆಚ್ಚಿದರು ಅವನು ಖಾಸಿಂಖಾನನ ಸಹೋದರನೆಂದು ತಿಳಿದು ಸುಲ್ತಾನರಿಗೆ ಮತ್ತೂ ಸಂತೋಷವಾಯಿತು ಇಯಜ್ ಖಾನರು ಸ್ವಯಂ ಯುದ್ಧಕ್ಕೆ ಬಂದಿದ್ದಾರೆಂದು ತಿಳಿದು ಸುಲ್ತಾನರು ಹರ್ಷದಿಂದ ಉಬ್ಬಿದರು ಆದರೆ ಹುಸೇ೯ಖಾನನಿಂದ ತಪ್ಪಿಸಿಕೊಂಡು ಇಯಜ್ ಖಾನರಿಗೆ ಇದಿರಾಗಿ ನಿಲ್ಲಲು ಆಸ್ಪದವೇ ದೊರೆಯಲಿಲ್ಲ. ಸ್ವಲ್ಪ ಹೊತ್ತಿನೊಳಗಾಗಿ ಜನಾಲುದ್ದೀನರು ಬಿದ್ದು ಹೋದರೆಂದು ಸುಲ್ತಾನರಿಗೆ ವರ್ತಮಾನವು ಬಂದಿತು ಹುಸೇ೯ಖಾನರೆದುರಿಗೆ ಹಮಾದ್ ಖಾನರನ್ನು ನಿಲ್ಲಿಸಿ ಸುಲ್ತಾನರು ಹಿಂದಕ್ಕೆ ಸರಿದು ಇಯಜ್ ಖಾನನಿಗೆ ಎದುರಾಗಿ ರಣರಂಗದಲ್ಲಿ ನಿಂತರು ಯುದ್ಧವು ಭರದಿಂದ ಸಾಗತೊಡಗಿತು ಇಯಜ್ ಖಾನನು ಹಟಾತ್ತಾಗಿ ಫಿರಂಗಿಯನ್ನು ಸುಲ್ತಾನರೆದುರಿಗೆ ನಿಲ್ಲಿಸಿದನು ಸುಲ್ತಾನರ ಫಿರಂಗಿಗಳು ದೂರದಲ್ಲಿದ್ದುವು. ಇಯಜ್ ಖಾನನು ಸ್ವಯಂ ಫಿರಂಗಿಯನ್ನು ಒಂದಾವೃತ್ತಿ ಹಾರಿಸಿದನು ಸುಲ್ತಾನನ ಸೈನ್ಯವು ದಿಕ್ಕಾಪಾಲಾಗಿ ಓಡಿತು ಖಾನನು ಮತ್ತೊಂದಾವೃತ್ತಿ ಫಿರಂಗಿಯನ್ನು ಹಾರಿಸಲು ಸಿದ್ಧವಾದನು ಆ ಫಿರಂಗಿಯು ಹಾರಿದ್ದರೆ ಸುಲ್ತಾನನು ರಣಮುಖದಲ್ಲಿ ಬೀಳುತ್ತಿದ್ದನು ಅಷ್ಟರಲ್ಲಿ ರಾಧಾರಾಣಿಯು ಫಿರಂಗಿಯ ಮುಂದೆ ತನ್ನ ಬಿಳಿಯ ಕುದುರೆಯನ್ನು ತಂದೊಡ್ಡಿದಳು. ಸಮೀಪದಲ್ಲಿ ದೌಲತ್ತಳ ಶ್ವೇತಾಶ್ವವು ಬಂದು ನಿಂತಿತು ಖಾನನ ಕೈ ಕಟ್ಟಿಹೋಯಿತು. ಪಕ್ಕದಿಂದ ಬಂದೂಕವು ಹಾರಿತು.

ಆ ಪೆಟ್ಟು ರಾಧೆಯ ಕುದುರೆಗೆ ಬಲವಾಗಿ ತಗುಲಿತು ಕುದುರೆಯು ಸತ್ತುಬಿತ್ತು. ರಾಧೆಯು ಕೆಳಗುರುಳಿದಳು ದೌಲತ್ತಳು ರಾಧೆಯನ್ನು ಎತ್ತಿಕೊಳ್ಳುವುದಕ್ಕೆ ಹೋದಳು. ಅಷ್ಟರಲ್ಲಿ ಇಯಜ್‌ಖಾನನು ರಾಧೆಯನ್ನು ಎತ್ತಿ ತನ್ನ ಹೆಗಲು ಮೇಲೆ ಒರಗಿಸಿಕೊಂಡು ತನ್ನ ಕುದುರೆಯನ್ನು ಹಿಂದಕ್ಕೆ ನೆಳೆದನು. ಆ ಅವಕಾಶದಲ್ಲಿ ಸುಲ್ತಾನನು ತನ್ನ ಫಿರಂಗಿಗಳಿದ್ದೆಡೆಗೆ ಓಡಿದನು ಹುರ್ಸೇಖಾನನು ಹಮಿಾದ್‌ಖಾನರನ್ನು ಯಮಸದನಕ್ಕೆ ಕಳುಹಿಸಿ ಸುಲ್ತಾನರ ಫಿರಂಗಿಗಳನ್ನು ಸುತ್ತು ಗಟ್ಟಿದನು ಸುಲ್ತಾನನು ಫಿರಂಗಿಯನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ ಇನ್ನೊಂದು ಜಾವ ರಾತ್ರಿ ಉಳಿದಿತ್ತು ಈ ಯುದ್ಧವನ್ನು ವರ್ಣಿಸುತ್ತ ಹೋದರೆ ವಾಚಕರು ಬೇಸರಪಡಬಹುದು. ಒಟ್ಟಿನಲ್ಲಿ ಇಂದಿನ ಜಯವು ಇಯಜ್‌ಖಾನರದು ಜನಾಲುದ್ದೀನರು ಸೆರೆ ಸಿಕ್ಕಿದರೆಂದೂ, ರಾಧಾರಾಣಿಯು ಯುದ್ಧಭೂಮಿಯಲ್ಲಿ ಫಿರಂಗಿಯ ಮುಂದೆ ಬಿದ್ದಳೆಂದೂ, ಇಯಜ್‌ಖಾನರು ದೌಲತ್‌ರಾಣಿಯನ್ನು ಸೆರೆ ಹಿಡಿದರೆಂದೂ, ಹಮಿಾದ್‌ಖಾನರು ಅಸುವನ್ನು ನೀಗಿದರೆಂದೂ ಸುಲ್ತಾನರ ಸೈನ್ಯದಲ್ಲಿ ಸಮಾಚಾರವು ಹರಡಿತು. ಸುಲ್ತಾನರ ಸೈನ್ಯವೆಲ್ಲವೂ ದಿಕ್ಕೆಟ್ಟಿತು. ಹುರ್ಸೇಖಾನನು ಅತಿ ಶೌರ್ಯದಿಂದ ಕಾದಾಡಿದರೂ ಸುಲ್ತಾನರ ಫಿರಂಗಿಗಳನ್ನು ವಶಪಡಿಸಿಕೊಳ್ಳಲಾಗದೇ ಹೋಯಿತು ಬೆಳಗಾಗುತ್ತಲೇ ಹುರ್ಸೇಖಾನನು ತನ್ನ ಸೈನ್ಯವನ್ನು ಹಿಂದಿರುಗಿಸಿದನು ಹೋಗುವಾಗ "ಸುಲ್ತಾನರವರೇ! ಈ ರಾತ್ರಿ ಯುದ್ಧಕ್ಕೆ ಸಿದ್ಧರಾಗಿರಿ" ಎಂದು ಘೋಷಣೆ ಮಾಡಿ ಹೋದನು. ಪ್ರಾತಃಕಾಲ ಎಂಟು ಗಂಟೆಯ ಹೊತ್ತಿಗೆ ಯುದ್ಧವು ನಿಂತಿತು ಸುಲ್ತಾನರ ಶಿಬಿರವೆಲ್ಲಾ ಶವಮಯ! ಗಾಯಗೊಂಡ ಸೈನಿಕರ ಆರ್ತನಾದ ಈ ಘೋರದೃಶ್ಯವನ್ನು ನೋಡುತ್ತಾ ಸುಲ್ತಾನನು ತನ್ನ ಗುಡಾರಕ್ಕೆ ತೆರಳಿದನು.

ಸುಲ್ತಾನನು ಉಳಿದ ಸೈನ್ಯವನ್ನೆಲ್ಲಾ ಒಟ್ಟುಗೂಡಿಸಿದನು. ಒಟ್ಟಿನಲ್ಲಿ ಸೈನ್ಯವು ಅಷ್ಟಾಗಿ ಕ್ಷೀಣವಾಗಿರಲಿಲ್ಲ ಸೇನಾಪತಿಗಳೊಡನೆ ಕಲೆತು ಮಾತನಾಡಿದನು ಮುಖ್ಯ ಸೇನಾನಾಯಕರು ಇಬ್ಬರಿಲ್ಲ ಉಳಿದ ಸೇನಾನಾಯಕರ ಮುಖವೆಲ್ಲಾ ಕಂದಿತ್ತು. ನಗರದ ಶೀಮೆಗೆ ಬಂದಮೇಲೆ ಇದೇ ಮೊದಲನೆಯ ಯುದ್ಧ. ಸುಲ್ತಾನನು ಭಯ ವಿಹ್ವಲನಾಗಿರಲಿಲ್ಲ ಆದರೆ ಅಪಜಯದ ಖೇದದಿಂದ ಖತಿಗೊಂಡಿದ್ದನು. ಈ ಮಂತ್ರಾಲೋಚನೆಯಲ್ಲಿ ಶಿಬಿರವನ್ನು ಬೇರೊಂದು ಕಡೆಗೆ ಸಾಗಿಸಬೇಕೆಂದು ತೀರ್ಮಾನವಾಯಿತು ಸುಲ್ತಾನನು ಜನಾಲುದ್ದೀನನ ಚಿಂತೆಯನ್ನು ಬಿಟ್ಟುಬಿಟ್ಟನು ಖಾಸಿಂಖಾನನ ವಧೆಗೆ ಪ್ರತಿಯಾಗಿ ಜನಾಲುದ್ದೀನನ ಚಿತ್ರವಧೆಯಾಗುತ್ತದೆಂದು ಸುಲ್ತಾನನು ಖಚಿತ ಮಾಡಿಕೊಂಡನು

ರಾಧಾರಾಣಿಯು ಬದುಕಿದ್ದಾಳೋ, ಮೃತಿಹೊಂದಿದ್ದಾಳೋ? ದೌಲತ್ತಳ ಗತಿಯೇನಾಯಿತೋ? ದೌಲತ್ತಳೂ, ರಾಧೆಯೂ ಸುಲ್ತಾನರ ಕಡೆ ಸಾಮಿಾಲಾಗಿ

ದ್ದಾರೆಂದು ಭಾವಿಸಿ ಇಯಜ್‌ಖಾನನು ಅವರನ್ನೇನು ಮಾಡುವನೋ? ಎಂಬ ಚಿಂತೆಯು ಟಿಪ್ಪುವಿನ ಮನಸ್ಸನ್ನು ಕೊರೆಯತೊಡಗಿತು.

ಇಯಜ್‌ಖಾನನು ನಗರವನ್ನು ಬಿಟ್ಟು ಹೋಗಿಲ್ಲ ಅವನಿಗೆ ಯಥೇಚ್ಛವಾದ ಸಹಾಯ ಸಂಪತ್ತಿಗಳಿವೆ. ಅಚ್ಚುಗಟ್ಟಾದ ಸೈನ್ಯವಿದೆ ಅತುಲೈಶ್ವರ್ಯವಿದೆ ನಗರದ ರಾಜ್ಯವನ್ನು ನಮಗೆ ಒಪ್ಪಿಸಿದ್ದು ಪ್ರಲೋಭ ನಿನ್ನೆಯ ರಾತ್ರಿ ನಮಗೂ ಇಯಜ್ ಖಾನರಿಗೂ ಮೊದಲನೆಯ ಯುದ್ಧವಾಯಿತು ಇದು ಒಳ್ಳೆಯದೇ ಆಯಿತು ಈಗ ನಾವು ಎರಡು ಯುದ್ಧಗಳನ್ನು ಏಕಕಾಲದಲ್ಲಿ ಮಾಡಬೇಕು ಮಂಗಳೂರಿನಲ್ಲಿ ಇಂಗ್ಲಿಷರೊಂದಿಗೆ ಯುದ್ಧಮಾಡಬೇಕು ನಗರದಲ್ಲಿ ಇಯಜ್‌ಖಾನರೊಂದಿಗೆ ಯುದ್ಧಮಾಡಬೇಕು ದೌಲತ್ತಳೇನೋ ನನ್ನವಳಾಗಿದ್ದಾಳೆ ಈಗ ನಗರವನ್ನು ಗೆದ್ದು ಅವಳನ್ನು ವಶಪಡಿಸಿಕೊಳ್ಳಬೇಕು, ಎಂದು ಸುಲ್ತಾನನು ಆಲೋಚಿಸತೊಡಗಿದನು ಪ್ರತಿದಿನವೂ ಇಯಜ್‌ಖಾನರ ಸೈನ್ಯಕ್ಕೂ, ಟಿಪ್ಪೂಸುಲ್ತಾನರ ಸೈನ್ಯಕ್ಕೂ ಯುದ್ಧಗಳು ನಡೆಯುತ್ತಲೇ ಇದ್ದುವು. ಮೈಸೂರಿನ ಸೈನ್ಯವು ಹಿಂಚಕ್ಕೆ ಸರಿದು ಸರಿದು ಕೊನೆಗೆ ಚಿತ್ರದುರ್ಗದಲ್ಲಿ ನಿಲ್ಲಬೇಕಾಯಿತು ಮಂಗಳೂರಿನ ಯುದ್ಧದಲ್ಲಿ ಮೈಸೂರಿನ ಸೈನ್ಯಕ್ಕೇ ಜಯವಾಯಿತು. ನಮ್ಮ ಕಥಾಭಾಗಕ್ಕೆ ಅದು ಅಷ್ಟು ಮುಖ್ಯವಲ್ಲ ಸುಲ್ತಾನನು ಚಿತ್ರದುರ್ಗದಲ್ಲಿ ಬೀಡು ಬಿಟ್ಟು ನಗರದ ಕಡೆ ಚಿಂತಿಸತೊಡಗಿದನು ಸುಲ್ತಾನನಿಗೆ ಈಗ ನಗರವನ್ನು ಹಿಡಿಯುವ ಚಿಂತೆಯಿಲ್ಲ ಇಯಜ್‌ಖಾನನನ್ನು ಯುದ್ಧದಲ್ಲಿ ಸೋಲಿಸಿ ಸೆರೆಹಿಡಿಯುವಚಿಂತೆ ದೌಲತ್ತಳನ್ನೂ,ರಾಧಾರಾಣಿಯನ್ನೂ ಬಂಧನದಿಂದ ಬಿಡಿಸುವ ಚಿಂತೆ. ಸಂಪದ್ಯುಕ್ತವಾದ ನಗರವು ಅನಾಯಕವಾಗುತ್ತಿರುವ ಚಿಂತೆ ಇದೆಲ್ಲಾ ಸುಲ್ತಾನನ ಮನಸ್ಸಿನಲ್ಲಿ ಕುದಿಯುತ್ತಿತ್ತು ಅವನು ನಗರದ ಸೀಮೆಯನ್ನು ಬಲವಾಗಿ ಕಟ್ಟಿಹಾಕಬೇಕೆಂದು, ಇಯಜ್‌ಖಾನನನ್ನು ಶೂಲಕ್ಕೇರಿಸಬೇಕೆಂದು ಸಂಕಲ್ಪ ಮಾಡಿದನು ಅದಕ್ಕೆ ತಕ್ಕ ಸನ್ನಾಹ ಮಾಡುತ್ತಿದ್ದನು

ಮೈಸೂರು ಸೈನ್ಯವನ್ನು ಚಿತ್ರದುರ್ಗದವರೆಗೆ ಹಿಮ್ಮೆಟ್ಟಿಸಲು ಹದಿನೈದು ದಿನಗಳಾಯಿತು ಅದುವರೆಗೂ ಜನಾಲುದ್ದೀನರನ್ನು ಸೆರೆಯಲ್ಲಿಟ್ಟಿದ್ದರು ರಾಧಾರಾಣಿಯವರನ್ನು ರಾಜಯೋಗ್ಯವಾದ ಗುಡಾರದಲ್ಲಿಟ್ಟು ಉಪಚರಿಸತೊಡಗಿದರು ದೌಲತ್ತಳು ರಾಧೆಯ ಸಮೀಪದಲ್ಲಿಯೇ ಸರ್ವದಾ ಇರುತ್ತಿದ್ದಳು. ರಾಧೆಯು ಬದುಕಲಾರಳೆಂದು ದೌಲತ್ತಳು ಸದಾ ಕಂಬನಿಗರೆಯುತ್ತಲೇ ಇದ್ದಳು ಇಯಜ್‌ಖಾನನು ಪ್ರತಿದಿನವೂ ಬಂದು ರಾಧಾರಾಣಿಯ ಯೋಗಕ್ಷೇಮವನ್ನು ವಿಚಾರಿಸಿಕೊಂಡು ನೋಡಿಕೊಂಡು ಹೋಗುತ್ತಿದ್ದನು. ದೌಲತ್ತಳು ಅವನ ಕಡೆ ತಿರುಗಿ ನೋಡುತ್ತಿರಲಿಲ್ಲ, ಮಾತನಾಡುತ್ತಿರಲಿಲ್ಲ, ಕಾದ ಕಬ್ಬಿಣದ ಗೊಂಬೆಯನ್ನು ಕೈಯಿಂದ ಮುಟ್ಟಲು ಕಮ್ಮಾರನು ಭಯಪಡುವಂತೆ ದೌಲತ್ತಳನ್ನು ಮಾತನಾಡಿಸಲು ಇಯಜ್‌ಖಾನನು

ಭಯಪಡುತ್ತಿದ್ದನು ರಾಧೆಯು ಚೇತರಿಸಿಕೊಂಡರೆ ಎಲ್ಲವೂ ಮೊದಲಿನಂತೆ ಯಥಾ ಸ್ಥಿತಿಯಾಗುವುದೆಂದು ಇಯಜ್‌ಖಾನನು ಸಮಾಧಾನ ಮಾಡಿಕೊಳ್ಳುತ್ತಿದ್ದನು

ಸುಲ್ತಾನನ ಸೈನ್ಯವನ್ನು ಚಿತ್ರದುರ್ಗಕ್ಕೆ ಅಟ್ಟಿದಮೇಲೆ ಒಂದುದಿನ ಪ್ರಾತಃ ಕಾಲ ಇಯಜ್‌ಖಾನನು ದರಬಾರು ನಡೆಸಿದನು ಯಾವ ವೇದಿಕೆಯ ಮೇಲೆ ಖಾಸಿಂ ಖಾನನ ಶೂಲವನ್ನು ಕಟ್ಟಿದ್ದರೋ ಅದೇ ವೇದಿಕೆಯ ಮೇಲೆ ಇಯಜ್‌ಖಾನನು ಕುಳಿತುಕೊಳ್ಳಲು ಉಚ್ಚಾಸನವು ಸಜ್ಜುಗೊಳಿಸಲ್ಪಟ್ಟಿದ್ದಿತು ನಗರದ ಶೀಮೆಯ ಪಾಳೆಯಗಾರರೆಲ್ಲರೂ ಅಲ್ಲಿ ಸೇರಿದ್ದರು ಸೇನಾನಾಯಕರುಗಳೂ ದಂಡನಾಯಕ ರುಗಳೂ ಬಂದು ನೆರೆದಿದ್ದರು

ನಗರದ ಸೈನ್ಯವೆಲ್ಲವೂ ಮಹಾಸಮುದ್ರದಂತೆ ಅಲ್ಲಿ ಕೂಡಿತ್ತು ಇಯಜ್ ಖಾನನು ಬಂದು ಎಲ್ಲರಗೂ ವಂದಿಸಿ ಸಿಂಹಾಸನದಲ್ಲಿ ಮಂಡಿಸಿದನು ಪಾಳೆಯಗಾರ ರೆಲ್ಲರೂ ಬಂದು ತಮ್ಮ ತಮ್ಮ ಅಂತಸ್ತಿಗೆ ತಕ್ಕಂತೆ ಮುಜರೆ ಮಾಡಿ ಆಸನಗಳಲ್ಲಿ ಕುಳಿ ತರು ಇಯಜ್‌ಖಾನನು ಸಿಂಹಾಸನದಿಂದ ಎದ್ದು ಬಂದು ಪಾಳೆಯಗಾರರಿಗೆಲ್ಲಾ ಹಸ್ತಲಾಘವವನ್ನಿತ್ತು ಆಲಿಂಗಿಸಿಕೊಂಡು ಪುನಃ ಆಸನದಲ್ಲಿ ಬಂದು ಕುಳಿತನು ಸೆರೆ ಹಿಡಿದು ತರಲ್ಪಟ್ಟಿರುವ ಜನಾಲುದ್ದೀನರ ವಿಚಾರಣೆಯು ಆ ದರಬಾರಿನಲ್ಲಿ ನಡೆಯು ವುದೆಂದು ಎಲ್ಲರಿಗೂ ತಿಳಿದಿತ್ತು ರಾಜಭಟರು ಸರಪಣಿಗಳಿಂದ ಕಟ್ಟಲ್ಪಟ್ಟಿದ್ದ ಜನಾ ಲುದ್ದೀನರನ್ನು ಸಮ್ಮುಖದಲ್ಲಿ ತಂದು ನಿಲ್ಲಿಸಿದರು.

ಇಯಜ್‌ಖಾನನು ಗಂಭೀರವಾಣಿಯಿಂದ—ಸೇನಾಧಿಪತಿಗಳೇ! ನೀವು ಇಂದು ನಮ್ಮ ಬಂದಿಗಳು. ನಾವು ಮೋಸದಿಂದ ನಿಮ್ಮನ್ನು ಸೆರೆಹಿಡಿದಿಲ್ಲ. ಯುದ್ಧದಲ್ಲಿ ಗೆದ್ದು ಸೆರೆ ಹಿಡಿದಿದ್ದೇವೆ ಈಗ ನಿಮ್ಮ ವಿಚಾರಣೆಯಾಗಬೇಕಾಗಿದೆ. ನೀವೇನು ಹೇಳುವಿರಿ ? ಎಂದನು

ಜನಾಲುದ್ದೀನರು—ನವಾಬಸಾಹೇಬರೇ ತಾವು ದೊಡ್ಡ ನವಾಬರ ಸ್ವೀಕೃತ ಪುತ್ರರು. ಸುಲ್ತಾನರವರಿಗೂ ತಮಗೂ ಯುದ್ಧಪ್ರಸಂಗ ಒದಗಿದ್ದು ಮೈಸೂರಿನ ದುರ್ದೈವವೆಂದು ಹೇಳಬೇಕು. ಹೇಗೇ ಆಗಲಿ! ನಾವು ಎದುರು ನಿಂತು ಖಾಡಾಖಡಿ ಯುದ್ಧ ಮಾಡಿದ್ದೇವೆ ಯುದ್ಧದಲ್ಲಿ ಸೆರೆ ಸಿಕ್ಕಿದ ಸೇನಾಪತಿಗಳನ್ನು ಹೇಗೆ ಶಿಕ್ಷಿಸ ಬೇಕೋ ಹಾಗೆ ತಾವು ಶಿಕ್ಷಿಸಬಹುದು. ಈ ಶರೀರವು ನಶ್ವರವಾದುದು ನಾನು ಮೈಸೂರಿನ ಎಷ್ಟೋ ಯುದ್ಧಗಳಲ್ಲಿ ಹೋರಾಡಿದ್ದೇನೆ ಕೊಯಮತ್ತೂರಿನ ಕಾಳಗ ದಲ್ಲಿ ನಾನು ತಮ್ಮ ಬಲಗೈಯಂತೆ ಯುದ್ಧಮಾಡಿದ್ದೇನೆ. ಶತ್ರುಗಳ ಕೈಯಲ್ಲಿ ಸೆರೆ ಸಿಕ್ಕಿದ ಅಪಯಶವು ನನಗಿಲ್ಲ ತಮ್ಮ ಕೈಯಲ್ಲಿ ಸೆರೆ ಸಿಕ್ಕುವುದೂ, ಪ್ರಾಣ ಬಿಡು ವುದೂ ನನಗೆ ಗೌರವಾಸ್ಪದವಾದುದೇ ಸರಿ! ನನ್ನನ್ನು ಶೂಲಕ್ಕೇರಿಸಿ ತಾವು ಸುಲ್ತಾ

ನರ ಮೇಲಿನ ಸೇಡು ತೀರಿಸಿಕೊಳ್ಳಬಹುದು. ನನ್ನ ದೇಹದಲ್ಲಿ ಪ್ರಾಣವಿರುವ ತನಕ ಶರೀರದಲ್ಲಿ ರಕ್ತದ ಹಸಿಯಿರುವತನಕ ನಾನು ಸುಲ್ತಾನರ ಸೇವಕ ಎಂದನು

ಪಾಳೆಯಗಾರರೊಬ್ಬರೆದ್ದು—"ನವಾಬಸಾಹೇಬರೇ ! ಇವರು ನಮ್ಮ ನಗರದ ಶೀಮೆಗೆ ಬಂದು ಬಹಳ ಘಾತುಕಕೃತ್ಯಗಳನ್ನು ಮಾಡಿದ್ದಾರೆ ಇವರ ಸೈನಿಕರು ನಮ್ಮ ಶೀಮೆಯ ಮಹಿಳೆಯರ ಮೇಲೆ ಅತ್ಯಾಚಾರ ಮಾಡಿದ್ದಾರೆ ಕೊಳ್ಳೆ ಹೊಡೆದಿದ್ದಾರೆ ಇದಕ್ಕೆಲ್ಲಾ ಇವರಿಗೆ ಶಿಕ್ಷೆಯಾಗಲೇಬೇಕು ಇವರನ್ನು ಗಲ್ಲಿಗೇರಿಸಬೇಕು" ಎಂದನು.

ಹುಸೇ಼ನ್‌ಖಾನನು ಮುಂದೆ ಬಂದು "ಖಾವಿಂದ್! ಸುಲ್ತಾನರು ನಮ್ಮ ಅಣ್ಣನಾದ ಖಾಸಿಂಖಾನರನ್ನು ಅನ್ಯಾಯವಾಗಿ ಕೊಲ್ಲಿಸಿದ್ದಾರೆ. ಅದಕ್ಕೆ ಮುಖ್ಯಕಾರಣರು ಈ ಸೇನಾಪತಿಗಳೇ. ಇವರನ್ನು ಶೂಲಕ್ಕೆ ಏರಿಸಲೇಬೇಕು ಅಂದಿನ ಯುದ್ಧದಲ್ಲಿ ನಾವು ಸೆರೆ ಸಿಕ್ಕಿದ್ದರೆ ಸುಲ್ತಾನರು ದಯೆ ತೋರಿಸುತ್ತಿದ್ದರೇನು ? ನಮ್ಮ ಶಕ್ತಿಯನ್ನು ಸುಲ್ತಾನರಿಗೆ ತೋರಿಸಲೇಬೇಕು"

ಎಲ್ಲರ ಕಣ್ಣುಗಳೂ ನವಾಬರ ಕಡೆಗೆ ರೆಪ್ಪೆ ಹೊಡೆಯದೇ ನೋಡುತ್ತಿದ್ದುವು ಜನಾಲುದ್ದೀನರು ಸ್ಥಿರವಾಗಿ ನಿಂತಿದ್ದರು

ಇಯಜ್‌ಖಾನನು "ಹುಸೇ಼ನ್‌ಖಾ಼ನ್! ಆ ಸೇನಾಧಿಪತಿಗಳ ಸರಪಣಿಯನ್ನು ಬಿಚ್ಚು" ಎಂದು ಆಜ್ಞಾಪಿಸಿದನು

ತಕ್ಷಣವೇ ಸರಪಣಿಗಳು ಬಿಚ್ಚಲ್ಪಟ್ಟವು.

ಸೇನಾಪತಿಗಳ ಶ್ರೇಣಿಯಲ್ಲಿ ಅವರಿಗೊಂದು ಸ್ಥಾನವನ್ನು ಕೊಡುವಂತೆ ಅಪ್ಪಣೆಯಾಯಿತು. ಹುಸೇ಼ನ್‌ಖಾನರ ಪಕ್ಕದಲ್ಲಿಯೇ ಜನಾಲುದ್ದೀನರನ್ನು ಕುಳ್ಳಿರಿಸಿದರು

ಇಯಜ್‌ಖಾನನು ಜನಾಲುದ್ದೀನರ ಕಡೆ ತಿರುಗಿ "ಮೈಸೂರಿನ ಸೇನಾಧಿಪತಿಗಳೇ! ಈನಗರದ ರಾಜ್ಯದ ಮೇಲೆ ಸುಲ್ತಾನರ ಅಪರಾಧವು ಅಸಹನೀಯವಾದುದು ಖಾಸಿಂಖಾನರ ಕೊಲೆಯು ವೀರಪುರುಷರಿಗೆಲ್ಲಾ ಮರ್ಮಘಾತುಕವಾದುದು ಮಹಮದಾಲಿಯವರ ವಧೆಯಂತೂ ಮೈಸೂರುರಾಜ್ಯಕ್ಕೆ ಅಚ್ಚಳಿಯದ ಕಳಂಕ. ಇದೆಲ್ಲಾ ಸುಲ್ತಾನರ ರಾಜನೀತಿಯ ವೈಪರೀತ್ಯ. ಇದರಲ್ಲಿ ನಿಮ್ಮ ಅಪರಾಧವೇನಿದೆ ? ಮೈಸೂರಿನ ವೀರಪುರುಷರೊಬ್ಬರ ಪ್ರಾಣಾಪಹಾರ ಮಾಡಲು ನನ್ನ ಮನಸ್ಸು ಒಡಂಬಡದು ನಿಮ್ಮನ್ನು ನಾವು ಖುಲಾಸೆ ಮಾಡಿದ್ದೇವೆ. ದೊಡ್ಡ ನವಾಬರ ರಾಜಧರ್ಮವು ಇಂದು ನಿಮಗೆ ಪ್ರಾಣದಾನ ಮಾಡಿದೆ. ಈ ನಗರದ ರಾಜ್ಯವು ಮೈಸೂರಿನವರದು. ಇದು ಅರಾಜಕವಾಗಿ ಹೋಗಕೂಡದು. ನಿಮ್ಮ ಸುಲ್ತಾನರಿಗೆ ಹೇಳಿರಿ "ಈ ರಾಜ್ಯಕ್ಕೆ ಸರಿಯಾದ ಅಧಿಕಾರಿಗಳನ್ನು ನೇಮಿಸಬೇಕು. ಈ ಪ್ರಾಂತದ ಪಾಳೆಯಗಾರರೆಲ್ಲರೂ

ಸ್ವತಂತ್ರರು. ಸುಲ್ತಾನರು ಜೀವಾವಧಿ ಯುದ್ಧ ಮಾಡಿದರೂ ಅವರುಗಳನ್ನು ಜಯಿಸಲಾರರೆಂದು ಹೇಳಿರಿ ! ಈ ನಗರದ ರಾಜ್ಯವು ಮೈಸೂರಿನವರಿಗೆ ಸ್ನೇಹಹಸ್ತವನ್ನು ನೀಡಿದೆ. ಅದನ್ನು ಗೌರವದಿಂದ ಕಾಪಾಡಿಕೊಳ್ಳುವಂತೆ ಹೇಳಿರಿ" ಎಂದು ಹೇಳಿ ಜನಾಲುದ್ದೀನರಿಗೆ ಖಿಲ್ಲತ್ತುಗಳನ್ನು ತರಿಸಿಕೊಟ್ಟು ಅವರನ್ನು ಆನೆಯಮೇಲೆ ಕೂರಿಸಿ ಸುಲ್ತಾನರ ಪಾಳೆಯಕ್ಕೆ ಕಳುಹಿಸಿದನು

## ಖಾನನ ಸ್ವರ್ಣಭಂಡಾರ

ನಗರಕ್ಕೆ ಎರಡು ಯೋಜನ ದೂರದಲ್ಲಿ ಪಶ್ಚಿಮ ಘಟ್ಟಗಳ ವನಪ್ರದೇಶದಲ್ಲಿ ಒಂದು ಕಲ್ಲಿನ ಮಂಟಪ ಆ ಮಂಟಪದ ಮುಂದುಗಡೆ ದೊಡ್ಡ ಸರೋವರ ಆ ಸರೋವರಕ್ಕೆ ಅಚ್ಚುಕಟ್ಟಾಗಿ ಕಟ್ಟಲ್ಪಟ್ಟಿರುವ ಪಾವಟಿಕೆಗಳು ಮೇಲುಗಡೆ ದೊಡ್ಡ ಮರಗಳ ತೋಪು ಆ ತೋಪಿನಲ್ಲಿ ವಿಶಾಲವಾದ ನಾಲ್ಕಾರು ಗುಡಾರಗಳು ಕಟ್ಟಲ್ಪಟ್ಟವೆ ತೋಪಿನ ಹೊರಗಡೆ ಸುಮಾರು ಇನ್ನೂರೈವತ್ತು ಕುದುರೆಗಳು, ಕಾಲಾಳುಗಳು, ಸೈನ್ಯಿಕರು ದೂರದಲ್ಲಿ ಪಹರೆಕೊಡುತ್ತಲಿದ್ದಾರೆ ಈ ಪ್ರದೇಶದಲ್ಲಿ ರಾಜ ವೈಭವಗಳಿಲ್ಲದಿದ್ದರೂ ರಾಜಚಿನ್ಹೆಗಳೆಲ್ಲಾ ಇವೆ ಈ ಸಣ್ಣ ಶಿಬಿರವು ನಿರ್ಮಾಣವಾಗಿ ಎರಡು ತಿಂಗಳುಗಳಾಗಿದ್ದುವು

ವಸಂತಋತುವಿನ ಮನೋಹರವಾದ ಸಂಧ್ಯಾಕಾಲ ಸೂರ್ಯದೇವನು ಅಸ್ತಾಚಲವನ್ನು ಸಾರುತ್ತಿದ್ದನು ಆ ಸರೋವರದ ಪಾವಟಿಗೆಗಳ ಮೇಲೆ ಮಹಾಪುರುಷನೊಬ್ಬನು ಶುದ್ಧವಾದ ಸರೋವರದ ನೀರಿನ ಮೇಲೆ ಆ ಸೂರ್ಯನ ಕೆಂಪುಕಿರಣಗಳು ಬಿದ್ದು ಪ್ರತಿಫಲಿಸುತ್ತಿರುವುದನ್ನು ನೋಡುತ್ತಿದ್ದನು ಮೀನುಗಳು ಚಲಚಲ ಸದ್ದು ಮಾಡುತ್ತಾ ಓಡಾಡುವುದನ್ನು ನೋಡಿ ಈ ಜಲಚರಗಳೆಷ್ಟು ಸುಖವಾಗಿವೆ, ಇವುಗಳಿಗೆಷ್ಟು ಸ್ವಾತಂತ್ರ್ಯವಿದೆ ಎಂದು ಕೊಳ್ಳುತ್ತಿದ್ದನು ಈ ಮಹಾಪುರುಷನು ಇಯಜ್ ಖಾನನೆಂಬುದನ್ನು ವಾಚಕರಿಗೆ ತಿಳಿಸಬೇಕಾಗಿಲ್ಲ ಅವನು ಮೈಸೂರಿನ ರಾಜಕೀಯವನ್ನು ಆಲೋಚಿಸುತ್ತಿದ್ದನು ಸುಲ್ತಾನನ ಕಾರುಬಾರುಗಳು ಪ್ರಜಾರಂಜಕವಾಗಿಲ್ಲ. ಮರಾಠರೂ, ಇಂಗ್ಲೀಷರೂ ಮೈಸೂರಿನ ಪರಮ ವಿರೋಧಿಗಳು ಮರಾಠರು ಮುಸಲ್ಮಾನ ರಾಜ್ಯವಿರಕೂಡದೆಂದು ಹಟತೊಟ್ಟು ಹೋರಾಡುತ್ತಾರೆ ಇಂಗ್ಲೀಷರು ಹೇಗಾದರೂ ಮಾಡಿ ಮೈಸೂರನ್ನುತಮ್ಮ ಸ್ವಾಧೀನಪಡಿಸಿಕೊಳ್ಳಬೇಕೆಂದು ಹೊಂಚು ಹಾಕುತ್ತಾರೆ ಇವರನ್ನೆಲ್ಲಾ ಅಡಗಿಸುವಷ್ಟು ಶಕ್ತಿ ಮೈಸೂರಿಗಿದೆಯೇ ? ಇದೆ. ಆದರೆ ಸುಲ್ತಾನನಿಗೆ ರಾಜನೀತಿ ಕೌಶಲ್ಯವಿಲ್ಲ. ಸೈನ್ಯವನ್ನು ಶಿಸ್ತಿನಿಂದ ಕಟ್ಟುತ್ತಾನೆ. ರಣಾರಣಿ ಯುದ್ಧಮಾಡುತ್ತಾನೆ. ಆದರೆ ರಾಜ್ಯಭಾರದಲ್ಲಿ ಚತುರನಲ್ಲ. ದೊಡ್ಡನವಾಬರ ಪ್ರೇಮಪಾತ್ರರಾದ ಸರದಾರರೆಲ್ಲರೂ ವಿಮುಖರಾಗುತ್ತಿದ್ದಾರೆ. ಹಿಂದೂ ಸರ

ದಾರರಿಗೆಲ್ಲಾ ಮೈಸೂರಿಗೆ ಹಿಂದೂ ರಾಜರೇ ಇರಬೇಕೆಂದೂ, ಇಲ್ಲಿ ಮುಸಲ್ಮಾನ್ ರಾಜ್ಯವು ಸ್ಥಾಪಿಸಲ್ಪಡಕೂಡದೆಂದೂ ಅಭಿನಿವೇಶವಿದೆ ಟಿಪ್ಪೂಸುಲ್ತಾನನನ್ನು ಒಬ್ಬರೂ ನಂಬುವುದಿಲ್ಲ ಎಲ್ಲಾ ಕಡೆಯೂ ನಾನಾ ವಿಧವಾದ ಪಿತೂರಿಗಳಾಗುತ್ತಿವೆ ಈ ಮೈಸೂರು ರಾಜ್ಯವು ಉಳಿಯುವುದಿಲ್ಲ ನಾನೇನು ಮಾಡಬಲ್ಲೆ ? ನನಗೂ ಟಿಪ್ಪೂಸುಲ್ತಾನನಿಗೂ ಬದ್ಧ ವೈರ ನಾನು ಮೈಸೂರು ರಾಜ್ಯಕ್ಕಾಗಿ ಟಿಪ್ಪುವಿನ ಮೇಲೆ ಯುದ್ಧಮಾಡುವುದಿಲ್ಲ ನಾನು ಮೈಸೂರನ್ನು ಪೂರ್ಣವಾಗಿ ಮರೆತುಬಿಡುತ್ತೇನೆ. ಮಲಬಾರಿನಲ್ಲಿ ನನ್ನದೇ ಒಂದು ರಾಜ್ಯವನ್ನು ಕಟ್ಟುತ್ತೇನೆ" ಎಂದು ಆಲೋಚನೆ ಮಾಡುತ್ತಿದ್ದನು ಅಷ್ಟರಲ್ಲಿ ಗುಪ್ತಚಾರನೊಬ್ಬನು ಬಂದು ನೆಲ ಮುಟ್ಟಿ ಸಲಾಂಮಾಡಿದನು ನಗರದ ಶೀಮೆಗೆ ಜನಾಲುದ್ದೀನರನ್ನು ದಿವಾನರಾಗಿ ನೇಮಿಸಿದ್ದಾರೆಂದೂ, ನಗರದ ಮೇಲೆ ಯುದ್ಧವನ್ನು ನಿಲ್ಲಿಸಬೇಕೆಂದು ಸುಲ್ತಾನರು ಸಂಕಲ್ಪಿಸಿದ್ದಾರೆಂದು ತಿಳಿಸಿದನು ಇಯಜ್‌ಖಾನನಿಗೆ ಏನೋ ಒಂದು ವಿಧವಾದ ಸಮಾಧಾನವಾಯಿತು

ಇಯಜ್‌ಖಾನನೆದ್ದು ರಾಧಾರಾಣಿಯವರು ಇರುವ ಗುಡಾರಕ್ಕೆ ಪ್ರವೇಶಮಾಡಿದನು. ಅಲ್ಲಿ ಪರ್ಯಂಕದ ಮೇಲೆ ರಾಧಾರಾಣಿಯು ಕುಳಿತಿದ್ದಳು ಸಮೀಪದಲ್ಲಿ ದೌಲತ್ತಳು ಅರ್ಧಶಾಯಿತಾವಸ್ಥೆಯಲ್ಲಿ ಮಂಡಿಸಿದ್ದಳು

ಇಯಜ್‌ಖಾನನು ಅವರಿಬ್ಬರನ್ನೂ ಮರ್ಯಾದೆಯಿಂದ ವಂದಿಸಿದನು ರಾಧೆಯು ಪ್ರಸನ್ನ ಮುಖದಿಂದ "ನವಾಬರವರೇ ! ದಯಮಾಡಿಸಿರಿ" ಎಂದು ಆಸನದ ಕಡೆ ಕೈ ತೋರಿಸಿದಳು ದೌಲತ್ತಳು ಎದ್ದು ನಿಂತಳು ಇಯಜ್‌ಖಾನನು ಆಸನದಲ್ಲಿ ಕುಳಿತನು

ಇಯಜ್‌ಖಾನನು ದೌಲತ್ತಳನ್ನು ಕುಳಿತುಕೊಳ್ಳುವಂತೆ ಪ್ರಾರ್ಥಿಸಿದನು ದೌಲತ್ತಳೂ ಆಸನವನ್ನಲಂಕರಿಸಿದಳು

ಇಯಜ್‌ಖಾನನು—ರಾಣಿಯವರೇ ! ತಮ್ಮ ದೇಹಸ್ಥಿತಿಯು ಸಂಪೂರ್ಣ ಸರಿಯಾಗಿದೆಯೆ ?

ರಾಧೆ—ಇಂದಿನ ರಾತ್ರಿ ಒಂದು ಯುದ್ಧವು ಸಂಭವಿಸಿದರೆ ಯುದ್ಧಮಾಡಲು ನಾನು ತಯಾರಾಗಿದ್ದೇನೆ

ಇಯಜ್‌ಖಾನ್—ಸಂತೋಷ ! ರಾಣಿಯವರು ಯುದ್ಧಮಾಡುವ ಪ್ರಸಂಗವೇನೂ ಇಲ್ಲ ಇದುವರೆಗೆ ತಾವು ಈ ಗರೀಬನ ರಕ್ಷಣೆಯಲ್ಲಿದ್ದೀರಿ ? ನನ್ನ ಬಾಹುಗಳಲ್ಲಿ ತಮ್ಮನ್ನು ಸಂರಕ್ಷಿಸುವ ಶಕ್ತಿ ಇದೆ

ಇಬ್ಬರು ರಮಣಿಯರೂ ನಕ್ಕರು !

ಇಯಜ್‌ಖಾ—ದೌಲತ್‌ರಾಣಿಯವರು ಇಲ್ಲಿಗೆ ಬಂದಾಗಿನಿಂದ ನನ, ಮೇಲೆ ಆಗ್ರಹಗೊಂಡಿರುವಂತಿದೆ!

ದೌಲತ್—ತಮ್ಮ ಮೇಲೆ ಆಗ್ರಹಗೊಂಡು ನಾನೇನು ಮಾಡಬಲ್ಲೆ? ಈಗ ತಾವೇ ಅಪ್ಪಣೆಕೊಡಿಸಿದಂತೆ ನಾವು ತಮ್ಮ ರಕ್ಷಣೆಯಲ್ಲಿದ್ದೇವೆ

ಇಯಜ್‌ಖಾ—ದೌಲತ್‌ರಾಣಿಯವರೇ! ಅದು ಸುಳ್ಳು ತಮಗೆ ಭಯ ವೇನೂ ಇಲ್ಲ. ಈ ಎರಡು ತಿಂಗಳುಗಳಿಂದ ಅಂದು ರಣಕ್ಷೇತ್ರದಲ್ಲಿ ಈ ರಾಧಾರಾಣಿ ಯವರನ್ನೂ, ನಿಮ್ಮನ್ನೂ ನಾನು ಕರೆತಂದಂದಿನಿಂದ ತಾವು ಆಗ್ರಹಗೊಂಡಿದ್ದೀರಿ. ಸರ್ವದಾ ತಮ್ಮ ಪ್ರೇಮವನ್ನು ಬಯಸುವ ನನಗೆ ತಮ್ಮ ಆಗ್ರಹವು ಮಾರ್ಮಾಹತ ವಾಗಿದೆ ನನ್ನ ಅಪರಾಧವೇನಾದರೂ ಇದ್ದರೆ ಅದಕ್ಕೆ ಎಂಥಾ ಕಠಿನವಾದ ಪ್ರಾಯ ಶ್ಚಿತ್ತವನ್ನಾದರೂ ಮಾಡಿಕೊಳ್ಳಲು ನಾನು ತಯಾರಾಗಿದ್ದೇನೆ

ದೌಲತ್—ತಪ್ಪು ನನ್ನದು ಪ್ರಾಯಶ್ಚಿತ್ತವಾಗಬೇಕಾದುದು ನನಗೆ! ತಮಗೆ ರಾಜ್ಯವನ್ನು ತಪ್ಪಿಸಿದವಳು ನಾನು ಈ ಯುದ್ಧವನ್ನು ತಂದೊಡ್ಡಿದವಳು ನಾನು. ರಾಧಾರಾಣಿಯವರಿಗೆ ಈ ದುರವಸ್ಥೆಯು ನನ್ನಿಂದ! ನಾನು ಪ್ರಾಣಪರಿತ್ಯಾಗ ಮಾಡಿ ದರೆ ಈ ರಾಜ್ಯಕ್ಕೆ ಕ್ಷೇಮವಾಗುವುದು

ಇಯಜ್‌ಖಾ—ದೌಲತ್ ನೀನು ಅಬಲೆಯಂತೆ ಮಾತನಾಡುವಿ ರಾಜಸ್ತ್ರೀ ಯಾದ ನೀನು ಪಾಮರ ಜನರಂತೆ ಆತ್ಮಹತ್ಯ ಮಾಡಿಕೊಳ್ಳುವುದೇ? ಆತ್ಮಹತ್ಯ ಮಾಡಿಕೊಳ್ಳುವ ಪಾಮರ ಹಂಗಸಾಗಿದ್ದರೆ ನನ್ನ ರಾಜ್ಯಪರಿತ್ಯಾಗವನ್ನೇಕೆ ಮಾಡಿ ಸಿದೆ? ಆ ಸುಲ್ತಾನನಿಗೆ ಹುಚ್ಚು ಹಿಡಿಸಿ ನಗರದ ಶೀಮೆಯಲ್ಲಿ ಅಲೆಯುವಂತೆ ಏಕೆ ಮಾಡಿರುವೆ? ನೀನು ಆತ್ಮಹತ್ಯಮಾಡಿಕೊಂಡರೆ ಈ ರಾಜ್ಯವೇ ಮುಳುಗಿ ಹೋದೀತು ದೌಲತ್! ಆ ಮಾತು ಹಾಗಿರಲಿ ನೀನು ನನ್ನ ಮೇಲೆ ಆಗ್ರಹ ಗೊಂಡಿಲ್ಲವೆಂದು ಅಭಿವಚನ ಕೊಡು.

ದೌಲತ್—ನೀವು ಟಿಪ್ಪೂಸುಲ್ತಾನರ ಮೇಲೆ ಯುದ್ಧ ಮಾಡುವುದಿಲ್ಲವೆಂದು ಶಪಥ ಮಾಡಲಿಲ್ಲವೇ? ಅದಕ್ಕಾಗಿಯೇ ಅಲ್ಲವೇ ನೀವು ರಾಜ್ಯತ್ಯಾಗ ಮಾಡಿದ್ದು!

ಇಯಜ್‌ಖಾ—ಹೌದು! ದೌಲತ್ ಹೌದು! ಆ ಶಪಥವು ಇಂದಿಗೂ ಇದೆ. ಎಂದೆಂದಿಗೂ ಇದೆ ಆ ದಿನ ರಾತ್ರಿ ಟಿಪ್ಪೂಸುಲ್ತಾನನು ಸೋನಾಮಹಲಿಗೇಕೆ ಬಂದನು? ನಿಮ್ಮಿಬ್ಬರನ್ನೂ ಸೆರೆಹಿಡಿಯುವುದಕ್ಕೆ! ಸುಲ್ತಾನನು ಮಹಮದಾಲಿ ಯವರ ಗೋರಿಯ ದರ್ಶನಕ್ಕೆ ಬಂದವನಲ್ಲ. ತಮ್ಮನ್ನು ಭೇಟಿಮಾಡಲು ಬಂದವ ನಲ್ಲ, ನಯಭಯಗಳಿಂದ ನೀವುಗಳು ಸ್ವಾಧೀನವಾಗದಿದ್ದರೆ ಪರಾಕ್ರಮದಿಂದ ನಿಮ್ಮನ್ನು ಸೆಳೆದೊಯ್ಯಲು ಬಂದನು ಆದಕ್ಕಾಗಿಯೇ ದರಿಯಾಬಾಗಿನ ಸುತ್ತಲೂ ಸೈನ್ಯವನ್ನು ಜಮಾಯಿಸಿಟ್ಟಿದ್ದನು ನಿಮ್ಮಗಳ ಸೆರೆಯನ್ನು ತಪ್ಪಿಸುವುದಕ್ಕಾಗಿ ನಾನು

ಯುದ್ಧವನ್ನು ಹೂಡಿದೆ! ಇನ್ನು ಯುದ್ಧಪ್ರಮೇಯವೇನಿಲ್ಲ. ನಗರಕ್ಕೆ ಜನಾಲುದ್ದೀನರನ್ನು ದಿವಾನರಾಗಿ ನೇಮಿಸಿದ್ದಾರೆ ಸುಲ್ತಾನರವರು ಚಿತ್ರದುರ್ಗದಿಂದ ಶ್ರೀರಂಗಪಟ್ಟಣಕ್ಕೆ ಹಿಂದಿರುಗಿ ಹೋಗುತ್ತಾರೆ (ರಾಧಾರಾಣಿಯವರ ಕಡೆ ತಿರುಗಿ) ರಾಣಿಯವರೇ! ನಾವು ಇಲ್ಲಿಂದ ಶಿಬಿರವನ್ನು ಎತ್ತಬೇಕು ಮಳೆಗಾಲವು ಬರುತ್ತದೆ ದೌಲತ್‌ರಾಣಿಯವರೂ, ನೀವೂ ಸೋನಾಮಹಲಿಗೆ ಹೋಗಿರಿ! ನಾನು ಈ ಶಿಬಿರವನ್ನು ಎತ್ತಿಬಿಡುತ್ತೇನೆ.

ರಾಧೆ—ಖಾಸಾಹೇಬರವರೇ ತಾವೆಲ್ಲಿ ಇರೋಣವಾಗುತ್ತದೆ?

ಇಯಜ್‌ಖಾ—ರಾಣೀಸಾಹೇಬ! ನನಗೆ ಇರುವುದಕ್ಕೆ ಎಲ್ಲಿಯೂ ಸ್ಥಳವಿಲ್ಲ ನಾನು ಪ್ರಚ್ಛನ್ನ ವೇಷದಿಂದ ಯಾವುದಾದರೂ ರಾಜ್ಯಕ್ಕೆ ಹೋಗುತ್ತೇನೆ ರಾಣಿಯವರೇ! ತಮ್ಮ ಕಡೆಯ ಸಂದರ್ಶನ! ದೌಲತ್! ನಿನಗಾಗಿ ನಿನ್ನ ಒಲುಮೆಗಾಗಿ ಎಂತಹ ಕಾರ್ಯವನ್ನಾದರೂ ಮಾಡಬಲ್ಲೆ! ಟಿಪ್ಪೂಸುಲ್ತಾನನು ನಿನ್ನನ್ನು ಬಲಾತ್ಕಾರದಿಂದ ಸೆಳೆದುಕೊಂಡು ಹೋಗುತ್ತಿದ್ದರೆ ಕೈಕಟ್ಟಕೊಂಡು ಕೂಡುವ ಶಪಥವನ್ನು ನಾನೆಂದಿಗೂ ಮಾಡಿಲ್ಲ, ಮಾಡುವುದೂ ಇಲ್ಲ! ನಾನು ನಿನಗಾಗಿ ರಾಜ್ಯ ಪರಿತ್ಯಾಗ ಮಾಡಿದೆ ನಿನ್ನ ಪ್ರೇಮಕ್ಕಾಗಿ ಈ ನನ್ನ ಪ್ರಾಣವನ್ನಾದರೂ ಒಪ್ಪಿಸಬಲ್ಲೆ!

ದೌಲತ್ತಳ ಕಣ್ಣುಗಳಲ್ಲಿ ನೀರು ತುಂಬಿತು

ರಾಧೆ—ಖಾನರವರೇ! ತಾವು ಎಲ್ಲಿಗೆ ಹೋಗುವಿರಿ ಏನು ಮಾಡುವಿರಿ ಸ್ಪಷ್ಟವಾಗಿ ಹೇಳಿರಿ ನಮ್ಮಲ್ಲಿ ನಿಮಗೆ ಭರವಸೆ ಇಲ್ಲವೇ?

ಇಯಜ್‌ಖಾ—ರಾಣಿಯವರೇ ತಮ್ಮಲ್ಲಿ ಭರವಸೆ ಇಲ್ಲದೆ ಏನು? ನನ್ನಲಿಯೇ ನನಗಿನ್ನೂ ಭರವಸೆ ಇಲ್ಲ! ನಾನು ಫಕೀರನಾಗಿ ಊರೂರು ಅಲೆಯುವುದಿಲ್ಲ. ನಾನೊಂದು ಹೊಸ ರಾಜ್ಯವನ್ನು ಕಟ್ಟುತ್ತೇನೆ.

ರಾಧೆಯೂ, ದೌಲತ್ತಳೂ ಅವಾಕ್ಕಾದರು ಇಯಜ್‌ಖಾನನು ದೌಲತ್ತಳನ್ನು ನೋಡುತ್ತ ನೋಡುತ್ತ ಗುಡಾರವನ್ನು ಬಿಟ್ಟು ಹೊರಟುಹೋದನು

ಇಯಜ್‌ಖಾನನು ಹೊರಟುಹೋಗುತ್ತಲೇ ದೌಲತ್ ಮತ್ತು ರಾಧಾ ಇಬ್ಬರೂ ಆಲೋಚಿಸತೊಡಗಿದರು

ರಾಧಾ—ದೌಲತ್! ನಾವು ಪುನಃ ದರಿಯಾಬಾಗಿಗೇ ಹೋಗುವುದು ಒಳ್ಳೆಯದೆಂದು ಕಾಣುತ್ತದೆ

ದೌಲತ್—ನಾವು ದರಿಯಾಬಾಗಿಗೆ ಹೋಗುವುದಾದರೆ ಅಂದೇ ಏಕೆ ಅಲ್ಲಿಗೆ ಹೋಗಬಾರದಾಗಿತ್ತು?

ರಾಧಾ—ನಾನು ಮುಮೂರ್ಷಾವಸ್ಥೆಯಲ್ಲಿದ್ದೆ ಇಯಜ್‌ಖಾನರು ರಣಕ್ಷೇತ್ರದಿಂದ ನಮ್ಮಿಬ್ಬರನ್ನೂ ಕರೆತಂದು ಇಲ್ಲಿ ಇಟ್ಟರು.

ದೌಲತ್—ಇಂದು ಇಷ್ಟು ನಿರ್ವಿಣ್ಣರಾಗಿ ಹೊರಟುಹೋಗುವ ಇಯಜ್‌ಖಾನ ರವರು ನಮ್ಮನ್ನೇಕೆ ಇಲ್ಲಿಗೆ ಕರೆತಂದರು ?

ರಾಧೆ—ದೌಲತ್! ಖಾನರು ಕಾರಣವಿಲ್ಲದೇ ನಮ್ಮನ್ನು ಇಲ್ಲಿಗೆ ಸಾಗಿಸಲಿಲ್ಲ. ಆಗ ನಗರದ ರಾಜ್ಯದಲ್ಲಿ ಪ್ರಬಲವಾದ ಕ್ಷೋಭೆ ಇತ್ತು ಅರಾಜಕತೆ ಇತ್ತು ಈಗ ಎಲ್ಲವೂ ಶಾಂತವಾಗಿದೆ ನಾವು ದರಿಯಾಬಾಗಿಗೆ ಹೋಗುವುದೇ ಯುಕ್ತವಾದುದು

ದೌಲತ್—ರಾಣಿಯವರೇ! ಈ ಖಾನರವರೇಕೆ ನಮ್ಮನ್ನು ಬಿಟ್ಟು ಹೋಗ ಬೇಕು

ರಾಧೆ—(ನಗುತ್ತ) ಅಕ್ಕನವರೇ! ಅವರು ಮಲಬಾರಿನಲ್ಲಿ ಹೊಸ ರಾಜ್ಯವನ್ನು ಕಟ್ಟುತ್ತಾರಂತೆ! ಅಂಥಾ ದಕ್ಷತೆಯು ಅವರಿಗಿದೆ

ದೌಲತ್—ರಾಣಿಯವರೇ, ಅವರಿಗೆ ಹೊಸ ರಾಜ್ಯವನ್ನು ಕಟ್ಟುವ ಶಕ್ತಿ ಸಾಮರ್ಥ್ಯಗಳುಂಟು! ಆದರೆ, ನಮ್ಮನ್ನು ಬಿಟ್ಟು ಹೋಗುವುದೆಂಬುದೇಕೋ ನನ ಗಷ್ಟು ಸಮಾಧಾನವಾಗಿಲ್ಲ

ರಾಧೆ—(ನಗುತ್ತಾ) ಅಕ್ಕನವರೇ! ನಾನೊಂದು ಮಾತು ಹೇಳಲೇ ? ನೀವು ಖಾನರವರಲ್ಲಿ ಅನುರಕ್ತರಾಗಿದ್ದೀರಿ!

ದೌಲತ್ತಳು ನಾಚಿಕೆಯಿಂದ ನಕ್ಕಳು.

ರಾಧೆ—ಅಕ್ಕನವರೇ! ನೀವು ಇಯಜ್‌ಖಾನರವರನ್ನು ಇಲ್ಲಿಯೇ ಇರುವಂತೆ ಮಾಡಬಹುದು.

ದೌಲತ್—ಅದು ಹೇಗೆ ?

ರಾಧೆ—ನಿಮಗೆ ಅಂಥ ಸಾಮರ್ಥ್ಯವಿದೆ!

ಇಯಜ್‌ಖಾನನು ಸರೋವರದ ಎಡೆಯಲ್ಲಿ ಒಂದು ಅಶ್ವತ್ಥ ವೃಕ್ಷದ ಕಟ್ಟೆಯ ಮೇಲೆ ನಿರ್ವಿಣ್ಣನಾಗಿ ಕುಳಿತಿದ್ದಾನೆ ಎಷ್ಟೋ ಕಲ್ಪನಾ ಸಾಮ್ರಾಜ್ಯಗಳನ್ನು ಸ್ವಪ್ನ ಕಾಣುತ್ತಿದ್ದಾನೆ. ನಾಳೆ ಪ್ರಾತಃಕಾಲ ಈ ಶಿಬಿರವನ್ನು ಎತ್ತಲು ಏರ್ಪಾಡು ಮಾಡಿ ದ್ದಾನೆ ಮೂರು ನಾಲ್ಕು ದಿನಗಳಿಂದ ಎಷ್ಟೋ ಸಮಾಧಾನ ಹೇಳಿ ರಾಧಾ ಮತ್ತು ದೌಲತ್ತರನ್ನು ದರಿಯಾಬಾಗಿಗೆ ಹೋಗಲು ಒಪ್ಪಿಸಿದ್ದಾನೆ. ತಾನು ಎಲ್ಲಿಯೋ ಹೊರಟು ಹೋಗಲು ಸಂಕಲ್ಪಿಸಿದ್ದಾನೆ ಆದರೆ ಇಯಜ್‌ಖಾನನು ಎಲ್ಲಿಗೆ ಹೋಗುತ್ತಾನೆಂಬುದು ಯಾರಿಗೂ ಗೊತ್ತಿಲ್ಲ ಅದನ್ನು ತಿಳಿದುಕೊಳ್ಳಲು ರಾಧೆಯು ಎಷ್ಟೋ ಪ್ರಯತ್ನ ಪಟ್ಟಳು ಫಲಿಸಲಿಲ್ಲ ಹುಸೇಖಾನನು ಹೆಣಗಾಡಿದನು ಅದನ್ನು ತಿಳಿಯಲು ಸಾಧ್ಯ ವಾಗಲಿಲ್ಲ ಅವನು ಗುಪ್ತ ವೇಷದಿಂದ ಇಯಜ್‌ಖಾನರನ್ನು ಹಿಂಬಾಲಿಸುವುದಾಗಿ ನಿಶ್ಚಯ ಮಾಡಿಕೊಂಡಿದ್ದಾನೆ. ಇಯಜ್‌ಖಾನನು ಅಶ್ವತ್ಥಕಟ್ಟೆಯ ಮೇಲೆ ಕುಳಿತು ಮುಂದಿನ ರಾಜ್ಯ ಕಟ್ಟುವ ಆಲೋಚನೆಗಳನ್ನು ಮಾಡತೊಡಗಿದ್ದಾನೆ ಆ ಯೋಚನಾ

ತರಂಗಗಳಲ್ಲಿ ದೌಲತ್ತಳ ಜ್ಞಾಪಕವು ಬಂದಿತು ದೌಲತ್ತಳನ್ನು ಅಗಲಿ ಹೋಗುವುದು ಬಲು ಕಷ್ಟವಾಗಿ ತೋರಿತು ದೌಲತ್ತಳು ನಿಜವಾಗಿಯೂ ಖಾನನ ಪ್ರಣಯಿನಿಯೇನು ? ಅಲ್ಲ ! ಆದರೂ ದೌಲತ್ತಳ ಸಾನ್ನಿಧ್ಯವನ್ನು ಬಿಡುವುದು ಅವನಿಗೆ ಬಲು ಕಷ್ಟವಾಗಿ ತೋರಿತು ದೌಲತ್ತಳಿಗೆ ತನ್ನಲ್ಲಿ ಪ್ರೇಮವಿದೆಯೇ ? ಎಂದು ಚಿಂತಿಸಿದನು. ಪ್ರೇಮವಿದೆ. ಆದರೆ ತಾನು ಅವಳನ್ನು ಇಲ್ಲಿ ಬಿಟ್ಟು ಹೋದರೆ ಟಿಪ್ಪೂಸುಲ್ತಾನನು ದೌಲತ್ತಳನ್ನು ಬಲಾತ್ಕಾರದಿಂದಲಾದರೂ ಅಪಹರಿಸುತ್ತಾನೆ ದೌಲತ್ತಳನ್ನು ತನ್ನ ಜೊತೆಯಲ್ಲಿಯೇ ಕರೆದುಕೊಂಡು ಹೋಗಬಾರದ ! ಹೌದು ! ಈ ಆಲೋಚನೆಯು ಸರಿಯಾಗಿದೆ. ದೌಲತ್ತಳು ಮಾತ್ರ ಬರುವುದಿಲ್ಲ ! ಒಂದು ಪಕ್ಷ ದೌಲತ್ತಳು ನನ್ನೊಡನೆ ಬರುವುದಾದರೂ ನಾನು ಲೋಕೋತ್ತರ ಸೌಂದರ್ಯವತಿಯಾದ ಅವಳನ್ನು ಕರೆದುಕೊಂಡು ಎಲ್ಲಿಗೆ ಹೋಗುವುದು ? ಎಲ್ಲಿ ರಾಜ್ಯವನ್ನು ಕಟ್ಟುವುದು ! ಇಲ್ಲಿರುವ ಧನಕನಕವನ್ನೆಲ್ಲಾ ಯಾರು ಕಾಪಾಡುವವರು ? ಖಾಸಿಂಖಾನನಿದ್ದಿದ್ದರೆ ಅವನು ಇದನ್ನು ಕಾಪಾಡುತ್ತಿದ್ದನು ಈ ಹುಸೇನ್‌ಖಾನನು ಬಿಸಿರಕ್ತದ ಹುಡುಗ ! ಇವನಲ್ಲಿ ಈ ಗುಪ್ತನಿಧಿಯನ್ನು ಒಪ್ಪಿಸುವುದೆಂತು ?

ಹೇಗೇ ಆಗಲಿ, ಈ ನಗರದ ರಾಜ್ಯದಲ್ಲಿ ನಾನಿರುವುದಿಲ್ಲ ನನ್ನ ಸರ್ವಸ್ವವನ್ನೂ ಈ ರಾಧಾರಾಣಿಗೆ ಒಪ್ಪಿಸಿ ನಾನು ಈ ದೇಶವನ್ನು ಪರಿತ್ಯಾಗಮಾಡುತ್ತೇನೆ ಈ ರಾಧಾರಾಣಿಯು ಎಂಥಾ ಹೆಣ್ಣು! ಇವಳಿಗಿರುವ ಧೈರ್ಯ ಸಾಹಸಗಳನ್ನು ನಾನೆಲ್ಲಿಯೂ ನೋಡಿಲ್ಲ ಇವಳು ಹಂಗಸಲ್ಲ ಈ ರಾಜ್ಯದ ಲಕ್ಷ್ಮಿ ಟಿಪ್ಪೂಸುಲ್ತಾನನು ಈ ರಾಧಾರಾಣಿಯ ಕರುಣೆಯನ್ನು ಸಂಪಾದಿಸಿದ್ದರೆ ಇದೊಂದು ಅವನ ಅದೃಷ್ಟ, ಮೈಸೂರಿನ ಕಲ್ಯಾಣ ಈ ರಾಧಾರಾಣಿಗೇಕೆ ಟಿಪ್ಪೂಸುಲ್ತಾನನ ಮೇಲೆ ಇಷ್ಟೊಂದು ಅಭಿಮಾನ. ಅಂದು ರಣಕ್ಷೇತ್ರದಲ್ಲಿ ಈ ಸುಲ್ತಾನನಿಗಾಗಿ ತನ್ನ ಪ್ರಾಣವನ್ನೇ ಒಪ್ಪಿಸಿಬಿಟ್ಟಿದ್ದಳು. ದೌಲತ್ತಳಿಗಾಗಿ ರಾಧೆಯು ಟಿಪ್ಪೂಸುಲ್ತಾನನ ಮೇಲೆ ಇಷ್ಟೊಂದು ಅನುಗ್ರಹವನ್ನು ತೋರುತ್ತಿದ್ದಾಳೆ. ದೌಲತ್ತಳಿಗೆ ಟಿಪ್ಪೂಸುಲ್ತಾನನ ಮೇಲೆ ಅಷ್ಟೊಂದು ಪ್ರೇಮವಿದೆಯೇ ? ಅವಳು ಸುಲ್ತಾನನನ್ನು ವರಿಸುವುದಾದರೆ ಅಡ್ಡಿಯೇನಿದೆ? ದೌಲತ್ತಳು ಟಿಪ್ಪೂಸುಲ್ತಾನನನ್ನು ಮನಸಾರ ಮೆಚ್ಚಿ ವರಿಸುವುದಾದರೆ ಅದನ್ನು ನಾನು ಒಪ್ಪುತ್ತೇನೆ ಆದರೆ ನನ್ನಲ್ಲಿಯೇ ಪ್ರೇಮ ಮಾಡುವುದಾದರೆ ನನ್ನನ್ನೇ ಸ್ವಯಂವರ ಮಾಡಿಕೊಳ್ಳಬಾರದೇಕೆ ? ದೌಲತ್ತಳು ನನ್ನ ಧರ್ಮಪತ್ನಿಯಾದರೆ ಟಿಪ್ಪೂಸುಲ್ತಾನನಿಗೆ ಅವಳನ್ನು ಕಣ್ಣೆತ್ತಿ ನೋಡುವ ಧೈರ್ಯವೆಲ್ಲಿ ಬರಬೇಕು ? ಆಗ ನನ್ನಲ್ಲಿ ಸುಲ್ತಾನನು ನಿಜವಾದ ಸ್ನೇಹಿತನಾಗಬೇಕು ಇಲ್ಲವೇ ಪ್ರತ್ಯಕ್ಷ ವಿರೋಧಿಯಾಗಬೇಕು. ಇರಲಿ, ಇದನ್ನು ದೌಲತ್ತಳಲ್ಲಿ ಕೇಳಿಯೇಬಿಡುತ್ತೇನೆ ರಾಧಾರಾಣಿಯ ಮಧ್ಯಸ್ಥಿಕೆಯಿಂದ ಕೇಳಲೇ ? ರಾಜ್ಯಭ್ರಷ್ಟನಾಗಿ ರಾಧಾರಾಣಿಯೊಡನೆ ಈ ವಿವಾಹದ

ಮಾತೆತ್ತಲು ನನ್ನ ಮನಸ್ಸು ಒಪ್ಪುವುದಿಲ್ಲ. ದೌಲತ್ತಳಲ್ಲಿಯೋ? ಭಗವಂತನು ಅನುಗ್ರಹಿಸಿದರೆ ಅವಳನ್ನು ಎಂದಾದರೊಂದು ದಿನ ಕೇಳುವ ಸಂಯೋಗವು ಬಂದರೆ ಅಂದು ಅವಳನ್ನು ಕೇಳುತ್ತೇನೆ ಎಂದುಕೊಂಡನು ಬೆಳಗಿನಝಾವದಲ್ಲಿ ಈ ರಾಜ್ಯವನ್ನು ಬಿಟ್ಟು ಹೋಗುತ್ತೇನೆ ಎಂದುಕೊಂಡು ನಿಟ್ಟುಸಿರು ಬಿಟ್ಟು ಎದ್ದನು

ಸರೋವರದ ದಂಡೆಯಲ್ಲಿರುವ ವಿಶಾಲವಾದ ಕಲ್ಲುಮಂಟಪದಲ್ಲಿ ಇಯಜ್ ಖಾನನ ಬಿಡಾರ! ಇಯಜ್‌ಖಾನನು ತನ್ನ ಬಿಡಾರಕ್ಕೆ ಹೋದನು. ಅಷ್ಟುಹೊತ್ತಿಗೆ ಸರಿಯಾಗಿ ಹುಸೇನ್‌ಖಾನನು ಬಂದು ಇಯಜ್‌ಖಾನರವರ ಭೇಟಿ ಮಾಡಿದನು ಅವರಿಬ್ಬರಿಗೂ ಸ್ವಲ್ಪ ಹೊತ್ತು ಸಂಭಾಷಣೆ ನಡೆಯಿತು ಆ ಮಂತ್ರಾಲೋಚನೆಯು ಬಹಳ ಅಂತರಂಗವಾದುದು ಮಾರನೆಯ ದಿನ ದೌಲತ್‌ರಾಣಿಯವರೂ, ರಾಧಾರಾಣಿಯವರೂ ದರಿಯಾಬಾಗಿಗೆ ಹೋಗುವರೆಂದು ಇಯಜ್‌ಖಾನನು ತಿಳಿಸಿದನು. ಅವರಿಗೇನೂ ಅಪಾಯವು ತಟ್ಟಲಾರದೆಂದೂ, ಒಂದು ಪಕ್ಷ ಅವಗಡಪ್ರಸಂಗ ಬಂದರೆ ದರಿಯಾಬಾಗನ್ನು ರಕ್ಷಿಸುವ ಭಾರವು ಹುಸೇನ್‌ಖಾನನಿಗೆ ಸೇರಿದ್ದೆಂದೂ ಇಯಜ್ ಖಾನನು ಅಪ್ಪಣೆ ಮಾಡಿದನು ಈ ಶಿಬಿರದ ಬಹಿರಾಡಂಬರವನ್ನೆಲ್ಲಾ ತೆಗೆದುಹಾಕಬೇಕೆಂದೂ, ಈ ದೇವಾಲಯವನ್ನು ಮಾತ್ರ ಭದ್ರವಾಗಿ ಕಾಪಾಡಬೇಕೆಂದೂ ಹೇಳಿದನು ಇಯಜ್‌ಖಾನನು ಕೆಲವು ದಿನಗಳು ರಾಜಕಾರ್ಯಾರ್ಥವಾಗಿ ದೇಶಾಂತರ ಪ್ರಯಾಣ ಬೆಳೆಸುವುದಾಗಿಯೂ ಸೂಚಿಸಿದನು.

ಹುಸೇನ್‌ಖಾ—ಖಾವಂದರವರೇ, ತಾವು ನನಗೆ ತಂದೆಗೆ ಸಮಾನರು ತಮ್ಮ ಅಪ್ಪಣೆಯನ್ನು ಶಿರಸಾ ವಹಿಸಿ ನಡೆಸುತ್ತೇನೆ ಈ ನಗರದ ರಾಜ್ಯದಲ್ಲಿ ಟಿಪ್ಪೂ ಸುಲ್ತಾನರ ರಾಜ್ಯಭಾರವು ಆರಂಭವಾಗಿದೆ ಇಲ್ಲಿ ಅನೇಕ ವಿಪ್ಲವಗಳಾಗುವ ಸಂಭವವಿದ ನಮ್ಮ ಸ್ವಾಸ್ಥ್ಯಗಳಿಗೆ ಅಪಾಯ ತಟ್ಟುವುದಾದರೆ ನಾವು ಸುಲ್ತಾನರ ರಾಜ್ಯವನ್ನು ಎದುರಿಸಿ ಯುದ್ಧಮಾಡಬೇಕಾಗಿ ಬಂದರೂ ಬರಬಹುದು.

ಇಯಜ್‌ಖಾ—ಹುಸೇನ್‌ಖಾ ನಿನ್ನ ಆಲೋಚನೆಯಲ್ಲೇನೂ ಉತ್ಪ್ರೇಕ್ಷ ಇಲ್ಲ. ಎಂಥಾ ಪರಿಸ್ಥಿತಿಯು ಬಂದರೂ ಬರಬಹುದು ಆದರೆ ಸುಲ್ತಾನರ ಸರ್ಕಾರದ ಮೇಲೆ ಕತ್ತಿ ಕಟ್ಟದಿದ್ದರೆ ನನಗೆ ಬಹಳ ಸಂತೋಷ

ಹುಸೇನ್‌ಖಾ—ಹುಜೂರು! ತಮಗೆ ಭರವಸೆ ಕೊಡುತ್ತೇನೆ ನಾನು ಎಂದೆಂದಿಗೂ ಸುಲ್ತಾನೀ ರಾಜ್ಯದ ಮೇಲೆ ವಿಪ್ಲವವನ್ನು ತಂದು ಒಡ್ಡುವುದಿಲ್ಲ

ಇಯಜ್‌ಖಾ—ಒಳ್ಳೆಯದು, ನಿನಗೆ ಮಂಗಳವಾಗಲಿ!

ಇಯಜ್‌ಖಾನನು ದ್ವಾರಪಾಲಕನನ್ನು ಕಳಿಸಿ ರಾಧಾರಾಣಿಯವರ ಡೇರೆಯಲ್ಲಿ ಅವರೊಬ್ಬರೇ ಇದ್ದಾರೆಂಬುದನ್ನು ತಿಳಿದುಕೊಂಡು ಅವರ ಗುಡಾರಕ್ಕೆ ಹೋದನು. ಅಲ್ಲಿ ರಾಧಾರಾಣಿಯು ಎದ್ದು ಇಯಜ್‌ಖಾನನ್ನು ಆಸನದಲ್ಲಿ ಕುಳ್ಳಿರಿಸಿದಳು

ಇಯಜ್‌ಖಾನನು—ರಾಧಾರಾಣಿಯವರೇ ! ನಾನು ನಾಳೆಯ ದಿನ ಈ ನಗರದ ರಾಜ್ಯವನ್ನು ತ್ಯಾಗ ಮಾಡುತ್ತೇನೆ. ದೌಲತ್‌ರಾಣಿಯವರನ್ನೂ, ತಮ್ಮನ್ನೂ ಬಿಟ್ಟು ಹೋಗುವುದು ನನಗೆಷ್ಟೋ ವ್ಯಥೆಯಾಗಿದೆ ಆದರೆ ರಾಜ್ಯವನ್ನು ಬಿಟ್ಟುಕೊಟ್ಟು ಕಳ್ಳನಂತೆ ಈ ಗಿರಿಕಂದರಗಳಲ್ಲಿ ನಾನು ಅಲೆಯುತ್ತಿರಕೂಡದು ನನ್ನ ಸರ್ವಾಧಿಕಾರ ವನ್ನು ಹುಸೇ‌ಖಾನನಿಗೆ ವಹಿಸಿದ್ದೇನೆ ನನ್ನ ಸರ್ವಸ್ವವನ್ನೂ ತಮ್ಮಲ್ಲಿ ಒಪ್ಪಿಸಲು ಬಂದಿದ್ದೇನೆ ತಾವು ಅದನ್ನು ರಕ್ಷಣೆ ಮಾಡಬೇಕು

ರಾಧೆಗೆ ಆಶ್ಚರ್ಯವಾಯಿತು ಅವಳು "ಖಾನರವರೇ! ತಮ್ಮಲ್ಲಿ ಏನಿದೆ ?"

ಇಯಜ್—"ನನ್ನಲ್ಲಿ ಈ ಮೈಸೂರು ರಾಜ್ಯದಲ್ಲಿ ಎಲ್ಲಿಯೂ ಇಲ್ಲದಷ್ಟು, ಹಿಂದೂಸ್ಥಾನದಲ್ಲಿ ಯಾವ ರಾಜ್ಯದಲ್ಲಿಯೂ ಇಲ್ಲದಷ್ಟು ಭಂಗಾರವಿದೆ"

ರಾಧೆ—"ತಮಗೆ ಅಷ್ಟೊಂದು ಭಂಗಾರವೆಲ್ಲಿ ಬಂದಿತು ?"

ಇಯಜ್—ಅದು ಹೈದರಲ್ಲೀಖಾನರವರ ಗುಪ್ತನಿಧಿ! ಬಹುಕಾಲದ ಹಿಂದೆಯೇ ಅದನ್ನು ನನ್ನಲ್ಲಿ ಒಪ್ಪಿಸಿದ್ದರು

ರಾಧೆ—ಅದನ್ನು ಹೇಗೆ ವಿನಿಯೋಗಿಸಬೇಕು ?

ಇಯಜ್—ಮೈಸೂರಿಗೆ ಅಪಾಯವು ಬಂದು, ರಾಜ್ಯವು ಮುಳುಗಿಹೋಗುವ ಸಂಭವ ಬಂದರೆ ಈ ರಾಜ್ಯವನ್ನು ಉದ್ಧಾರ ಮಾಡಲು ಅದನ್ನು ವಿನಿಯೋಗಿಸಬೇಕೆಂದು ದೊಡ್ಡ ನವಾಬರ ಆಜ್ಞೆ!

ರಾಧೆ—ಈ ನಿಧಿ ಇರುವುದನ್ನು ಮತ್ತಾರಾದರೂ ಬಲ್ಲರೋ ?

ಇಯಜ್—ಹೌದು ! ಬಡಾಫಕೀರರವರು ಬಲ್ಲರು

ರಾಧೆ—ಅವರು ಬಂದು ಕೇಳಿದರೆ ಕೊಡಬಹುದೋ ?

ಇಯಜ್—ತಮಗೆ ಯುಕ್ತ ತೋರಿದಂತೆ ಅದನ್ನು ವಿನಿಯೋಗಿಸಬಹುದು. ದೌಲತ್‌ರಾಣಿಯವರನ್ನು ಎಡಬಿಡದೇ ಸಂರಕ್ಷಿಸುವುದು, ಈ ನಿಧಿಯನ್ನು ಭದ್ರವಾಗಿ ಕಾಪಾಡುವುದು ಇವೆರಡು ಭಾರಗಳನ್ನು ತಮ್ಮ ಮೇಲೆ ಹೊರಿಸಿದ್ದೇನೆ

ರಾಧೆ—ದೌಲತ್‌ರಾಣಿಯು ಸ್ವತಂತ್ರಳು ವೀರರಮಣಿ ಅವರನ್ನು ನಾನು ಸಂರಕ್ಷಿಸುವುದೆಂದರೇನು? ನಾನು ಅವಳಿಗೆ ಸಹಾಯಕಳುಮಾತ್ರ! ದೌಲತ್‌ರಾಣಿಯು ರಣಕ್ಷೇತ್ರದಲ್ಲಿ ನಿಂತರೆ ನಿಮಗೂ, ಸುಲ್ತಾನರಿಗೂ ಸಮಾನಳಾದ ಪರಾಕ್ರಮಶಾಲಿ ಇಯಜ್‌ಖಾನರವರೇ ! ಮೈಸೂರು ರಾಜ್ಯಕ್ಕೆ ಅನೇಕ ಆಪತ್ತುಗಳು ಇರುವುದನ್ನು ತಾವು ಬಲ್ಲಿರಿ. ತಾವು ಇಂದು ದೇಶತ್ಯಾಗ ಮಾಡಿ ಹೊರಟುಹೋದರೆ ದೊಡ್ಡ ನವಾಬರವರು ತಮ್ಮಲ್ಲಿಟ್ಟ ಭರವಸೆಗೆ ಸಾರ್ಥಕವಾದಂತೆ ಆಗುವುದೇ ?

ಇಯಜ್ :— ನಾನು ಯಾವಾಗಲೂ ಮೈಸೂರಿಗೆ ಸೇವೆ ಸಲ್ಲಿಸುವೆನು.

ಮೈಸೂರಿಗೆ ಅನೇಕ ಯುದ್ಧಗಳು ಕಾದಿವೆಯೆಂಬುದನ್ನು ನಾನು ಬಲ್ಲೆ. ಆ ಸಮಯ ಗಳಲ್ಲೆಲ್ಲಾ ನಾನು ಮೈಸೂರು ಸೈನ್ಯಕ್ಕೆ ಬೆಂಬಲವಾಗಿ ಬಂದು ನಿಲ್ಲುವೆನು

ರಾಧೆ—ತಾವು ದೊಡ್ಡ ನವಾಬರ ರಾಜ್ಯದಲ್ಲಿಯೇ ಇರಬಾರದೇಕೆ ?

ಇಯಜ್—ತಾಯೆ ! ಈ ರಾಜ್ಯದಲ್ಲಿ ನಾನಿರಲು ಸ್ಥಳವೇ ಇಲ್ಲ!

ರಾಧೆ—ಸುಲ್ತಾನರವರು ಈ ನಗರದ ರಾಜ್ಯವನ್ನು ತಮಗೇ ಒಪ್ಪಿಸಿದರೆ—

ಇಯಜ್—ನಾನು ಸ್ವೀಕರಿಸುವುದಿಲ್ಲ

ಇಯಜ್‌ಖಾನನು ಬಂಗಾರದ ನಿಧಿಯನ್ನು ತೋರಿಸುವುದಾಗಿ ರಾಧಾರಾಣಿ ಯನ್ನು ಜೊತೆಯಲ್ಲಿ ಕರೆದುಕೊಂಡು ಹೊರಟನು ಆ ಕಲ್ಲುಮಂಟಪದೊಳಗೆ ರಾಧೆಯು ಇಯಜ್‌ಖಾನನ ಜೊತೆಯಲ್ಲಿ ಹೋದಳು. ಖಾನನು ಮಂಟಪದ ಹೊರ ಬಾಗಿಲನ್ನು ಭದ್ರಪಡಿಸಿದನು ಒಳಗೆ ಹೋಗಿ ಒಂದು ಮೂಲೆಯಲ್ಲಿ ಮಂಡಿಯೂರಿ ಕುಳಿತು ಬಲವಾಗಿ ಕಬ್ಬಿಣದ ಸಲಾಕಿಯನ್ನು ಎಳೆದನು ಕೀಲುಗೊಂಬೆಯಂತೆ ಕಲ್ಲಿನ ಚಪ್ಪಡಿಯು ಮೇಲಕ್ಕೆದ್ದಿತು ಆ ಕೆಳಗೆ ಖಾನನು ಇಳಿದನು ರಾಧೆಯ ಕೈಹಿಡಿದು ಮೆಟ್ಟಿಲುಗಳನ್ನು ಇಳಿಸಿದನು. ಒಳಗೆ ಹೋಗಿ ದೀವಿಗೆಯನ್ನು ಹಚ್ಚಿಟ್ಟನು ಅಲ್ಲಿ ವಿಸ್ತಾರವಾದ ನೆಲಮಾಳಿಗೆ ಇರುವುದು ಗೋಚರವಾಯಿತು ಪೂರ್ವಭಾಗದಲ್ಲಿ ಒಂದು ಕಲ್ಲುಬಂಡೆಯನ್ನು ಎಳೆದು ಒಳಗೆ ನುಗ್ಗಿದನು ರಾಧೆಯನ್ನು ಆ ಗುಹೆಯೊಳಗೆ ಪ್ರವೇಶಮಾಡಿಸಿದನು ಅಲ್ಲಿ ನೆಲವನ್ನು ಸ್ವಲ್ಪ ಅಗೆದನು. ಒಂದೊಂದಾಗಿ ಬಂಗಾ ರದ ಇಟ್ಟಿಗೆಗಳನ್ನು ಹೊರಗೆ ತೆಗೆದು ತೋರಿಸಿದನು "ರಾಧಾರಾಣಿಯವರೇ ! ಇಲ್ಲಿ ಇಂಥಾ ಇಟ್ಟಿಗೆಗಳು ತುಂಬಿವೆ" ಎಂದು ಹೇಳಿದನು. ಅಲ್ಲಿಂದ ರಾಧೆಯನ್ನು ಹೊರಗೆ ಕರೆತಂದನು ಪಶ್ಚಿಮಭಾಗದಲ್ಲಿ ಗುಂಡಾದ ಭಾವಿಗಳಿದ್ದುವು. ನಾಲ್ಕು ಭಾವಿಗಳಲ್ಲಿ ಸೊಂಟದುದ್ದ ನೀರು ಇತ್ತು ! ಆ ನೀರಿನ ಕೆಳಗೆ ಶುದ್ಧವಾದ ಮರಳು ! ಕೈಯಿಂದಲೇ ಕೆದಕಿ ಒಂದು ಬೊಗಸೆ ಚಿನ್ನದ ನಾಣ್ಯಗಳನ್ನು ಹೊರಗೆ ತೆಗೆದನು "ರಾಧಾರಾಣಿ ಯವರೇ ಈ ನಾಲ್ಕು ಭಾವಿಗಳಲ್ಲಿಯೂ ಇಂಥಾ ಚಿನ್ನದ ನಾಣ್ಯಗಳು ತುಂಬಿವೆ" ಎಂದು ಹೇಳಿದನು ಮತ್ತೊಂದು ಕಲ್ಲಿನ ಬಾಗಿಲನ್ನು ತೋರಿಸಿ ಇಲ್ಲಿಂದ ಹೊರಗಿರುವ ಸರೋವರದ ಮಧ್ಯಕ್ಕೆ ಗುಪ್ತ ಸುರಂಗವಿದೆ ಎಂದು ಹೇಳಿದನು. ರಾಧೆಯನ್ನು ಹೊರಗೆ ಕರೆತಂದು ಆ ನೆಲಮಾಳಿಗೆಯನ್ನು ಮತ್ತೊಮ್ಮೆ ತೋರಿಸಿದನು ಆ ನೆಲಮಾಳಿಗೆಯ ಸುತ್ತಲೂ ಮದ್ದು ತುಂಬಿದೆ ಈ ಮಂಟಪವು ಶತ್ರು ವಶವಾದರೆ ಹೊರಗೆ ಮಂಟಪದ ಮುಂಭಾಗದಲ್ಲಿರುವ ಬಸವಣ್ಣನನ್ನು ಎತ್ತಿದರೆ ಸುರಂಗವಿದೆ ಅಲ್ಲಿ ಬೆಂಕಿಯನ್ನು ಹಚ್ಚಿ ದರೆ ಈ ಮಂಟಪವೆಲ್ಲಾ ಕುಸಿದು ಬಿದ್ದು ಈ ನೆಲಮಾಳಿಗೆಯೆಲ್ಲಾ ಶಿಲಾಮಯವಾಗು ತ್ತದೆ, ಅಗ್ನಿಮಯವಾಗುತ್ತದೆ ಎಂದು ಹೇಳಿ ಎಲ್ಲವನ್ನೂ ತೋರಿಸಿದನು ರಾಧಾರಾಣಿ ಯನ್ನು ಮೇಲಕ್ಕೆ ಕರೆತಂದು ನೆಲಮಾಳಿಗೆಯ ಬಾಗಿಲನ್ನು ಮುಚ್ಚಿದನು.

ಸುಸಜ್ಜಿತವಾದ ಮೇಲಿನ ಮಂಟಪಕ್ಕೆ ಬಂದು ಇಬ್ಬರೂ ಆಸನಗಳಲ್ಲಿ ಕುಳಿತರು

ಇಯಜ್—ರಾಧಾರಾಣಿಯವರೇ! ಈ ಮೈಸೂರಿನ ಚಿನ್ನದ ನಿಧಿಯನ್ನು ತಮಗೆ ಒಪ್ಪಿಸಿದ್ದೇನೆ ಇನ್ನು ಮುಂದೆ ಇದರ ಅಧಿಷ್ಠಾತ್ರಿಯು ನೀವು

ರಾಧೆ—(ಗದ್ಗದ ಕಂಠದಿಂದ) ಇಯಜ್‌ಖಾನರವರೇ! ಈ ರಾಜ್ಯದ ರಾಜ ಭಕ್ತರು ನೀವು ದೊಡ್ಡ ನವಾಬರ ನಿಜವಾದ ಸುಪುತ್ರರು ನೀವು

ಇಯಜ್—ರಾಧಾರಾಣಿಯವರೇ! ದೊಡ್ಡ ನವಾಬರು ಈ ನಗರದ ರಾಜ್ಯಕ್ಕಾಗಿ ನನ್ನನ್ನು ಇಲ್ಲಿ ನವಾಬನನ್ನಾಗಿ ನೇಮಿಸಲಿಲ್ಲ ಈ ನಿಧಿಯನ್ನು ಕಾಪಾಡುವುದಕ್ಕಾಗಿ ನೇಮಿಸಿದರು

ರಾಧೆ—ಖಾನರವರೇ! ಇಷ್ಟು ಪ್ರಶಸ್ತವಾದ ನೆಲಮಾಳಿಗೆಯನ್ನು ತಯಾರು ಮಾಡಿಸಿದವರಾರು?

ಇಯಜ್—ನಗರದ ಮಹಾರಾಜರಾಗಿದ್ದ ಶಿವಪ್ಪನಾಯ್ಕರವರು

## ಖಾನನ ಇಷ್ಟಾರ್ಥಸಿದ್ಧಿ

ಇಯಜ್‌ಖಾನನೂ, ರಾಧಾರಾಣಿಯೂ ಬಲುಹೊತ್ತು ಮಾತನಾಡಿದರು. ರಾಧೆಯು ಇಯಜ್‌ಖಾನರು ಹೊರಟುಹೋಗಕೂಡದೆಂದು ಎಷ್ಟೋ ವಾದಿಸಿದಳು ಪ್ರತಿರೋಧ ಮಾಡಿದಳು ಸ್ತ್ರೀ ಜನೋಚಿತವಾಗಿ ಅತ್ತು, ಕರೆದು ನೋಡಿದಳು. ಕೊನೆಯಲ್ಲಿ ಒಪ್ಪಿಕೊಂಡಳು ಅಲ್ಲಿಂದೆದ್ದು ಹೊರಟಳು ಇಯಜ್‌ಖಾನನು ರಾಧೆಯನ್ನು ಅವಳ ಗುಡಾರಕ್ಕೆ ಬಿಟ್ಟು ಅಪ್ಪಣೆ ಪಡೆದು ತನ್ನ ಗುಡಾರಕ್ಕೆ ಬಂದನು ಯಾರೋ ಒಬ್ಬ ವ್ಯಕ್ತಿಯು ಕಾಲು ಸಪ್ಪಳ ಮಾಡದೇ ಖಾನನನ್ನು ಹಿಂಬಾಲಿಸುತ್ತಿದ್ದಳು ಖಾನನು ಮಂಟಪವನ್ನು ಪ್ರವೇಶ ಮಾಡುತ್ತಲೇ ಅವಳೂ ಪ್ರವೇಶ ಮಾಡಿದಳು. ಖಾನನು ಹಿಂದಿರುಗಿ ನೋಡಿದನು. ಹಿಂಬಾಲಿಸಿ ಬಂದವಳು ಮತ್ತಾರೂ ಅಲ್ಲ, ದೌಲತ್!

ಇಯಜ್‌ಖಾನನು ಆಶ್ಚರ್ಯ ಚಕಿತನಾದನು.

ಇಯಜ್—ದೌಲತ್! ನನ್ನನ್ನು ಹಿಂಬಾಲಿಸಿ ಏಕೆ ಬಂದೆ?

ದೌಲತ್—ಖಾನನೇ! ನೀನು ರಾಧೆಯೊಡನೆ ಏನು ಮಸಲತ್ತು ಮಾಡಿದೆಯೋ ವಿಚಾರಿಸೋಣವೆಂದು ಬಂದೆ.

ಇಯಜ್—ದೌಲತ್! ಅಂತಹ ಗುಪ್ತ ಮಂತ್ರಾಲೋಚನೆಯೇನೂ ಇಲ್ಲ. ನಾನು ನಾಳೇದಿನ ಈ ದೇಶವನ್ನು ತ್ಯಾಗಮಾಡುತ್ತೇನೆ.

ದೌಲತ್—ನೀನು ದೇಶವನ್ನೇಕೆ ತ್ಯಾಗಮಾಡಬೇಕು. ಟಿಪ್ಪೂಸುಲ್ತಾನರ ಭಯದಿಂದಲೇ?

ಇಯಜ್—(ನಕ್ಕು) ದೌಲತ್ ! ಭಯವೆಲ್ಲಿ ಬಂತು ? ವಸ್ತುತಃ ಸುಲ್ತಾನನು ನನ್ನನ್ನು ನೋಡಿ ಭಯಪಡುತ್ತಾನೆ ಯುದ್ಧದ ಮೇಲೆ ಯುದ್ಧ ಮಾಡಿ ಸುಲ್ತಾನ ನನ್ನು ನಗರದಿಂದ ಚಿತ್ರದುರ್ಗದ ಕೋಟೆಗೆ ಹೋಗಿ ಪ್ರಾಣರಕ್ಷಣೆ ಮಾಡಿಕೊಳ್ಳು ವಂತೆ ಮಾಡಿದ್ದೇನೆ

ನಾನು ನಿನಗಾಗಿ ಈ ರಾಜ್ಯ ಪರಿತ್ಯಾಗ ಮಾಡಿದೆ ನಿನಗಾಗಿ ಈ ದೇಶವನ್ನೂ ತ್ಯಾಗಮಾಡುತ್ತೇನೆ.

ದೌಲತ್—ನಾನು ನಿನಗಾಗಿ, ನಿನ್ನ ರಕ್ಷಣೆಯನ್ನು ಹೊಂದಿ ಈ ನಗರದಲ್ಲಿದ್ದೆ ಈ ರಾಜ್ಯವು ಅನಾಯಕವಾಗಿದೆ ಇಲ್ಲಿ ನಾನು ಇರಲು ಒಪ್ಪುವುದಿಲ್ಲ

ಇಯಜ್—ಹಾಗಾದರೆ ಮಹಾರಾಣಿಯವರ ಸವಾರಿಯು ಶ್ರೀರಂಗಪಟ್ಟಣಕ್ಕೆ ದಯಮಾಡಿಸುತ್ತದೇನು ?

ದೌಲತ್—ಖಾನನೇ ! ನೀನು ನನ್ನನ್ನು ಹಾಸ್ಯಮಾಡುತ್ತಿರುವೆಯೇನು ?

ಇಯಜ್—ಇಲ್ಲ ! ದೌಲತ್ ನಾನು ನಿನ್ನ ಮನಸ್ಸಿನ ನೆಲೆಯನ್ನು ತಿಳಿಯ ಲಾರದವನಾಗಿದ್ದೇನೆ ನೀನು ಸುಲ್ತಾನನನ್ನು ಪ್ರೀತಿಸುವೆಯೋ ನನ್ನನ್ನು ವರಿಸು ವಿಯೋ ? ಎಂದು ಯಾವಾಗಲೂ ನನ್ನ ಮನವು ಡೋಲಾಯಮಾನವಾಗಿದೆ

ದೌಲತ್—ಖಾನನೇ, ನಿನಗಿಷ್ಟು ಭ್ರಾಂತಿಯಿದೆಯೆಂಬುದನ್ನು ನಾನರಿಯೆ. ನೀನಿಲ್ಲದ ರಾಜ್ಯದಲ್ಲಿ ಒಂದು ಕ್ಷಣವೂ ನಾನಿರಲಾರೆ ನೀನು ಎಲ್ಲಿಗೆ ಹೋದರೆ ಅಲ್ಲಿಗೆ ನಾನು ನಿನ್ನ ಜೊತೆಯಲ್ಲಿ ಬರುವೆನು

ಇಯಜ್—ದೌಲತ್ ! ನೀನು ನನ್ನನ್ನು ಅಷ್ಟೊಂದು ಪ್ರೀತಿಸುವೆಯಾ ?

ದೌಲತ್—ಖಾನನೇ, ನಾನು ನನ್ನ ಪ್ರಾಣಕ್ಕಿಂತಲೂ ಮಿಗಿಲಾಗಿ ನಿನ್ನನ್ನು ಪ್ರೀತಿಸುವೆನು

ಇಯಜ್—ದೌಲತ್ ! ನಿನ್ನ ಪ್ರೀತಿಯು ನಿಜವಾದರೆ ನಮ್ಮಿಬ್ಬರ ವಿವಾಹ ವಾಗಲು ಅಡ್ಡಿ ಯೇನಿದೆ ?

ದೌಲತ್—ಖಾನನೇ ! ಮೈಸೂರಿನ ರಾಜಕೀಯವು ಪ್ರತಿಬಂಧಕವಾಗಿದೆ.

ಇಯಜ್—ದೌಲತ್ ! ನಾನೂ ಅದನ್ನೇ ನಿನ್ನೊಡನೆ ಸ್ಪಷ್ಟವಾಗಿ ಹೇಳಬೇ ಕೆಂದು ಹವಣಿಸುತ್ತಿದ್ದೆ. ಮೈಸೂರಿನ ರಾಜಕೀಯದಲ್ಲಿ ನನ್ನ ಪಾತ್ರವೇನೂ ಇಲ್ಲ ನಾನು ಸುಲ್ತಾನನಿಗೆ ಪ್ರತಿದ್ವಂದ್ವಿಯಾಗಿ ಯುದ್ಧ ಮಾಡಬಹುದು ಅದಕ್ಕೆ ಬೇಕಾ ದಷ್ಟು ಕಾರಣಗಳಿವೆ. ಪ್ರತಿಯೊಂದು ಹೆಜ್ಜೆಹೆಜ್ಜೆಗೂ ನೀನು ಅದನ್ನು ಅಡ್ಡಿಪಡಿ ಸುತ್ತಿದ್ದಿ ! ನಿನ್ನ ಪ್ರೇಮದಿಂದ, ನಿನ್ನ ದಾಕ್ಷಿಣ್ಯದಿಂದ ಆ ಯುದ್ಧದ ಹವ್ಯಾಸವನ್ನು ತೊರೆದು ಮೈಸೂರಿನ ರಾಜಕೀಯವನ್ನು ಮರೆತು ನಾನು ದೇಶತ್ಯಾಗ ಮಾಡಿ ಹೋಗು ವೆನು.

ದೌಲತ್—ಅದರಿಂದ ನನಗೆ ದೊರೆತ ಪುರಸ್ಕಾರವೇನು? ದೊಡ್ಡ ನವಾಬರ ಆಶಯವಾದರೂ ಫಲಿಸಿದಂತಾಯಿತೇನು?

ಇಯಜ್—ಇಲ್ಲ! ದೌಲತ್! ದೊಡ್ಡನವಾಬರ ಋಣವನ್ನು ತೀರಿಸುವುದು ಈ ಜನ್ಮದಲ್ಲಿ ನನ್ನ ಹಣೆಯ್ಗುಲ್ಲಿ ಬರೆದಿದೆಯೋ-ಇಲ್ಲವೋ ಅದು ದೇವರಿಗೇ ಗೊತ್ತು! ನಿನ್ನ ಪ್ರೀತಿಯ ಪುರಸ್ಕಾರವಾಗಿಯೇ ಈ ನಗರದ ರಾಜ್ಯತ್ಯಾಗ ಮಾಡಿದ್ದೇನೆ ಇನ್ನು ಒಂದು ಕ್ಷಣವೂ ಈ ಸಂದಿಗ್ಧಾವಸ್ಥೆಯನ್ನು ನಾನು ಸಹಿಸಲಾರೆ ನೀವು ನನ್ನನ್ನಾದರೂ ಮನಸಾರ ವರಿಸಬೇಕು. ಅಥವಾ ಸುಲ್ತಾನನನ್ನಾದರೂ.....

ಅರ್ಧೋಕ್ತಿಯಲ್ಲಿಯೇ ದೌಲತ್ತಳು ಒಂದು ತೋಳನ್ನು ಖಾನನ ಭುಜದ ಮೇಲೆ ಹಾಕಿ ಮತ್ತೊಂದು ಕೈಯ್ಯಿಂದ ಭದ್ರವಾಗಿ ಅವನ ಬಾಯಿ ಮುಚ್ಚಿದಳು. ಮುಂದೆ ಮಾತನಾಡಲು ಬಿಡಲಿಲ್ಲ ಖಾನನು ದೌಲತ್ತಳ ಬಂಧನದಿಂದ ಬಿಡಿಸಿಕೊಂಡು ಅವಳನ್ನು ಕೂರಿಸಿಕೊಂಡು ದೌಲತ್ತಳನ್ನು ಆಲಿಂಗಿಸಿಕೊಂಡು ಚುಂಬಿಸುತ್ತಾ "ದೌಲತ್! ಪ್ರೀತಿಗಿಂತಲೂ ರಾಜಕೀಯವು ಮಹತ್ತರವಾದುದಲ್ಲ ಪ್ರೀತಿಯು ಈ ಲೋಕದಲ್ಲಿಯೂ, ಅಲ್ಲಾವಿನ ಲೋಕದಲ್ಲಿಯೂ ಶಾಶ್ವತವಾದುದು ರಾಜಕೀಯವು ಕ್ಷಣಕ್ಷಣಕ್ಕೂ ಚಂಚಲವಾದುದು ಪ್ರಿಯೆ! ದೌಲತ್! ಬಹುಕಾಲದಿಂದ ಪರಿತಪಿಸುತ್ತಿರುವ ನನ್ನ ಹೃದಯವನ್ನು ನಿನ್ನ ಪ್ರೇಮಾಮೃತದಿಂದ ಸಂತೈಸು" ಎಂದು ಹೇಳಿದನು.

ದೌಲತ್ತಳು ಪ್ರೇಮಾತಿಶಯದಿಂದ ಖಾನನನ್ನು ಆಲಿಂಗಿಸಿ "ಪ್ರಾಣಪ್ರಿಯನಾದ ಖಾನನೇ, ನನ್ನ ಸರ್ವಸ್ವವನ್ನೂ ನಿನಗೆ ಅರ್ಪಣೆ ಮಾಡಿದ್ದೇನೆ ನಿನ್ನ ಪ್ರೇಮದಲ್ಲಿ ನನ್ನ ಸ್ಥಿರಸಂಕಲ್ಪವು ತೇಲಿಹೋಗಿದೆ ಆದರೆ ನಾನು ದೊಡ್ಡ ನವಾಬರಲ್ಲಿ ಮಾಡಿಕೊಟ್ಟ ಪ್ರತಿಜ್ಞೆಯು ಭಂಗವಾಯಿತಲ್ಲಾ! ಎಂಬುದನ್ನು ನೆನೆದರೆ ದುಃಖವಾಗುತ್ತದೆ. ಸಂಕೋಚವಾಗುತ್ತದೆ" ಎಂದಳು

ಅದಕ್ಕೆ ಉತ್ತರವಾಗಿ ಇಯಜ್‌ಖಾನನು "ಇಲ್ಲ! ದೌಲತ್ ನೀನೇಕೆ ಚಿಂತಿಸುವೆ! ನಿನ್ನ ಪ್ರತಿಜ್ಞೆಯನ್ನು ನಾನು ನೆರವೇರಿಸುತ್ತೇನೆ. ನಾನು ನನ್ನ ಪ್ರಾಣವಿರುವವರೆಗೂ ಈ ಮೈಸೂರುರಾಜ್ಯವನ್ನು ರಕ್ಷಿಸುತ್ತೇನೆ" ಎಂದು ಹೇಳಿದನು.

ಈ ಮಾತುಗಳನ್ನು ಕೇಳಿ ದೌಲತ್ತಳಿಗಾದ ಆನಂದಕ್ಕೆ ಪಾರವಿಲ್ಲ. ಅವಳು ದೊಡ್ಡನವಾಬರಲ್ಲಿ ಮಾಡಿದ ಶಪಥವು ಸಿದ್ಧಿಸಿತೆಂದೇ ಬಗೆದಳು ಖಾನನನ್ನು ಪುನಃ ಪುನಃ ಚುಂಬಿಸಿದಳು.

ಖಾನನ ಹತ್ತು ವರ್ಷಗಳ ತಪಸ್ಸು ಸಿದ್ಧಿಸಿತು. ಅವನು ತಾನು ಧನ್ಯನೆಂದು ಬಗೆದನು. ಇಷ್ಟೊಂದು ಸೈನ್ಯ ಸನ್ನಾಹದಿಂದ ಬಂದು ಯಾವುದು ಸುಲ್ತಾನನಿಗೆ ಲಭ್ಯವಾಗಲಿಲ್ಲವೊ ಅದು ಇಯಜ್‌ಖಾನನಿಗೆ ಲಬ್ಧವಾಗಿದೆ. ಇಂದು ಇಯಜ್‌ಖಾನನೂ,

ದೌಲತ್ತಳೂ ಗಾಂಧರ್ವ ವಿಧಿಯಿಂದ ವಿವಾಹಿತರಾಗಿದ್ದಾರೆ ಸಂಧ್ಯಾಕಾಲದಲ್ಲಿ ವಿರಕ್ತನಾಗಿ ದೇಶಾಂತರ ಗತನಾಗಬೇಕೆಂದು ಸಂಕಲ್ಪ ಮಾಡಿದ್ದ ಖಾನನು ಅದೇ ರಾತ್ರಿಯಲ್ಲಿ ವಿವಾಹಿತನಾಗಿ ಈ ಜಗತ್ತಿನಲ್ಲಿ ಸುಖಿಗಳಲ್ಲಿ ಸುಖಿಯಾಗಿದ್ದಾನೆ

ದೌಲತ್ತಳು ಆಮರಣಾಂತ ಬ್ರಹ್ಮಚಾರಿಣಿಯಾಗಿರುವುದಾಗಿ ಎಂದೂ ಸಂಕಲ್ಪಿಸಿರಲಿಲ್ಲ ಅವಳು ಬಾಲ್ಯದಲ್ಲಿ ಸುಲ್ತಾನನನ್ನು ಪ್ರೀತಿಯಿಂದ ಕಾಣುತ್ತಿದ್ದಳು. ಇಯಜ್‌ಖಾನನ ಸ್ನೇಹವಾದ ಮೇಲೆ ಈಜಗತ್ತಿನಲ್ಲಿ ಅವಳಿಗೆ ಅವನಿಗಿಂತಲೂ ಪ್ರೀತಿ ಪಾತ್ರರಾದವರು ಯಾರೂ ಇರಲಿಲ್ಲ ಯಾವುದೋ ಕಾರಣಗಳಿಂದ ಅವಳು ತನ್ನ ಮನಸ್ಸಿನ ಬಯಕೆಯನ್ನು ಈಡೇರಿಸಿಕೊಳ್ಳಲು ಅನುವಾಗಲಿಲ್ಲ. ಇಂದು ಯಾವುದೋ ಘಟನೆಗಳು ಬಂದು ಅವಳನ್ನು ಇಯಜ್‌ಖಾನನೊಡನೆ ಪ್ರೇಮ ಬಂಧನದಲ್ಲಿ ಬಂಧಿಸಿಬಿಟ್ಟಿತು ಇಂದು ಅವಳು ಸುಖಿ! ದೌಲತ್ ಮತ್ತು ಇಯಜ್‌ಖಾನರ ಈ ಸಮಾಗಮವು ನಾಟಕದಲ್ಲಿ ಎಲ್ಲಿಯೋ ನಾಯಕ, ನಾಯಕಿಯರು ಮೋಹಗೊಂಡು ಯಾವುದೋ ಸಂಘಟನೆಯಲ್ಲಿ ಸಂಭವಿಸುವಂಥಾ ಪ್ರಣಯ ಕಥೆಯಲ್ಲ. ದೌಲತ್ತಳು ಇಯಜ್‌ಖಾನನು ರಾಜ್ಯಪರಿತ್ಯಾಗ ಮಾಡಿದಂದೇ ಅವನನ್ನು ವಿವಾಹ ಮಾಡಿಕೊಳ್ಳುವುದಾಗಿ ನಿಶ್ಚಯಿಸಿದಳು. ಯುದ್ಧಭೂಮಿಯಿಂದ ಎಂದು ರಾಧಾರಾಣಿಯನ್ನೂ, ದೌಲತ್ತಳನ್ನೂ ರಕ್ಷಿಸಿ ಕರೆತಂದನೋ ಅಂದಿನ ರಾತ್ರಿಯೇ ಇಯಜ್‌ಖಾನನನ್ನು ವರಿಸಬೇಕೆಂದಿದ್ದಳು ರಾಧೆಗೆ ಯುದ್ಧಭೂಮಿಯಲ್ಲಿ ಪೆಟ್ಟು ಬಿದ್ದು ಅವಳು ಮರಣಾವಸ್ಥೆಯಲ್ಲಿದ್ದಾಳೆಂದು ಆ ಸಂಧಿಯು ತಪ್ಪಿಹೋಯಿತು ಇಂದು ಇಯಜ್‌ಖಾನನು ನಗರದ ರಾಜ್ಯವನ್ನು ಬಿಟ್ಟು ಹೊರಟು ಹೋಗುತ್ತಾನೆಂಬ ಸಮಾಚಾರವು ದೌಲತ್ತಳಿಗೂ ಹೀಗೆಯೇ ತಿಳಿದಿತ್ತು ಅದು ಇಯಜ್‌ಖಾನನಂಥಾ ವೀರಪುರುಷನಿಗೆ ತಕ್ಕುದೆಂದೇ ಭಾವಿಸಿದ್ದಳು ಖಾನನು ಮಲಬಾರಿನಲ್ಲಿ ಒಂದು ರಾಜ್ಯನಿರ್ಮಾಣ ಮಾಡುತ್ತಾನೆಂದರೆ ಅದು ಅವನಿಗೆ ಸುಲಭಸಾಧ್ಯವಾದುದೆಂದೇ ದೌಲತ್ತಳು ಬಗೆದಳು. ಇಂದು ತನ್ನ ಮನಸ್ಸನ್ನು ಬಿಚ್ಚಿ ಇಯಜ್‌ಖಾನನೊಡನೆ ಹೇಳಿಬಿಡಬೇಕೆಂದೇ ಅವನ ಬಿಡಾರಕ್ಕೆ ಬಂದಳು ಇಯಜ್‌ಖಾ ಮತ್ತು ದೌಲತ್ ಇವರ ಈ ಗಾಂಧರ್ವ ವಿವಾಹವು ಆಕಸ್ಮಿಕವಾದುದಲ್ಲ. ಅಘಟನ ಘಟನೆಗಳಿಂದ ಕೂಡಿದುದೂ ಅಲ್ಲ ! ಬಹುಕಾಲದ ಸಂಕಲ್ಪದ ಸಿದ್ಧಿಯು ಈ ರಾತ್ರಿಯ ಗಾಂಧರ್ವವಿವಾಹ!

ದೌಲತ್ತಳು ಈ ಸಂಕಲ್ಪಸಿದ್ಧಿಯ ಆನಂದದಲ್ಲಿ ಬಹುಕಾಲ ಮೈಮರೆತಳು. ಆ ರಾತ್ರಿಯೆಲ್ಲವನ್ನೂ ಅವರಿಬ್ಬರೂ ಮಾತನಾಡುತ್ತಲೇ ಕಳೆದರು. ಎಷ್ಟೋ ಮಾತನಾಡಿದರು. ಇಯಜ್‌ಖಾ ಆ ಮಂಟಪದಲ್ಲಿರುವ ಸ್ವರ್ಣನಿಧಿಯ ವಿಚಾರವನ್ನು ಮಾತನಾಡಿದನು. ದೌಲತ್ತಳು ಆ ಮಂದಿರದಿಂದ ಇಯಜ್‌ಖಾನನ ಅಪ್ಪಣೆ ಪಡೆದು ಹೊರಡುವಾಗ ಪ್ರೇಮೋನ್ಮತ್ತವಾದ ಕಣ್ಣುಗಳನ್ನು ಇಯಜ್‌ಖಾನನ ಕಡೆ ತಿರುಗಿಸಿ

ತನ್ನ ಉಭಯ ಬಾಹುಗಳಿಂದಲೂ ಇಯಜ್‌ಖಾನನ ಕಂಠವನ್ನು ಬಿಗಿದಪ್ಪಿ, "ಖಾನರವರೇ! ನೀವು ಈ ಬೆಳಕು ಹರಿಯುತ್ತಲೇ ಪ್ರಯಾಣಮಾಡುವುದು ನಿಜವೇ?" ಎಂದಳು.

ಇಯಜ್‌ಖಾನನು "ದೌಲತ್! ನಿಜ ನಾಳೇದಿನ ಪ್ರಾಥಃಕಾಲ ಈ ರಾಜ್ಯದಲ್ಲಿ ನನ್ನನ್ನು ಯಾರೂ ನೋಡುವುದಿಲ್ಲ" ಎಂದನು

ದೌಲತ್ತಳ ಕಣ್ಣುಗಳಲ್ಲಿ ನೀರು ತುಂಬಿತು ಮುಖದಲ್ಲಿ ಕೆಂಪೇರಿತು ಅಂಗಾಂಗಗಳು ಕಂಪಿಸಲಾರಂಭಿಸಿದುವು ಅವಳು ಇಯಜ್‌ಖಾನನನ್ನು ಚುಂಬಿಸಿ ತಲೆಯಲ್ಲಾಡಿಸಿದಳು ದೌಲತ್ತಳ ಶರೀರ, ಕಣ್ಣುಗಳು, ಮನಸ್ಸು ಎಲ್ಲವೂ ಬೇಡ! ಬೇಡ! ಎಂದು ವಿರೋಧಿಸುವಂತೆ ಭಾಸವಾಗುತ್ತಿತ್ತು ದೌಲತ್ತಳು ಚಿಕ್ಕ ಬಾಲಕಿಯಂತೆ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು

ಇಯಜ್‌ಖಾನನ ಮನಸ್ಸು ಬದಲಾಯಿಸಿತು ಈ ದೌಲತ್ತಳನ್ನು ಸಮಾಧಾನಪಡಿಸಿ ಒಪ್ಪಿಸದೇ ತಾನು ಇಲ್ಲಿಂದ ಹೊರಡಕೂಡದೆಂದು ಮನೋದೇವತೆಯು ಹೇಳಿತು.

ಖಾನನು ದೌಲತ್ತಳ ಬೆನ್ನು ತಡವಿ ಕಣ್ಣೀರೊರೆಸಿ ಗಲ್ಲವನ್ನು ಹಿಡಿದೆತ್ತಿ ಚುಂಬಿಸಿ "ಪ್ರಿಯೆ! ದೌಲತ್ ನಾನು ಇಂದು ಹೊರಡುವುದಿಲ್ಲ ಮತ್ತೊಂದು ದಿನ ಸರ್ವಲೋಕವೂ ತಿಳಿಯುವಂತೆ ಸಾರಿ ಹೇಳಿ ಈ ರಾಜ್ಯವನ್ನು ಬಿಡುವೆನು" ಎಂದು ಹೇಳಿದನು.

ದೌಲತ್ತಳು ನಕ್ಕಳು! ಖಾನನೂ ನಕ್ಕನು.

ದೌಲತ್ತಳು ಖಾನನ ಬಾಹು ಬಂಧನದಿಂದ ಬಿಡಿಸಿಕೊಂಡು ಇಯಜ್‌ಖಾನನ ಕಡೆಗೇ ಪ್ರಸನ್ನ ವದನದಿಂದ ನೋಡುತ್ತಾ ಮೆಲ್ಲಮೆಲ್ಲಗೆ ಹಿಂದಡಿಯಿಡುತ್ತಾ ಆ ಮಂಟಪವನ್ನು ಬಿಟ್ಟು ತನ್ನ ಗುಡಾರಕ್ಕೆ ತೆರಳಿದಳು

ರಾಧೆಯು ರಾತ್ರಿಯೆಲ್ಲಾ ಯೋಚನೆಯಲ್ಲಿ ಮಗ್ನಳಾಗಿದ್ದಳು ಇಯಜ್‌ಖಾನನು ದೇಶತ್ಯಾಗ ಮಾಡಿ ಹೊರಟು ಹೋಗುವುದು ನಿಶ್ಚಯ ಬಹುಶಃ ಈ ಸಮಾಚಾರವು ದೌಲತ್ತಳಿಗೆ ತಿಳಿದಿದೆಯೋ ಇಲ್ಲವೋ? ಇಯಜ್‌ಖಾನನು ನನಗೆ ತಿಳಿಸಿದ್ದು ನಾನು ದೌಲತ್ತಳಿಗೆ ಹೇಳದೇ ಇರುವುದು ತರವಲ್ಲ. ಖಾನನು ದೌಲತ್ತಳೊಡನೆ ತಿಳಿಸದೆ ಇರುವುದಕ್ಕೆ ಕಾರಣವೇನು? ಖಾನನಿಗೆ ದೌಲತ್ತಳ ಮೇಲೆ ಆಗ್ರಹವೇ? ಅಥವಾ ದೌಲತ್ತಳ ಮೇಲೆ ಅವನಿಗಿರುವ ಪ್ರೇಮಾತಿಶಯದಿಂದ ತಾನು ದೇಶತ್ಯಾಗ ಮಾಡುವುದು ದೌಲತ್ತಳಿಗೆ ತಿಳಿದರೆ ದುಃಖಿಯಾಗುವಳೆಂದು ಇಯಜ್‌ಖಾನನು ತಿಳಿಸದೆ ಇರಬಹುದೇ? ದೌಲತ್ತಳು ಪಾಮರಳಾದ ಚಿಕ್ಕ ಹುಡುಗಿಯೇನು? ರಾಜಕಾರಣಗಳಿಗಾಗಿ ಇಷ್ಟು ವಿರಹವನ್ನು ಸಹಿಸದಂಥಾ ವಿಲಾಸಿನಿಯೇ ದೌಲತ್ತಳು? ನಾನು ದೌಲತ್ತಳಿಗೆ ಎಲ್ಲಾ ವಿಚಾರವನ್ನೂ ತಿಳಿಸುತ್ತೇನೆ. ಪ್ರಾತಃಕಾಲ ದೌಲತ್ತಳಿಗೆ

ಇಯಜ್‌ಖಾನನ ವೃತ್ತಾಂತವನ್ನು ತಿಳಿಸಬೇಕೆಂದೂ, ತಾನೂ ಮತ್ತು ದೌಲತ್ತಳೂ ಇಯಜ್‌ಖಾನನ ದಾರಿಯನ್ನು ಕಾದು ಅವನನ್ನು ಹಿಂಬಾಲಿಸಿ ಒಂದೆರಡು ದಿನಗಳು ಖಾನನೊಡನೆ ಪ್ರಯಾಣ ಮಾಡಿ ಅವನನ್ನು ಸಾಗುಕಳುಹಿಸಿ ಬರಬೇಕೆಂದೂ ಸಂಕಲ್ಪ ಮಾಡಿದಳು ರಾಧೆಯು ಬೇಗ ಶಯನವನ್ನು ಬಿಟ್ಟೆದ್ದು, ಸ್ನಾನಮಾಡಿ ತಲೆಯನ್ನು ಗಂಟಿಕ್ಕಿ ಪ್ರಯಾಣಕ್ಕೆ ಅಣಿಯಾದ ಅಲಂಕಾರವನ್ನು ಮಾಡಿಕೊಂಡು ದೌಲತ್ತಳ ಬಿಡಾರಕ್ಕೆ ಹೋದಳು ಅಲ್ಲಿ ದೌಲತ್ತಳು ತನ್ನ ಶಯನದಲ್ಲಿ ಅಸ್ತವ್ಯಸ್ತವಾಗಿ ಮಲಗಿದ್ದಳು

ರಾಧೆಯು ಬಂದು ದೌಲತ್ತಳನ್ನು ಬೆನ್ನು ತಟ್ಟಿ ಎಬ್ಬಿಸಿದಳು "ಏಳು! ದೌಲತ್! ಪ್ರಯಾಣಕ್ಕೆ ಸಿದ್ಧಳಾಗು ನಾವಿಬ್ಬರೂ ಒಂದು ದೀರ್ಘವಾದ ಪ್ರಯಾಣ ಮಾಡಬೇಕಾಗಿದೆ" ಎಂದಳು

ದೌಲತ್—(ನಗುತ್ತಾ) ರಾಧಾರಾಣಿಯವರೇ! ನನ್ನನ್ನು ದೇಶಾಂತರ ಕೊಂಡು ಹೋಗಿ ಮುಚ್ಚಿಡುವಿರೇನು?

ರಾಧೆ—ಇಲ್ಲ! ಅಕ್ಕನವರೇ, ಪರಿಹಾಸ್ಯಮಾಡಬೇಡಿರಿ ಬೇಗ ಏಳಿರಿ. ಆ ಮೇಲೆ ಪರಿತಪಿಸಬೇಕಾದೀತು.

ದೌಲತ್—ಏಕೆ! ರಾಣಿಯವರೇ! ಸಮಾಚಾರವನ್ನು ನನಗೂ ತಿಳಿಸಬಾರದೇ? ನೀವು ನಿನ್ನೇ ರಾತ್ರಿ ಇಯಜ್‌ಖಾನರ ಬಿಡಾರಕ್ಕೆ ಹೋಗಿದ್ದಿರೆಂದು ಪರಿಚಾರಿಕೆಯರಿಂದ ತಿಳಿಯಿತು ನೀವು ಏನೋ ಗುಪ್ತಮಂತ್ರಾಲೋಚನೆ ಮಾಡಿರುವಂತಿದೆ.

ರಾಧೆ—ನೋಡಿ, ಅಕ್ಕನವರೇ! ನನ್ನ ದುರುಳತನವನ್ನು ಕ್ಷಮಿಸಿರಿ ಈ ಇಯಜ್‌ಖಾನನು ವೀರಪುರುಷ! ಇವನ ಸರ್ವನಾಶಕ್ಕೆ ನೀವು ಕಾರಣರು ಖಾನನು ನಿಮಗಾಗಿ ರಾಜ್ಯಪರಿತ್ಯಾಗಮಾಡಿದನು ರಾಜ್ಯಕೋಶಗಳನ್ನು ಬಿಟ್ಟಮೇಲೆ ಇಯಜ್‌ಖಾನನು ಈ ವನವಾಸ ಮಾಡುತ್ತಾ ಕಳ್ಳನಂತೆ ತಲೆ ಮರೆಸಿಕೊಂಡು ಇರಲಾದೀತೆ? ವೀರಪುರುಷನಂತೆ ಯುದ್ಧ ಮಾಡಬೇಕು ಸುಲ್ತಾನನೊಡನೆ ಯುದ್ಧವಾದರೇನು? ಯಾರೊಡನೆ ಯುದ್ಧವಾದರೇನು? ತಪ್ಪು ಸುಲ್ತಾನರದು! ನೀವು ದೊಡ್ಡ ನವಾಬರಲ್ಲಿ ಪ್ರತಿಜ್ಞೆಯನ್ನು ಮಾಡಿದ್ದರೆ, ಸುಲ್ತಾನನ ಸಮುಖಕ್ಕೆ ಹೋಗಿ ಅವನನ್ನು ಪ್ರಾರ್ಥಿಸಿ ನಗರಕ್ಕೆ ಬಾರದಂತೆ ತಡೆಯಬೇಕಾಗಿತ್ತು ಅದಕ್ಕೆ ಪ್ರತಿಯಾಗಿ ಇಯಜ್‌ಖಾನನ ಆ ತ್ಯಾಗಕ್ಕೆ ನೀವಿತ್ತ ಪುರಸ್ಕಾರವೇನು? ದೌಲತ್‌ರಾಣಿಯವರೇ! ಆ ಸುಲ್ತಾನನಲ್ಲಿ ಹೋಗಿ ಆತನನ್ನು ತಡೆಗಟ್ಟಲು ನಿಮಗೆ ಭಯ! ಆ ಸುಲ್ತಾನನು ನಿಮ್ಮ ಈ ಸ್ತ್ರೀರೂಪಕ್ಕೆ ಮರುಳಾಗಿರುವ ಪತಂಗ. ಅದಕ್ಕೆ ತಕ್ಕ ಹಾಗೆ ನೀವು ಭಯಪಡುತ್ತೀರಿ. ನಾನು ಹೆಣ್ಣಲ್ಲವೇನು? ನನಗೆ ಆ ಮೋಹಕರೂಪವಿಲ್ಲವೇನು? ನಾನು ಏಕಾಂಗಿಯಾಗಿ ನೂರು ಬಾರಿ ಸುಲ್ತಾನನ ಶಿಬಿರಕ್ಕೆ ಹೋಗಿ ಬರಬಲ್ಲೆ ನೀವೇಕೆ

ಹೆದರುತ್ತೀರಿ ? ಹೀಗೆ ಪುರುಷರ ಸಮೀಪಕ್ಕೆ ಹೋಗಲು ಅಂಜುವ ಹೆಂಗಸು ರಾಜ ಕೀಯಕ್ಕೆ, ಯುದ್ಧವಿಗ್ರಹಗಳಿಗೆ ಅರ್ಹರಲ್ಲ. ನೀವು ಯಾರನ್ನಾದರೂ ಮದುವೆ ಯಾಗಿ ಸಂಸಾರಿಯಾಗಿರಬಾರದೇ ?

ದೌಲತ್—ರಾಧಾರಾಣಿಯವರೇ ! ಇಂದು ಒಳ್ಳೇ ಸುಪ್ರಭಾತ, ಉದ್ರಿಕ್ತರಾಗಿ ಬಂದಿದ್ದೀರಿ. ನನ್ನನ್ನು ಸಂಸಾರಿಯಾಗುವಂತೆ ಪ್ರೇರೇಪಿಸುತ್ತಿದ್ದೀರಿ ನಡೆಯಿರಿ ಮಶೀದಿಗೆ ಹೋಗುವ ನಾನು ನಿಮ್ಮನ್ನೇ ಮದುವೆಯಾಗುತ್ತೇನೆ ಇಂದಿನಿಂದ ನಾನು ರಾಧಾರಾಣಿಯವರ ಧರ್ಮಪತ್ನಿ ಯಾವ ಪುರುಷನು ತಾನೇ ನಿಮ್ಮಷ್ಟು ಪರಾಕ್ರಮಶಾಲಿಯಾಗಿರುವನು ?

ರಾಧೆ—ದೌಲತ್! ನೀನು ಹುಚ್ಚಳಂತೆ ಮಾತನಾಡುತ್ತಿ ನನ್ನನ್ನೇಕೆ ಮದುವೆ ಯಾಗುವೆ ? ನಿನ್ನಲ್ಲಿ ಇಬ್ಬರು ಮಹಾಪುರುಷರು ಅನುರಕ್ತರಾಗಿದ್ದಾರೆ ಸುಲ್ತಾನ ರೊಬ್ಬರು ಈ ಖಾನರವರೊಬ್ಬರು ಯಾರಾದರೊಬ್ಬರನ್ನು ಸ್ವಯಂವರಮಾಡಿಕೊಂಡು ಸುಖವಾಗಿರಬಾರದೇ !

ದೌಲತ್—ರಾಧಾರಾಣಿಯವರೇ ! ನಾನೊಬ್ಬ ಪುರುಷನನ್ನು ವರಿಸಿ ಸಂಸಾರಿ ಯಾದರೆ ನೀವೇನು ಮಾಡುವಿರಿ ?

ರಾಧೆ - ನಾನು ವಿಂಧ್ಯಾಟವಿಗೆ ಹೋಗಿ ವಿಂಧ್ಯಾವಾಸಿನಿಯ ಆರಾಧನೆ ಮಾಡುತ್ತಾ ಈ ಜನ್ಮವನ್ನು ಸುಖವಾಗಿ ಕಳೆಯುವೆನು !

ದೌಲತ್—ರಾಧಾರಾಣಿಯವರೇ ! ಮತ್ತೊಂದು ಮಾತು ! ತಾವು ವಿವಾಹ ಮಾಡಿಕೊಳ್ಳಲು ಪ್ರತಿಬಂಧಕವೇನಿದೆ ?

ರಾಧೆ—ನನ್ನ ಜನ್ಮದಲ್ಲಿಯೇ ಪ್ರತಿಬಂಧಕವಿದೆ. ಜ್ಯೋತಿಷ್ಕರು ನನ್ನ ಜಾತಕ ವನ್ನು ಗುಣಿಸಿ ನಾನೊಬ್ಬ ಹಿಂದೂ ಸಾರ್ವಭೌಮನ ಪಟ್ಟಮಹಿಷಿಯಾಗಬೇಕು ಇಲ್ಲವೇ ಆಮರಣಾಂತ ಸನ್ಯಾಸಿನಿಯಾಗಿ ಮಹಾದೇವಿಯ ಆರಾಧಕಳಾಗಿ ಜನ್ಮ ಸಾರ್ಥಕ ಮಾಡಿಕೊಳ್ಳಬೇಕೆಂದು ಹೇಳಿರುವರು ವಿಜಯನಗರವು ಅಸ್ತವಾದಮೇಲೆ ಹಿಂದೂ ಸಾರ್ವಭೌಮನೆಲ್ಲಿ ಬರಬೇಕು ? ನಾನು ಸನ್ಯಾಸಿನಿಯಾಗುತ್ತೇನೆಂದು ಬಾಲ್ಯ ದಿಂದಲೂ ತಯಾರಾಗಿದ್ದೇನೆ ದೌಲತ್ ! ವೃಥಾ ಕಾಡುಹರಟೆಯಲ್ಲಿ ಕಾಲ ಕಳೆಯ ಬೇಡ. ಇಂದು ನಮಗೆ ಬಹಳ ಅವಗಡದ ದಿನ ಏಳು, ಸಿದ್ಧಳಾಗು, ಹೊರಡುವ !

ದೌಲತ್—ರಾಧಾರಾಣಿಯವರೇ ! ಇಂದು ಯಾವ ಮಹತ್ಕಾರ್ಯಕ್ಕೆ ಎಲ್ಲಿಗೆ ಪ್ರಯಾಣವೆಂಬುದನ್ನು ನನಗೆ ಹೇಳಕೂಡದೆ ?

ರಾಧೆ—ಹೇಳದೇ ಏನು ? ಹೇಳುವುದಕ್ಕಾಗಿಯೇ ಬಂದಿದ್ದೇನೆ. ಅದನ್ನು ಕೇಳಿ ಸಹಿಸುವ ಶಕ್ತಿಯು ನಿನಗೆ ಇದೆಯೆ ?

ದೌಲತ್—ಫಿರಂಗಿಯ ಬಾಯಿಗೆ ಎದೆಗೊಡುವ ಶಕ್ತಿಯು ನನಗಿದೆ! ಹೇಳಿರಿ.

ರಾಧೆ—ಈದಿನ ಸೂರ್ಯೋದಯವಾಗುವುದರೊಳಗಾಗಿ ಇಯಜ್‌ಖಾನನು ದೇಶತ್ಯಾಗ ಮಾಡುತ್ತಾನೆ ನಾವು ಅವನನ್ನು ಹಿಂಬಾಲಿಸಿ ಸ್ವಲ್ಪದೂರ ಸಾಗುಕಳಿಸಿ ಬರಬೇಕು

ದೌಲತ್—ಓಹೋ! ಇಯಜ್‌ಖಾನರು ದೇಶತ್ಯಾಗ ಮಾಡುವುದನ್ನು ತಾವು ಒಪ್ಪಿದ್ದೀರೇನು?

ರಾಧೆ—ಹೌದು, ಒಪ್ಪಿದ್ದೇನೆ ಖಾನನು ರಾಜ್ಯತ್ಯಾಗ ಮಾಡಿದ್ದಾನೆ ಇಲ್ಲಿ ಕಳ್ಳನಂತೆ ತಲೆ ಮರೆಸಿಕೊಂಡು ಇರಕೂಡದು ಖಾನನು ವೀರಪುರುಷನಂತೆ ಈ ನಗರ ವನ್ನು ಪುನಃ ಆಕ್ರಮಣ ಮಾಡಬೇಕು ಆದಕ್ಕೆ ನೀನು ಅಡ್ಡಿ ನಿನಗಾಗಿ ಖಾನನು ರಾಜ್ಯತ್ಯಾಗಮಾಡಿದನು ಅದಕ್ಕೆ ನೀನು ಇಯಜ್‌ಖಾನನಿಗೆ ಕೊಟ್ಟ ಪುರಸ್ಕಾರ ವೇನು?

ದೌಲತ್—ರಾಧಾರಾಣಿಯವರೇ! ಖಾನನಿಗೆ ನಾನೇನು ಪುರಸ್ಕಾರ ಕೊಡ ಬಲ್ಲೆ!

ರಾಧೆ—ದೌಲತ್! ನೀನು ಪುರಸ್ಕಾರ ಕೊಡಬಲ್ಲೆ! ನೀನು ಖಾನನನ್ನು ಪ್ರೇಮ ಮಾಡುತ್ತಿ ಅವನನ್ನು ಸುಖಿಯಾಗಿ ಮಾಡಬಲ್ಲೆ ನೀನು ಖಾನನನ್ನು ಮದುವೆ ಯಾದರೆ ಅವನು ಸುಖಿಯಾಗುತ್ತಾನೆ

ದೌಲತ್—ರಾಧಾ! ನಾನು ಇಯಜ್‌ಖಾನನನ್ನು ಮದುವೆಯಾಗಲೊಪ್ಪಿದರೆ ಇಯಜ್‌ಖಾನನ ಈ ದೇಶತ್ಯಾಗ ಸಂಕಲ್ಪವನ್ನು ನೀನು ತಪ್ಪಿಸಬಲ್ಲೆಯಾ!

ರಾಧೆ—ಇಲ್ಲ! ಎಂದಿಗೂ ಆಗಲಾರದು! ನಾನು ಅಭಿಸಾರಿಕೆಯಂತೆ ಖಾನನಿಗೆ ನಿನ್ನನ್ನೊಪ್ಪಿಸಿ, ಅವನ ದೇಶತ್ಯಾಗ ಸಂಕಲ್ಪವನ್ನು ಮುರಿಯಲಾರೆ!

ದೌಲತ್—ಹಾಗಾದರೆ ಈಗೇನು ಮಾಡಬೇಕು?

ರಾಧೆ—ನೀನು ಖಾನನ ಸಮ್ಮುಖಕ್ಕೆ ಹೋಗಿ, ನಿನ್ನ ಅಪರಾಧಕ್ಕೆ ಕ್ಷಮಾಪಣೆ ಕೇಳಿಕೊಂಡು, ನೀನು ಖಾನನನ್ನು ವರಿಸುವುದಾಗಿ ವಚನವಿತ್ತು ಅವನನ್ನು ದೇಶ ತ್ಯಾಗ ಸಂಕಲ್ಪದಿಂದ ವಿಮುಖನನ್ನಾಗಿ ಮಾಡಬಹುದು ಇನ್ನೂ ಅವಕಾಶವಿದೆ ಮೀರಿಹೋಗಿಲ್ಲ.

ದೌಲತ್—ಅದು ನಿನ್ನ ಮನಸ್ಸಿಗೆ ಸಮಾಧಾನವನ್ನುಂಟುಮಾಡುವುದೇನು?

ರಾಧೆ—ಹೌದು! ದೌಲತ್‌ರಾಣಿಯವರೇ ಹೌದು ಅದರಿಂದ ನನಗಾಗುವಷ್ಟು ಆನಂದವು ಮತ್ತಾರಿಗೂ ಆಗದು. ನಿನಗೆ ಅಂತಹ ಧೈರ್ಯವಿದೆಯೇ?

ದೌಲತ್ತಳು ನಗುತ್ತಾ ಎದ್ದಳು ರಾಧೆಯ ಎರಡು ಕೈಗಳನ್ನೂ ಹಿಡಿದು ಅವಳನ್ನು ಎಳೆದು ತಬ್ಬಿಕೊಂಡಳು. ದೌಲತ್ತಳು ರಾಧಾರಾಣಿಯ ಕೆನ್ನೆಗಳನ್ನು

ಮುತ್ತಿಡುತ್ತಾ "ರಾಧಾರಾಣಿ! ಇಯಜ್‌ಖಾನನು ದೇಶತ್ಯಾಗ ಮಾಡುವುದಿಲ್ಲ. ನಾನು ಅವನಿಗೆ ವಾಂಛಿತ ಪುರಸ್ಕಾರವನ್ನು ಕೊಟ್ಟಿದ್ದೇನೆ. ನಿನ್ನ ಈ ಪ್ರಿಯ ದೌಲತ್ತಳು ಇಯಜ್‌ಖಾನನ ಧರ್ಮಪತ್ನಿ"ಎಂದಳು

ರಾಧೆಯು ಸಂತೋಷದಲ್ಲಿ ಮುಳುಗಿದಳು. ಒಂದೇ ಕ್ಷಣದಲ್ಲಿ ಅವಳು ಎಲ್ಲ ವನ್ನೂ ಅರ್ಥಮಾಡಿಕೊಂಡಳು ಎಲ್ಲವೂ ಸರಿಯಾಗಿದೆ ಎಂದುಕೊಂಡಳು ರಾಧಾ ರಾಣಿಯು "ದೌಲತ್‌ರಾಣಿಯವರೇ! ಈ ಕೆಲಸವನ್ನು ಕೆಲವು ದಿನಗಳ ಮುಂಚೆಯೇ ನೀವು ಮಾಡಿದ್ದರೆ ಇಷ್ಟು ಅನಾಹುತಗಳಿಗೆ ಕಾರಣವೇ ಆಗುತ್ತಿರಲಿಲ್ಲ! ಸುಲ್ತಾನನು ದಂಡೆತ್ತಿ ನಗರಕ್ಕೆ ಬರುತ್ತಲೇ ಇರಲಿಲ್ಲ. ಇಯಜ್‌ಖಾನರ ರಾಜ್ಯತ್ಯಾಗ ಪ್ರಕರಣವು ಸಂಭವಿಸುತ್ತಲೇ ಇರಲಿಲ್ಲ"ಎಂದಳು.

ದೌಲತ್ತಳು "ಅದೆಲ್ಲ ನಡೆದುಹೋದ ಕಥೆ! ಇಂದು ದೌಲತ್ತಳು ಇಯಜ್ ಖಾನರ ಮಹಾರಾಣಿ"ಎಂದುತ್ತರವಿತ್ತಳು.

ರಾಧೆಯೂ, ದೌಲತ್ತಳೂ ದರಿಯಾಬಾಗಿಗೆ ಆ ದಿನ ಹೊರಡಲೂ ಇಲ್ಲ! ಇಯಜ್‌ಖಾನನು ದೇಶತ್ಯಾಗಮಾಡಲೂ ಇಲ್ಲ ಶಿಬಿರವನ್ನು ಅಲ್ಲಿಂದ ಎತ್ತಲೂ ಇಲ್ಲ!

ಆ ಶಿಬಿರವು ರಾಜಧಾನಿಯ ಕಳೆಯಿಂದ ವಿರಾಜಿಸುತ್ತಿತ್ತು! ವಸಂತಗ್ರೀಷ್ಮ ಋತುಗಳು ಕಳೆಯುತ್ತ ಬಂದವು ಇಯಜ್‌ಖಾನನು ಒಂದು ದಿನವೂ ಅಜಾಗ ರೂಕತೆಯಿಂದ ಕಳೆಯಲಿಲ್ಲ! ಅನೇಕ ಮಂದಿ ರಾಜಕಾರಣಿಗಳು ಬಂದು ಖಾನನನ್ನು ಭೇಟಿ ಮಾಡಿ ಹೋಗುತ್ತಿದ್ದರು ಅಲ್ಲಿ ಅನೇಕ ರಾಜಕೀಯಗಳು ನಡೆಯುತ್ತಿದ್ದವು. ಪ್ರತಿಯೊಂದು ವಿಚಾರವನ್ನೂ ಇಯಜ್‌ಖಾನನು ರಾಧಾ ವ ತ್ತು ದೌಲತ್ತರೊಡನೆ ಸಮಾಲೋಚನೆ ನಡೆಸುತ್ತಿದ್ದನು ಈ ಮಧ್ಯೆ ಎರಡು ಮೂರು ಬಾರಿ ಖಾನನು ಅದೃಶ್ಯನಾಗಿ ಎಲ್ಲಿಗೋ ಹೋಗಿಬಂದನು ಒಂದೊಂದು ಪ್ರವಾಸದಲ್ಲಿಯೂ ಹುಸೇ್ ಖಾನನು ಇಯಜ್‌ಖಾನನ ಜೊತೆಯಲ್ಲಿ ಹೋಗಿಬರುತ್ತಿದ್ದನು

ನಗರದ ದಿವಾನರಾಗಿದ್ದ ಜನಾಲುದ್ದೀನರಿಗೆ ಈ ಚಲನವಲನಗಳೆಲ್ಲಾ ಗುಪ್ತ ಚಾರರಿಂದ ತಿಳಿಯುತ್ತಿತ್ತು. ಯಾವುದೂ ಸ್ಪಷ್ಟವಾಗಿ ಗೊತ್ತಾಗುತ್ತಿರಲಿಲ್ಲ. ಅವರು ಏನೇನೋ ಊಹಾಪೋಹಗಳನ್ನು ಕಟ್ಟಿಕೊಳ್ಳುತ್ತಿದ್ದರು ಮುಖ್ಯವಾದ ಸಂಗತಿಗಳ ನ್ನೆಲ್ಲಾ ಸುಲ್ತಾನರ ಹುಜೂರಿಗೆ ಅರಿಕೆ ಮಾಡುತ್ತಿದ್ದರು ನಗರದ ಸೀಮೆಯು ಶಾಂತ ವಾಗಿದೆಯೆಂದೂ, ಮಂಗಳೂರು ಪೂರ್ಣ ಸ್ವಾಧೀನವಾಗಿಯೇ ಇದೆಯೆಂದೂ ದಿವಾನರು ಹುಜೂರಿಗೆ ವರದಿ ಮಾಡಿದ್ದರು ಟಿಪ್ಪೂಸುಲ್ತಾನರಿಂದ ಯಾವ ಉತ್ತರ ಗಳೂ ಬರುತ್ತಿರಲಿಲ್ಲ! ಅದರಿಂದ ದಿವಾನರವರು ವ್ಯಗ್ರರಾಗಲಿಲ್ಲ. ಏತಕ್ಕೆಂದರೆ ಸುಲ್ತಾನರಿಗೆ ದಿವಾನರಲ್ಲಿ ಬಹಳ ಗೌರವವಿದೆಯೆಂದೂ, ಪೂರ್ಣ ಭರವಸೆ ಇದೆ ಯೆಂದೂ ಪ್ರಪಂಚಕ್ಕೆ ತಿಳಿದಿತ್ತು!

*

# ಸುಲ್ತಾನರ ಶಿಬಿರದಲ್ಲಿ ರಾಧಾರಾಣಿ

ಸುಲ್ತಾನರವರು ಚಿತ್ರದುರ್ಗದಲ್ಲಿಯೇ ಬಿಡದಿ ಬಿಟ್ಟಿದ್ದರು ಸುಲ್ತಾನರ ಈ ಚಿತ್ರದುರ್ಗದ ವಾಸವು ಪೂರ್ತಿಯಾಗಿ ಒಂದು ವರ್ಷ ಚಿತ್ರದುರ್ಗದ ಈ ದೀರ್ಘ ವಾಸಕ್ಕೆ ಚರಿತ್ರೆಕಾರರು ಕಾರಣ ಕೊಟ್ಟಿಲ್ಲ ಬಹುಶಃ ಉತ್ತರದ ಕಡೆ ಮರಾಠರ ವಿರೋಧವು ಹೆಚ್ಚಾಗಿತ್ತು ಪೆಂಡಾರಿಯವರು ಸೈನ್ಯವನ್ನು ಕಟ್ಟಿಕೊಂಡು ಬಂದು ಮೈಸೂರಿನ ಅನೇಕ ಕಡೆ ಕೊಳ್ಳೆ ಹೊಡೆಯುತ್ತಿದ್ದರು ಇದನ್ನೆಲ್ಲಾ ತಡೆಗಟ್ಟಲು ಚಿತ್ರದುರ್ಗವು ಆಯಕಟ್ಟಾದ ಸ್ಥಾನವೆಂದು ಸುಲ್ತಾನನು ಬಗೆದಿರಬಹುದು ರಾಜಧಾನಿಯಾದ ಶ್ರೀರಂಗಪಟ್ಟಣವು ಭದ್ರವಾಗಿತ್ತು ಅಲ್ಲಿಂದ ಪ್ರತಿದಿನವೂ ಸಮಾಚಾರಗಳು ಬರುತ್ತಿದ್ದವು ಮಂತ್ರಿ ಪೂರ್ಣಯ್ಯನವರು ದಕ್ಷತೆಯಿಂದ ರಾಜ್ಯಭಾರವನ್ನು ನಡೆಸುತ್ತಿದ್ದರು ಶ್ರೀರಂಗಪಟ್ಟಣದಲ್ಲಿ ಒಂದು ಕಡೆ ಪಿತೂರಿಯೂ ನಡೆಯುತ್ತಿತ್ತು ಅದು ಸುಲ್ತಾನರವರಿಗೂ ಗೊತ್ತು ಮಂತ್ರಿ ಪೂರ್ಣಯ್ಯನವರು ಅದನ್ನು ಬಹಳ ಎಚ್ಚರಿಕೆಯಿಂದ ನಿವಾರಿಸುತ್ತಿದ್ದರು ಶ್ರೀರಂಗಪಟ್ಟಣದಲ್ಲಿ ಭಯವೇನೂ ಇಲ್ಲ ನಗರದಲ್ಲಿಯೂ ಕ್ಷೋಭೆಯಿಲ್ಲ. ಇಯಜ್ ಖಾನನು ಪರಾಕ್ರಮಶಾಲಿಯಾದರೂ ನಗರವನ್ನು ಸುಲ್ತಾನರಿಗೆ ಒಪ್ಪಿಸಿದನು ನಗರದ ಪ್ರಕರಣವೆಲ್ಲಾ ಪೂರೈಸಿ ಜನಾಲುದ್ದೀನರನ್ನು ದಿವಾನರಾಗಿ ನೇಮಿಸಿದ ಮೇಲೆ ಖಾನನು ನಗರದ ರಾಜಕೀಯದಲ್ಲಿ ಪ್ರವೇಶಿಸಲಿಲ್ಲ ಇದು ಸುಲ್ತಾನರಿಗೆ ಆಶ್ಚರ್ಯವನ್ನುಂಟುಮಾಡಿತ್ತು ದೌಲತ್ತಳ ಚಿಂತೆಯು ಸುಲ್ತಾನರನ್ನು ಬಿಟ್ಟಿರಲಿಲ್ಲ ಆದರೆ ದೌಲತ್ತಳಿಗಾಗಿ ಮೋಹಗೊಂಡು ಸರ್ವದಾ ಅವಳ ಚಿಂತೆಯಲ್ಲಿ ಮಗ್ನನಾಗಿ ಮೈಸೂರಿನ ಮಹಾರಾಜ್ಯಭಾರವನ್ನು ದುರ್ಲಕ್ಷ್ಯ ಮಾಡುವಂಥಾ ಅಲ್ಪ ವ್ಯಕ್ತಿಯಲ್ಲ ಟಿಪ್ಪೂಸುಲ್ತಾನ್ ದೌಲತ್ತಳನ್ನು ಬಲಾತ್ಕರಿಸಿ ತನ್ನ ಅಂತಃಪುರಕ್ಕೆ ಕರೆತರಬೇಕೆಂಬ ಕಲ್ಪನೆಯು ಸುಲ್ತಾನನಿಗೆ ಇರಲಿಲ್ಲ ದೌಲತ್ತಳು ತನ್ನನ್ನು ಒಲಿದು ವರಿಸಿದರೆ ತನಗೆ ತಕ್ಕ ರಾಣಿ ಎಂಬ ಆಶೆ ಇತ್ತು ಸುಲ್ತಾನನಿಗೆ

ಮಹಾರಾಷ್ಟ್ರರ ಸೊಕ್ಕು ಮುರಿದು ಮೂಲೆಯಲ್ಲಿ ಕೂರಿಸಬೇಕೆಂದು ಟಿಪ್ಪೂ ಸುಲ್ತಾನನಿಗೆ ಹಠವಿತ್ತು ಸುಲ್ತಾನನು ಯುದ್ಧವಿದ್ಯಾನಿಪುಣ ಸೈನ್ಯವನ್ನೆಲಾ ಬಹಳ ಶಿಸ್ತಿನಿಂದ ವ್ಯವಸ್ಥೆ ಮಾಡಿದ್ದನು ಆಯಾ ಕಾಲದಲ್ಲಿ ಇಂಗ್ಲೀಷರು, ಫ್ರೆಂಚರು, ಪೋರ್ಚುಗೀಸರು ಇವರ ದಂಡಿನ ವ್ಯವಸ್ಥೆಗ ಸರಿಸಮವಾಗಿತ್ತು ಟಿಪ್ಪೂಸುಲ್ತಾನನ ಸೈನ್ಯ ವ್ಯವಸ್ಥೆ ಈ ಸೈನ್ಯ ರಚನಾನೈಪುಣ್ಯವನ್ನು ನೋಡಿ ಮಿತ್ರರೂ, ಶತ್ರುಗಳೂ ತಲೆದೂಗುತ್ತಿದ್ದರು ಇದಕ್ಕೆಲ್ಲಾ ಬಹಳ ಹಣ ಬೇಕಾಗಿತ್ತು ದೊಡ್ಡ ನವಾಬರು ನಗರದಲ್ಲಿ ಸ್ವರ್ಣನಿಧಿಯನ್ನು ಹುಗಿದಿಟ್ಟಿದ್ದಾರೆಂದು ಟಿಪ್ಪೂಸುಲ್ತಾನನಿಗೆ ತಿಳಿದಿತ್ತು. ಹೈದರಲ್ಲೀಖಾನರವರು ದೈವಾಧೀನರಾಗುವಾಗ ಸುಲ್ತಾನನು ಸಮೀಪದಲ್ಲಿರಲಿಲ್ಲ. ಆದ್ದ

ರಿಂದ ಆ ನಿಧಿಯು ಎಲ್ಲಿದೆಯೋ ಸುಲ್ತಾನನಿಗೆ ಗೊತ್ತಿಲ್ಲ ಆದರೆ ಆ ಗುಟ್ಟು ಇಯಜ್ ಖಾನನಿಗೆ ತಿಳಿದೇ ಇರಬೇಕೆಂದು ಸುಲ್ತಾನನು ಗುಣಾಕಾರ ಹಾಕಿದ್ದನು.

ದೌಲತ್ತಳೂ, ರಾಧಾರಾಣಿಯೂ ಆ ಅಂತರಂಗವನ್ನು ಬಲ್ಲರೆಂದು ಸುಲ್ತಾನನ ನಿಶ್ಚಯ. ಅವರೇಕೆ ಆ ನಿಧಿಯನ್ನು ತನಗೊಪ್ಪಿಸುವುದಿಲ್ಲ ಎಂದು ಆಲೋಚಿಸುತ್ತಾನೆ ಇದರ ಶೋಧನೆಗಾಗಿಯೇ ಸುಲ್ತಾನನು ಚಿತ್ರದುರ್ಗದಲ್ಲಿ ಬಿಡಾರ ಮಾಡಿದ್ದನೇ ? ಇದ್ದರೂ ಇರಬಹುದು ಆದರೆ ಆ ಕಾಲದ ರಾಜಕೀಯದವರೆಲ್ಲಾ ಇಯಜ್‌ಖಾನ ರೊಡನೆ ಸ್ನೇಹ ಮಾಡಿಕೊಳ್ಳುವುದಕ್ಕಾಗಿಯೇ ಸುಲ್ತಾನರು ಚಿತ್ರದುರ್ಗದಲ್ಲಿ ಬಿಡಾರ ಬಿಟ್ಟಿದ್ದಾರೆಂದು ಮಾತನಾಡಿಕೊಳ್ಳುತ್ತಿದ್ದರು. ಇದಕ್ಕೆ ಆಧಾರವಿಲ್ಲದೇ ಇರಲಿಲ್ಲ. ಸುಲ್ತಾನರ ಮಹಾಮಾತ್ಯ ಶ್ರೀಯವರೂ, ಮಂತ್ರಿ ಪೂರ್ಣಯ್ಯನವರೂ ನಗರದ ಮೇಲೆ ದಂಡೆತ್ತಿ ಹೋದುದು ಉಚಿತವಲ್ಲವೆಂದೂ, ಇಯಜ್‌ಖಾನನನ್ನು ರಾಜ್ಯಭ್ರಷ್ಟ ನನ್ನಾಗಿ ಮಾಡಿದ್ದು ಸರ್ವಥಾ ಕ್ಷೇಮಕರವಾದುದಲ್ಲವೆಂದೂ ಸುಲ್ತಾನರಿಗೆ ಪತ್ರ ಬರೆದಿದ್ದಾರೆಂಬುದನ್ನು ದೊಡ್ಡ ದೊಡ್ಡ ಸರದಾರರೇ ಮಾತನಾಡಿಕೊಳ್ಳುತ್ತಿದ್ದರು ಟಿಪ್ಪೂ ಸುಲ್ತಾನರಿಗೂ, ಇಯಜ್‌ಖಾನರಿಗೂ ಸಣ್ಣ ಸಣ್ಣ ಯುದ್ಧಗಳಾಗಿ ಸುಲ್ತಾನರಿಗೆ ಪರಾಭವವೇ ಆಗಿದ್ದಾಗ್ಯೂ ಖಾನರು ನಗರದ ಗೋಜಿಗೆ ಹೋಗಿಲ್ಲ ಖಾನರು ನಗರದ ಪ್ರಾಂತ್ಯದಲ್ಲಿಯೇ ಇದ್ದಾರೆಂದು ಸಮಾಚಾರವು ಖಚಿತವಾಗಿ ಬಂದಿದ್ದರೂ ಸುಲ್ತಾನರು ಅವರನ್ನು ಹಿಡಿಯಲು ಯಾವ ಕಾರಖದ್ದನ್ನೂ ನಡೆಸಿಲ್ಲ ಇದೆಲ್ಲಾ ಈ ಸಂಧಿಯ ಊಹಾಪೋಹಗಳಿಗೆ ಪೋಷಕವಾಗಿದ್ದುವು. ಆದರೆ ಸಂಧಿ ಪ್ರಯತ್ನಗಳೇನೂ ನಡೆಯುತ್ತಿರಲಿಲ್ಲ ಇದು ಎಲ್ಲರಿಗೂ ಆಶ್ಚರ್ಯವೇ ಸರಿ

ಚಿತ್ರದುರ್ಗದಲ್ಲಿ ಟಿಪ್ಪೂಸುಲ್ತಾನರ ಶಿಬಿರವು ಬಹಳ ವಿಸ್ತಾರವಾದುದು ಕೋಟೆಯ ಕೆಳಭಾಗದಲ್ಲಿ ಮೂರು ಮೈಲಿ ವಿಸ್ತೀರ್ಣದಲ್ಲಿ ಶಿಬಿರವನ್ನು ರಚಿಸಿದ್ದಾರೆ ಮೈಸೂರಿನ ರಾಜ್ಯಭಾರವೇ ಈ ಶಿಬಿರದಲ್ಲಿ ನಡೆಯುತ್ತಿದೆ. ಹೊರಗಿನ ಸುತ್ತಿನಲ್ಲೆಲ್ಲಾ ಸೈನ್ಯ. ಈ ಸೇನಾನಾಯಕರುಗಳು, ಸೈನ್ಯಾಧಿಕಾರಿಗಳು, ಹವಾಲ್‌ದಾರರು, ತಳವಾರರು ಎಲ್ಲರಿಗೂ ಅವರವರ ಅಂತಸ್ತಿಗೆ ತಕ್ಕ ಗುಡಾರಗಳು ನಿರ್ಮಾಣವಾಗಿವೆ. ಈ ಮಧ್ಯಭಾಗದಲ್ಲಿ ಸುಲ್ತಾನರವರ ಖಾಸಭವನವು ಪ್ರಶಸ್ತವಾಗಿ ನಿರ್ಮಿತವಾಗಿದೆ. ಕಛೇರಿ, ಕೊತ್ವಾಲಿ, ದರ್ಬಾರಿ ಕೆಲಸಗಳೆಲ್ಲಾ ಅಲ್ಲಿಯೇ ನಡೆಸಲ್ಪಡುತ್ತವೆ ಸುಲ್ತಾನರವರ ವಾಸಸ್ಥಾನವು ಮಾತ್ರ ಈ ಶಿಬಿರದಲ್ಲಿಲ್ಲ ಕೋಟೆಯ ಪೂರ್ವಭಾಗದಲ್ಲಿ ಎತ್ತರವಾದ ಸ್ಥಳದಲ್ಲಿ ರಾಜಯೋಗ್ಯವಾದ ಬಿಡಾರ ಒಂದು ಆಧ್ಯತೆಯಿಂದ ಮೆರೆಯುತ್ತಿದೆ ಸುಲ್ತಾನರವರು ಅಲ್ಲಿ ವಾಸಮಾಡುತ್ತಾರೆ ಆ ಬಿಡಾರದ ಸುತ್ತು ಮುತ್ತಲೂ ಅಚ್ಚು ಕಟ್ಟಾದ ಅಂದವಾಗಿ ಕಂಗೊಳಿಸುವ ಕೆಲವು ಸಣ್ಣ ಸಣ್ಣ ಗುಡಾರಗಳಿವೆ. ಸುಲ್ತಾನರ

ಆಪ್ತರಾದ ಗೂಢಚಾರರೂ, ಮುಖ್ಯರಾದ ಕೆಲವು ರಾಯಸದವರೂ ಅಲ್ಲಿ ವಾಸಮಾಡುತ್ತಾರೆ. ಎಲ್ಲ ಕಡೆಯೂ ಪಹರೆ ಕೊತ್ವಾಲಿಗಳೂ ಬಹಳ ಹುಷಾರಿನಿಂದ ಕಾಯುತ್ತಿದ್ದಾರೆ

ಚಿತ್ರದುರ್ಗದ ಪೇಟೆಯು ಈ ದರ್ಬಾರೀ ಜನಗಳಿಂದಲೂ, ಸೈನಿಕರಿಂದಲೂ ನಿಬಿಡವಾಗಿ ಕಳಕಳಿಸುತ್ತದೆ ಜವಾಹಿರಿಯ ಅಂಗಡಿಗಳು, ರೇಶಿಮೆ ಬಟ್ಟೆಯ ಅಂಗಡಿಗಳೂ, ಜರತಾರೆಯ ಅಂಗಡಿಗಳೂ ಪೇಟೆಯಲ್ಲಿ ಕಳಕಳಿಸುತ್ತಿವೆ ನಾನಾವಿಧವಾದ ಭಕ್ಷ್ಯಗಳನ್ನು ತಯಾರಿಸಿ ಮಿಠಾಯಿ ಅಂಗಡಿಗಳನ್ನು ಸುಂದರವಾಗಿಟ್ಟಿದ್ದಾರೆ. ಪಾನೀಯದ ಅಂಗಡಿಗಳಂತೂ ಲೆಕ್ಕವಿಲ್ಲದಷ್ಟಿವೆ ನಗರದಲ್ಲೆಲ್ಲಾ ಅನೇಕ ತೋಷಕ್ ಖಾನೆಗಳನ್ನೂ ನಿರ್ಮಾಣ ಮಾಡಿದ್ದಾರೆ ಕೆಲವು ತೋಷಕ್ ಖಾನೆಗಳೂ, ನರ್ತನ ಶಾಲೆಗಳೂ, ಕೆಲವು ಗಾನಮಂದಿರಗಳೂ, ಕೆಲವು ಜೂಜುಕಟ್ಟೆಗಳೂ, ಕೆಲವು ಪಾನ ಶಾಲೆಗಳೂ, ಇವೆಲ್ಲಾ ತೋಷಕ್ ಖಾನೆಗಳಲ್ಲಿಯೂ ನರ್ತಕಿಯರು, ಗಾಯಕಿಯರು ತುಂಬಿದಾರೆ ಸಿಕ್ಕಿದಷ್ಟು ಹಣವನ್ನು ಸೆಳೆಯುತ್ತಾರೆ ಅನೇಕ ಸರದಾರರೂ ಅವರುಗಳಿಗೆ ಜವಾಹಿರಿಗಳನ್ನು ಕೊಂಡು ಕೊಡುತ್ತಾರೆ ರೇಶಿಮೆಯ ಪತ್ತಲಗಳನ್ನೂ, ಜರತಾರಿಯ ಮೇಲುದುಗಳನ್ನು ಬಹುಮಾನವಾಗಿ ಕೊಂಡು ಕೊಡುತ್ತಿದ್ದಾರೆ ಇದೊಂದು ಕುಶಾಲಿನ ಸಂತೆಯೆಂದು ಹೇಳಬಹುದು. ಎಷ್ಟೋ ಮಂದಿ ಭಿಕ್ಷುಕರು, ಜೋಯಿಸರು, ಶಾಸ್ತ್ರಿಗಳು, ಫಕೀರರು, ಗೋಸಾಯಿಗಳು ತಮ್ಮ ತಮ್ಮ ದಿವ್ಯ ಜ್ಞಾನಗಳನ್ನೂ, ತಾವು ಎಸಗಿದ ಪವಾಡಗಳನ್ನೂ ತಾವೇ ಹೇಳಿಕೊಂಡು ಫೌಜುದಾರರನ್ನೂ, ಸರದಾರರನ್ನೂ ಮರುಳುಗೊಳಿಸಿ ಬಹುಮಾನಗಳನ್ನು ಹೊಂದುತ್ತಿದ್ದಾರೆ ಇಂದ್ರಜಾಲಕರೂ, ದೊಂಬರಾಟದವರೂ ತಮ್ಮ ತಮ್ಮ ಅದ್ಭುತಕಾರ್ಯಗಳನ್ನು ತೋರಿ ದುಡ್ಡು ದುಗ್ಗಾಣಿಗಳನ್ನು ಬೇಡುತ್ತಿದ್ದಾರೆ

ಗ್ರೀಷ್ಮಋತುವಿನ ಸಂಧ್ಯಾಕಾಲ ಸಮಯದಲ್ಲಿ ತೇಜಃಪುಂಜನಾದ ಮಹಾನುಭಾವನೊಬ್ಬನು ಈ ಪೇಟೆಯ ಸೊಬಗನ್ನು ನೋಡುತ್ತಾ "ಜನರು ಎಷ್ಟು ಆನಂದದಿಂದ ಇದ್ದಾರೆ ದೇವರ ರಾಜ್ಯದ ಆನಂದವು ಇನ್ನೆಷ್ಟು ದೊಡ್ಡದು" ಎಂದುಕೊಳ್ಳುತ್ತಾ ಆ ಪೇಟೆಯನ್ನು ದಾಟಿ ಶಿಬಿರದ ಸಮೀಪಕ್ಕೆ ಬಂದನು. ಅಲ್ಲಿದ್ದ ರಾಜಕರ್ಮಚಾರಿಗಳನ್ನು ಕಂಡು ತಾನು ಸುಲ್ತಾನರ ಭೇಟಿ ಮಾಡಬೇಕೆಂದು ಕೋರಿದನು. ಅವರು ಸುಲ್ತಾನರಿದ್ದ ಗುಡಾರದ ಸಮೀಪಕ್ಕೆ ಅವರನ್ನು ಕರೆದುಕೊಂಡು ಹೋದರು ಸುಲ್ತಾನರ ಸನ್ನಿಧಾನಕ್ಕೆ ಅರಿಕೆ ಮಾಡುತ್ತಲೇ ಅವರು ಆ ಮಹಾಪುರುಷನನ್ನು ಒಳಗೆ ಕರೆತರುವಂತೆ ಅಪ್ಪಣೆ ಮಾಡಿದರು.

ಆ ಮಹಾನುಭಾವನು ವಾಸಗೃಹವನ್ನು ಪ್ರವೇಶ ಮಾಡುತ್ತಲೇ ಸುಲ್ತಾನನು ಜಗ್ಗನೆದ್ದನು ಅವನಿಗೆ ಆಶ್ಚರ್ಯವಾಯಿತು. ಅಂದು ಆ ಸ್ಥಳದಲ್ಲಿ ಬಡಾಫಕೀರರ

ದರ್ಶನವಾಗುವುದೆಂದು ಸುಲ್ತಾನನು ಬಗೆದಿರಲಿಲ್ಲ ಫಕೀರರನ್ನು ವಂದಿಸಿ ಹಸ್ತಲಾಘವವನ್ನು ಕೊಟ್ಟು ಆಸನದಲ್ಲಿ ಕುಳ್ಳಿರಿಸಿದನು ಅವರ ಸಮೀಪದಲ್ಲಿ ತಾನು ಕುಳಿತನು ಬಡಾಫಕೀರರು ಸುಲ್ತಾನರ ಯೋಗಕ್ಷೇಮ ಸಮಾಚಾರವನ್ನು ವಿಚಾರಿಸಿದರು ಸುಲ್ತಾನನು ಮಹಮದಾಲಿಯವರ ದುರಂತದ ವಿಚಾರದಲ್ಲಿ ತನ್ನ ದುಃಖವನ್ನೆಲ್ಲಾ ವಿವರಿಸಿ ಬಡಾಫಕೀರರಲ್ಲಿ ಕ್ಷಮಾಪ್ರಾರ್ಥನೆ ಮಾಡಿದನು ಇತ್ತೀಚಿನ ರಾಜಕಾರ್ಯಗಳೆಲ್ಲವನ್ನೂ ಕೊಂಚವೂ ಮುಚ್ಚು ಮರೆಯಿಲ್ಲದೇ ಅವರಲ್ಲಿ ಅರಿಕೆ ಮಾಡಿದನು ತನಗೆ ಯಾರೂ ಹಿತರಿಲ್ಲವೆಂದೂ, ಸಮಯದಲ್ಲಿ ಬುದ್ಧಿವಾದವನ್ನು ಹೇಳುವ ಹಿರಿಯರಿಲ್ಲವೆಂದೂ ಫಕೀರರು ಸರ್ವದಾ ತನ್ನ ಸಮೀಪದಲ್ಲಿಯೇ ಇರಬೇಕೆಂದೂ ಪ್ರಾರ್ಥಿಸಿದನು.

ಬಡಾಫಕೀರರು, ವಿರಕ್ತರಾದ ಫಕೀರರು ರಾಜಭವನಗಳಲ್ಲಿರುವುದು ಅಸಂಭಾವಿತವೆಂದು ಹೇಳಿದರು ಮತ್ತು ತಾವು ಪ್ರತಿಯೊಂದು ಸಂದರ್ಭದಲ್ಲಿಯೂ ಬಂದು ಹಿತಾಹಿತಗಳನ್ನು ಹೇಳುವುದಾಗಿ ಅಭಿವಚನವಿತ್ತರು ಅನಂತರ "ನೋಡು, ಟಿಪ್ಪೂ ಸುಲ್ತಾನ್! ನೀನು ಮೈಸೂರಿನ ಸರ್ವತಂತ್ರ ಸ್ವತಂತ್ರ ರಾಜನಾಗಿದ್ದೀಯೆ ನಿನ್ನ ಮನ ಬಂದಂತೆ ಈ ರಾಜ್ಯದ ಆಗು ಹೋಗುಗಳು ಆಗುತ್ತವೆ ನಾನು ಇಂದು ನಿನ್ನ ಮನಸ್ಸನ್ನು ಪರೀಕ್ಷಿಸಲು ಬಂದಿದ್ದೇನೆ ಸುಲ್ತಾನ್! ನಿನಗೆ ಇಯಜ್‌ಖಾನನಲ್ಲಿ ದ್ವೇಷವಿದೆಯೇ? ಅವನ ಅಪರಾಧವೇನು? ಅವನನ್ನೇಕೆ ನಗರದ ರಾಜ್ಯದಿಂದ ಓಡಿಸಿದೆ?" ಎಂದರು.

ಸುಲ್ತಾನ್—ಖಾವಿಂದ್! ನಾನು ನಿಜವಾಗಿ ಹೇಳುತ್ತೇನೆ. ತಾವು ಇಂದು ಪ್ರತ್ಯಕ್ಷವಾಗಿ ಕೇಳಿದ ಪ್ರಶ್ನೆಯನ್ನು ನಾನೇ ಸಹಸ್ರಾವರ್ತಿ ಮನಸ್ಸಿನಲ್ಲಿ ಗುಣಿಸಿಕೊಂಡಿದ್ದೇನೆ. ನಾನು ಇಯಜ್‌ಖಾನನನ್ನು ಓಡಿಸಿಲ್ಲ ಖಾನನೇ ಓಡಿಹೋಗಿದ್ದಾನೆ ನಾನು ಈ ನಗರಕ್ಕೆ ಬಂದುದೇ ತಪ್ಪು ಅದಕ್ಕಾಗಿ ಹಗಲಿರುಳೂ ವ್ಯಥೆಪಡುತ್ತಿದ್ದೇನೆ

ಬಡಾಫಕೀರ್—ನಿನಗೂ, ಖಾನನಿಗೂ ದ್ವೇಷವು ಬೆಳೆಯುತ್ತಿದ್ದರೆ ಈ ರಾಜ್ಯಕ್ಕೆ ಮಹಾಹಾನಿಯು ತಟ್ಟುತ್ತದೆ ಈ ನಗರದ ಸೀಮೆಗಾಗಿ ನೀನಾಗಲೀ—ಅವನಾಗಲೀ ಹೋರಾಡುತ್ತಿಲ್ಲವೆಂಬುದನ್ನು ನಾನು ಬಲ್ಲೆ. ನಿನಗೂ ಖಾನನಿಗೂ ವೈರವಿರುವುದು ದೌಲತ್ತಳಿಗಾಗಿ

ಸುಲ್ತಾನ್—ಫಕೀರರೇ! ತಾವು ದೇವರಂತೆ ಮಾತನಾಡುತ್ತೀರಿ. ಹೌದು, ದೌಲತ್ತಳಿಗಾಗಿಯೇ ನಮ್ಮ ವೈರ.

ಬಡಾಫಕೀರ--ಸುಲ್ತಾನನೇ! ದೌಲತ್ತಳನ್ನು ನಾನು ಚೆನ್ನಾಗಿ ಬಲ್ಲೆ ಅವಳು ರಾಣಿಗಿರಿಗೆ ಅರ್ಹಳಾದ ಹೆಣ್ಣು ಅವಳು ನಿನ್ನ ರಾಣಿಯಾಗಿದ್ದರೆ ಎಷ್ಟೋ ಚೆನ್ನಾಗಿತ್ತು. ಅವಳು ನವಾಬರ ಸಾಕುಮಗಳು. ನಿನ್ನ ಸಹೋದರಿಯಂತೆ ಬಹುಕಾಲದಿಂದ ಅವಳು ಇಯಜ್‌ಖಾನನನ್ನು ಪ್ರೀತಿಸುತ್ತಾಳೆ. ನವಾಬರು ಇದನ್ನು

ಅರಿತು ಅವಳನ್ನು ನಗರದಲ್ಲೇ ಇಟ್ಟಿರು. ಅವಳು ಇನ್ನೂ ಖಾನನನ್ನು ಮದುವೆಯಾಗದಿರುವುದು ಆಶ್ಚರ್ಯವೇ ಸರಿ. ನವಾಬರು ಈ ಮೈಸೂರು ರಾಜ್ಯವನ್ನು ನಿನಗೆ ಕೊಟ್ಟಿದ್ದಾರೆ. ದೌಲತ್ತುಳನ್ನು ಮನಸಾರ ಇಯಜ್‌ಖಾನನಿಗೆ ಒಪ್ಪಿಸಿದ್ದಾರೆ. ಈ ರಹಸ್ಯವನ್ನು ನಾನು ಬಲ್ಲೆ! ನಿನ್ನಂಥಾ ಮಹಾರಾಜನಿಗೆ, ದೇವರ ಭಕ್ತನಿಗೆ ನವಾಬರು ಖಾನನಿಗೆ ಇತ್ತ ದೌಲತ್ತುಳನ್ನು ಅಪೇಕ್ಷಿಸುವ ಅಧಿಕಾರವೆಲ್ಲಿದೆ? ಈಗಲೂ ಮನಸ್ಸಾಕ್ಷಿಯಿಂದ ಹೇಳು ಈ ಮೈಸೂರಿನ ರಾಜ್ಯವು ದೊಡ್ಡದೋ? ಆ ದೌಲತ್ತುಳು ಹೆಚ್ಚೋ? ನನ್ನ ಕೈಮೇಲೆ ಕೈಹಾಕಿ ಹೇಳು. ದೌಲತ್ತುಳಿಗಾಗಿ ಈ ಮೈಸೂರು ರಾಜ್ಯವನ್ನು ಬಿಡುವೆಯಾ? ಮನೋನಿಶ್ಚಯವಿಲ್ಲದ ಮನುಷ್ಯನು ಇಷ್ಟು ದೊಡ್ಡ ಸಾಮ್ರಾಜ್ಯವನ್ನು ಕಟ್ಟುವುದೆಂತು? ದೌಲತ್ತುಳ ರೂಪವು ಅನಾಹುತಕ್ಕೆ ಕಾರಣವಾದರೆ ಅವಳು ಬದುಕಕೂಡದು ಅವಳನ್ನು ವಧೆ ಮಾಡಿದರೂ ಪಾಪವಿಲ್ಲ ನಿನ್ನ ಈ ಮನಸ್ಸಿನ ತಲ್ಲಣವೇ ಇಷ್ಟು ಅನಾಹುತಕ್ಕೆ ಕಾರಣ.

ಸುಲ್ತಾನ್—ಫಕೀರರೇ! ನಾನು ತಪ್ಪು ಮಾಡಿದೆ, ನಾನು ಅಪರಾಧಿ. ನನ್ನ ಅಪರಾಧವನ್ನು ಕ್ಷಮಿಸಿರಿ ನಾನು ದೌಲತ್ತುಳನ್ನು ಮರೆತುಬಿಡುತ್ತೇನೆ ಇಯಜ್ ಖಾನನನ್ನು ನನ್ನ ಸಹೋದರನಂತೆ ಭಾವಿಸುತ್ತೇನೆ ಖಾನನನ್ನು ನನ್ನ ಆಸ್ಥಾನಕ್ಕೆ ಗೌರವದಿಂದ ಕರೆಸಿ ಅವನಲ್ಲಿ ಸ್ನೇಹ ಮಾಡಿಕೊಂಡು ಈ ನಗರವನ್ನು ಅವನಿಗೊಪ್ಪಿಸಿ ನಾನು ರಾಜಧಾನಿಗೆ ಹಿಂದಿರುಗುತ್ತೇನೆ.

"ಸುಲ್ತಾನನೇ! ನಿನಗೆ ಮಂಗಳವಾಗುವುದು!"ಎಂದು ಆಶೀರ್ವದಿಸಿ ಸುಲ್ತಾನನನ್ನು ಸಂತೈಸಿ ಬೀಳ್ಕೊಂಡು ಬಡಾಫಕೀರನು ಹೊರಟುಹೋದನು

ಆ ರಾತ್ರಿಯೆಲ್ಲಾ ಸುಲ್ತಾನನ ಆನಂದಕ್ಕೆ ಪಾರವೇ ಇಲ್ಲ ಒಂದರಮೇಲೊಂದು ಸದ್ಭಾವಗಳೇ ಅವನ ಮನಸ್ಸಿನಲ್ಲಿ ಮೂಡುತ್ತಿದ್ದುವು. ಸುಖಸ್ವಪ್ನಗಳನ್ನೇ ಕಾಣುತ್ತಿದ್ದನು ಅಂದು ಸುಲ್ತಾನನ ಮನೋರಾಜ್ಯದಲ್ಲಿ ಯಾವ ಸ್ವಪ್ನಗಳನ್ನು ಕಂಡನೋ ಅವೆಲ್ಲವೂ ನಿಜವಾಗಿ ಪರಿಣಮಿಸಿದ್ದರೆ ಆ ಕಥೆಯೇ ಬೇರೆಯಾಗುತ್ತಿದ್ದಿತು

ಪ್ರಾತಃಕಾಲ ಎದ್ದು ಸುಲ್ತಾನನು ಕಛೇರಿಗೆ ಬಂದನು ಗುಪ್ತಚಾರರನ್ನು ಕರೆಸಿ ಅವರ ಕೈಲಿ ರಾಧಾರಾಣಿಯವರಿಗೆ ಒಂದು ಗುಪ್ತಪತ್ರವನ್ನು ಕಳುಹಿಸಿದನು. ಅದರಲ್ಲಿ ಮತ್ತೇನೂ ವಿಶೇಷವಿರಲಿಲ್ಲ. ರಾಜಯೋಗ್ಯವಾದ ಮ್ಯಾನಾವನ್ನು ಕಳಿಸಿದನು. ರಾಧಾರಾಣಿಯವರು ಬಂದು ಸುಲ್ತಾನನಿಗೆ ಭೇಟಿ ಕೊಡಬೇಕೆಂದು ಆ ಪತ್ರದಲ್ಲಿ ಪ್ರಾರ್ಥನೆ ಮಾಡಿದ್ದನು. ಒಕ್ಕಣೆಯು ಬಹಳ ಗೌರವದಿಂದ ಇತ್ತು ಆ ಪತ್ರವನ್ನು ತೆಗೆದುಕೊಂಡು ಒಂಟೆಯಮೇಲೆ ಗುಪ್ತಚಾರರು ಹೊರಟರು ಹಿಂದುಗಡೆ ಮ್ಯಾನಾದವರು, ಬೋಯಿಗಳು, ಕಾವಲುಗಾರರು ಎಲ್ಲರೂ ನಗರಕ್ಕೆ ಹೊರಟರು. ಮೂರನೆಯ ದಿನ ಗುಪ್ತಚಾರರು ನಗರಕ್ಕೆ ಬಂದಿಳಿದರು. ಸೋನಾಮಹಲಿನಲ್ಲಿ

ಹೋಗಿ ನೋಡಿದರು. ಅಲ್ಲಿ ರಾಧಾರಾಣಿಯವರಿರಲಿಲ್ಲ ರಾಧಾರಾಣಿಯವರು ಇರುವ ಶಿಬಿರವನ್ನು ವಿಚಾರಿಸಿಕೊಂಡು ಅಲ್ಲಿಗೆ ಹೋದರು ಇದು ಇಯಜ್‌ಖಾನನ ಶಿಬಿರ ! ಅಲ್ಲಿಗೆ ಹೋಗಲು ಎದೆ ಬಡಿದುಕೊಳ್ಳುತ್ತಿತ್ತು ತಾವು ಇಯಜ್‌ಖಾನರ ಕೈಗೆ ಸಿಕ್ಕಿಬಿದ್ದರೆ ತಲೆಯೊಡೆಸುತ್ತಾರೆಂದು ಭಯದಿಂದ ಆ ಶಿಬಿರವನ್ನು ಹೊಕ್ಕರು. ಆ ಗುಪ್ತಚಾರರು ಹಿಂದುಗಳು ಅವರು ವೈದಿಕಬ್ರಾಹ್ಮಣರ ವೇಷದಿಂದ ಖಾನನ ಶಿಬಿರವನ್ನು ಪ್ರವೇಶ ಮಾಡಿದರು ಅವರಿಗೆ ರಾಧಾರಾಣಿಯವರ ದರ್ಶನ ದೊರೆಯುವುದು ಶ್ರಮವಾಗಲಿಲ್ಲ ಕಾವಲುಗಾರರು ಈ ಬ್ರಾಹ್ಮಣರನ್ನು ಕರೆದೊಯ್ದು ರಾಣಿಯವರ ಸಮ್ಮುಖದಲ್ಲಿ ನಿಲ್ಲಿಸಿದರು ಸ್ವಲ್ಪದರಲ್ಲಿಯೇ ಇವರು ಗುಪ್ತಚಾರರೆಂದು ರಾಣಿಗೆ ಗೊತ್ತಾಯಿತು ಅವರು ದೇವರ ಪ್ರಸಾದವನ್ನು ಕೊಡುವ ನೆಪದಿಂದ ಆ ಕಾಗದವನ್ನು ಅವಳಿಗೆ ತಲಪಿಸಿದರು. ರಾಣಿಯು ಲಕ್ಕೋಟಿಯನ್ನು ಬಿಚ್ಚಿ ಓದಿಕೊಂಡಳು ಅವಳಿಗೆ ಸುಲ್ತಾನರು ತನ್ನನ್ನು ಏಕೆ ಬರಮಾಡಿಕೊಳ್ಳುತ್ತಾರೆಂಬುದು ಅರ್ಥವಾಗಲಿಲ್ಲ ಆ ಕಾಗದವನ್ನು ತೆಗೆದುಕೊಂಡು ಹೋಗಿ ಖಾನನಿಗೂ, ದೌಲತ್ತಳಿಗೂ ತೋರಿಸಿದಳು. ಮೂವರೂ ಆಲೋಚನೆ ಮಾಡಿದರು. ಅದರಲ್ಲೇನೂ ತಂತ್ರವಿಲ್ಲವೆಂದೂ, ಛದ್ಮನೆ ಇಲ್ಲವೆಂದೂ ನಿಶ್ಚಯವಾಯಿತು ರಾಧಾರಾಣಿಗೆ ಯಾವ ಭಯವೂ ಇಲ್ಲ ! ಅವಳು ಆ ಗುಪ್ತಚಾರರ ಕೈಲಿ ಪ್ರತ್ಯುತ್ತರವನ್ನು ಬರೆದು ಕಳಿಸಿದಳು. ಮ್ಯಾನಾ ಅವಶ್ಯಕವಿಲ್ಲವೆಂದೂ, ತಾನು ಶೀಘ್ರವಾಗಿ ಶಿಬಿರಕ್ಕೆ ಬಂದು ಸುಲ್ತಾನರ ಭೇಟಿ ಮಾಡುವುದಾಗಿಯೂ ಬರೆದು ಕಳುಹಿಸಿದಳು. ಆ ಗುಪ್ತಚಾರರು ಹಿಂದಿರುಗಿ ಸುಲ್ತಾನನ ಶಿಬಿರಕ್ಕೆ ಹೋಗಿ ಸುಲ್ತಾನರ ಸನ್ನಿಧಾನದಲ್ಲಿ ಅದನ್ನು ಒಪ್ಪಿಸಿದರು ರಾಧೆಯು ಮಾರನೆಯ ಪ್ರಾತಃಕಾಲವೇ ೮-೧೦ ಮಂದಿ ಮೈಗಾವಲಿನ ಸೈನಿಕರನ್ನು ಜೊತೆಯಲ್ಲಿ ಕರೆದುಕೊಂಡು ಯುದ್ಧದ ದಿರಸನ್ನು ತೊಟ್ಟು ಕುದುರೆಯೇರಿ ಹೊರಟಳು. ನಾಲ್ಕು ದಿವಸಗಳು ಪ್ರಯಾಣ ಮಾಡಿ ಐದನೆಯ ದಿನ ಸುಲ್ತಾನರ ಶಿಬಿರವನ್ನು ಸೇರಿದಳು.

ರಾಧೆಯು ಸುಲ್ತಾನರ ಶಿಬಿರವನ್ನು ಸೇರುವ ಹೊತ್ತಿಗೆ ಪ್ರಾತಃಕಾಲ ಹತ್ತು ಘಂಟೆಯ ಸಮಯ. ಸುಲ್ತಾನನು ತನ್ನ ಬಿಡಾರದಲ್ಲಿ ರಾಯಸದವರ ಕೈಯಿಂದ ರಾಯಸಗಳನ್ನು ಬರೆಸುತ್ತ ಕುಳಿತಿದ್ದನು. ರಾಧೆಯು ಸುಲ್ತಾನನ ಬಿಡಾರದವರೆಗೆ ಕುದುರೆಯನ್ನು ದೌಡಾಯಿಸುತ್ತಲೇ ಹೋದಳು ಮೂರು ಪಹರೆಗಳನ್ನು ತಟಾಯಿಸಿ ಹೋಗಿ ಬಿಡಾರದ ಬಾಗಿಲನ್ನು ಸೇರಿದಳು ಯಾರೂ ವಿರೋಧಿಸಲಿಲ್ಲ. ಬಿಡಾರದ ಬಾಗಿಲಿನವರೆಗೆ ಕುದುರೆಯ ಖುರಸಪ್ಪಳವು ಕೇಳಬೇಕಾದರೆ ಆ ಧೈರ್ಯವು ಯಾರಿಗಿರಬಹುದು ಸುಲ್ತಾನನು ಕಿವಿಗೊಟ್ಟು ಕೇಳಿದನು ಬಾಗಿಲಿಗೆ ಬಂದು ನೋಡಿದನು ರಾಧಾರಾಣಿಯವರ ಮುಖವನ್ನು ಕಾಣುತ್ತಲೇ ಆನಂದವಾಯಿತು.

ತಾನೇ ಕುದುರೆಯ ಸಮೀಪಕ್ಕೆ ಬಂದು ಕಡಿವಾಣವನ್ನು ಹಿಡಿದುಕೊಂಡನು ರಾಧೆಯು ಕುದುರೆಯಿಂದ ಇಳಿದಳು ಸೇವಕರು ಕದುರೆಯನ್ನು ದೂರ ಕೊಂಡು ಹೋದರು. ಸುಲ್ತಾನನು ರಾಧಾರಾಣಿಗೆ ವಂದಿಸಿ ತನ್ನ ಬಿಡಾರದೊಳಗೆ ಕರೆದೊಯ್ದನು.

ರಾಣಿಯವರು ಆಸನದ ಮೇಲೆ ಕುಳಿತುಕೊಂಡ ಮೇಲೆ ತಾನೂ ಎದುರಾಗಿ ಕುಳಿತನು ಪರಸ್ಪರ ಕ್ಷೇಮ ಲಾಭಗಳನ್ನು ವಿಚಾರಿಸಿದ ನಂತರ ಸುಲ್ತಾನನು "ರಾಧಾ ರಾಣಿಯವರೇ! ನನ್ನ ಮೇಲೆ ತಮ್ಮ ಪರಮಾನುಗ್ರಹವಿದೆ ಯೆಂಬುದನ್ನು ನಾನು ಬಲ್ಲೆ ಅದರಿಂದಲೇ ತಮ್ಮನ್ನು ಇಲ್ಲಿಗೆ ದಯಮಾಡಿಸಬೇಕೆಂದು ಪ್ರಾರ್ಥಿಸುವ ಧೈರ್ಯವು ನನಗೆ ಬಂತು ತಮಗೆ ನಾನು ಚಿರಋಣಿಯಾಗಿದ್ದೇನೆ."

ರಾಧೆ—ಸುಲ್ತಾನರವರೇ! ನಾನು ತಮ್ಮ ಆಜ್ಞೆಯನ್ನು ಶಿರಸಾ ವಹಿಸಲು ಯಾವಾಗಲೂ ತಯಾರಾಗಿದ್ದೇನೆ ನನ್ನಿಂದ ಸುಲ್ತಾನರವರಿಗೆ ಆಗಬೇಕಾದ ರಾಜ ಕಾರ್ಯವೇನಿರುವುದು?

ಸುಲ್ತಾನ್—ರಾಣಿಯವರೇ! ತಾವು ಅಂದು ಆ ರಣಕ್ಷೇತ್ರದಲ್ಲಿ ನನಗಾಗಿ ಪ್ರಾಣವನ್ನೇ ತೆತ್ತುಬಿಟ್ಟದ್ದಿರಿ ಆ ಉಪಕಾರವನ್ನು ನಾನು ಮರೆಯುವುದೆಂತು? ಈಗ ತಮ್ಮಿಂದ ಮೈಸೂರು ರಾಜಕೀಯದಲ್ಲಿ ಮಹೋನ್ನತ ಕಾರ್ಯವಾಗಬೇಕಾಗಿದೆ

ರಾಧೆ—ಸುಲ್ತಾನರೇ! ಸಿದ್ಧವಾಗಿದ್ದೇನೆ.

ಸುಲ್ತಾನ್—ದೇವಿಯರೇ! ನಾನು ನಗರಕ್ಕೆ ಬಂದುದು ತಪ್ಪು. ಇಯಜ್‌ಖಾನರ ಮೇಲೆ ಯುದ್ಧ ಮಾಡಿದ್ದು ಮಹಾಪರಾಧ ಅವರು ನಗರದ ರಾಜ್ಯತ್ಯಾಗ ಮಾಡಿದ್ದು ನನಗೆ ಬಹಳ ಖೇದವನ್ನುಂಟುಮಾಡಿದೆ ನಾನು ಅವರ ಭೇಟಿ ಮಾಡಿ, ಕ್ಷಮಾ ಪ್ರಾರ್ಥನೆ ಮಾಡಿ, ಈ ನಗರದ ನವಾಬಗಿರಿಯನ್ನು ಅವರಿಗೇ ಒಪ್ಪಿಸಬೇಕೆಂದು ಸಂಕಲ್ಪಿಸಿದ್ದೇನೆ ಅದಕ್ಕ ತಾವು ಸಹಾಯ ಮಾಡಬೇಕು

ರಾಧಾರಾಣಿಯು ಆಶ್ಚರ್ಯ ಚಕಿತಳಾಗಿ "ಸುಲ್ತಾನರೇ ಇಯಜ್‌ಖಾನರು ನಗರದ ನವಾಬಗಿರಿಯನ್ನು ಪುನಃ ಒಪ್ಪಿಕೊಳ್ಳಲಾರರೆಂದು ನನಗೆ ತೋರುತ್ತದೆ"

ಸುಲ್ತಾನ್—ನಮ್ಮಿಬ್ಬರಿಗೂ ಸ್ನೇಹವನ್ನಾದರೂ ಮಾಡಿಸಲಾರಿರಾ?

ರಾಧೆ—ಎಂದಾದರೊಂದು ದಿನ ಖಾನರೂ, ನೀವೂ ಸ್ನೇಹಿತರಾಗಲೇ ಬೇಕು ಆದರೆ ಅದು ಇಂದು ಸಿದ್ಧಿಸೀತೆಂಬ ಭರವಸೆಯು ನನಗಿಲ್ಲ.

ಸುಲ್ತಾನ್—ಅವರನ್ನು ಪ್ರತ್ಯಕ್ಷ ಕಂಡು ಕ್ಷಮಾಪ್ರಾರ್ಥನೆ ಮಾಡಿದರೆ ನಮ ನಮಗೆ ಶಾಶ್ವತವಾದ ಸ್ನೇಹವಾಗುವುದೆಂಬ ಭರವಸೆಯು ನನಗಿದೆ

ರಾಧೆ—ನಿಮ್ಮಿಬ್ಬರ ಭೇಟಿಯಾಗುವುದು ಹೇಗೆ?

ಸುಲ್ತಾನ್—ತಾವು ಅವರನ್ನು ಇಲ್ಲಿಗೆ ಹೇಗಾದರೂ ಮಾಡಿ ಕರತರಬೇಕು

ರಾಧೆ—ಸುಲ್ತಾನರೇ! ನನಗೆ ತಮ್ಮಲ್ಲಿ ಪೂರ್ಣನಂಬಿಕೆ ಇದೆ. ಆದರೂ ಮಹ ಮದಾಲಿಯವರ ಪ್ರಕರಣ, ಖಾಸಿಂಖಾನನ ಹತ್ಯಾಕಾಂಡ ಇವುಗಳಿಂದ ಇಯಜ್ ಖಾನರು ಇಲ್ಲಿಗೆ ಬರಲು ಒಪ್ಪಲಾರರು!

ಸುಲ್ತಾನ್—ನನ್ನನ್ನೇ ಅವರು ಇರುವಲ್ಲಿಗೆ ಕರೆದುಕೊಂಡು ಹೋಗಬಲ್ಲಿರಾ?

ರಾಧೆ—ಖಾನರು ಈಗ ವನಮಧ್ಯದಲ್ಲಿ ಅಜ್ಞಾತವಾಸದಲ್ಲಿದ್ದಾರೆ ಅವರು ಈ ದುರವಸ್ಥೆಯಲ್ಲಿ ತಮ್ಮ ಭೇಟಿಯನ್ನು ಮಾಡಲು ಸಮ್ಮತಿಸಲಾರರು

ಸುಲ್ತಾನ್—ರಾಣಿಯವರೇ! ಹಾಗಾದರೆ ನನ್ನ ಇಷ್ಟಾರ್ಥವು ಈಡೇರುವಂತಿಲ್ಲವೇ?

ರಾಧೆಯು ತಲೆಯಲ್ಲಾಡಿಸಿದಳು. ಅಲ್ಲಿಗೆ ಆ ಮಾತು ಮುಗಿಯಿತು!

ಸುಲ್ತಾನನು ತನ್ನ ಶಿಬಿರದಲ್ಲಿಯೇ ಆರೋಗಣೆ ಮಾಡಬೇಕೆಂದು ರಾಣಿಯನ್ನು ಪ್ರಾರ್ಥನೆ ಮಾಡಿದನು ರಾಣಿಯು ಸಂತೋಷದಿಂದ ಒಪ್ಪಿದಳು

ಶಿಬಿರ ಮಧ್ಯದಲ್ಲಿರುವ ಸುಲ್ತಾನರ ರಾಜ ಯೋಗ್ಯವಾದ ಬಿಡಾರದಲ್ಲಿ ರಾಧಾರಾಣಿಯವರಿಗೆ ಇಳಿದುಕೊಳ್ಳಲು ಸ್ಥಳವು ಏರ್ಪಾಡಾಗಿತ್ತು ಸ್ವಯಂ ಸುಲ್ತಾನರವರೇ ರಾಣಿಯವರನ್ನು ಕರೆತಂದು ಆ ಬಿಡಾರದಲ್ಲಿ ಇಳಿಸಿದರು ಅಂಥಾ ಗೌರವವು ಸುಲ್ತಾನರ ಶಿಬಿರದಲ್ಲಿ ಎಂದೂ ಯಾರಿಗೂ ಆಗಿರಲಿಲ್ಲ! ಆ ಸೌಜನ್ಯ ಗೌರವಗಳನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು!

ರಾಧಾರಾಣಿಯು ಇದೇನು ಕೌತುಕ! ಎಂತಹ ಪರಿವರ್ತನ! ಇದೆಲ್ಲಾ ನಿಜವೆ? ಎಂದುಕೊಂಡಳು

ಸುಲ್ತಾನನು ಸಂಧ್ಯಾಕಾಲ ರಾಧಾರಾಣಿಯ ಭೇಟಿ ಮಾಡಿದನು ತನ್ನ ಮನಸ್ಸಿನ ಕಷ್ಟಗಳನ್ನೆಲ್ಲಾ ಬಿಚ್ಚಿ ಹೇಳಿಕೊಂಡನು ಅವುಗಳನ್ನೆಲ್ಲಾ ರಾಧಾರಾಣಿಯು ನಿಜವೆಂದು ನಂಬಿದಳೆಂದು ಅವನಿಗೆ ಬೋಧೆಯಾಯಿತು ಅದರಿಂದ ಅವನ ಮನಸ್ಸಿಗೆಷ್ಟೋ ಸಮಾಧಾನವಾಯಿತು. ರಾಧಾರಾಣಿಗೆ ಹಿಂದೂ ಧರ್ಮಾಭಿಮಾನವು ಬಹಳವಾಗಿದೆಯೆಂದು ಸುಲ್ತಾನನು ಕಂಡುಕೊಂಡನು. ತನಗೆ ಕಿಂಚಿತ್ತಾದರೂ ಹಿಂದೂಮತ ದ್ವೇಷವಿಲ್ಲವೆಂದೂ, ಹಿಂದೂಗಳೇ ತನ್ನ ಮೇಲೆ ದ್ವೇಷವನ್ನು ಬೆಳೆಸುತ್ತಿದ್ದಾರೆಂದೂ ಹೇಳಿಕೊಂಡನು ತಾನು ವಂಶಪಾರಂಪರ್ಯವಾಗಿ ಮುಸ್ಲಿಂ ರಾಜ್ಯವನ್ನು ಮೈಸೂರಿನಲ್ಲಿ ಸ್ಥಾಪಿಸಬೇಕೆಂಬ ಹಟವನ್ನು ತೊಟ್ಟಿಲ್ಲವೆಂದೂ, ಮೈಸೂರು ರಾಜಮನೆತನದಲ್ಲಿ ರಾಜರಿಲ್ಲದೇ ಅನಾಯಕವಾಗಿರುವುದರಿಂದ ತಾನು ರಾಜತ್ವವನ್ನು ಸ್ವೀಕರಿಸಿರುವುದಾಗಿ ಹೇಳಿದನು. ರಾಜ್ಯಕ್ಕೆ ಫರಂಗಿಯವರೂ, ಮರಾಠರೂ ಶತ್ರುಗಳೆಂದೂ

ಯಾವಾಗಲೂ ಅವರು ಮೈಸೂರು ರಾಜ್ಯದ ಮೇಲೆ ಯುದ್ಧವನ್ನು ಹೂಡಲು ಕಾಯುತ್ತಿದ್ದಾರೆಂದೂ ಸೂಚಿಸಿದನು ಕೊನೆಯಲ್ಲಿ ರಾಧಾರಾಣಿಯ ಸಂಪೂರ್ಣ ಸಹಾಯವನ್ನು ಯಾಚಿಸಿದನು

ರಾಧಾರಾಣಿಯು ಸುಲ್ತಾನನಿಗೆ ಸಮಾಧಾನಕರವಾಗಿ ಮಾತನಾಡಿದಳು ಅಡಿಗಡಿಗೂ ಮೈಸೂರಿಗೆ ವಿಪತ್ತುಂಟೆಂದು ಹೇಳಿದಳು ತಾನು ಆಮರಣಾಂತ ಮೈಸೂರಿಗೆ ಸಹಾಯ ಮಾಡುವುದಾಗಿ ಅಭಿವಚನವಿತ್ತಳು. ಇಯಜ್‌ಖಾನನು ನಗರದ ನವಾಬ್‌ಗಿರಿಯನ್ನು ಒಪ್ಪಿಕೊಂಡರೆ ಮೈಸೂರಿಗೆ ಕ್ಷೇಮವೆಂಬುದನ್ನು ರಾಧಾರಾಣಿಯೂ ಸಮ್ಮತಿಸಿದಳು ಅವರನ್ನು ಒಪ್ಪಿಸಲು ತನ್ನಿಂದ ಸಾಧ್ಯವಾಗುವ ಸಾಹಸಗಳನ್ನೆಲ್ಲಾ ಮಾಡುವುದಾಗಿ ವಾಗ್ದಾನ ಮಾಡಿದಳು ಟಿಪ್ಪೂಸುಲ್ತಾನನು ಇಯಜ್‌ಖಾನನಿಗೆ ಒಂದು ಪತ್ರವನ್ನು ಬರೆದು ಅವರಿಗೆ ಒಪ್ಪಿಸಬೇಕೆಂದು ರಾಧಾರಾಣಿಯುವರ ವಶ ಕೊಟ್ಟನು. ಮರುದಿನ ಪ್ರಾತಃಕಾಲ ಆ ಶಿಬಿರದಿಂದ ಹೊರಡಲು ರಾಧೆಯು ಸುಲ್ತಾನರ ಅಪ್ಪಣೆಯನ್ನು ಪಡೆದಳು ಸುಲ್ತಾನನು ಬೀಳ್ಕೊಂಡು ಆ ಬಿಡಾರದಿಂದ ಹೊರಟುಹೋದನು.

ರಾಧಾರಾಣಿಗೆ ಸುಲ್ತಾನನ ವರ್ತನವು ಆಶ್ಚರ್ಯವನ್ನುಂಟುಮಾಡಿತು ಅವನು ಒಂದಾವೃತ್ತಿಯಾದರೂ ದೌಲತ್ತಳ ಪ್ರಸ್ತಾಪವನ್ನೇ ಮಾಡಲಿಲ್ಲ ಇದು ರಾಧಾರಾಣಿಗೆ ಆಶ್ಚರ್ಯವಾಯಿತು ! ಸುಲ್ತಾನನು ದೌಲತ್ತಳ ಮೇಲೆ ದುರಂತವಾದ ಆಸೆ ಇಟ್ಟುಕೊಂಡಿದ್ದಾನೆ ದೌಲತ್ತಳ ಮೇಲಿನ ಮೋಹದಿಂದಲೇ ಇಷ್ಟೊಂದು ಸಾಹಸ ಮಾಡಿದನು, ದೌಲತ್ತಳನ್ನು ಭೇಟಿ ಮಾಡಿ ಪ್ರಣಯಭಿಕ್ಷೆಯನ್ನು ಬೇಡಿದನು ಬಲಾತ್ಕಾರದಿಂದಲಾದರೂ ದೌಲತ್ತಳನ್ನು ವಶಪಡಿಸಿಕೊಳ್ಳಲು ಸುಲ್ತಾನನು ಕಾತುರನಾಗಿದ್ದಾನೆಂದು ರಾಧೆಯು ಭಾವಿಸಿದ್ದಳು ಇಂದಿನ ಪ್ರಸಂಗವು ಇದೆಲ್ಲಕ್ಕೂ ವಿರುದ್ಧವಾಗಿದೆ.

ಸುಲ್ತಾನನು ದೌಲತ್ತಳ ಮೇಲಿನ ಆಶೆಯನ್ನೇ ತೊರೆದುಬಿಟ್ಟನೋ, ಅಥವಾ ಮಾರ್ಗಾಂತರವನ್ನು ಅನುಸರಿಸಿ ದೌಲತ್ತಳನ್ನು ಒಲಿಸಿಕೊಳ್ಳಬೇಕೆಂದು ಸಂಕಲ್ಪಿಸಿದ್ದಾನೆಯೋ ಇದೊಂದು ಜಟಿಲ ಸಮಸ್ಯೆಯಾಗಿಯೇ ಇದೆ. ಇರಲಿ, ಎಂದುಕೊಂಡಳು.

ಮಾರನೆಯ ದಿನ ಪ್ರಾತಃಕಾಲ ನಗರಾಭಿಮುಖವಾಗಿ ಹೊರಟಳು. ಮೂರು ನಾಲ್ಕು ದಿನಗಳಲ್ಲಿ ನಗರವನ್ನು ಸೇರಿದಳು ಇಯಜ್‌ಖಾನನ ಶಿಬಿರಕ್ಕೆ ಹೋಗಿ ಇಯಜ್‌ಖಾನನನ್ನೂ, ದೌಲತ್ತಳನ್ನೂ ಕಂಡು ಸುಲ್ತಾನನ ಶಿಬಿಂದಲ್ಲಿ ಹೋಗಿ ನಡೆದ ವೃತ್ತಾಂತವೆಲ್ಲವನ್ನೂ ಯಥಾವತ್ತಾಗಿ ತಿಳಿಸಿದಳು ಇದರಲ್ಲಿ ಏನೂ ಕುತಂತ್ರವಿಲ್ಲವೆಂದೂ, ಇಯಜ್‌ಖಾನನು ನಗರದ ನವಾಬಗಿರಿಯನ್ನು ಒಪ್ಪಿಕೊಳ್ಳಬೇಕೆಂದೂ ಒತ್ತಾಯ ಪಡಿಸಿದಳು ಟಿಪ್ಪೂಸುಲ್ತಾನನು ತನ್ನ ಕೈಯಲ್ಲಿ ಕೊಟ್ಟಿದ್ದ ಪತ್ರವನ್ನು ಖಾನನ ಕೈಯಲ್ಲಿ ಒಪ್ಪಿಸಿದಳು. ಖಾನನು ಮೊಹರನ್ನು ಒಡೆದು ಲಕ್ಕೋಟೆಯನ್ನು

ಬಿಚ್ಚಿ ಆ ಪತ್ರವನ್ನು ಓದಿಕೊಂಡನು ಮತ್ತೊಮ್ಮೆ ಓದಿದನು. ಅವನಿಗೆ ಆಶ್ಚರ್ಯವಾಯಿತು. ಟಿಪ್ಪೂಸುಲ್ತಾನನು ಎಂತಹ ರಾಜನೀತಿ ವಿಶಾರದ—ಎಂದು ಮೆಚ್ಚಿಕೊಂಡನು. ದೌಲತ್ ಮತ್ತು ರಾಧಾರಾಣಿಯವರಿಗೆ ಆ ಪತ್ರದ ಒಕ್ಕಣೆಯನ್ನು ಓದಿ ಹೇಳಿದನು.

"ನಗರದ ನವಾಬರಾದ ಇಯಜ್‌ಖಾನರವರೇ !

ನಾನು ಈ ಪತ್ರವನ್ನು ಪ್ರೀತಿಯಿಂದ ಬರೆಯುತ್ತಿದ್ದೇನೆ ದೊಡ್ಡ ನವಾಬರ ಪಾದದ ಮೇಲೆ ಆಣೆಯಿಟ್ಟು, ಇದರಲ್ಲಿ ಉಲ್ಲೇಖಿಸಿರುವ ಅಂಶಗಳೆಲ್ಲಾ ಅಲ್ಲಾವಿನಷ್ಟು ಸತ್ಯವಾದುವುಗಳೆಂದು ಹೇಳುತ್ತೇನೆ ಮೈಸೂರು ರಾಜ್ಯಕ್ಕೆ ಪ್ರತಿದಿನವೂ ಶತ್ರುಗಳ ಭಯವಿದೆ ಯೆಂಬುದು ತಮಗೆ ತಿಳಿದೇ ಇದೆ ಅದಕ್ಕಾಗಿ ಭದ್ರವಾದ ಸೇನೆಯನ್ನು ಕಟ್ಟಬೇಕು. ಆ ಸೇನೆಯ ರಚನೆಗೆ ಕೋಟ್ಯಾಂತರ ರೂಪಾಯಿಗಳು ಬೇಕು ದೊಡ್ಡ ನವಾಬರವರು ಇದಕ್ಕಾಗಿಯೇ ನಗರದಲ್ಲಿ ಸ್ವರ್ಣಸಿಧಿಯನ್ನಿಟ್ಟುಕೊಂಡಿದ್ದಾರೆಂದೂ, ಅದರ ರಕ್ಷಣೆಯ ಭಾರವನ್ನು ತಮಗೆ ಒಪ್ಪಿಸಿದ್ದಾರೆಂದೂ ಕೇಳಿ ತಿಳಿದಿದ್ದೆ ತಮ್ಮಲ್ಲಿ ಆ ಹಣವನ್ನು ಕೇಳಿದೆ ತಾವು ಪ್ರಸನ್ನರಾಗಲಿಲ್ಲ ಬಾಲ್ಯದಿಂದಲೂ ನಾನು ದೌಲತ್ತಳನ್ನು ಪ್ರೀತಿಸುತ್ತಿದ್ದೆ ಆ ದೌಲತ್ ರಾಣಿಯು ನನ್ನನ್ನು ಪೂರ್ಣವಾಗಿ ಒಲಿದಿದ್ದಾಳೆಂದು ಬಹುಕಾಲದಿಂದ ಭಾವಿಸಿದ್ದೆ ಅದಕ್ಕೆ ಮೊದಲಿನಿಂದಲೂ ದೊಡ್ಡ ನವಾಬರು ಪ್ರತಿಬಂಧಕ. ದೊಡ್ಡ ನವಾಬರು ಕಾಲವಾದ ಮೇಲೆ ದೌಲತ್ ರಾಣಿಯವರನ್ನು ಒಂದಾವೃತ್ತಿ ದರ್ಶನ ಮಾಡಿ, ನನ್ನ ಮನದ ಹಂಬಲವನ್ನು ಹೇಳಿಕೊಳ್ಳಬೇಕೆಂದಿದ್ದೆ ನಗರದ ಕಡೆಯಿಂದಲೂ, ಮಂಗಳೂರಿನ ಕಡೆಯಿಂದಲೂ ಬರುತ್ತಿದ್ದ ಸಮಾಚಾರಗಳೆಲ್ಲಾ ವ್ಯತಿರಿಕ್ತವಾಗಿಯೇ ಇದ್ದುವು. ಅದರಿಂದ ಇಷ್ಟು ಮಹಾಸೇನೆಯನ್ನು ತೆಗೆದುಕೊಂಡು ಈ ಸೀಮೆಗೆ ಬಂದೆ. ನಮ್ಮ ದರಬಾರಿನವರೆಲ್ಲರೂ ದಿವಾನ್ ಮಹಮ್ಮದಾಲಿಯವರ ವಿರೋಧಿಗಳು ಅಸೂಯಾಪರರು ಅವರು ದಿವಾನರ ಮೇಲೆ ನಾನಾ ಪಿತೂರಿಗಳನ್ನು ಮಾಡುತ್ತಲೇ ಬಂದರು ಖಾಸಿಂಖಾನನನ್ನು ನೋಡಿ ಅವನು ವೀರಪುರುಷನೆಂದು ಎಷ್ಟೋ ಮೆಚ್ಚಿದೆ ಅವನು ದರಬಾರನ್ನು ತೃಣಕ್ಕಿಂತ ಕೀಳಾಗಿ ತಿರಸ್ಕರಿಸಿದನು ಈ ದರಬಾರಿನ ಪದ್ಧತಿಯಂತೆ ಶಿಕ್ಷೆಯನ್ನು ವಿಧಿಸಲೇಬೇಕಾಯಿತು. ಇವೆಲ್ಲಾ ಪ್ರಕರಣಗಳಿಂದಲೂ ನಾನು ಅತ್ಯಂತ ಖಿನ್ನನಾಗಿದ್ದೇನೆ, ನಾನು ನಗರಕ್ಕೆ ಬಂದುದು ತಪ್ಪು ! ದಿವಾನರನ್ನು ಬಲಿಗೊಟ್ಟಿದ್ದು ಮಹಾಪರಾಧ ! ಖಾಸಿಂಖಾನನನ್ನು ಗಲ್ಲಿಗೇರಿಸಿದುದು ಅಚಾತುರ್ಯ ! ಆದರೆ ತಾವು ನಗರದ ನವಾಬಗಿರಿಯನ್ನು ಪರಿತ್ಯಾಗ ಮಾಡಿದ್ದು ಸರ್ವಥಾ ಯುಕ್ತವೆಂದು ನನಗೆ ಕಾಣುವುದಿಲ್ಲ. ತಾವು ಆ ಸಮಯದಲ್ಲಿ ನಮ್ಮ ದರಬಾರಿಗೆ ದಯಮಾಡಿಸಿ ದರ್ಶನ ಕೊಟ್ಟಿದ್ದರೆ, ಈ ಪ್ರಕರಣಗಳೆಲ್ಲವನ್ನೂ ತಪ್ಪಿಸಬಹು

ದಾಗಿತ್ತು ದೊಡ್ಡ ನವಾಬರ ಸ್ವೀಕೃತ ಪುತ್ರರಿಗೆ, ಮಹಾ ವೀರಪುರುಷರಾದ ತಮಗೆ ಮೈಸೂರು ದರ್ಬಾರಿಗೆ ಬರುವ ಧೈರ್ಯವಿಲ್ಲವೆಂಬುದನ್ನು ನಾನೊಪ್ಪುವುದಿಲ್ಲ ಈ ದರ್ಬಾರಿನಲ್ಲಿ ಪ್ರತಿಯೊಬ್ಬ ಸೈನಿಕನಿಗೂ ತಮ್ಮ ಮೇಲಿನ ಅಭಿಮಾನವು ಅಪಾರ ವಾದುದು ಅದಕ್ಕೆ ಮಹಮದಾಲಿಯವರೇ ನಿದರ್ಶನ. ಜಲಾಲುದ್ದೀನರ ಭವ್ಯವರ್ತ ನೆಯು ಇಂದಿಗೂ ನಿದರ್ಶನ ನಾನು ತಮ್ಮ ಮೇಲೆ ಆಕ್ಷೇಪಣೆ ಮಾಡುತ್ತಿಲ್ಲ ಮೈಸೂರಿನ ರಾಜಕೀಯದಲ್ಲಿ ನಾನು ಮತ್ತು ತಾವು ಇಬ್ಬರೂ ತಪ್ಪಿ ನಡೆದಿದ್ದೇವೆಂದು ಅರಿಕೆ ಮಾಡುತ್ತೇನೆ ಒಂದು ಪಕ್ಷ ತಾವೇ ಮೈಸೂರಿನ ಸುಲ್ತಾನರಾಗಿದ್ದರೆ ಯಾವ ಕಾರಣಕ್ಕಾಗಿಯಾದರೂ, ರಾಜ್ಯ ಪರಿತ್ಯಾಗ ಮಾಡುತ್ತಿದ್ದಿರೇನು ? ಹಾಗೆಯೇ ನಗರದ ನವಾಬಗಿರಿಯನ್ನು ಪರಿತ್ಯಾಗ ಮಾಡಲು ತಮಗೆ ಅಧಿಕಾರವೆಲ್ಲಿದೆ ? ದೊಡ್ಡ ನವಾಬರ ವರು ತಮಗೆ ಒಪ್ಪಿಸಿದ ನವಾಬಗಿರಿಯನ್ನು ಕಿತ್ತುಕೊಳ್ಳಲು ನನಗೆ ಅಧಿಕಾರವೆಲ್ಲಿದೆ ? ನಮ್ಮ ಈ ಕಥೆಯನ್ನು ನೋಡಿ ನಮ್ಮ ಶತ್ರುಗಳು ಏನೆಂದುಕೊಂಡಾರು ? ತಾವು ತಮ್ಮ ನಗರದ ನವಾಬಗಿರಿಯನ್ನು ಪರಿಗ್ರಹಿಸಲೇ ಬೇಕು. ತಾವು ಇಂದಿನಿಂದ ಪುನಃ ನಗರದ ನವಾಬರೆಂದು ನಾನು ಸಾರುತ್ತೇನೆ. ತಮ್ಮ ಸದುತ್ತರವನ್ನು ನಿರೀಕ್ಷಿಸುತ್ತಿದ್ದೇನೆ ಈ ಚಿತ್ರದುರ್ಗದ ಕೋಟೆಯನ್ನು ತಮ್ಮ ಸ್ವಾಧೀನ ಪಡಿಸಿ ನಾನು ರಾಜಧಾನಿಗೆ ಹಿಂದಿರುಗುತ್ತೇನೆ

ತಮ್ಮ ಪ್ರಿಯಸಹೋದರ,
ಟಿಪ್ಪೂಸುಲ್ತಾನ್.

ಈ ಪತ್ರವನ್ನು ಕೇಳಿ ದೌಲತ್ತಳೂ, ರಾಧೆಯೂ "ನಿಜ ! ನಿಜ ! ಅಕ್ಷರ ಅಕ್ಷರವೂ ನಿಜ !" ಎಂದು ಹೇಳಿದರು ಇಯಜ್‌ಖಾನನು ತಲೆದೂಗಿದನು. ಸ್ವಲ್ಪ ಹೊತ್ತು ಮೌನವಾಗಿದ್ದು "ಸುಲ್ತಾನನು ಮಹಾಪುರುಷ !" ಎಂದನು ಮತ್ತೇನೂ ಮಾತನಾಡಲಿಲ್ಲ !

ದೌಲತ್ ಮತ್ತು ರಾಧಾರಾಣಿಯವರ ಮನಸ್ಸಿನಲ್ಲಿ ಸುಲ್ತಾನನ ಪತ್ರಕ್ಕೆ ಉತ್ತರವೇನು ? ಎಂಬ ಆಕಾಂಕ್ಷೆ ಎದ್ದಿತು. ಅವರಿಗೆ ಸ್ಪಷ್ಟವಾದ ಉತರವು ದೊರೆಯಲೇ ಇಲ್ಲ !

## ಸುಲ್ತಾನರ ಶಿಬಿರದಲ್ಲಿ ದೌಲತ್‌ರಾಣಿ

ಇಯಜ್‌ಖಾನನು ಹುಸೇನ್‌ಖಾನನನ್ನು ಕರೆಸಿ ಅಂದಿನ ದಿನವೇ ಈ ಶಿಬಿರವನ್ನು ಎತ್ತಬೇಕೆಂದು ಆಜ್ಞಾಪಿಸಿದನು. ದೌಲತ್‌ರಾಣಿ ರಾಧಾರಾಣಿಯರು ದರಿಯಾ ಬಾಗಿಗೆ ಪ್ರಯಾಣಮಾಡಿದರು. ಅಲ್ಲಿದ್ದ ಸೈನಿಕರಿಗೆಲ್ಲಾ ಒಂದು ವರ್ಷದ ಸಂಬಳ ವನ್ನು ಬಟವಾಡೆ, ಮಾಡಿದರು. ಸರದಾರರಿಗೆಲ್ಲಾ ಯಥೇಚ್ಛವಾಗಿ ಹಣವನ್ನು

ಕೊಟ್ಟು, ಇಯಜ್‌ಖಾನರು ಎಲ್ಲರನ್ನೂ ಸಂತೈಸಿ ಕಳುಹಿಸಿಕೊಟ್ಟರು. ಈ ಶಿಬಿರ ವನ್ನೆಲ್ಲಾ ಎತ್ತಿಬಿಡಲು ಮೂರುದಿನಗಳಾಯಿತು. ಆ ಮೂರು ದಿವಸಗಳು ಇಯಜ್ ಖಾನನು ಅಲ್ಲೇ ಇದ್ದನು ಸೋನಾಮುಹಲಿಗೆ ಭೇಟಿ ಕೊಡಲಿಲ್ಲ ಈ ಸಮಾಚಾರ ವೆಲ್ಲಾ ದಿವಾನ್ ಜನಾಲುದ್ದೀನರಿಗೆ ತಿಳಿದಿತ್ತು. ನಗರದ ನವಾಬರು ಪುನಃ ರಾಜ್ಯ ಭಾರವನ್ನು ಸ್ವೀಕರಿಸುವರೆಂದು ಅವರು ಭಾವಿಸಿದರು ಇದರಿಂದ ಅವರಿಗಾದ ಆನಂ ದಕ್ಕೆ ಪಾರವೇ ಇಲ್ಲ! ದಿವಾನರವರು ಇಯಜ್‌ಖಾನರ ಭೇಟಿಗೆ ಹೇಳಿಕಳಿಸಿದರು ಖಾನರು ಒಪ್ಪಲಿಲ್ಲ ತಾವೇ ಬಂದು ದಿವಾನರನ್ನು ಭೇಟಿಮಾಡುವುದಾಗಿ ಉತ್ತರ ಕಳುಹಿಸಿಬಿಟ್ಟರು ಮೂರು ದಿನಗಳಲ್ಲಿ ಆ ಅರಣ್ಯಮಧ್ಯದಲಿ ಅದೇ ಪಾಳುದೇವಾ ಲಯ! ಅಲ್ಲಿ ಈ ರಾಜಶಿಬಿರವಿದ್ದ ಚಿಹ್ನೆಗಳೇ ಇಲ್ಲ ಕಲ್ಲಿನ ಚಪ್ಪಡಿಗಳನ್ನು ಹಾಕಿ ಆ ಮಂಟಪದ ಬಾಗಿಲು ಬಡಾಯಿಸಲ್ಪಟ್ಟಿತ್ತು ಪಾಳುದೇವಾಲಯವು ಯಥಾ ಪ್ರಕಾರ ಪಾಳುದೇವಾಲಯವೇ ಆಗಿಹೋಯಿತು.

ಸಂಧ್ಯಾಕಾಲ ಇಯಜ್‌ಖಾನನು ದರಿಯಾಬಾಗಿಗೆ ಹೋದನು ಸೋನಾ ಮುಹಲನ್ನು ಪ್ರವೇಶಮಾಡಿದನು ದೌಲತ್ತಳನ್ನು ಭೇಟಿಮಾಡಿದನು ದೌಲತ್ತಳು ಪೂರ್ವದಂತೆ ಇಂದು ಖಾನನ ಸ್ನೇಹಿತಳಲ್ಲ! ಅವನ ಸುಖದುಃಖದಲ್ಲಿ ಸಮಭಾಗಿನಿ ಯಾದ ಧರ್ಮಪತ್ನಿ! ಅವಳ ಮುಖವು ಕಳೆಗುಂದಿತ್ತು ಅವಳ ಆ ನಿಸ್ತೇಜವಾದ ಮುಖವನ್ನು ನೋಡಿ ಇಯಜ್‌ಖಾನನಿಗೆ ಎದೆಯೊಡೆದುಹೋಯಿತು ಅದರ ಕಾರ ಣವನ್ನು ಕೇಳುವ ಧೈರ್ಯ ಖಾನನಲ್ಲಿರಲಿಲ್ಲ ದೌಲತ್ತಳಿಗೂ, ಇಯಜ್‌ಖಾನನು ನವಾಬಗಿರಿಯನ್ನು ಸ್ವೀಕರಿಸುವನೋ ಇಲ್ಲವೋ ಎಂಬ ಶಂಕೆಯು ಪ್ರಬಲವಾಗಿತ್ತು ಅದನ್ನು ತಿಳಿದುಕೊಳ್ಳಬೇಕೆಂಬ ಆಶೆ! ಕೇಳಲು ಧೈರ್ಯವಿಲ್ಲ ಇಯಜ್‌ಖಾನನು ಅಲಸನಾಗಿದ್ದನು ಲೋಡನ್ನು ಒರಗಿಕೊಂಡು ಕುಳಿತುಕೊಂಡನು ದೌಲತ್ತಳು ಹುಕ್ಕಾವನ್ನು ತಂದಿಟ್ಟು ಚಿನ್ನದ ನಳಿಗೆಯನ್ನು ಖಾನನ ಕೈಗ ಕೊಟ್ಟಳು ಖಾನನು ಆ ನಳಿಗೆಯನ್ನು ತೆಗೆದುಕೊಂಡು ಶೀಘುಪಾನಾಸಕ್ತನಾದನು ದೌಲತ್ತಳು ಮೆಲ್ಲ ಮೆಲ್ಲಗೆ ಮಾತನಾಡತೊಡಗಿದಳು ಶಿಬಿರವನ್ನು ಎತ್ತಿದ ಕಾರಣವನ್ನು ಕೇಳಿದಳು. ಆ ಶಿಬಿರ ಪ್ರದೇಶವು ಎಷ್ಟೋ ರಮಣೀಯವಾಗಿತ್ತೆಂದು ಹೇಳಿದಳು. ಈ ಸೋನಾ ಮುಹಲಿಗಿಂತ ಆ ವನಪ್ರದೇಶವೇ ರಮ್ಯವಾಗಿದೆಯೆಂದು ಹೇಳಿದಳು ಆ ಶಿಬಿರದ ಸ್ಮರಣೆಯಲ್ಲಿ ಖಾನನು ದೌಲತ್ತಳನ್ನು ಕೊಂಚ ಪರಿಹಾಸ್ಯ ಮಾಡಿದನು. ದೌಲತ್ತ ಳಿಗೆ ಆ ಸ್ಮರಣೆಯು ಬಂದಿತು ಆ ಶಿಬಿರವು ದೌಲತ್ತಳ ಸ್ವಯಂವರಮಂಟಪ! ಅವಳು ನಾಚಿಕೆಯಿಂದ ತಲೆ ತಗ್ಗಿಸಿದಳು. ಈ ಸಮಯಕ್ಕೆ ಸರಿಯಾಗಿ ರಾಧೆಯು ಅಂತಃಪುರದೊಳಗೆ ಪ್ರವೇಶಮಾಡಿದಳು ದೌಲತ್‌ರಾಣಿಯೂ, ಖಾನನೂ ಏಕಾಂತ ದಲ್ಲಿರುವುದನ್ನು ನೋಡಿ ರಾಧೆಗೆ ಆನಂದವಾಯಿತು. ಇದು ನಿಜವಾದ ಗೃಹಸ್ಥಾ

ಶ್ರಮ ಎಂದುಕೊಂಡಳು ಒಳಗೆ ಬಂದು ದೌಲತ್ತಳ ಪಕ್ಕದಲ್ಲಿ ಕುಳಿತು ಅವಳ ಬೆನ್ನು ತಟ್ಟಿದಳು

ಖಾನನು ಚಮಕಿತನಾಗಿ ನೋಡಿದನು ಸರಿಯಾಗಿ ಕುಳಿತುಕೊಂಡು ಮುಗುಳುನಗೆಯಿಂದ, "ರಾಧಾರಾಣಿಯವರೇ! ಯಾವ ಹೊಸ ಸಂಧಾನವನ್ನುತಂದಿದ್ದೀರಿ ?" ಎಂದು ಹಾಸ್ಯಮಾಡಿ ಕೇಳಿದನು

ರಾಧೆಯು ನಗುತ್ತಾ "ನವಾಬರೇ! ನನ್ನ ಸಂಧಾನನೇನಿದೆ? ತನ್ನಷ್ಟಕ್ಕೆ ತಾನೇ ನಡೆಯುವ ಸಂಧಿ-ವಿಗ್ರಹಗಳಲ್ಲಿ ನಾನು ಸಾಕ್ಷಿ" ಎಂದಳು

ಇಯಜ್—ರಾಧಾರಾಣಿಯವರೇ! ತಮ್ಮ ಬುದ್ಧಿಯು ಅಸಾಧಾರಣವಾದುದು. ಈ ದೌಲತ್‌ರಾಣಿಯವರನ್ನು ನನಗೆ ಸ್ವಯಂವರ ಮಾಡಿಸಿದವರು ನೀವು ಈ ನಗರದ ರಾಜ್ಯವನ್ನು ಪುನಃ ನನಗೆ ಕೊಡಿಸಲು ಸಂಧಾನ ಮಾಡುತ್ತಿರುವವರು ತಾವು. ತಮ್ಮ ಕ್ರಿಯಾಶಕ್ತಿಯು ಮತ್ತಾವ ಕಡೆಗೆ ತಿರುಗುತ್ತದೋ ನೋಡಬೇಕು ?

ರಾಧೆ—ಖಾನರೇ! ಆ ಉಪಚಾರೋಕ್ತಿಗಳು ಹಾಗಿರಲಿ! ತಾವು ನಗರದ ನವಾಬಗಿರಿಯನ್ನು ಸ್ವೀಕಾರಮಾಡಲು ಏನುಹೇಳುತ್ತೀರಿ? ನಾನು ಸುಲ್ತಾನರವರಿಗೆ ಸ್ಪಷ್ಟವಾದ ಉತ್ತರ ಕೊಡಲೇಬೇಕು ಇದು ಸಾಮಾನ್ಯವಿಚಾರವಲ್ಲ. ಮಹತ್ತರವಾದ ರಾಜಕೀಯ

ಇಯಜ್—ರಾಣಿಯವರೇ! ಹೌದು, ಅದು ನಿಜ. ಅಂದು ರಣಕ್ಷೇತ್ರದಲ್ಲಿ ನೀವು ನಿಮ್ಮ ಪ್ರಾಣವನ್ನೊಪ್ಪಿಸಿ ಸುಲ್ತಾನರ ಪ್ರಾಣವನ್ನು ಉಳಿಸಿದಿರಿ ಈ ನಗರದ ನವಾಬಗಿರಿಯನ್ನು ಸುಲ್ತಾನರು ತಮಗಾಗಿ ನನಗೆ ಪುರಸ್ಕಾರ ಕೊಟ್ಟಿದ್ದರೂ ಕೊಟ್ಟಿರಬಹುದು

ರಾಧೆ—ಕಾರ್ಯಕಾರಣಗಳು ಹೇಗೇ ಇರಲಿ, ತಾವು ನಗರದ ನವಾಬಗಿರಿಯನ್ನು ಮನಃಪೂರ್ವಕವಾಗಿ ಸ್ವೀಕರಿಸಬೇಕೆಂಬುದೇ ನನ್ನ ಆಕಾಂಕ್ಷೆ

ಇಯಜ್—ರಾಧಾರಾಣಿಯವರೇ! ಅದು ಸೂಕ್ತವಾಗಿಯೇ ಇದೆ ದೌಲತ್‌ರಾಣಿಯವರಿಗಾಗಿ ನಾನು ಹೇಗೆ ಹೇಗೆ ಈ ರಾಜ್ಯಪರಿತ್ಯಾಗ ಮಾಡಿದೆನೋ, ಹಾಗೆಯೇ ಸುಲ್ತಾನರವರು ಇನ್ನೂ ಅತಿಶಯವಾದ ಔದಾರ್ಯದಿಂದ ಈ ನಗರದ ನವಾಬಗಿರಿಯನ್ನು ನನಗೊಪ್ಪಿಸಿದ್ದಾರೆ ಇಂದು ನಾನು ಗೃಹಸ್ಥ! ಈ ನವಾಬಗಿರಿಯನ್ನೊಪ್ಪಿಕೊಂಡು, ಈ ದೌಲತ್‌ರಾಣಿಯವರೊಡನೆ ಸುಖವಾಗಿರಬಹುದು. ಆದರೆ ಇಂದಿನಿಂದ ನಾನು ಸ್ವತಂತ್ರನಲ್ಲ. ಸುಲ್ತಾನರ ಗುಲಾಮ ನಾನು ನಗರದ ನವಾಬಗಿರಿಯನ್ನು ಸ್ವೀಕರಿಸಿದರೆ ಮಹಮ್ಮದಾಲಿಯವರ ಪುಣ್ಯಮೂರ್ತಿಯು ಪ್ರತಿದಿನವೂ ನನ್ನ ಮುಂದೆ ಬಂದು ನಿಲ್ಲುತ್ತದೆ. ಅವರಿಗೆ ಏನು ಹೇಳಲಿ? ಖಾಸಿಂಖಾನನ ವೀರಮೂರ್ತಿಯು ಪ್ರತಿಕ್ಷಣದಲ್ಲಿಯೂ ನನ್ನ ಮುಂದೆ ಪ್ರತ್ಯಕ್ಷವಾಗುತ್ತದೆ.

ಅದಕ್ಕೇನು ಉತ್ತರ ಕೊಡಲಿ ? ಸುಲ್ತಾನರ ಸೈನ್ಯದಿಂದ ಪ್ರಕ್ಷುಬ್ಧರಾಗಿರುವ ಈ ಹಿಂದೂ ಪಾಳಯಗಾರರಿಗೆ ಏನು ಆಶ್ವಾಸನ ಕೊಡಲಿ ? ಇದಕ್ಕೆಲ್ಲಾ ನಾನೇನು ಮಾಡಲಿ ? ನೀವು ನನ್ನ ನವಾಬಗಿರಿಯನ್ನು ಹೃತ್ಪೂರ್ವಕವಾಗಿ ಅಭಿಲಾಷಿಸುತ್ತೀರಿ! ದೌಲತ್‌ರಾಣಿಯವರೇನು ಹೇಳುತ್ತಾರೆ ?

ದೌಲತ್—ನಾನು ನವಾಬಗಿರಿಯನ್ನು ಒಪ್ಪುವುದಿಲ್ಲ ತಮ್ಮ ವೀರತ್ವಕ್ಕೆ ಕಳಂಕ ಬರುವ ಚಿನ್ನದ ಬೆಟ್ಟವಾದರೂ ಅದು ನನಗೆ ಬೇಡ ! ನಾನು ತಮ್ಮೊಡನೆ ವನವಾಸಿಯಾಗಿ ಈ ಪಶ್ಚಿಮಘಟ್ಟದ ವನಪ್ರದೇಶದಲ್ಲಿ ಅಲೆಯಲು ಸಂತೋಷದಿಂದ ಸಿದ್ಧಳಾಗಿರುವೆನು.

ರಾಧೆಯ ಕಣ್ಣುಗಳಲ್ಲಿ ಜಲಧಾರೆಯು ಹರಿಯಿತು ! ಅವಳು ಗದ್ಗದ ಸ್ವರದಿಂದ ಆ ವೀರದಂಪತಿಗಳನ್ನು ಕೊಂಡಾಡಿದಳು.

ರಾಧಾರಾಣಿಯು ಇಯಜ್‌ಖಾನನ ಕಡೆ ತಿರುಗಿ "ಖಾನರವರೇ ! ತಾವು ಸುಲ್ತಾನರ ಸೌಜನ್ಯಕ್ಕೆ, ಅವರ ಔದಾರ್ಯಕ್ಕೆ ಏನು ಉತ್ತರ ಕೊಡುವಿರಿ ?" ಎಂದು ಕೇಳಿದಳು

ಇಯಜ್‌ಖಾನನು ರಾಣಿಯವರೇ ! ನಾನು ಸದುತ್ತರವನ್ನು ಕೊಡುವೆನು ಅದನ್ನು ತಾವೇ ಕೊಂಡುಹೋಗಿ ಸುಲ್ತಾನರವರಿಗೆ ತಲಪಿಸಬೇಕು. ಇದು ನನ್ನ ಪ್ರಾರ್ಥನೆ ಎಂದುತ್ತರವಿತ್ತನು.

ರಾಧಾರಾಣಿಯು ಆ ಮಹಾನುಭಾವನಾದ ಸುಲ್ತಾನನನ್ನು ನಾನು ಮನ ನೋಯಿಸಲಾರೆ ಅವರ ಆ ಪ್ರಸನ್ನ ಪತ್ರಕ್ಕೆ ತಮ್ಮದು ವಿಮುಖವಾದ ಉತ್ತರ ! ಅದನ್ನು ಧರಿಸಿ ಭರಿಸುವ ಶಕ್ತಿಯು ನನಗಿಲ್ಲ ! ಎಂದಳು.

ದೌಲತ್—ಆ ಉತ್ತರವನ್ನು ನನ್ನ ಕೈಗೆ ಕೊಡಿರಿ ನಾನು ತಮ್ಮ ಅರ್ಧಾಂಗಿ ಅದರಲ್ಲಿ ಹಾಲಾಹಲವಿಷವಿದ್ದರೂ ಅದನ್ನು ನಾನು ಕೊಂಡುಹೋಗಿ ತಲಪಿಸುತ್ತೇನೆ ಎಂದು ಹೇಳಿದಳು.

ಖಾನನು ನಕ್ಕನು.

ರಾಧೆಯು ಬೆಪ್ಪಾಗಿ ನೋಡುತ್ತ ಕುಳಿತಳು.

ಮಾರನೆಯ ದಿನವೇ ದೌಲತ್ತಳು ಸುಲ್ತಾನನ ಶಿಬಿರಕ್ಕೆ ಪ್ರಯಾಣಮಾಡಲು ಎಲ್ಲವೂ ಸಿದ್ಧವಾಯಿತು ಖಾನನು ಬಹುಕಷ್ಟದಿಂದ ಸುಲ್ತಾನರಿಗೆ ಪತ್ರವನ್ನು ಬರೆದು ಸಿದ್ಧಗೊಳಿಸಿದನು. ಆ ಪತ್ರದ ವಿವರಣೆಯು ಹೀಗಿದ್ದಿತು—

"ಷಹಾಷಹಾ ಮೈಸೂರಿನ ಸುಲ್ತಾನರವರೇ !

ತಮ್ಮ ಪ್ರೀತಿಯ ಪತ್ರವು ನನಗೆ ಬಂದು ತಲುಪಿತು ಎಷ್ಟೇ ಪ್ರಯತ್ನ ಪಟ್ಟರೂ ಅದಕ್ಕೆ ಉತ್ತರ ಕೊಡುವ ಧೈರ್ಯವು ನನಗೆ ಬಾರದಾಯಿತು ತಾವು

ತೋರಿಸಿರುವ ಸೌಜನ್ಯ ಔದಾರ್ಯಗಳಿಗೆ ಉತ್ತರ ಕೊಡುವವನಾರು? ನಿಜವಾಗಿಯೂ ದೊಡ್ಡ ನವಾಬರಿಗೆ ಕೂಡ ಇಂತಹ ಹೃದಯ ವೈಶಾಲ್ಯವಿದ್ದಿತೆಂದು ನಾನು ಬಗೆಯ ಲಾರೆ ತಮ್ಮ ಪತ್ರಕ್ಕೆ ಸಮಂಜಸವಾದ ಉತ್ತರವೆಂದರೆ ನಾನು ಸನ್ನಿಧಾನಕ್ಕೆ ಹಾಜರಾಗಿ ಆಮರಣಾಂತ ತಮ್ಮ ಸೇವೆಯಲ್ಲಿ ಜನ್ಮ ಸಾರ್ಥಕ ಮಾಡಿಕೊಳುವುದೇ ಆಗಿದೆ ಮೈಸೂರಿನ ಪ್ರಕೃತ ರಾಜಕಾರಣವನ್ನು ವಿಮರ್ಶಿಸಿದರೆ ನಾನು ಪುನಃ ನಗರದ ನವಾಬನಾಗುವುದು ಶ್ರೇಯಸ್ಕರವಲ್ಲ ದಿವಾನ್ ಜನಾಲುದ್ದೀನರು ದಕ್ಷರಾದ ಅಧಿಕಾರಿಗಳು ಅವರ ಆಡಳಿತದಲ್ಲಿ ನಗರವು ಶಾಂತವಾಗಿದೆ ನಾನು ನಗರದ ರಾಜ್ಯವನ್ನು ಬಿಟ್ಟು ದೇಶಾಂತರ ಹೋಗುತ್ತೇನೆ ಅದಕ್ಕೆ ಅನುಜ್ಞೆಯನ್ನು ಕೊಡೋಣವಾಗಲಿ ಈ ಮೈಸೂರು ರಾಜ್ಯಕ್ಕೋಸ್ಕರ ಹೊರದೇಶದಲ್ಲಿ ಸೇವೆ ಮಾಡುವುದು ನನ್ನ ಪಾಲಿಗೆ ಬಂದ ಭಾಗ್ಯವೆಂದುಕೊಳ್ಳುತ್ತೇನೆ. ನನ್ನ ಅಪರಾಧವನ್ನು ಕ್ಷಮಿಸಿರಿ ತಮ್ಮ ಅಪರಾಧವು ಎಳ್ಳಷ್ಟೂ ಇಲ್ಲ. ದೊಡ್ಡ ನವಾಬರಿದ್ದಿದ್ದರೂ ದರ್ಬಾರೀಪದ್ಧತಿಯಂತೆ ಹೀಗೇ ಆಗುತ್ತಿತ್ತು ಮೈಸೂರಿನ ಸಿಂಹಾಸನದಲ್ಲಿ ನಾನೇ ಕುಳಿತಿದ್ದರೂ ಹೀಗೆಯೇ ಮಾಡುತ್ತಿದ್ದೆನೆಂದು ನನ್ನ ಅಂತರಾತ್ಮವು ಹೇಳುತ್ತದೆ ಆದರೂ ಮಹಾಪುರುಷರಾದ ಮಹಮ್ಮದಾಲಿಯವರಿಗಾಗಿಯೂ, ವೀರಾಗ್ರೇಸರನಾದ ಖಾಸಿಂಖಾನನಿಗಾಗಿಯೂ ನಾನು ಆಮರಣಾಂತ ದುಃಖಿಸದೇ ತಪ್ಪದು ತಾವೂ ಮಾನವಹೃದಯದಿಂದ ಪರಿತಪಿಸುವಿರೆಂಬುದನ್ನು ನಾನು ಬಲ್ಲೆ ಮುಂದಾದರೂ ನಮ್ಮಗಳ ಕೈಯಿಂದ ಭಗವಂತನು ಇಂತಹ ಕಾರ್ಯಗಳನ್ನು ಮಾಡಿಸದಿರಲಿ ಹುಜೂರಿನ ಅಪ್ಪಣೆಯಂತೆ ಅಲ್ಲಿಯ ಕಾರ್ಯಕಲಾಪಗಳಿಗಾಗಿ ಒಂದು ಕೋಟಿ ವರಹಾಗಳನ್ನು ಸನ್ನಿಧಾನಕ್ಕೆ ಅರ್ಪಿಸಿದ್ದೇನೆ.

ತಮ್ಮ ಸೇವಕ,

ಇಯಜ್ ಖಾ."

ಈ ಪತ್ರವನ್ನು ದೌಲತ್ತಳು ಕೈಗೆ ತೆಗೆದುಕೊಂಡಳು ರಾಧಾರಾಣಿಯೂ, ದೌಲತ್ತಳೂ ಆ ಪತ್ರವನ್ನು ಓದಿ ನೋಡಿದರು ನಾಲ್ಕಾರು ಬಾರಿ ಓದಿದರು. ಸುಲ್ತಾನನ ಪತ್ರವನ್ನು ತೆಗೆದಿಟ್ಟುಕೊಂಡು ಎರಡನ್ನೂ ಹೊಂದಿಸಿ ಓದಿ ನೋಡಿದರು ಅದು ಸರಿಯೇ, ಇದು ಸರಿಯೇ ! ಎಂದು ಮಾತನಾಡಿಕೊಂಡರು ಸುಮ್ಮನಾದರು ! ದೌಲತ್ತಳು ಉತ್ಸಾಹದಿಂದ ಪ್ರಯಾಣಕ್ಕೆ ಸಿದ್ಧಳಾದಳು ಒಂಟೆಗಳ ಮೇಲೆ ಚಿನ್ನದ ಮೊಹರಾಗಳ ಥೈಲಿಗಳನ್ನು ಹೇರಿ ಭದ್ರವಾಗಿ ಕಟ್ಟಿದರು ಇನ್ನೂರೈವತ್ತು ಮಂದಿ ಕುದುರೆಯ ಸವಾರರು ಕಾವಲಿಗಾಗಿ ಹೊರಟರು. ಹುಸೇನ್‌ಖಾನನು ಅವರ ನಾಯಕನಾಗಿ ಮುಂದೆ ಹೊರಟನು. ಈ ಪುಟ್ಟ ಸೈನ್ಯವು ನಗರದಿಂದ ಚಿತ್ರದುರ್ಗಕ್ಕೆ ಪ್ರಯಾಣ ಮಾಡುವ

ದಕ್ಕೆ ದಿವಾನ್ ಜಲಾಲುದ್ದೀನರ ರಹದಾರಿಯಿತ್ತು ಹೀಗೆ ದೌಲತ್ತಳು ಸುಲ್ತಾನನ ಶಿಬಿರಕ್ಕೆ ತೆರಳಿದಳು.

ಸೋನಾಮಹಲಿನಲ್ಲಿ ಇಂದು ದೌಲತ್ತಳಿಲ್ಲ ದೌಲತ್ತಳಿಲ್ಲದ ಮಹಲು ಕಲಾಹೀನವಾಗಿ ಭಾಸವಾಗುತ್ತದೆ ಖಾನನ ಮನಸ್ಸು ಇಂದು ಉದ್ವಿಗ್ನವಾಗಿದೆ ರಾಧಾರಾಣಿಯು ಖಾನನನ್ನು ಎಷ್ಟೋ ಉಪಚರಿಸಿದಳು ಅಂದು ಆ ಸೋನಾಮಹಲಿನಲ್ಲೆಲ್ಲಾ ಅವರಿಬ್ಬರೇ! ಖಾನನು ತಾನು ನಗರದ ರಾಜ್ಯವನ್ನು ಬಿಟ್ಟುಹೋಗುವ ನಿರ್ಧಾರವನ್ನು ಮತ್ತೊಮ್ಮೆ ರಾಧಾರಾಣಿಗೆ ವಿವರಿಸಿ ಹೇಳಿದನು ಬಗೆಬಗೆಯಿಂದ ರಾಧೆಯನ್ನು ಒಪ್ಪಿಸಿದನು. ಮಾರನೇ ದಿನ ಪ್ರಾತಃಕಾಲದಲ್ಲಿಯೇ ಇಯಜ್‌ಖಾನನು ಅಶ್ವಾರೂಢನಾಗಿ ಹೊರಟನು ರಾಧೆಯು ಕುದುರೆಯನ್ನೇರಿ ಸ್ವಲ್ಪ ದೂರ ಹಿಂಬಾಲಿಸಿದಳು. ಆ ಸಮಯಕ್ಕೆ ಸರಿಯಾಗಿ ಜಲಾಲುದ್ದೀನರು ಒಂದು ನವಾಬರ ದರ್ಶನವನ್ನು ತೆಗೆದುಕೊಂಡರು ನವಾಬರು ಹರ್ಷಚಿತ್ತರಾಗಿ, ತಾವು ಆ ದಿನವೇ ನಗರದ ಶೀಮೆಯನ್ನು ಬಿಟ್ಟು ಹೊರಡುವುದಾಗಿಯೂ, ಈ ವಿಷಯವನ್ನು ಸುಲ್ತಾನರಿಗೆ ಬರೆದು ಕಳಿಸಿರುವುದಾಗಿಯೂ ಹೇಳಿದರು ಅವರನ್ನು ಬೀಳ್ಕೊಂಡು ಹೊರಟರು ರಾಧಾರಾಣಿಯು ಹಿಂದೆ ಹಿಂದೆ ಹೋದಳು. ಸ್ವಲ್ಪದೂರ ನಡೆಯುತ್ತಲೇ ಖಾನನು ರಾಧಾರಾಣಿಗೆ ವಂದಿಸಿ, ಅವರ ಅಪ್ಪಣೆಯನ್ನು ಬೇಡಿದನು ಅರಣ್ಯ ಪ್ರದೇಶದಲ್ಲಿ ಮಧ್ಯಮಾರ್ಗದಲ್ಲಿ ಸಜಲನಯನೆಯಾಗಿ ರಾಧೆಯು ಬಿರುಗಣ್ಣು ಬಿಟ್ಟು ನೋಡುತ್ತಾ ನಿಂತಳು ಕುದುರೆಯು ತಾನಾಗಿ ನಿಂತಿತು ಖಾನನು ವೇಗವಾಗಿ ತನ್ನ ಕುದುರೆಯನ್ನು ಓಡಿಸಿದನು. ಖಾನನ ಮೂರ್ತಿಯು ಕಣ್ಣಿಗೆ ಕಾಣುವವರೆಗೂ, ಖಾನನ ಕುದುರೆಯ ಖುರಧ್ವನಿಯು ಕಿವಿಗೆ ಕೇಳುವವರೆಗೂ ರಾಧೆಯು ನಿಂತಲ್ಲಿಯೇ ಶಿಲಾಮೂರ್ತಿಯಂತೆ ನಿಂತಿದ್ದಳು ಖಾನನು ಬಹುದೂರ ಹೊರಟುಹೋದನು ರಾಧಾರಾಣಿಯು ನಿರ್ವಿಣ್ಣಳಾಗಿ ಹಿಂದಿರುಗಿದಳು

ಖಾನನು ಎಲ್ಲಿ ಹೋದನೋ! ಯಾರಿಗೂ ಗೊತ್ತಿಲ್ಲ. ಅವನನ್ನು ಆಮೇಲೆ ಯಾರೂ ಎಲ್ಲಿಯೂ ಕಾಣಲಿಲ್ಲ!

ರಾಧಾರಾಣಿಯು ಸೋನಾಮಹಲಿಗೆ ಹಿಂತಿರುಗಿದಳು. ಅಲ್ಲಿ ದೌಲತ್ತಳಿಲ್ಲ. ಖಾನನು ಸರ್ವಸ್ವವನ್ನೂ ತ್ಯಾಗ ಮಾಡಿ, ತನ್ನ ಎದುರಿನಲ್ಲಿಯೇ ಹೊರಟುಹೋಗಿದ್ದಾನೆ ಆ ದುರ್ಭರವಾದ ಹೃದಯವೇದನೆಯನ್ನು ಸಹಿಸಲು ಅವಳಿಂದ ಸಾಧ್ಯವಾಗಲಿಲ್ಲ. ಅವಳು ತಕ್ಷಣವೇ ಹುಚ್ಚಳಂತೆ ಸೋನಾಮಹಲನ್ನು ಬಿಟ್ಟು ಹೊರಟಳು ಸುಲ್ತಾನರ ಶಿಬಿರಾಭಿಮುಖವಾಗಿ ಪ್ರಯಾಣ ಮಾಡಿದಳು. ಆ ಪ್ರಯಾಣದಲ್ಲಿ ದೌಲತ್ತಳನ್ನು ಸೇರುವವರೆಗೆ ರಾಧೆಯು ಎಲ್ಲಿಯೂ ನಿಲ್ಲಲಿಲ್ಲ ಯಾರೊಡನೆಯೂ

ಮಾತನಾಡಲಿಲ್ಲ. ದೌಲತ್ತಳನ್ನು ನೋಡಿದರೆ ಅವಳ ಹೃದಯಕ್ಕೆ ಶಾಂತಿಯಾದೀತು.

ಮಧ್ಯಮಾರ್ಗದಲ್ಲಿ ರಾಧೆಯು ದೌಲತ್ತಳನ್ನು ಸಂಧಿಸಿದಳು ದೌಲತ್ತಳು ರಾಧೆಯನ್ನು ನೋಡಿ ಆನಂದಿಸಿದಳು ಅವಳನ್ನು ಆಲಿಂಗಿಸಿದಳು ದೌಲತ್ತಳಿಗೆ ಎಷ್ಟೋ ಧೈರ್ಯವು ಬಂದ ಹಾಗಾಯಿತು ರಾಧೆಯು ಖಾನನು ಹೊರಟುಹೋದ ಸಮಾಚಾರವನ್ನು ದೌಲತ್ತಳಿಗೆ ನಿದಾನವಾಗಿ ತಿಳಿಸಿದಳು. ದೌಲತ್ತಳು ದುಃಖಪಡಲಿಲ್ಲ, ಭಯಪಡಲಿಲ್ಲ ದೌಲತ್ತಳು "ರಾಧಾರಾಣಿ ! ಆ ಇಯಜ್‌ಖಾನರು ಎಲ್ಲಿದ್ದರೂ ಪರಾಕ್ರಮಶಾಲಿ ! ಈ ಭೂಮಿಯನ್ನು ಆಳುವುದಕ್ಕಾಗಿ ಜನ್ಮವೆತ್ತಿರುವ ವೀರಪುರುಷ ಅವನನ್ನು ಅಂತಃಪುರದ ಪಂಜರದಲ್ಲಿ ಕೂಡಿಹಾಕಲಾದೀತೇ ? ನಾನು ಎಲ್ಲಿದ್ದರೂ ಆ ಇಯಜ್‌ಖಾನನ ಅರ್ಧಾಂಗಿ ದೇವಿ ! ಅದಕ್ಕಾಗಿ ನೀನೇಕೆ ದುಃಖಿಸುವೆ ?" ಎಂದಳು

ರಾಧೆ — ದೌಲತ್ ! ನಾನು ದುಃಖಿಸುತ್ತಿಲ್ಲ ತಾನಾಗಿ ಯಾವುದೋ ಉದ್ವೇಗವು ಬಂದು ಹೃದಯವನ್ನು ಕಲಕುತ್ತಿದೆ ಮನಸ್ಸನ್ನು ಸುಡುತ್ತಿದ ನಾವೆಲ್ಲರೂ ಮಾನವಲೋಕದ ಪ್ರಾಣಿಗಳು ದುಃಖದಲ್ಲಿ ದುಃಖ, ಸುಖದಲ್ಲಿ ಸಂತೋಷಗಳನ್ನು ಅನುಭವಿಸುತ್ತಿರುವ ಪಾಮರ ವ್ಯಕ್ತಿಗಳು ನಿನ್ನ ಸನ್ನಿಧಾನದಿಂದ ನಾನು ಶಾಂತಳಾದೆ ನನಗೆ ನೀನೇ ಸರ್ವಸ್ವ ! ಎಂದುತ್ತರವಿತ್ತಳು

ದೌಲತ್ತಳೂ, ರಾಧಾರಾಣಿಯೂ ನಾಲ್ಕನೇ ದಿನ ಸುಲ್ತಾನನ ಶಿಬಿರಕ್ಕೆ ಹೋಗಿ ತಲುಪಿದರು ಆ ಶಿಬಿರಕ್ಕೆ ನಾಲ್ಕು ಮೈಲಿಗಳ ದೂರದಲ್ಲಿ ಬೀಡುಬಿಟ್ಟರು ಸುಲ್ತಾನನ ಶಿಬಿರಕ್ಕೆ ಸಮಾಚಾರವನ್ನು ಹೇಳಿ ಕಳುಹಿಸಿದರು ಸುಲ್ತಾನನು ದೌಲತ್ ರಾಣಿಯವರೂ, ರಾಧಾರಾಣಿಯವರೂ ತನ್ನ ದರ್ಶನಕ್ಕೆ ಬಂದಿದ್ದಾರೆಂಬುದನ್ನು ಕೇಳಿ ಹರ್ಷಿತನಾಗಿ ಅವರನ್ನು ಎದುರುಗೊಂಡು ಕರೆತರುವಂತೆ ಸರದಾರರನ್ನು ಕಳಿಸಿದರು ಸರದಾರರು ಬಂದು ದೌಲತ್ ರಾಣಿಯವರಿಗೆ ಮುಜರೆ ಮಾಡಿ ಸುಲ್ತಾನರ ಅಪ್ಪಣೆಯನ್ನು ತಿಳಿಸಿದರು ದೌಲತ್ ರಾಣಿಯವರೂ, ರಾಧಾರಾಣಿಯೂ ಮ್ಯಾನಾದಲ್ಲಿ ಕುಳಿತು ಸುಲ್ತಾನನ ಶಿಬಿರಕ್ಕೆ ಹೊರಟರು. ಹುಸೇನ್‌ಖಾನನು ಒಂಟೆಗಳನ್ನು ಸುಲ್ತಾನನ ಶಿಬಿರಕ್ಕೆ ಸಾಗಿಸಿಕೊಂಡು ಹೋದನು ಸುಲ್ತಾನನು ತನ್ನ ವಾಸಗೃಹದ ಬಾಗಿಲಿನಲ್ಲಿಯೇ ಇಬ್ಬರು ರಾಣಿಯವರನ್ನೂ ಎದುರುಗೊಂಡನು ಆದರದಿಂದ ಒಳಕ್ಕೆ ಕರೆದೊಯ್ದು ಮರ್ಯಾದೆಯಿಂದ ಆಸನದಲ್ಲಿ ಕುಳ್ಳಿರಿಸಿದನು ಸುಲ್ತಾನನೂ ತನ್ನ ಆಸನದಲ್ಲಿ ಕುಳಿತನು ಪರಸ್ಪರ ಕುಶಲಪ್ರಶ್ನೆಗಳಾದ ನಂತರ ರಾಣಿಯವರುಗಳು ದಯಮಾಡಿಸಿದ ಕಾರಣವೇನೆಂದು ಸುಲ್ತಾನನು ವಿಚಾರಿಸಿದನು ರಾಧಾರಾಣಿಯು ಆಸನದಿಂದ ಎದ್ದು ಸುಲ್ತಾನನನ್ನು ವಂದಿಸಿ ಇಯಜ್‌ಖಾನರ ಪತ್ರವನ್ನು ಮರ್ಯಾದೆಯಿಂದ ಸುಲ್ತಾನನಿಗೆ ಒಪ್ಪಿಸಿದಳು ಸುಲ್ತಾನನು ಅದು ಇಯಜ್‌ಖಾನರ ಪತ್ರವೆಂದು ತಿಳಿಯುತ್ತಲೇ ಆದರದಿಂದ ಸ್ವೀಕರಿಸಿದನು.

ಆ ಪತ್ರವನ್ನು ಬಿಚ್ಚಿ ಓದಿದನು ಆ ಪತ್ರವನ್ನು ಓದುತ್ತ ಓದುತ್ತ ಅವನ ಕಣ್ಣು ಗಳಲ್ಲಿ ನೀರು ಸುರಿಯಿತು ಕಂಠವು ಗದ್ಗದವಾಯಿತು. "ನಾನು ಬಲ್ಲೆ ಇಯಜ್ ಖಾನನು ಹರಗಾರ" ಎಂದು ಹೇಳಿದನು ಒಂದು ಕೋಟಿ ವರಹಾಗಳನ್ನು ಕಳುಹಿಸಿ ದ್ದೇನೆ ಎಂಬುದನ್ನು ಓದಿ ಸುಲ್ತಾನನಿಗೆ ಆಶ್ಚರ್ಯವಾಯಿತು ! ಸುಲ್ತಾನನು ಸಹಿಸ ಲಾರದ ದುಃಖದಿಂದ "ರಾಣಿಯವರೇ ! ಇಯಜ್‌ಖಾನರು ಎಲ್ಲಿದ್ದಾರೆ ? ಯಾವಾಗ ನಗರವನ್ನು ಬಿಟ್ಟು ಹೋಗುತ್ತಾರೆ ? ತಮ್ಮ ಜೊತೆಯಲ್ಲಿ ನಾನೇ ಬಂದು ಅವರ ಭೇಟಿ ಮಾಡಿದರೆ ಅವರು ಹೇಗೆ ನಿರೋಧಿಸಬಲ್ಲರು ?" ಎಂದು ಕೇಳಿದನು

ರಾಧಾರಾಣಿಯು ಗಹಗಹಿಸಿ ನಕ್ಕಳು ! "ಸುಲ್ತಾನರೇ ಇಯಜ್‌ಖಾನರು ನನ್ನ ಎದುರಿನಲ್ಲಿಯೇ ಹೊರಟುಹೋದರು ನಾನು ಅತಿ ಕಷ್ಟದಿಂದ ಅವರನ್ನು ಸಾಗುಗಳಿಸಿ ಬಂದೆನು" ಎಂದು ಹೇಳಿದಳು.

ಸುಲ್ತಾನನು ದೀರ್ಘವಾದ ನಿಟ್ಟುಸಿರು ಬಿಟ್ಟು ಆಸನವನ್ನು ಒರಗಿದನು

ದೌಲತ್ತಳು "ಸುಲ್ತಾನರೇ! ಏಳಿರಿ ನೀವು ಹೀಗೆ ಅಧೀರರಾದರೆ ರಾಜ ಕಾರ್ಯವು ಹೇಗೆ ನಡೆಯಬೇಕು ?" ಎಂದು ಸಲ್ತಾನನಿಗೆ ಹಸ್ತಲಾಘವ ಕೊಟ್ಟು ಎಬ್ಬಿಸಿದಳು.

ದೌಲತ್ತಳೂ, ರಾಧೆಯೂ ಸುಲ್ತಾನನನ್ನು ದರಬಾರಿನ ಮಂದಿರಕ್ಕೆ ಕರೆದೊ ಯ್ದರು ಅಲ್ಲಿ ಹುಸೇಖಾನನು ನೆಲ ಮುಟ್ಟಿ ಸಲಾಂ ಮಾಡಿದನು ಸುಲ್ತಾನನು ಅವನಿಗೆ ಹಸ್ತಲಾಘವ ಕೊಟ್ಟು ಆಲಿಂಗಿಸಿದನು "ಸೇನಾಪತಿಗಳೇ! ಅಂದು ಯುದ್ಧ ಕ್ಷೇತ್ರದಲ್ಲಿ ನಿಮ್ಮ ರಣಸಾಹಸವನ್ನು ನೋಡಿ ಮೆಚ್ಚಿದೆ!" ಎಂದು ಶ್ಲಾಘಿಸಿದನು ಹುಸೇಖಾನನು ಕೋಟಿ ಚಿನ್ನದ ವರಹಾಗಳನ್ನು ಸುಲ್ತಾನರಿಗೆ ಒಪ್ಪಿಸಿದನು. ಅದನ್ನು ನೋಡಿ ಸುಲ್ತಾನನು ಅಪ್ರತಿಭನಾದನು. ಹಿಂದಿರುಗಿ ದೌಲತ್ತಳ ಕಡೆಗೂ ರಾಧಾರಾಣಿಯ ಕಡೆಗೂ ನೋಡಿ, "ರಾಣಿಯವರೇ! ನಿಮ್ಮ ಉಪಕಾರವು ಎಂದೆಂ ದಿಗೂ ಮರೆಯದಂತಹುದು! ಇಯಜ್‌ಖಾನರ ಋಣವನ್ನು ತೀರಿಸಲು ನನಗೆ ಶಕ್ತಿ ಇಲ್ಲ!" ಎಂದು ಹೇಳಿದನು ಆ ಚಿನ್ನದ ವರಹಾಗಳನ್ನು ಖಜಾನೆ ಭಕ್ಷಿಯವರಿಗೆ ಒಪ್ಪಿಸಿ ಅದೇ ಶಿಬಿರದ ಮಧ್ಯದಲ್ಲಿರುವ ತನ್ನ ರಾಜಗೃಹಕ್ಕೆ ರಾಧೆಯನ್ನೂ, ದೌಲತ್ತ ಳನ್ನೂ ಕರೆದುಕೊಂಡು ಹೋದನು ಅಲ್ಲಿ ಅವರನ್ನು ಇಳಿಸಿ "ರಾಣಿಯವರೇ! ಈ ಸ್ಥಳವು ತಮ್ಮ ಬಿಡಾರಕ್ಕೆ ಏರ್ಪಡಿಸಿದೆ" ಎಂದು ಹೇಳಿ ಅಲ್ಲಿಯೇ ಬಿಡಾರ ಮಾಡ ಬೇಕೆಂದು ಪ್ರಾರ್ಥಿಸಿದನು ಅವರು ಅಂಗೀಕರಿಸಿದರು ಸುಲ್ತಾನನು ತನ್ನ ವಾಸ ಗೃಹಕ್ಕೆ ತೆರಳಿದನು

ಸುಲ್ತಾನನು ತನ್ನ ಅಂತರ್ಗೃಹದಲ್ಲಿ ಆಲೋಚಿಸತೊಡಗಿದನು. 'ನಾನು ಮಾಡಬೇಕಾದ್ದೇನಿದೆ ? ಇಯಜ್‌ಖಾನರ ಶೋಧ ಮಾಡಿಸಲು ಸಾಧ್ಯವೇ ? ಈ

ದೌಲತ್ ಮತ್ತು ರಾಧಾರಾಣಿಯರಿಗೆ ತಾನೇನಾದರೂ ಪ್ರತ್ಯುಪಕಾರ ಮಾಡಬಲ್ಲನೆ? ಇತ್ಯಾದಿ ವಿಚಾರಗಳನ್ನು ಚಿಂತಿಸತೊಡಗಿದನು ಏನೂ ತೋರದೆ ಹೋಯಿತು. ಆದಷ್ಟು ಬೇಗ ಶ್ರೀರಂಗಪಟ್ಟಣಕ್ಕೆ ಹಿಂದಿರುಗಬೇಕೆಂದು ನಿರ್ಧಾರಮಾಡಿಕೊಂಡನು.

ಅತ್ತ ರಾಧೆಯೂ, ದೌಲತ್ತಳೂ ಆ ಶಿಬಿರದ ಸೊಬಗನ್ನೂ, ಆ ಸೈನ್ಯದ ಶಿಸ್ತನ್ನು ನೋಡಿ ಆಶ್ಚರ್ಯಪಟ್ಟರು ತಾವು ಬಂದ ಕೆಲಸವಾಯಿತೆಂದೂ, ನಗರಕ್ಕೆ ವಾಪಸು ಹೊರಡಬೇಕೆಂದೂ ನಿರ್ಧರಿಸಿದರು ಆದರೂ ಮತ್ತೊಂದು ಬಾರಿ ಸುಲ್ತಾನನನ್ನು ನೋಡಿ ಮಾತನಾಡುವ ಪ್ರಸಂಗವು ಒದಗುತ್ತದೆಂದು ಅವರು ಭಾವಿಸಿದರು ಅವರಿಬ್ಬರ ಮನಸ್ಸೂ ಹರ್ಷವಾಗಿಲ್ಲ. ಇಯಜ್‌ಖಾನನ ದೇಶತ್ಯಾಗವು ಅವರನ್ನು ದುಃಖಕ್ಕೀಡುಮಾಡಿದೆ

ಸಂಧ್ಯಾಕಾಲ ಸುಲ್ತಾನರ ಸವಾರಿಯು ರಾಣಿಯವರ ಬಿಡಾರಕ್ಕೆ ಬಂದಿತು. ದೌಲತ್ತಳು ಪರ್ಯಂಕದ ಮೇಲೆ ಕುಳಿತಿದ್ದಳು ರಾಧೆಯು ಸಮೀಪದ ಆಸನದಲ್ಲಿ ಮಂಡಿಸಿದ್ದಳು ಸುಲ್ತಾನನು ಆ ವಾಸಭವನದೊಳಕ್ಕೆ ಬಂದು ಆ ದೌಲತ್ತಳನ್ನು ನೋಡಿದನು. ರಾಧೆಯ ಕಡೆ ಮತ್ತೊಮ್ಮೆ ನೋಡಿದನು ದೌಲತ್ತಳ ಆ ದೇದೀಪ್ಯಮಾನವಾದ ಸೌಂದರ್ಯವನ್ನು ನೋಡಿ ಸುಲ್ತಾನನು ಮಂತ್ರಮುಗ್ಧವಾದ ಸರ್ಪದಂತೆ ನಿಟ್ಟುಸಿರು ಬಿಟ್ಟನು ರಾಧೆಯ ರೂಪಲಾವಣ್ಯಗಳು ಸಾಧಾರಣವಾದುವುಗಳಲ್ಲ. ಆದರೆ ಅದು ಮೋಹಕವಾದುದಲ್ಲವೆಂದು ಸುಲ್ತಾನನ ಮನಸ್ಸು ಹೇಳುತ್ತಿದ್ದಿತು. ಸುಲ್ತಾನನು ತನ್ನೊಳಗೆ ತಾನು ಈ ಅಪ್ಸರೆಯರಿಗೆ ಈ ರಾಜಕೀಯವೇಕೆ? ಈ ಸಂಧಿವಿಗ್ರಹಗಳೇಕೆ? ಅಂತಃಪುರದಲ್ಲಿ ಸುಖವಾಗಿದ್ದು ಭೋಗಭಾಗ್ಯಗಳನ್ನು ಅನುಭವಿಸಬಾರದೇ? ಅಂದು ದೌಲತ್ತಳನ್ನು ರಾಜಧಾನಿಗೆ ಬರಬೇಕೆಂದು ಕರೆದೆ ಅವಳು ಒಪ್ಪಲಿಲ್ಲ ಇಂದು ಮತ್ತೊಮ್ಮೆ ಪ್ರಾರ್ಥಿಸಿದರೆ ತಪ್ಪೇನು? ಈ ರಾಧಾರಾಣಿಯೂ ದೌಲತ್ತಳ ಜೊತೆಯಲ್ಲಿ ಒಂದುಬಾರಿ ರಾಜಧಾನಿಗೆ ಬರಬಾರದೇಕೆ? ಹೀಗೆ ನಾನಾವಿಧವಾಗಿ ಸುಲ್ತಾನನು ಚಿಂತಿಸುತ್ತಿದ್ದನು.

ಸುಲ್ತಾನನು ವಾಸಗೃಹದೊಳಗೆ ಬರುತ್ತಲೇ ಇಬ್ಬರು ತರುಣಿಯರೂ ಎದ್ದು ಸ್ವಾಗತಿಸಿದರು ಸುಲ್ತಾನನನ್ನು ಆಸನದಲ್ಲಿ ಕುಳ್ಳಿರಿಸಿದರು ತಾವುಗಳು ಸನ್ನಿಧಾನಕ್ಕೆ ಬಂದ ಕಾರ್ಯವಾಯಿತೆಂದೂ, ಹೊರಡಲು ಅಪ್ಪಣೆ ಕೊಡಬೇಕೆಂದೂ ಸುಲ್ತಾನನಿಗೆ ಬಿನ್ನವಿಸಿದರು ಸುಲ್ತಾನನು ತಮ್ಮಗಳ ಉಪಕಾರವು ಚಿರಸ್ಮರಣೀಯವಾದುದು. ತಾವಿಬ್ಬರೂ ನಮ್ಮ ಜೊತೆಯಲ್ಲಿ ಒಂದುಬಾರಿ ರಾಜಧಾನಿಗೆ ದಯಮಾಡಿಸಿದರೆ ನಾನು ಅತ್ಯಂತ ಸಂತೋಷಪಡುವೆನು .ಮತ್ತು ಚಿರಋಣಿಯಾಗಿರುವೆನು" ಎಂದು ಹೇಳಿದನು

ರಾಧಾರಾಣಿಯು "ಸುಲ್ತಾನರೇ ! ರಾಜಧಾನಿಯಲ್ಲಿ ನಮಗೇನು ಕೆಲಸವಿದೆ ? ರಾಜಕಾರ್ಯ ಒದಗಿದರೆ ನಾವಾಗಿಯೇ ತಮ್ಮ ಸನ್ನಿಧಾನಕ್ಕೆ ಬರುವೆವು" ಎಂದು ಹೇಳಿದಳು

ಸುಲ್ತಾನನು ಹುಸೇಋಖಾನನನ್ನು ಅಲ್ಲಿಗೇ ಬರಮಾಡಿದನು ಅವನ ಪರಾಕ್ರಮವನ್ನು ಎಷ್ಟೋ ವಿಧವಾಗಿ ಕೊಂಡಾಡಿದನು ಖಾಸಿಂಖಾನನ ವಧೆಯಿಂದ ಆತನ ಮನಸ್ಸು ಖತಿಗೊಂಡಿದೆಯೆಂದು ಸುಲ್ತಾನನು ಬಲ್ಲನು. ಖಾಸಿಂಖಾನನ ವಧೆಗಾಗಿ ಸುಲ್ತಾನನು ಎಷ್ಟೋ ಪರಿತಾಪ ಪಟ್ಟನು ಹುಸೇಋಖಾನನನ್ನು ಸಂತೈಸಿ, ಬಹುಮಾನಿಸಿ, ಆಲಿಂಗಿಸಿ ಕಳುಹಿಸಿದನು ಅದರಿಂದ ಸುಲ್ತಾನನ ಮನಸ್ಸಿಗೆ ಸ್ವಲ್ಪ ನೆಮ್ಮದಿಯುಂಟಾಯಿತು ರಾಣಿಯರಿಬ್ಬರನ್ನೂ ವಂದಿಸಿ ಅಪ್ಪಣೆ ಪಡೆದು ತನ್ನ ಬಿಡಾರಕ್ಕೆ ತೆರಳಿದನು

ಮಾರನೇ ದಿನ ಪ್ರಾತಃಕಾಲ ದೌಲತ್ ಮತ್ತು ರಾಧಾರಾಣಿಯವರು ಆ ಶಿಬಿರದಿಂದ ನಗರಾಭಿಮುಖವಾಗಿ ಹೊರಡಲು ಸಿದ್ಧರಾದರು ಸುಲ್ತಾನನು ಅವರನ್ನು ಸಾಗುಗಳುಹಿಸಲು ಬಂದನು ಅವನು ಎರಡು ಮುದ್ರೆ ಯುಂಗುರಗಳನ್ನು ಅವರಿಗೆ ಅಭಿಜ್ಞಾನವಾಗಿ ಸಮರ್ಪಿಸಿದನು "ರಾಣಿಯವರೇ ! ತಾವು ಯುದ್ಧ ಕ್ಷೇತ್ರದಲ್ಲಿ, ರಾಜಭವನದಲ್ಲಿ ಎಷ್ಟೋ ಸಂದರ್ಭಗಳಲ್ಲಿ ನನ್ನನ್ನು ಭೇಟಿ ಮಾಡುವ ಸಂದರ್ಭಗಳು ಒದಗಬಹುದು. ರಾಜಚಿಹ್ನಾಂಕಿತವಾದ ಮುದ್ರೆ ಇದ್ದರೆ ತಮ್ಮ ಕೈಯಲ್ಲಿ ಎಲ್ಲ ಅಧಿಕಾರವೂ ಇದ್ದಂತೆ !" ಎಂದು ಹೇಳಿ ಆ ಉಂಗುರಗಳನ್ನು ಕೊಡಲಿಕ್ಕೆ ಹೋದನು.

ದೌಲತ್ತಳು ಮುಗುಳುನಗೆಯನ್ನು ನಗುತ್ತಾ "ಹೆಂಗಸರಿಗೆ ಮುದ್ರೆ ಯುಂಗುರವೇಕೆ ? ನಾವು ಹೇಗಾದರೂ ಸಾಹಸ ಮಾಡಿ ಅಗತ್ಯವಿದ್ದರೆ ತಮ್ಮ ಸನ್ನಿಧಾನಕ್ಕೆ ಬರಬಲ್ಲೆವು" ಎಂದಳು

ಸುಲ್ತಾನನು "ರಾಧಾರಾಣಿಯವರೇ ! ಅಂದು ತಮ್ಮ ಕೈಯಲ್ಲಿ ಈ ಮುದ್ರೆಯುಂಗುರವಿದ್ದಿದ್ದರೆ ತಾವು ಮಹಮುದಾಲಿಯವರ ಪ್ರಾಣವನ್ನು ಉಳಿಸುತ್ತಿದ್ದಿರಿ !" ಎಂದನು.

ಅನಂತರ ದೌಲತ್ತಳ ಕಡೆ ತಿರುಗಿ, "ದೌಲತ್ ! ಇದು ಪ್ರಣಯಾಭಿಜ್ಞಾನವಲ್ಲ ಕೃತಜ್ಞತೆಯ ಅಭಿಜ್ಞಾನ ! ಇದು ನನ್ನ ಮುದ್ರೆ ಯುಂಗುರವಲ್ಲ ಹೈದರಲ್ಲೀಖಾನರವರ ನಾಮಾಂಕಿತವಾದ ಅಭಿಜ್ಞಾನ !" ಎಂದು ಹೇಳಿದನು.

ಇಬ್ಬರೂ ಆ ಉಂಗುರಗಳನ್ನು ತೆಗೆದುಕೊಂಡು ಕಣ್ಣಿಗೊತ್ತಿಕೊಂಡು ಆದರದಿಂದ ಕೈಯಲ್ಲಿಟ್ಟುಕೊಂಡರು !

ಇಬ್ಬರು ತರುಣಿಯರೂ ಸುಲ್ತಾನನ ಅಪ್ಪಣೆಯನ್ನು ಪಡೆದು ತಮ್ಮ ಪರಿವಾರದೊಂದಿಗೆ ನಗರಾಭಿಮುಖವಾಗಿ ತೆರಳಿದರು.

ಸುಲ್ತಾನನು ನಿರಾಶೆಯಿಂದ ನೋಡುತ್ತ ತನ್ನ ಬಿಡಾರಕ್ಕೆ ತೆರಳಿದನು.

ಸುಲ್ತಾನನು ಚಿತ್ರದುರ್ಗದ ಕೋಟೆಗೆ ಬೇಕಾದ ರಕ್ಷಣೆಯ ಏರ್ಪಾಡುಗಳನ್ನು ಮಾಡಿ ತನ್ನ ಸೈನ್ಯದೊಡನೆ ಹಿಂದಿರುಗಿದನು.

ಸುಲ್ತಾನನು ದೌಲತ್ತಳನ್ನು ಮರೆಯಲಿಲ್ಲ ಮರೆಯಲು ಆಗಲಿಲ್ಲ! ಆ ಸೌಂದರ್ಯ, ಆ ಒಯ್ಯಾರ, ಆ ಪ್ರಗಲ್ಭತೆಗಳನ್ನು ಮರೆಯುವುದೆಂತು?

"ದೌಲತ್! ದೌಲತ್! ಎಂದಾದರೂ ನೀನು ನನ್ನವಳು. ನಿನ್ನ ಸನ್ನಿಧಾನ ವಿದ್ದರೆ ನಾನು ಚಕ್ರಾಧೀಶ್ವರನಾಗಬಲ್ಲೆ! ನಿನ್ನ ಪ್ರಣಯವಿದ್ದರೆ ನಾನು ಸ್ವರ್ಗಸುಖ ವನ್ನನುಭವಿಸಬಲ್ಲೆ! ನಿನ್ನ ಸುಂದರ ವದನಾರವಿಂದದ ನೆನಪಿದ್ದರೆ ನಾನು ಸರ್ವದಾ ಸುಖಿಯಾಗಿರಬಲ್ಲೆ! ದೌಲತ್! ನೀನಿಲ್ಲದ ಪ್ರಪಂಚವು ಶೂನ್ಯ!" ಎಂದುಕೊಂಡನು.

ಕಾಮಿಗಳೆಲ್ಲರೂ ಹೀಗೆಯೇ!

# ಭಕ್ತಿಯ ಪ್ರಾದುರ್ಭಾವ

ದರಿಯಾಬಾಗಿನ ವ್ಯವಸ್ಥೆಗಳೆಲ್ಲ ಒಂದೇ ವಿಧವಾಗಿವೆ ದಾನ ಧರ್ಮಗಳು ಯಥಾಪ್ರಕಾರವಾಗಿ ಜರುಗುತ್ತಿವೆ ಆದರೆ ಪೂರ್ವದಲ್ಲಿದ್ದ ಕಳೆಯು ಇಂದಿಲ್ಲ ದೌಲತ್ತಳು ವೀರರಮಣಿಯಾದರೂ ವಿರಹದಿಂದ ಪರಿತಪಿಸುತ್ತಾಳೆ. ರಾಧೆಯು ಅವಳಿಗಾಗಿ ಎಷ್ಟೋ ಸಹಾನುಭೂತಿ ತೋರುತ್ತಾಳೆ ಯಾವ ದಿಕ್ಕಿನಿಂದಲೂ ಇಯಜ್‌ಖಾನನ ಸಮಾಚಾರವೇ ತಿಳಿಯಲಿಲ್ಲ ಖಾನನು ಎಲ್ಲಿಯೋ ಇದ್ದಾನೆ. ಯಾವುದೋ ಮಹತ್ಕಾರ್ಯದಲ್ಲಿ ತೊಡಗಿದ್ದಾನೆ ಯಾವಾಗಲೋ ಅದು ಜಗತ್ಪ್ರ ಸಿದ್ಧವಾಗುತ್ತದೆ ಎಂಬ ಆಸೆ ಭರವಸೆಗಳು ದರಿಯಾಬಾಗಿಗೆ ಯಾವ ರಕ್ಷಣೆಯೂ ಆಗಬೇಕಾಗಿಲ್ಲ. ಆದರೂ ಇಯಜ್‌ಖಾನನ ಅಪ್ಪಣೆಯಂತೆ ದರಿಯಾಬಾಗಿನ ರಕ್ಷಣೆಯ ಭಾರವು ಹುಸೇನ್‌ಖಾನನಿಗೆ ಸೇರಿದ್ದು ಅವನು ಸ್ವಾಮಿಭಕ್ತಿಯಿಂದ ತನ್ನ ಕಾರ್ಯದಲ್ಲಿ ತಾನು ಜಾಗರೂಕನಾಗಿದ್ದಾನೆ ತನ್ನ ಪರಾಕ್ರಮಕ್ಕೆ ತಕ್ಕ ಕೆಲಸವಿಲ್ಲ ವಲ್ಲಾ ಎಂದು ಪರಿತಪಿಸುತ್ತಾನೆ ಪ್ರತಿದಿನವೂ ದೌಲತ್‌ರಾಣಿಯನ್ನೂ, ರಾಧಾ ರಾಣಿಯನ್ನೂ ಭೇಟಿಮಾಡುತ್ತಾನೆ ಅವರು ವಿಶ್ವಾಸದಿಂದ ಕಾಣುತ್ತಾರೆ. ಆದರೂ ಅವನಿಗೆ ಏನೋ ಒಂದು ವಿಧವಾದ ಬೇಸರ ತನ್ನ ಜೀವನದಲ್ಲೇ ಮುಜಗರ. ಹುಸೇನ್‌ಖಾನನಿಗೆ ಮಹಮುದಾಲಿಯವರಲ್ಲಿ ಏನೋ ಒಂದು ವಿಧವಾದ ಭಕ್ತಿ ಪ್ರತಿ ದಿನವೂ ಸಂಧ್ಯಾಕಾಲದಲ್ಲಿ ಅವರ ಸಮಾಧಿಯ ಹತ್ತಿರ ಹೋಗುತ್ತಾನೆ. ಧೂಪ ಹಾಕುತ್ತಾನೆ ನಮಾಜು ಮಾಡುತ್ತಾನೆ ಫಾತಿಮಾಬೇಗಂ ಯಾವಾಗಲೂ ಅಲ್ಲಿಯೇ ಇರುತ್ತಾಳೆ ರಾಧಾ ಮತ್ತು ದೌಲತ್‌ರಾಣಿಯವರು ಅವಳನ್ನು ಆದರಿಸು ತ್ತಾರೆ. ಸೋನಾಮಹಲಿನಲ್ಲಿ ಫಾತಿಮಳೂ ಒಬ್ಬ ಗಣ್ಯವ್ಯಕ್ತಿ. ಹಗಲೆಲ್ಲಾ ದರಿ

ಯಾಬಾಗಿನಲ್ಲಿ ತಿರುಗುತ್ತಾಳೆ ಮಹಮುದಾಲಿಯವರ ಸಮಾಧಿಯ ಬಳಿ ಬಹಳ ಹೊತ್ತು ಕಳೆಯುತ್ತಾಳೆ ಸೋನಾಮಹಲಿನಲ್ಲಿ ಅವಳಿಗಾಗಿಯೇ ಒಂದು ಪ್ರಶಸ್ತವಾದ ಕೋಣೆಯಿದೆ ರಾತ್ರಿ ಬಂದು ಆ ಸೋನಾ ಮಹಲಿನಲ್ಲಿ ಮಲಗುತ್ತಾಳೆ ಅವಳಿಗೆ ನಿದ್ರೆ ಹತ್ತುವುದಿಲ್ಲ "ದೈವವೇ! ನಿನಗೆ ಕಣ್ಣಿಲ್ಲವೇ? ತಪ್ಪು ಮಾಡಿದವರನ್ನು ಶಿಕ್ಷಿಸುವ ಶಕ್ತಿ ಇಲ್ಲವೇ ನಿನಗೆ!" ಎಂದು ದೇವರನ್ನು ನಿಂದಿಸುತ್ತಾಳೆ. ಟಿಪ್ಪೂ ಸುಲ್ತಾನನು ಮಾಡಿದ ತಪ್ಪಿಗೆ ಅವನಿಗೆ ಶಾಸ್ತಿಯಾಗಲೇ ಬೇಕು ಎಂದು ಸಹಸ್ರಬಾರಿ ಸಂಕಲ್ಪಮಾಡುತ್ತಾಳೆ ನಾನು ಗಂಡಸಾಗಿದ್ದರೆ ಇಷ್ಟರೊಳಗಾಗಿ ದ್ವೇಷವನ್ನು ತೀರಿಸಿಕೊಳ್ಳುತ್ತಿದ್ದೆ ಹಾಳು ಹೆಣ್ಣು ಜನ್ಮ ಅದರಲ್ಲಿಯೂ ಈ ರೂಪ ಪುರುಷರ ಕಣ್ಣಿಗೆ ಬಿದ್ದರೆ ಸಾಕು ಅವರು ನರಕಕ್ಕೆ ಸೆಳೆಯಲು ಹಾತೊರೆಯುತ್ತಾರೆ. ಮುಸಲ್ಮಾನರಲ್ಲಿ ಘೋಷಾ ಪದ್ಧತಿಯಿರುವುದು ನ್ಯಾಯವಾಗಿಯೇ ಇದೆ ಈ ಪುರುಷರ ದುರ್ಬಲ ಮನಸ್ಸನ್ನರಿತೇ ಮಹಾಪುರುಷರು ಈ ಏರ್ಪಾಟು ಮಾಡಿದ್ದಾರೆ ಪುರುಷರು ವೀರರಾದರೆ ಕಾಮವಾಸನೆಯಲ್ಲಿ ಮುಗ್ಧರಾಗುವುದಿಲ್ಲ ಪುರುಷರೆಲ್ಲಾ ಹೇಡಿಗಳು. ಇಯಜ್‌ಖಾನನು ವೀರ ಪುರುಷನೆಂದುಕೊಂಡಿದ್ದೆ ಅವನೇನು ಮಾಡಿದನು? ರಾಜ್ಯತ್ಯಾಗಮಾಡಿ ದೇಶಾಂತರ ಹೋದನು. ಸುಲ್ತಾನನ ಮೇಲೆ ಹಗೆ ತೀರಿಸಿಕೊಳ್ಳಲಾರದೆ ಹೋದನು ಯಾರೇಕೆ? ಯಾರಸಹಾಯವೇಕೆ? ನಾನೇ ಸುಲ್ತಾನನ ಮೇಲೆ ಸೇಡುತೀರಿಸಿಕೊಳ್ಳುತ್ತೇನೆ. ಎಂದಾದರೊಂದು ದಿನ ಆ ಮೂರ್ಖನಾದ ಕನ ಪ್ರಾಣಾಪಹರಣ ಮಾಡುತ್ತೇನೆ ಎಂದುಕೊಳ್ಳುತ್ತಾಳೆ ಮನಸ್ಸಿಗೆ ಸ್ವಲ್ಪ ಸಮಾಧಾನವಾಗುತ್ತದೆ. ಸ್ವಲ್ಪ ಸ್ವಲ್ಪ ನಿದ್ದೆ ಬರುತ್ತದೆ ಯಾವುದೋ ಸ್ವಪ್ನ ಕಂಡು ಬೆಚ್ಚಿಬಿದ್ದು ಏಳುತ್ತಾಳೆ. ಇದು ಫಾತಿಮಳ ಅವಸ್ಥೆ!

ಹುಸೇನ್‌ಖಾನನಿಗೆ ಫಾತಿಮಳ ಮೇಲೆ ಅಪಾರ ಕರುಣೆ! ಅವನದೂ ಅವಳದೂ ಸಮಾನ ಯೋಗಕ್ಷೇಮ! ಖಾಸಿಂಖಾನನ ವಧೆಗಾಗಿ ಅವನ ಅಂತರಂಗವು ಉರಿಯುತ್ತಿದೆ. ಫಾತಿಮಳ ಹಾಗೆಯೇ ಅವನ ಸ್ಥಿತಿಯೂ ಆಗಿದೆ. ಆದರೆ ಅವನು ಫಾತಿಮಳಷ್ಟು ಅಧೀರನಾಗಿಲ್ಲ ನಿರಾಶನಾಗಿಲ್ಲ ಅವನು ಪ್ರತಿದಿನವೂ ಫಾತಿಮಾಬೇಗಂರವರೊಡನೆ ಮಾತನಾಡುತ್ತಾನೆ ಅವಳ ಮನಸ್ಸಿನ ಉದ್ವೇಗಗಳನ್ನೆಲ್ಲಾ ಅವನೊಡನೆ ಹೇಳಿಕೊಳ್ಳುತ್ತಾಳೆ. ಯಾರೂ ಇಲ್ಲದಿದ್ದರೆ ಅವರು ಬಹು ಹೊತ್ತಿನವರೆಗೆ ಮಾತನಾಡುತ್ತಾರೆ ಒಂದೊಂದು ದಿನ ಫಾತಿಮಳು ಪ್ರಸನ್ನಳಾಗಿದ್ದಾಗ ಮಹಮ್ಮದಾಲಿಯವರ ವೀರ ಕಥೆಗಳನ್ನು ಹೇಳುತ್ತಾಳೆ. ದೊಡ್ಡ ನವಾಬರ ಉದಾರ ಚರಿತ್ರವನ್ನು ವರ್ಣನೆಮಾಡುತ್ತಾಳೆ ಈ ಕಥೆಗಳು ಹೇಳುವುದಕ್ಕೆ ಹಿತವಾಗಿರುತ್ತವೆ. ಫಾತಿಮಾಬೇಗಂರವರಿಗೂ, ಹುಸೇನ್‌ಖಾನನಿಗೂ ತಿಳಿದೂ ತಿಳಿಯದೆಯೂ ಪ್ರಬಲ

ವಾದ ಸ್ನೇಹ ಸಹಾನುಭೂತಿಗಳು ಬೆಳೆದು ಹೋಗಿವೆ ಇದನ್ನು ಮಟ್ಟಿಗೆ ಅವರಿಬ್ಬರೂ ಅರಿತುಕೊಂಡಿಲ್ಲ ಹುಸೇಙಖಾನನಿಗೆ ಈ ಜೀವನವು ಬೇಸರವಾಗಿತ್ತು. ಎಷ್ಟೋ ಬಾರಿ ಇಯಜ್‌ಖಾನನನ್ನು ಹುಡುಕಿಕೊಂಡು ಹೋಗೋಣವೆ ಎನ್ನಿಸುತ್ತಿತ್ತು ಇದ್ದ ಕ್ಕಿದ್ದಂತೆ ಒಂದು ಬಾರಿ ತನ್ನ ಜನ್ಮಸ್ಥಳಕ್ಕೆ ಹೋಗಿಬರಬೇಕೆಂದು ನಿಶ್ಚಯ ಮಾಡಿ ದನು ರಾಧಾರಾಣಿಯವರಿಗೂ, ದೌಲತ್ ರಾಣಿಯವರಿಗೂ ಅರಿಕೆ ಮಾಡಿ ಅಪ್ಪಣೆ ಪಡೆದನು. ಫಾತಿಮಾಬೇಗಂಳಿಗೂ ತಿಳಿಸಿದನು ಹೊರಟೇ ಬಿಟ್ಟನು

ದಕ್ಷಿಣಕನ್ನಡಾಜಿಲ್ಲೆಯ ಮೂಡುಬಿದರೆ ಎಂಬುದು ಅವನ ಜನ್ಮಸ್ಥಳ. ಒಬ್ಬ ಬಡಗಿಯ ಹೊಟ್ಟೆಯಲ್ಲಿ ಖಾಸಿಂಖಾನನೂ, ಹುಸೇಙಖಾನನೂ ಜನ್ಮವೆತ್ತಿದರು. ಆ ತಂದೆಯು ಊರಿಗೆಲ್ಲಾ ಬೇಕಾದವನು. ಎಲ್ಲರೂ ಅವನನ್ನು "ಭಕ್ಷಿ" ಎಂದು ಕರೆಯು ತ್ತಿದ್ದರು. ಅವನಿಗೇಕೆ ಆ ಹೆಸರು ಬಂತೋ ಯಾರಿಗೂ ಗೊತ್ತಿಲ್ಲ. ಭಕ್ಷಿಯು ಬಹಳ ಒಳ್ಳೆಯವ ಎಷ್ಟೋ ಬಡವರ ಮನೆಗಳನ್ನು ಕಟ್ಟಲು ಮರಗೆಲಸವನ್ನೆಲ್ಲಾ ಮಾಡಿಕೊಟ್ಟು ಸಹಾಯ ಮಾಡುತ್ತಿದ್ದನು ಕೊಟ್ಟಷ್ಟು ಹಣವನ್ನು ತೆಗೆದುಕೊಳ್ಳು ತ್ತಿದ್ದನು ಅವನು ಬಡತನದಲ್ಲಿಯೇ ಸಂಸಾರ ನಿರ್ವಹಣ ಮಾಡುತ್ತಿದ್ದನು. ಈ ಇಬ್ಬರು ಮಕ್ಕಳು ಹುಟ್ಟಿದ ಸ್ವಲ್ಪದಿನಗಳಲ್ಲಿಯೇ ಅವನ ಹೆಂಡತಿಯು ತೀರಿಹೋಗಿ ದ್ದಳು ಭಕ್ಷಿಯು ಈ ಮಕ್ಕಳನ್ನು ಬಹಳ ಪ್ರೀತಿಯಿಂದ ಸಾಕಿ ಸಲಹಿದ್ದನು ಅವ ರಿಗೆ ವಿದ್ಯೆ ಕಲಿಸಬೇಕೆಂದು ಅವನಿಗೆ ತೋರಲೇ ಇಲ್ಲ ಸ್ವಲ್ಪ ಕಸರತ್ತು ಮಾಡಿಸಿ ಹುಡುಗರನ್ನು ಚೆನ್ನಾಗಿ ಸಾಕಿದ್ದನು. ಹುಡುಗರಿಗೆ ೧೦-೧೨ ವಯಸ್ಸಾಗುವ ಹೊತ್ತಿಗೆ ಸಿಡುಬೆದ್ದು ಆ ಭಕ್ಷಿಯು ಪರಲೋಕವನ್ನೈದಿದನು. ಆ ಅನಾಥ ಹುಡುಗರಿಬ್ಬರನ್ನೂ ದಾಯಾದಿಗಳು ಸಾಕಿದರು ಊರಿನವರಿಗೆಲ್ಲಾ ಈ ಹುಡುಗರ ಮೇಲೆ ಕರುಣೆ! ಹುಡುಗರಿಬ್ಬರೂ ಆ ಊರು ಬಿಟ್ಟು ಹೊರಟರು ನಗರಕ್ಕೆ ಬಂದು ಅರಮನೆಯಲ್ಲಿ ಕೆಲಸಕ್ಕೆ ಸೇರಿದರು. ತೇಜಸ್ವಿಗಳಾಗಿದ್ದ ಈ ಹುಡುಗರ ಮೇಲೆ ಇಯಜ್‌ಖಾನನ ಕಣ್ಣುಬಿತ್ತು ಅವನು ಈ ಹುಡುಗರನ್ನು ತಯಾರು ಮಾಡಿದನು ಈ ಸಹೋದ ರರು ಪರಾಕ್ರಮಶಾಲಿಗಳಾದ ಸೇನಾನಾಯಕರಾದರು. ಇದೇ ಹುಸೇಙಖಾನನ ಪೂರ್ವ ಕಥೆ. ಮೂಡು ಬಿದರೆಯಲ್ಲಿ ಹುಸೇಙಖಾನನಿಗೆ ಏನೂ ಇಲ್ಲ ಆದರೂ ಜನ್ಮಸ್ಥಾನದ ಮೇಲಿನ ಅಭಿಮಾನ. ಆ ಊರಿಗೆ ಹೋಗಿ ಸೇರಿದನು ಹುಸೇಙಖಾನನಿಗೆ ಎಷ್ಟೋ ಸಂತೋಷವಾಯಿತು ಅಲ್ಲಿಗೆ ಹೋಗಿ ಊರುಹೊರಗಿನ ಮಂಟಪದಲ್ಲಿ ಕುದುರೆಯನ್ನು ಕಟ್ಟಿಹಾಕಿದನು ಹುಸೇಙಖಾನನು ದರಿದ್ರನಲ್ಲ. ಅವನಲ್ಲಿ ಬೇಕಾದಷ್ಟು ಹಣವಿತ್ತು. ಊರೊಳಗೆ ಹೋಗಿ ಕುದುರೆಗೆ ತಿಂಡಿಯನ್ನೂ, ಹುಲ್ಲನ್ನೂ, ಕೊಂಡುಕೊಂಡನು. ಪೇಟೆಯಲ್ಲಿ ಒಬ್ಬ ಹುಡುಗನು ಸಿಕ್ಕಿದನು ಅವನ ಕೈಲಿ ಹೊರಿಸಿಕೊಂಡು ಬಂದು ಅದನ್ನು ಕುದುರೆಗೆ ತಿನ್ನಿಸಿದನು. ಆ ಹುಡುಗನಿಗೆ ಒಂದು ರೂಪಾಯಿ ತೆಗೆದು

ಕೊಟ್ಟನು ಆ ರೂಪಾಯನ್ನು ನೋಡಿ ಆ ಹುಡುಗನ ಆನಂದಕ್ಕೆ ಪಾರವಿಲ್ಲ. ಆ ಹುಸೇಂಖಾನನನ್ನು ನೋಡುತ್ತಲೇ ಇವನಾರೋ ಫೌಜುದಾರಿ ಮನುಷ್ಯನೆಂದು ಎಲ್ಲರಿಗೂ ಗೊತ್ತಾಯಿತು ಆ ಕಾಲದಲ್ಲಿ ಫೌಜುದಾರಿ ಮನುಷ್ಯರನ್ನು ಮಾತನಾಡಿಸಲು ಯಾರಿಗೂ ಧೈರ್ಯವಿರಲಿಲ್ಲ ಹುಸೇಂಖಾನನು ಕುದುರೆಗೆ ಮಾಲೀಸ್ ಮಾಡಲು ಹೊರಟನು. ಆ ಹುಡುಗನು "ಜಮಾದಾರರೇ, ನಾನು ಕುದುರೆಯ ಯೋಗಕ್ಷೇಮವನ್ನು ನೋಡುತ್ತೇನೆ ತಾವು ವಿಶ್ರಮಿಸಿಕೊಳ್ಳಿರಿ" ಎಂದು ಹೇಳಿದನು ಹುಸೇಂಖಾನನು ಆ ಮಂಟಪದಲ್ಲಿಯೇ ವಿಶ್ರಮಿಸಿಕೊಂಡನು ಆ ಹುಡುಗನ ಯೋಗಕ್ಷೇಮವನ್ನು ವಿಚಾರಿಸಿದನು ಅವನ ಹೆಸರು ಗೋಪಾಲ ಅವನಿಗೆ ಒಬ್ಬ ಅಜ್ಜಿ ಇದ್ದಾಳೆ. ಈ ಹುಡುಗನು ಪೇಟೆಯಲ್ಲಿ ಕೂಲಿನಾಲಿಮಾಡಿ ನಾಲ್ಕು ದುಡ್ಡು ತೆಗೆದುಕೊಂಡು ಹೋಗಿ ಕೊಡುತ್ತಾನೆ ಇವನಿಗೆ ವಿಶ್ವಾಸದಿಂದ ಅನ್ನ ಹಾಕುತ್ತಾಳೆ, ಇಷ್ಟೇ ಆ ಹುಡುಗನ ಪ್ರಪಂಚ ಹುಡುಗನ ವಯಸ್ಸು ಹದಿನೆಂಟು ವರ್ಷ ತೇಜಸ್ವಿಯಾಗಿದ್ದಾನೆ, ಸುಟಿಯಾಗಿದ್ದಾನೆ ಹುಸೇಂಖಾನನು ಈ ಹುಡುಗನು ಕೂಲಿನಾಲಿ ಮಾಡಬೇಕೆ ? ಎಂದುಕೊಂಡನು

ಬೆಳಗ್ಗೆ ಎದ್ದು ಊರೊಳಗೆ ಅನೇಕರನ್ನು ನೋಡಿದನು. ತಾನು ಭಕ್ಷಿಯಮಗನೆಂದು ಹೇಳಿಕೊಂಡನು. ಎಲ್ಲರೂ ಇವನನ್ನು ಆದರದಿಂದ ಕಂಡರು ಇವನು ನಗರದ ಸೇನಾನಾಯಕನೆಂಬುದನ್ನು ಯಾರೂ ಅರಿಯರು ಇವನನ್ನು ಎಲ್ಲರೂ "ಭಕ್ಷಿ" ಎಂದು ಕರೆಯುತ್ತಿದ್ದರು. ಅವನಿಗೆ ಇಲ್ಲಿಯ ವಿಚಾರಗಳೆಷ್ಟೋ ಕಿವಿಗೆ ಬಿತ್ತು ಆ ಹುಡುಗನು ಖಾನನನ್ನು ಬಿಡಲೇ ಇಲ್ಲ. ಅವನು ಖಾನನ ಆತ್ಮೀಯನಂತೆಯೇ ಆಗಿಹೋದನು.

ದಕ್ಷಿಣ ಕನ್ನಡ ಜಿಲ್ಲೆಯು ಪೂರ್ತಿಯಾಗಿ ಮೈಸೂರು ಸುಲ್ತಾನರ ಆಳ್ವಿಕೆಗೇ ಒಳಪಟ್ಟಿತ್ತು. ಇತ್ತೀಚೆಗೆ ಇಂಗ್ಲೀಷರೊಡನೆ ಯುದ್ಧವಾಗಿ ಮೈಸೂರಿನವರಿಗೇ ಜಯವಾಗಿತ್ತು. ಈ ಜಿಲ್ಲೆಯ ಆಡಳಿತವೆಲ್ಲಾ ಕುತುಬುದ್ದೀನನೆಂಬ ಫೌಜುದಾರನಿಗೆ ಸೇರಿತ್ತು. ಕುತುಬುದ್ದೀನನು ದಕ್ಷನಾದ ಫೌಜುದಾರನೇನೋ ಹೌದು. ನಾನಾ ವಿಧವಾಗಿ ಜನಗಳಿಂದ ದುಡ್ಡು ಸುಲಿಗೆ ಮಾಡುತ್ತಿದ್ದನು. ರಾಜಧಾನಿಗೆ ಕಳುಹಿಸುವ ಹಣವನ್ನು ಮುಡುಪಾಗಿ ಕಳುಹಿಸಿಬಿಡುತ್ತಿದ್ದನು. ಜಮೀನುದಾರರಿಂದ ಭಾಗ, ವ್ಯಾಪಾರಗಾರರಿಂದ ಭಾಗ, ದೊಡ್ಡ ದೊಡ್ಡ ಕಳ್ಳರಿಂದ ಭಾಗ, ಮಿತಿಮೀರಿದ ಲಂಚ ಖುಷುವತ್ತುಗಳಿಂದ ನಡೆಯುತ್ತಿತ್ತು. ಕುತುಬುದ್ದೀನನಿಗೆ ಬಹು ಮಂದಿ ದೊಡ್ಡ ಮನುಷ್ಯರು ಸ್ನೇಹಿತರಾಗಿದ್ದರು ಈ ಕುತುಬುದ್ದೀನನು ಪಡುಬಿದರೆ ಎಂಬಲ್ಲಿ ವಾಸವಾಗಿದ್ದನು. ಇವನೊಬ್ಬ ನವಾಬನಂತೆಯೇ ಕಾರುಬಾರನ್ನು ನಡೆಸುತ್ತಿದ್ದನು. ಅವನು ಬಹಳ ಕಾಮಾಂಧ. ಅವನ ವಿಲಾಸಕ್ಕಾಗಿ ಅನೇಕ ರಮಣಿಯರು ತುತ್ತಾ

ಗಿದ್ದರು. ಅವನು ಮದ್ಯಪಾಯಿ. ಆದರೆ ಒಳ್ಳೆಯ ಬುದ್ಧಿವಂತ, ಮಾತುಗಾರ, ಸ್ಫುರದ್ರೂಪಿ. ಮುಸಲ್ಮಾನ್ ರಾಜರ ಲಕ್ಷಣ ಹೀಗೆಯೇ ಎಂದು ಜನರು ಭಾವಿಸುವಂತೆ ಮಾಡಿದ್ದನು ಟಿಪ್ಪೂ ಸುಲ್ತಾನನೂ ಹೀಗೆಯೇ ರಾಜ್ಯಭಾರ ನಡೆಸುತ್ತಿದ್ದಾನೆಂಬುವಂತೆ ಆಗಿತ್ತು ಹುಸೇನ್‌ಖಾನನು ಇದನ್ನೆಲ್ಲಾ ಕೇಳಿದನು. ಎಲ್ಲಿಯೂ ಏನೂ ಮಾತನಾಡಲಿಲ್ಲ ಇವನೂ ಒಬ್ಬ ಫೌಜುದಾರೀ ಮನುಷ್ಯನಾದುದರಿಂದ ಮಾತನಾಡುವುದಿಲ್ಲ ಎಂದು ಅವರುಗಳು ಅಂದುಕೊಂಡರು ಆ ಜಿಲ್ಲೆಯಲ್ಲಿ ಎಲ್ಲಾ ಕಡೆಯೂ ಸಂಚಾರ ಮಾಡಿದನು. ಎಲ್ಲೆಲ್ಲಿಯೂ ಕುತುಬುದ್ದೀನನ ಮಾತೇ ಆಗಿತ್ತು ಅವನನ್ನು ಬಹಳವಾಗಿ ಪ್ರಶಂಸಿಸುವರೂ ಅನೇಕರಿದ್ದರು. ಇದನ್ನೆಲ್ಲಾ ಪರಿಶೀಲಿಸಿದನು ಈ ದಕ್ಷಿಣ ಕರ್ಣಾಟಕವು ಹೆಚ್ಚುಕಾಲ ಸುಲ್ತಾನರವರಿಗೆ ಉಳಿಯುವುದಿಲ್ಲ ಎಂದುಕೊಂಡನು. ಹೀಗೆಯೇ ಹುಸೇನ್‌ಖಾನನು ಎರಡು ತಿಂಗಳುಗಳು ದಕ್ಷಿಣ ಕರ್ಣಾಟಕದಲ್ಲಿ ಸಂಚಾರಮಾಡಿ ನಗರಕ್ಕೆ ಹಿಂದಿರುಗಿದನು.

ಹುಸೇನ್‌ಖಾನನು ಹಿಂದಿರುಗಿದ ಮೇಲೆ ಒಂದೆರಡು ದಿನಗಳಲ್ಲಿಯೇ ಫಾತಿಮಾ ಬೇಗಂರವರನ್ನು ಕಂಡು ಮಾತನಾಡಿದನು. ತನ್ನ ಪ್ರವಾಸದ ಅನುಭವಗಳನ್ನು ಹೇಳತೊಡಗಿದನು ಮಾತಿಗೆ ಮಾತು ಬಂದು ಕುತುಬುದ್ದೀನನ ಆಡಳಿತವಿವರಣೆಯನ್ನು ಹೇಳಿದನು. ಆ ಅನ್ಯಾಯಗಳನ್ನು ವರ್ಣಿಸುತ್ತಾ ಅವನ ಮನಸ್ಸು ಪ್ರಕ್ಷುಬ್ಧವಾಗಿತ್ತು. ತಕ್ಷಣ ಫಾತಿಮಳಿಗೆ ಒಂದು ಆಲೋಚನೆಯು ಹೊಳೆಯಿತು. ಈ ತರುಣನನ್ನು ಉದ್ರೇಕಗೊಳಿಸಿ ಮೈಸೂರು ರಾಜ್ಯಕ್ಕೆ ವಿರುದ್ಧವಾಗಿ ಎತ್ತಿಕಟ್ಟಬಹುದೆಂದು ಆಲೋಚಿಸಿದಳು.

ಫಾತಿಮಾ—ಹುಸೇನ್‌ಖಾನ್, ನಿಮ್ಮ ಜನರ ಮೇಲೆ ನಡೆಯುತ್ತಿರುವ ಅನ್ಯಾಯ ಅತ್ಯಾಚಾರಗಳನ್ನು ಕಣ್ಣಾರೆ ನೋಡಿ ಏನೂ ಮಾಡಲಾರದೆ ಇದ್ದೀಯಾ ?

ಹುಸೇನ್—ಬೇಗಂಸಾಹೇಬರವರೇ, ನಾನೇನು ಮಾಡಬಲ್ಲೆ? ನಾನು ಸುಲ್ತಾನರಲ್ಲಿಗೆ ಹೋಗಿ ಎಲ್ಲವನ್ನೂ ಹೇಳಿ ದಾವಾ ಮಾಡಬಹುದು ಆ ಸುಲ್ತಾನರನ್ನು ಕಂಡರೆ ನನಗೆ ದ್ವೇಷ. ಅವರಿಗೆ ಏನಾದರೊಂದು ಪ್ರಬಲ ವಿರೋಧವನ್ನು ಎಸಗಬೇಕೆಂದು ಸಂಕಲ್ಪಿಸಿದ್ದೇನೆ. ನಾನು ಅವರ ದರಬಾರಿಗೆ ಹೇಗೆ ಹೋಗಲಿ ?

ಫಾತಿಮಾ—ನಿಜವಾಗಿ ನೀನು ಸುಲ್ತಾನರಿಗೆ ಪ್ರತಿಕ್ರಿಯೆ ಮಾಡುವವನಾಗಿದ್ದರೆ, ಇದೇ ಸಂದರ್ಭವನ್ನು ಉಪಯೋಗಿಸಿ, ಮಂಗಳೂರನ್ನು ಆಕ್ರಮಣ ಮಾಡಬಾರದೇಕೆ ? ಈಗಿನ ಕಾಲದಲ್ಲಿ ಎಲ್ಲೆಲ್ಲಿಯೂ ವಿಪ್ಲವಗಳಾಗುತ್ತಿವೆ. ಯುದ್ಧದಲ್ಲಿ ನೀನೊಬ್ಬ ಪರಾಕ್ರಮಶಾಲಿಯಾದ ಸೇನಾನಾಯಕ. ರಾಜರ ಲಕ್ಷಣಗಳೆಲ್ಲಾ ನಿನ್ನಲ್ಲಿದೆ. ನೀನು ದಕ್ಷಿಣ ಕನ್ನಡದ ಸ್ವಯಂ ರಾಜನಾಗಬಾರದೇಕೆ ?

ಹುಸೇ—ಬೇಗಂಸಾಹೇಬ, ನಾನು ಸೈನ್ಯವನ್ನು ಕಟ್ಟಬಲ್ಲೆ ಕ್ಷಿಪ್ರದಲ್ಲಿಯೇ ಮಂಗಳೂರನ್ನು ಆಕ್ರಮಿಸಬಲ್ಲೆ. ಫರಂಗಿಯವರು ಯಾವಾಗಲೂ ಅದರ ಮೇಲೆ ಕಣ್ಣಿಟ್ಟಿದ್ದಾರೆ. ಅದರಿಂದ ಅದನ್ನು ರಕ್ಷಿಸುವುದು ಹೇಗೆ ?

ಫಾತಿಮಾ—ಅಂಥಾ ಸಂದರ್ಭದಲ್ಲಿ ನಗರದ ಪಾಳಯಗಾರರು ನಿನಗೆ ಸಹಾಯ ಮಾಡಲಾರರೆ ? ನೋಡು, ಹುಸೇಖಾ ! ಸೈನ್ಯವನ್ನು ಕಟ್ಟಿ ಮಂಗಳೂರನ್ನು ಹಿಡಿದರೆ, ಟಿಪ್ಪೂಸುಲ್ತಾನನಿಗೆ ಬಲವಾದ ಪೆಟ್ಟು ಕೊಟ್ಟಂತಾಗುವುದು. ಇಯಜ್‌ಖಾನರವರಿಗೂ ಅದರಿಂದ ಬಹಳ ಸಂತೋಷವಾಗಬಹುದು ನಿನ್ನಂಥಾ ಪರಾಕ್ರಮಶಾಲಿಗಳು ಅಂಥದೊಂದು ಪೌರುಷ ಕಾರ್ಯವನ್ನು ಮಾಡಲೇಬೇಕು. ಮಹಮದಾಲಿಯವರು ಎಷ್ಟೋ ಬಾರಿ ಹೇಳುತ್ತಿದ್ದರು ಪರಾಕ್ರಮಶಾಲಿಯಾದ ಪುರುಷನು ಒಂದು ಮಹತ್ಕಾರ್ಯವನ್ನು ಮಾಡಿಬಿಟ್ಟರೆ, ಭಗವಂತನು ಅವನಿಂದ ಅನೇಕ ಮಹತ್ಕಾರ್ಯಗಳನ್ನು ಮಾಡಿಸುತ್ತಾನೆಂದು. ದೊಡ್ಡ ನವಾಬರು ನಿನ್ನ ಹಾಗೆಯೇ ಸಣ್ಣ ಸೇನಾಧಿಪತಿಗಳಾಗಿದ್ದವರು, ಇಷ್ಟೊಂದು ಮೇಲಕ್ಕೇರಿ ಈ ದೊಡ್ಡ ಮೈಸೂರು ರಾಜ್ಯವನ್ನು ಕಟ್ಟಲಿಲ್ಲವೇ ? ಮಂಗಳೂರು ಮೈಸೂರಿಗೆ ಯಾವಾಗಲೂ ದೂರಪ್ರದೇಶ ರಾಜ್ಯಸೂತ್ರಗಳು ಸಡಿಲವಾಗಿದ್ದಾಗ ನೀನು ಒಂದು ಬಾರಿ ಅದನ್ನು ಹಿಡಿದುಬಿಟ್ಟರೆ ಸುಲ್ತಾನನು ಅದನ್ನು ಎಂದೆಂದಿಗೂ ಬಿಡಿಸಿಕೊಳ್ಳಲಾರ. ಆಗ ನೀನು ಸುಲ್ತಾನನಿಗೆ ಸಮಸಮ ಪರಾಕ್ರಮಶಾಲಿಯಾಗುತ್ತಿ !

ಹುಸೇ—ಬೇಗಂಸಾಹೇಬ ! ತಾವು ಹೇಳುವುದೆಲ್ಲಾ ಸರಿಯಾಗಿಯೇ ಇದೆ. ಸೈನ್ಯವನ್ನು ಕಟ್ಟುವುದಕ್ಕೆ, ಈ ಕಾರ್ಯಭಾರವನ್ನು ನಡೆಸುವುದಕ್ಕೆ ಬಹಳ ಹಣವು ಬೇಕಾಗುತ್ತದೆ.

ಫಾತಿಮಾ—ಹೌದು ! ಈ ನಗರದ ನಾಡು ಸಂಪದ್ಯುಕ್ತವಾದುದೆಂದು ಕೇಳಿದ್ದೇನೆ. ಈ ಪಾಳಯಗಾರರು ನಿನಗೆ ಸಹಾಯ ಮಾಡಲಾರರೆ ?

ಹುಸೇ—ಇಲ್ಲ ! ಬೇಗಂಸಾಹೇಬ್ ! ನಾನು ಸೈನ್ಯವನ್ನು ಕಟ್ಟುತ್ತೇನೆಂದರೆ ಅವರು ಏಕೆ ಹಣ ಕೊಡುತ್ತಾರೆ ? ಅವರಿಗೆ ಅದರಿಂದ ಲಾಭವೇನು ?

ಫಾತಿಮಾ—ನೀನು ಸೈನ್ಯವನ್ನು ಕಟ್ಟು. ಅದಕ್ಕೆ ಹಣವಿಲ್ಲದಿದ್ದರೆ ಕೊಳ್ಳೆ ಹೊಡೆದು ಅವರನ್ನು ಕಾಪಾಡು. ಹೊಸದಾಗಿ ರಾಜ್ಯ ಕಟ್ಟುವ ರಾಜರೆಲ್ಲಾ ಅದೇ ಮಾರ್ಗವನ್ನು ಅನುಸರಿಸುವುದು.

ಹುಸೇ — ಬೇಗಂಸಾಹೇಬ್ ! ತಾವು ಸಮಯದಲ್ಲಿ ಸರಿಯಾಗಿ ಸಲಹೆ ಕೊಟ್ಟಿರಿ! ನನ್ನಲ್ಲಿ ಕೊಂಚ ಹಣವಿದೆ. ಅದರಿಂದಲೇ ಸಣ್ಣ ಗುಂಪೊಂದನ್ನು ಕಟ್ಟುತ್ತೇನೆ.

ಫಾತಿಮಾ—ನಿನ್ನಲ್ಲಿ ಹಣವೆಷ್ಟಿದೆ ?

ಹುಸೇ್ನ—ಇಯಜ್‌ಖಾನರವರು ಐದುಸಾವಿರ ವರಹಗಳನ್ನು ಕೊಟ್ಟಿದ್ದಾರೆ.

ಫಾತಿಮಾ—ನಾನು ಐದುಸಾವಿರ ವರಹಗಳನ್ನು ಕೊಡುತ್ತೇನೆ. ನೀನು ಹೋಗಿ ನಿನ್ನ ಪರಾಕ್ರಮವನ್ನು ತೋರು !

ಹುಸೇ್ನ—ಬೇಗಂಸಾಹೇಬ ! ತಮ್ಮಲ್ಲಿ ಹಣವೆಲ್ಲಿದೆ ?

ಫಾತಿಮಾ—ನನ್ನಲ್ಲಿ ಹಣವಿದೆ. ನನ್ನ ಐಶ್ವರ್ಯವೆಲ್ಲವೂ ನನ್ನಲ್ಲಿಯೇ ಇದೆ. ನಾನು ದರಿಯಾಬಾಗಿಗೆ ಬರುವಾಗ ಅದನ್ನೆಲ್ಲಾ ತಂದಿದ್ದೇನೆ.

ಹುಸೇ್ನ—ಬೇಗಂ ಸಾಹೇಬ ! ತಮ್ಮಿಂದ ನಾನು ಹಣವನ್ನು ತೆಗೆದುಕೊಳ್ಳಲು ಒಪ್ಪುವುದಿಲ್ಲ ನನ್ನ ಸ್ವಶಕ್ತಿಯಿಂದಲೇ ನಾನು ಈ ಕಾರ್ಯವನ್ನು ಸಾಧಿಸಬಲ್ಲೆ.

ಬೇಗಂಸಾಹೇಬಳಿಗೆ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು ತಾನು ಮಹತ್ಕಾರ್ಯ ಮಾಡಿದೆನೆಂದು ಸಂತೋಷಪಟ್ಟಳು ಬೇಗಂ ಸಾಹೇಬಳು ದರಿಯಾಬಾಗಿಗೆ ಬಂದಮೇಲೆ ಇದೊಂದೇ ಸಂತೋಷಕರದ ಪ್ರಸಂಗ. !

ಹುಸೇ್ನಖಾನನು ಮಾರನೆಯ ಪ್ರಾಥಃಕಾಲ ದೌಲತ್‌ರಾಣಿಯವರ ಭೇಟಿ ಮಾಡಿದನು ಅವರು ಹುಸೇ್ನಖಾನನ ಪ್ರವಾಸವನ್ನು ವಿಚಾರಿಸಿದರು ಹುಸೇ್ನಖಾನನು "ರಾಣೀಸಾಹೇಬ್ ! ಇತ್ತಕಡೆ ಎಲ್ಲಲ್ಲಿಯೂ ಇಯಜ್‌ಖಾನರನ್ನು ಹುಡುಕಿದೆ ಅವರ ಸಮಾಚಾರವೇ ಇಲ್ಲ. ನಾನು ಇಲ್ಲಿ ಸುಮ್ಮನೆ ಕಾಲ ಕಳೆಯಲು ಮನಸ್ಸಿಲ್ಲ ನವಾಬರವರು ನನ್ನನ್ನು ಇಲ್ಲಿ ರಕ್ಷಣೆಗೋಸ್ಕರ ನೇಮಿಸಿದ್ದಾರೆ. ಇಲ್ಲಿ ರಕ್ಷಣೆಯ ಅವಶ್ಯಕತೆಯೇ ಇಲ್ಲ. ನನಗೆ ಅಪ್ಪಣೆಯಿತ್ತರೆ ಇಯಜ್‌ಖಾನರ ಅನ್ವೇಷಣೆ ಮಾಡುತ್ತೇನೆ ನಾನು ಅವರ ಸಮೀಪದಲ್ಲಿದ್ದರೆ ಅವರಿಗೂ ಸ್ವಲ್ಪ ಸಹಾಯವಾದೀತು" ಎಂದನು.

ದೌಲತ್—ಹೌದು, ಹುಸೇ್ನಖಾ್ನ ! ನಿನ್ನ ಮಾತು ಯುಕ್ತವಾಗಿದೆ. ನಾವು ಖಾನರವರನ್ನು ಅನ್ವೇಷಣೆ ಮಾಡದೇ ಇರಕೂಡದು

ಅದಕ್ಕೆ ನೀನೇ ತಕ್ಕ ಮನುಷ್ಯ. ನೀನು ಹೊರಡು. ನಿನಗೆ ಖರ್ಚಿಗೆ ಹಣವನ್ನು ತೆಗೆದುಕೊಂಡು ಹೋಗು.

ಹುಸೇ್ನ—ಇಲ್ಲ ರಾಣಿಸಾಹೇಬ್ ! ನನಗೆ ಹಣದ ಅವಶ್ಯಕತೆ ಇಲ್ಲ. ನನ್ನ ಗುಜರಾಣೆಯು ಹೇಗೋ ಕಳೆಯುತ್ತದೆ. ಇಲ್ಲಿಂದ ಬಿಟ್ಟು ಹೋಗುವುದಕ್ಕೆ ತಮ್ಮ ಅಪ್ಪಣೆ ಬೇಕು.

ದೌಲತ್—ನೀನು ಹೊರಡು. ಹುಸೇ್ನಖಾ್ನ ! ನಿನಗೆ ಶ್ರೇಯಸ್ಸಾಗಲಿ. ಖಾನರವರ ಸಮಾಚಾರವು ತಿಳಿಯುತ್ತಲೇ ನಮಗೆ ತಿಳಿಸು.

ಹುಸೇನ್ ಖಾನನು ಅಪ್ಪಣೆ ಎಂದು ಹೊರಟನು.

ಅದೇದಿನ ಸಾಯಂಕಾಲ ಯಥಾಪ್ರಕಾರ ಹುಸೇನ್ ಖಾನನು ಮಹಮದಾಲಿಯವರ ಗೋರಿಯ ಸಮೀಪದಲ್ಲಿ ಫಾತಿಮಾಬೇಗಂರವರನ್ನು ಭೇಟಿ ಮಾಡಿದನು ತಾನು ಮಾರನೆಯ ದಿನ ನಸು ಬೆಳಕಿನಲ್ಲಿ ನಗರವನ್ನು ಬಿಟ್ಟು ತೆರಳುವುದಾಗಿ ಹೇಳಿದನು. ಫಾತಿಮಳೂ, ಹುಸೇನ್ ಖಾನನೂ ಬಹಳ ಹೊತ್ತು ಮಾತನಾಡಿದರು ಹುಸೇನ್ ಖಾನನಿಗೆ ಈಗ ಈ ಜಗತ್ತಿನಲ್ಲಿರುವ ಬಂಧುವೆಂದರೆ, ಫಾತಿಮಾಬೇಗಂ ಒಬ್ಬಳೇ! "ನೋಡಿ ಬೇಗಂಸಾಹೇಬ್! ನಾನು ಒಂದು ಮಹತ್ಕಾರ್ಯವನ್ನು ಸಾಧಿಸಿದಲ್ಲದೇ ಸುಲ್ತಾನರಿಗೆ ಪ್ರತ್ಯಕ್ಷವಾದ ಒಂದು ಪೆಟ್ಟುಕೊಟ್ಟಲ್ಲದೇ ನಿಮಗೆ ಮುಖ ತೋರಿಸುವುದಿಲ್ಲ! ಈ ಮಹಮದಾಲಿಯವರ ಗೋರಿಯ ಮೇಲೆ ಆಣೆ ಇಟ್ಟು ಹೇಳುತ್ತೇನೆ" ಎಂದು ಶಪಥ ಮಾಡಿದನು

ಫಾತಿಮಳು ತನ್ನ ದೃಷ್ಟಿಯನ್ನು ಹುಸೇನ್ ಖಾನನ ಮೇಲೆ ಬೀರಿ "ಹುಸೇನ್ ಖಾನ್ ನೋಡು! ಈ ದಿವಾನರ ಗೋರಿಯ ಮೇಲೆ ಬರೆದಿರುವ ರಕ್ತಾಕ್ಷರಗಳನ್ನು ನೋಡು! ಅದು ಬಡಾಫಕೀರರಿಂದ ಬರೆಯಲ್ಪಟ್ಟ ಬರಹ!" ಎಂದು ಉತ್ತೇಜಿಸಿದಳು.

ಹುಸೇನ್ ಖಾನನಿಗೆ ವಿದ್ಯುತ್ಪ್ರವಾಹವು ಹರಿದಂತಾಯಿತು ಫಾತಿಮಳ ಆ ದೃಷ್ಟಿಯು ಹೃದಯದಲ್ಲಿ ನಾಟಿತು. "ಮೈಸೂರಿನ ಖಡ್ಗ" ಎಂಬ ಮಾತು ಕಿವಿಯಲ್ಲಿ ಝೇಂಕರಿಸುತ್ತಿತ್ತು. ಫಾತಿಮಳನ್ನು ಬೀಳ್ಕೊಂಡು ಹೊರಟು ಹೋದನು.

ಹುಸೇನ್ ಖಾನನು ಮೂಡು ಬಿದರೆಗೆ ಸಾಮಾನ್ಯ ಮನುಷ್ಯನಂತೆ ಹೋಗಿ ತಲುಪಿದನು. ಇವನು ಊರಿಗೆ ಹೋಗುತ್ತಲೇ ಗೋಪಾಲನ ಅಜ್ಜಿಯ ಮನೆಗೇ ಹೋಗಿ ಇಳಿದನು. ಗೋಪಾಲನ ಅಜ್ಜಿಯು ಆದರದಿಂದ ಉಪಚರಿಸಿದಳು ಮಾರನೆಯ ದಿನ ಊರಲ್ಲಿ ನಾಲ್ಕು ಜನ ದೊಡ್ಡ ಮನುಷ್ಯರನ್ನು ಕಂಡನು ಅವರೊಡನೆ ತಾನು ಮೂಡುಬಿದರೆಯಲ್ಲಿಯೇ ವಸತಿ ಮಾಡಲು ಬಂದಿರುವುದಾಗಿ ತಿಳಿಸಿದನು ಅವರುಗಳು ಬಹಳ ಆದರಿಸಿ ತಮ್ಮ ಕೈಲಾದ ಸಹಾಯ ಮಾಡುವುದಾಗಿ ವಾಗ್ದಾನವಿತ್ತರು. ದಾಯಾದಿಗಳನ್ನು ಕರೆಸಿ ಭಕ್ಷಿಯ ಸ್ವತ್ತನ್ನು ಅವನಿಗೆ ಬಿಟ್ಟುಕೊಡಬೇಕೆಂದು ಪಂಚಾಯಿತಿ ಮಾಡಿದರು. ದಾಯಾದಿಗಳಲ್ಲೊಬ್ಬನು ಗಣ್ಯ ಮನುಷ್ಯನಾಗಿದ್ದನು. ಅವನು "ಹುಡುಗನು ಗಟ್ಟಿಗನಾಗಿ ಕಾಣುತ್ತಾನೆ, ತನ್ನ ಮಗಳನ್ನು ಇವನಿಗೆ ಕೊಟ್ಟರೆ ಒಳ್ಳೇ ವರಸಾಮ್ಯ" ಎಂದುಕೊಂಡು ಇವನ ಕಡೆ ಮಾತನಾಡಿದನು. ಎಲ್ಲರೂ ಒಪ್ಪಿದರು. ಅಲ್ಲಿದ್ದ ಆಸ್ತಿಯು ಅಷ್ಟರಲ್ಲೇ ಇತ್ತು. ಊರು ಹೊರಗೆ ಒಂದು ತೋಟ. ಆ ತೋಟದಲ್ಲಿ ಒಂದು ಮುರುಕು ಮನೆ, ಸ್ವಲ್ಪಗದ್ದೆ. ಇಷ್ಟೇ ಇದ್ದುದು. ಅದನ್ನೆಲ್ಲಾ ಇವನಿಗೆ ವಹಿಸಿದರು. ಪಕ್ಕದಲ್ಲಿಯೇ ಒಂದು ಜೈನರ ಬಸ್ತಿ ಇತ್ತು. ಆ ತೋಟ ಗದ್ದೆ

ಎಲ್ಲ ಬಸ್ತಿಗೆ ಸೇರಿದ್ದೆಂದು ಜಗಳವಿತ್ತು. ಆ ಸ್ವತ್ತು ಭಕ್ಷಿಯದೇನೋ ಹೌದು. ಬಸ್ತಿಯ ಜಗಳವಿದೆ ಇವನೇ ತೆಗೆದುಕೊಳ್ಳಲಿ ಎಂದು ಬಿಟ್ಟುಕೊಟ್ಟರು

ಹುಸೇ೯ಖಾನನು ತನ್ನ ಹೆಸರನ್ನು ಯಾರಿಗೂ ತಿಳಿಸಲೇ ಇಲ್ಲ ಇವನು ಹಿಂದೆ ಈ ಊರಿನಲ್ಲಿದ್ದಾಗ "ಚೋಟಾ" ಎಂದು ಕರೆಯುತ್ತಿದ್ದರು ಈಗ ದೊಡ್ಡವನಾಗಿದ್ದಾನೆ ಎಲ್ಲರೂ "ಚೋಟಾಭಕ್ಷಿ" ಎಂದು ಕರೆಯುತ್ತಾರೆ. ಈ ಚೋಟಾಭಕ್ಷಿಗೆ ಗೋಪಾಲನೊಬ್ಬನು ಎಡೆಬಿಡದ ಶಿಷ್ಯ. ಚೋಟಾಭಕ್ಷಿಯ ನಡೆನುಡಿಗಳು, ವ್ಯವಹಾರಗಳು ಎಲ್ಲಾ ಹಿಂದುಗಳಂತೆ ಇತ್ತು- ಹಿಂದೂಗಳೂ, ಮುಸಲ್ಮಾನರೂ, ಎಲ್ಲರೂ ಇವನನ್ನು ಪ್ರೀತಿಸುತ್ತಿದ್ದರು ಈ ಊರಿನಲ್ಲಿ ಭಕ್ಷಿಯು ಗಣ್ಯವ್ಯಕ್ತಿಯಲ್ಲ. ಸರ್ವೇಸಾಧಾರಣವ್ಯಕ್ತಿ ಭಕ್ಷಿಯೂ, ಗೋಪಾಲನೂ ಸೇರಿ ನಾಲ್ಕುಜನ ಕೆಲಸಗಾರರನ್ನು ಕೆಲಸಕ್ಕೆ ಇಟ್ಟುಕೊಂಡು ಆ ಮುರುಕುಮನೆಯನ್ನೆಲ್ಲಾ ರಿಪೇರಿಮಾಡಿದರು. ಆಗ ಆ ತೋಟದ ಮನೆಯು ಮುದ್ದಾದ ಅಚ್ಚುಕಟ್ಟಾದ ಮನೆ ಭಕ್ಷಿಯು ಬಸ್ತಿಯ ಯಜಮಾನರನ್ನು ಹೋಗಿ ನೋಡಿದನು ತನ್ನ ಗದ್ದೆಯನ್ನು ಬಸ್ತಿಗೆ ಬಿಟ್ಟುಕೊಡುವುದಾಗಿ ಹೇಳಿದನು ಅವರು ಸಂತೋಷದಿಂದ ಒಪ್ಪಿಕೊಂಡರು ಅಲ್ಲಿಗೆ ಬಸ್ತಿಯ ಜಗಳವು ಬಗೆಹರಿದು ಹೋಯಿತು ಇದು ಮುಸಲ್ಮಾನರಿಗೆ ಇಷ್ಟವಿಲ್ಲ ಆದರೂ ಅವನ ಸ್ವತ್ತು ಅವನು ಕಳೆದುಕೊಂಡರೆ ನಮಗೇನು ಅಂದುಕೊಂಡರು ಭಕ್ಷಿಯು ಊರಬಾಗಿಲಲ್ಲಿ ಒಂದು ಕುಲುಮೆಯನ್ನಿಟ್ಟನು ಇಬ್ಬರು ಕಮ್ಮಾರರನ್ನೂ, ಇಬ್ಬರು ಬಡಗಿಗಳನ್ನೂ ಕೆಲಸಕ್ಕೆ ಇಟ್ಟುಕೊಂಡನು ಅವರ ಜೊತೆಯಲ್ಲಿ ಭಕ್ಷಿಯೂ ಗೋಪಾಲನೂ ಕೆಲಸಮಾಡುತ್ತಿದ್ದರು ಸಣ್ಣ ಪುಟ್ಟಕೆಲಸಗಳು ಬೇಕಾದಷ್ಟು ಬರುತ್ತಿದ್ದುವು ಭಕ್ಷಿಯು ಕೆಲಸಗಾರರಿಗೆ ಚೆನ್ನಾಗಿ ಮಜೂರಿ ಕೊಡುತ್ತಿದ್ದನು. ಬಂದ ಲಾಭದಲ್ಲಿ ಗೋಪಾಲನಿಗೆ ಸಮಭಾಗ ಹಂಚಿಕೊಡುತ್ತಿದ್ದನು ಗೋಪಾಲನಿಗೆ ತಾನು ಅಷ್ಟು ತೆಗೆದುಕೊಳ್ಳುವುದು ನ್ಯಾಯವಲ್ಲವೆಂದು ತೋರುತ್ತಿತ್ತು. ಭಕ್ಷಿಯು ಬಲವಂತ ಮಾಡಿ ಕೊಡುತ್ತಿದ್ದನು

ಈ ಸಮಯಕ್ಕೆ ಸರಿಯಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ಷಾಮವು ಬಂದಿತ್ತು. ಬಡಬಗ್ಗರಿಗೆ ತಿನ್ನುವುದಕ್ಕಿಲ್ಲ. ಕೂಲಿನಾಲಿಗಳು ಸಿಕ್ಕುವುದಿಲ್ಲ ಪೇಟೆಯಲ್ಲಿ ವ್ಯಾಪಾರವಿಲ್ಲ ಕೆಲವರು ವರ್ತಕರು ತಮ್ಮ ಮನೆಯ ಕಣಜದಲ್ಲಿ ಸ್ವಲ್ಪ ದವಸ ದಾಸ್ತಾನು ಇಟ್ಟುಕೊಂಡಿದ್ದಾರೆ. ಐಶ್ವರ್ಯವಂತರಿಗೆ ತಿನ್ನುವುದಕ್ಕಿದೆ. ಅವರಲ್ಲಿ ಹಣವಿದೆ, ದಾಸ್ತಾನು ಇದೆ. ಜನರೆಲ್ಲರೂ ದಿಕ್ಕೆಟ್ಟಿದ್ದಾರೆ ಕ್ಷಾಮದ ಸ್ವರೂಪವು ವಿಚಿತ್ರವಾದುದು. ಅದು ಬರುವಾಗ ಬೇಸಿಗೆಯ ಕಾಲದ ಬಿಸಿಲಿನಂತೆ ಸ್ವಲ್ಪ ಸ್ವಲ್ಪ ಏರುತ್ತ ಬರುತ್ತದೆ ಕೊನೆಕೊನೆಗೆ ದೇಶವನ್ನೆಲ್ಲಾ ಆವರಿಸಿ ಕಾಡುಕಿಚ್ಚಿನಂತೆ ಸುಡುತ್ತದೆ. ಕ್ಷಾಮದ ಬಿಸಿಲು ಮೆಲ್ಲಮೆಲ್ಲಗೆ ಏರುತ್ತಾ ಬಂತು,

ಭಕ್ಷಿಯು ಸುತ್ತಮುತ್ತಲಿನ ಊರುಗಳಿಗೆಲ್ಲಾ ಹೋಗಿ ಬರುತ್ತಿದ್ದನು. ಹಳ್ಳಿಗಳ ಕಡೆ ತಿರುಗುತ್ತಿದ್ದನು. ಎಲ್ಲಾ ಕಡೆಯೂ ಕ್ಷಾಮದ ಬೇಗೆಯು ಆವರಿಸುತ್ತಿರುವುದು ಅವನ ಕಣ್ಣಿಗೆ ಕಟ್ಟಿದಂತೆ ಆಗಿತ್ತು ಎಲ್ಲ ಕಡೆಯೂ ಯುವಕರನ್ನು ನೋಡುತ್ತಿದ್ದನು. ಅವರ ಮುಖವು ನಿಸ್ತೇಜಸ್ಕವಾಗಿರುವುದನ್ನು ನೋಡಿ ಪರಿತಪಿಸುತ್ತಿದ್ದನು.

ಒಂದು ದಿನ ಒಂದು ಹಳ್ಳಿಯಲ್ಲಿ ಒಂದು ಘಟನೆ ನಡೆಯಿತು. ಒಂದು ಅಂಗಡಿಯ ಮುಂದೆ ದೊಡ್ಡ ಗುಂಪು ಸೇರಿತ್ತು ಭಕ್ಷಿಯು ಅದೇನೆಂದು ಇಣಿಕಿ ನೋಡಿದನು. ಆಜಾನುಬಾಹುವಾದ ತರುಣನೊಬ್ಬನು ಒಬ್ಬ ಅಂಗಡಿಯ ವರ್ತಕನೊಡನೆ ಜಗಳವಾಡುತ್ತಿದ್ದನು. ಅಷ್ಟೊಂದು ಗುಂಪಿನಲ್ಲಿ ಒಬ್ಬರೂ ಜಗಳವನ್ನು ನಿಲ್ಲಿಸಲು ಹೋಗಲಿಲ್ಲ. ಎಲ್ಲರೂ ತಮಾಷೆ ನೋಡುತ್ತಿದ್ದರು ಅವರಿವರು ಸೇರಿಕೊಂಡು "ಇವನದು ನ್ಯಾಯ! ಅವನದು ನ್ಯಾಯ" ಎಂದು ಮಾತನಾಡಿಕೊಳ್ಳುತ್ತಿದ್ದರು. ಯುವಕನಿಗೆ ಬಹಳ ಕೋಪ ಬಂದಿತ್ತು ಅಪಮಾನವಾಗಿತ್ತು ವರ್ತಕನಿಗೂ ರೇಗಿತ್ತು ಅವನು ಯುವಕನ ಕೈಹಿಡಿದುಕೊಂಡು "ಏನೋ, ! ಸುಲ್ತಾನೀರಾಜ್ಯದಲ್ಲಿ ತುರುಕರಿಗೆ ಎದುರೇ ಇಲ್ಲವೆಂದುಕೊಂಡಿದ್ದೀಯೇನೋ ?" ಎಂದು ಒಂದೇಟು ಕೊಟ್ಟನು ಯುವಕನ ಮಾತು ಮೇರೆ ಮೀರಿತು "ಏನೋ ! ಕಾಫರ! ಸುಲ್ತಾನರ ಹೆಸರೆತ್ತುವಷ್ಟು ಕೊಬ್ಬಿಹೋಗಿದ್ದಿ" ಎಂದು ಹೇಳಿ ಸೊಂಟದಲ್ಲಿದ್ದ ಬಾಕನ್ನು ಸೆಳೆದು ಆ ವರ್ತಕನ ಕುತ್ತಿಗೆಗೆ ಇರಿಯುವುದಕ್ಕೆ ಹೋದನು. ಭಕ್ಷಿಯು ಚಟ್ಟನೆ ಹಾರಿ ಆ ಯುವಕನ ಕೈಯ್ಯನ್ನು ಗಟ್ಟಿಯಾಗಿ ಹಿಡಿದುಕೊಂಡನು ಆ ಯುವಕನಿಗೆ ಕೋಪ ಬಂತು. ಭಕ್ಷಿಯಮೇಲೆ ಜಗಳಕ್ಕೆ ತಿರುಗಿ ಭಕ್ಷಿಯನ್ನೇ ತಿವಿಯುವುದಕ್ಕೆ ಹೋದನು ಭಕ್ಷಿಯು ಒಂದೇಟುಕೊಟ್ಟು ಅವನನ್ನು ನೆಲಕ್ಕೆ ಉರುಳಿಸಿ ಆ ಬಾಕನ್ನು ಕಿತ್ತುಕೊಂಡನು. ಅಲ್ಲಿದ್ದ ಜನರೆಲ್ಲರೂ ಭಕ್ಷಿಯು ಎಷ್ಟು ಗಟ್ಟಿಗ ಎಂದು ಮೆಚ್ಚಿದರು ಭಕ್ಷಿಯು ವರ್ತಕನನ್ನು ಜಗಳದ ಕಾರಣವೇನೆಂದು ಕೇಳಿದನು. ಅವನು ಆ ಯುವಕನು ತನಗೆ ಮೂರು ರೂಪಾಯಿಕೊಡಬೇಕೆಂದೂ, ಎಷ್ಟು ಕೇಳಿದರೂ ಸತಾಯಿಸುತ್ತಾನೆಂದೂ, ರೇಗಿಕೊಂಡು ಹೇಳಿದನು. ಭಕ್ಷಿಯು ನಗುತ್ತಾ ಸೊಂಟದಿಂದ ತೆಗೆದು ಮೂರು ರೂಪಾಯಿ ಕೊಡುವುದಕ್ಕೆ ಹೋದನು ಶೆಟ್ಟಿಯು ಇಲ್ಲಾ ಸಾಹೇಬರೇ! ನಾನು ತೆಗೆದುಕೊಳ್ಳುವುದಿಲ್ಲ. ಅವನೇ ಕೊಡುತ್ತಾನೆ. ಎಂದಾದರೂ ಕೊಡಲಿ ಧಾಂಡಿಗ! ಸಂಪಾದಿಸಿ ಕೊಡಲಾರನೆ ? ಇನ್ನು ದೇವರಾಣೆ. ಅವನನ್ನು ಕೇಳುವುದಿಲ್ಲ. ಹೋಗಿ! ಎಂದನು ಭಕ್ಷಿಯು ಬಲವಂತ ಮಾಡಿ ರೂಪಾಯಿ ಕೊಟ್ಟನು. ಶೆಟ್ಟಿಯು ತೆಗೆದಿಟ್ಟುಕೊಂಡನು ಅಲ್ಲಿಗೆ ಮುಗಿಯಿತು ಜಗಳ! ಯುವಕನು ದುರದುರನೆ ಭಕ್ಷಿ

ಯನ್ನು ನೋಡುತ್ತಾ ನಿಂತಿದ್ದನು. ಭಕ್ಷಿಯು ನಗುತ್ತಾ "ಬಾ! ನಮ್ಮ ಮನೆಗೆ ಹೋಗೋಣ!" ಎಂದನು ಯುವಕನು ಅವನ ಹಿಂದೆ ಹೋದನು

ಭಕ್ಷಿ—ಯುವಕನೇ ನಿನ್ನ ಹೆಸರೇನು?

ಯುವಕ—ನನ್ನ ಹೆಸರು ಇಮಾಂ!

ಭಕ್ಷಿ—ಏನು ಕೆಲಸ ಮಾಡುತ್ತಿ?

ಇಮಾಂ—ಏನೂ ಕೆಲಸ ಸಿಕ್ಕುವುದಿಲ್ಲ

ಭಕ್ಷಿ—ಒಳ್ಳೆಯದು ನಾನು ಕೆಲಸ ಕೊಡುತ್ತೇನೆ, ಬರುವಿಯಾ?

ಇಮಾಂ—ಇಲ್ಲ! ನೀನು ಹರಾಂ ಮುಸಲ್ಮಾನರಿಗೆ ಅವಮಾನ ಮಾಡಿದ್ದಿ.

ಭಕ್ಷಿ—ನಾನೇನು ಅವಮಾನ ಮಾಡಿದೆ?

ಇಮಾಂ—ಆ ಶೆಟ್ಟಿ ಮುಸಲ್ಮಾನರನ್ನು ಬಯ್ಯುತ್ತಿದ್ದರೆ, ಸುಲ್ತಾನರನ್ನು ಅಲ್ಲ ಗಳೆಯುತ್ತಿದ್ದರೆ ಅವನಿಗೆ ದುಡ್ಡು ಕೊಟ್ಟು ಸಲಾಂ ಹೊಡೆದೆ! ನನ್ನನ್ನೇ ತಪ್ಪಿಗೆ ಗುರಿ ಮಾಡಿದೆ.

ಭಕ್ಷಿ—ನಿನಗೆ ಅಷ್ಟೊಂದು ಮತಾಭಿಮಾನವಿದೆಯೆ? ನೀನು ಅಂಥಾ ಸುಲ್ತಾನರ ಭಕ್ತನೆ?

ಇಮಾಂ—ಅಲ್ಬತ್ ಕಾಣುವುದಿಲ್ಲವೇ? ನಿನಗೆ?

ಭಕ್ಷಿ—ಸರಿ! ನೀನು ಸುಲ್ತಾನರ ಫೌಜಿನಲ್ಲಿ ಹೋಗಿ ಕೆಲಸಕ್ಕೆ ಸೇರಬಾರದೇಕೆ?

ಇಮಾಂ—ಬಹಳ ಪ್ರಯತ್ನ ಮಾಡಿದೆ. ಕೆಲಸ ಸಿಕ್ಕಲಿಲ್ಲ ಅಲ್ಲಿ ಲಂಚ ಕೊಡಬೇಕು ನನ್ನಲ್ಲಿ ಹಣವಿಲ್ಲ!

ಭಕ್ಷಿ—ಆಹಾ! ಲಂಚ ಕೊಡಬೇಕು. ಹಣವಿಲ್ಲ ಕೆಲಸವಿಲ್ಲ ನೀನು ಸುಲ್ತಾನರ ಭಕ್ತ! ಹೋಗಲಿ, ನನಗೇಕೆ ಆ ಮಾತು? ಲಂಚವಿಲ್ಲ, ರುಷುವತ್ತಿಲ್ಲ. ನಾನು ಕೆಲಸ ಕೊಡುತ್ತೇನೆ ಬಾ

ಇಮಾಂ—ಎಷ್ಟು ಸಂಬಳ ಕೊಡುತ್ತಿ?

ಭಕ್ಷಿ—ಫೌಜುದಾರಿ ಕೆಲಸದ ಎರಡರಷ್ಟು!

ಇಮಾಂ—ನಿನ್ನಲ್ಲಿಯೇ ಕೆಲಸಕ್ಕೆ ಸೇರುತ್ತೇನೆ

ಹಾಗೆಯೇ ಇಬ್ಬರೂ ಮಾತನಾಡುತ್ತಾ ಮುಂದೆ ಹೋದರು.

ಭಕ್ಷಿ—ಇಮಾಂ! ನೀನು ಇಷ್ಟು ಮೈಕಟ್ಟಿನ ತರುಣನಾಗಿದ್ದಿ. ತೇಜಸ್ವಿಯಾಗಿದ್ದಿ. ಇದುವರೆಗೂ ಏನೂ ಕಸಬು ಕಲಿತಿಲ್ಲವೆ?

ಇಮಾಂ—ಎಲ್ಲಾ ಆಯಿತು! ನಾನು ಬಟ್ಟೆಗಳನ್ನು ಹೊಲೆಯುತ್ತಿದ್ದೆ. ಸ್ವಲ್ಪ ಬಟ್ಟೆಗಳನ್ನಿಟ್ಟು ಮಾರಾಟ ಮಾಡುತ್ತಿದ್ದೆ. ಎಲ್ಲಾ ಹೋಯಿತು, ಪಾಪರಾದೆ.

ಭಕ್ಷಿ—ಏಕೆ ಪಾಪರಾದೆ ?

ಇಮಾಂ—ಕಾಣುವುದಿಲ್ಲವೆ ? ಬರಗಾಲ ! ಬಟ್ಟೆಗಳನ್ನೆಲ್ಲಾ ಮಾರಿ ಮಾರಿ ತಿಂದುಬಿಟ್ಟೆ ಈಗ ಬಟ್ಟೆಗಳೂ ಇಲ್ಲ ಮಾರಾಟವೂ ಇಲ್ಲ. ಹೊಟ್ಟೆಗೆ ಮೊದಲೇ ಇಲ್ಲ !

ಭಕ್ಷಿ—ನಾನು ಬಂಡವಾಳ ಕೊಡುತ್ತೇನೆ ನೀನು ವ್ಯಾಪಾರ ಮಾಡು !

ಇಮಾಂ—ಅದೆಲ್ಲಾ ನಡೆಯುವುದಿಲ್ಲ ಈ ಕಾಲದಲ್ಲಿ ವ್ಯಾಪಾರ ಸಾಪಾರ ಒಂದೂ ಸಾಗುವುದಿಲ್ಲ ನೀನು ಇಂದು ಬಂಡವಾಳ ಕೊಟ್ಟರೆ, ನಾಳೆ ಈ ಶೆಟ್ಟಿಯಂತೆ ಬೀದಿಗೆಳೆಯುತ್ತಿ ಮರ್ಯಾದೆಯಿಂದ ಬದುಕುವಂತಿಲ್ಲ ನನಗೆ ಎರಡು ಹೊತ್ತು ಒಳ್ಳೇ ಊಟ ಕೊಡು. ಅಂಗರೇಕುಗಳನ್ನು ಕೊಡು ನೀನು ಹೇಳಿದ ಕೆಲಸ ಮಾಡುತ್ತೇನೆ ಇವತ್ತು ಭಂಡಾರವನ್ನು ಲೂಟೀ ಮಾಡಿಕೊಂಡು ಬರುವಂತೆ ಹೇಳು ' ಮಾಡುತ್ತೇನೆ. ನಾನು ಅಂಥಾ ಸ್ವಾಮಿಭಕ್ತ. ಪರೀಕ್ಷ ಮಾಡಿನೋಡು

ಭಕ್ಷಿಗೆ ಸಂತೋಷವಾಯಿತು "ಬಾ! ನನ್ನ ಜೊತೆಯಲ್ಲಿ" ಎಂದು ಮನೆಗೆ ಕರೆದುಕೊಂಡು ಹೋದನು ಅವನಿಗೂ ಊಟಕ್ಕೆ ಬಡಿಸಿ ತಾನೂ ಊಟಮಾಡಿದನು. ಊಟವಾಗುತ್ತಲೇ ಇಮಾಂ ಭಕ್ಷಿಯನ್ನು ಕುರಿತು, "ಇದೇನು ಖಾವಿಂದ್ ! ನಿಮಗೆ ಸಂಸಾರವಿಲ್ಲವೋ ? ನೀವೇ ಅಡಿಗೆ, ನೀವೇ ಊಟ !" ಎಂದನು.

ಭಕ್ಷಿ—ಹೌದು ಇಮಾಂ ! ನನಗೆ ಸಂಸಾರವಿಲ್ಲ, ನಾನು ಒಬ್ಬಂಟಿಗ

ಇಮಾಂ—ನಾನೂ ಹಾಗೆಯೇ ನನಗೂ ಏನೂ ಇಲ್ಲ ಮರ್ಯಾದೆಯಾಗಿ ಬದುಕಬೇಕು ಅಷ್ಟೆ ನನಗೇನು ಕೆಲಸ ? ಖಾವಿಂದ್ !

ಭಕ್ಷಿ—ಕೆಲಸ ಕೊಡುತ್ತೇನೆ. ನನ್ನ ಜೊತೆಯಲ್ಲಿರು

ಮಾರನೆಯ ದಿನ ಊರು ಮಧ್ಯದಲ್ಲಿರುವ ಬಸ್ತಿಯ ಬಾಗಿಲಿನಲ್ಲಿ ಒಂದು ಚಿಕ್ಕ ಬಟ್ಟೆಯಂಗಡಿಯನ್ನು ತೆರೆದನು. ಅಲ್ಲಿ ಇಮಾಂನನ್ನು ಇಟ್ಟು "ಇಮಾಂ! ಈ ಅಂಗಡಿಯು ನನ್ನದು. ನೀನು ಇಲ್ಲಿ ಕೆಲಸಮಾಡು. ನಾನು ಸಂಬಳ ಕೊಡುತ್ತೇನೆ. ನಿನಗೆ ಲೆಖ್ಖ ಇಡುವುದಕ್ಕೆ ಬರುತ್ತದೇನು ?"

ಇಮಾಮನು "ಲೆಖ್ಖ ಬರುವುದಿಲ್ಲ ಆದರೆ ಎಲ್ಲಾ ಕರಾರ್ವಾಕ ಒಂದು ಕಾಸೂ ಅಪೋಹವಿಲ್ಲ. ವ್ಯತ್ಯಾಸ ಬಂದರೆ ತಲೆ ಹಾರಿಸಿಬಿಡಿ"

ಕೆಲವು ದಿನಗಳಲ್ಲಿಯೇ, ಈ ಇಮಾಮನು ಪ್ರಾಣಕ್ಕೆ ಪ್ರಾಣ ಕೊಡುವ ಭಕ್ತನಾದನು

ಎರಡು ತಿಂಗಳುಗಳಲ್ಲಿ ಭಕ್ಷಿಯು ಒಂದು ನೂರು ಜನ ಯುವಕರನ್ನು ತಯಾರು ಮಾಡಿದನು. ಇದರಲ್ಲಿ ಹತ್ತು-ಹತ್ತು ಜನರಿಗೆ ಒಂದೊಂದು ತುಕಡಿ ! ಅವರುಗಳು ಒಬ್ಬೊಬ್ಬರಿಗೆ ಪ್ರಾಣ ಪ್ರಾಣ ಸ್ನೇಹ. ಒಂದೊಂದು ಕೆಲಸದಲ್ಲಿಯೂ, ಆ ತುಕಡಿಯಲ್ಲಿ

ಒಂಭತ್ತು ಜನರು ಮಡಿದುಹೋದರೂ ಹತ್ತನೆಯವನು ಗೆಲ್ಲಬೇಕು. ಇಲ್ಲವೇ ಹತ್ತು ಜನರೂ ಸಾಯಬೇಕು ಅಂತಹ ಸ್ನೇಹ ! ಅಂತಹ ಒಗ್ಗಟ್ಟು ! ಇಂತಹ ದಳಗಳನ್ನು ಸಿದ್ಧಮಾಡಿದನು. ಇವರೆಲ್ಲರಿಗೂ ಭಕ್ಷಿಯು ದುಡ್ಡು ಕೊಡುತ್ತಾನೆ. ಯಾವ ಯಾವುದೋ ಮಾರ್ಗಗಳಲ್ಲಿ ಇವರೆಲ್ಲರಿಗೂ ದುಡ್ಡು ಬರುತ್ತೆ ದುಡ್ಡು ಬರುವ ಮಾರ್ಗ ಗಳು ಯಾರಿಗೂ ಗೊತ್ತಿಲ್ಲ ಆದರೆ, ಎಲ್ಲರೂ ಭಕ್ಷಿಯ ಭಕ್ತರು, ಭಕ್ಷಿಯ ಕುಲುಮೆ ಯಲ್ಲಿ ಉಳಿ, ಬಾಚಿ, ಕತ್ತಿ, ಕುಡುಗೋಲು, ಗುಳ ಇಂಥಾ ಅನೇಕ ಉಯುಕ್ತವಾದ ಪದಾರ್ಥಗಳು ತಯಾರಾಗುತ್ತವೆ ಬಹಳ ಬಾಳಿಕೆ ಬರುತ್ತವೆ, ಬಹಳ ಹದವಾಗಿವೆ ಎಂದುಕೊಳ್ಳುತ್ತಾರೆ ಈಗ ಈ ಕುಲುಮೆಯಲ್ಲಿ ಅನೇಕರು ಕೆಲಸ ಮಾಡುತ್ತಾರೆ. ಅವ ರೆಲ್ಲರೂ ಹೊರಗಡೆ ಮಜೂರಿ ಕೆಲಸಗಾರರಾದರೂ ಒಳಗೆ ಭಕ್ಷಿಯ ಗುಂಪುಗಳಿಗೆ ಸೇರಿ ದವರು ಭಕ್ಷಿಯೂ, ಗೋಪಾಲನೂ ಈ ಕುಲುಮೆಯಲ್ಲಿ ಸರ್ವದಾ ಕೆಲಸ ಮಾಡು ತ್ತಾರೆ. ಭಕ್ಷಿಯು ಒಂದು ವಿಧವಾದ ಬಾಕುಗಳನ್ನು ತಯಾರು ಮಾಡಲು ಆರಂಭಿಸಿ ದನು ಪ್ರತಿದಿನವೂ ಈ ಬಾಕುಗಳು ೫-೬ ಕ್ಕಿಂತ ಹೆಚ್ಚಾಗಿ ತಯಾರಾಗುವುದಿಲ್ಲ. ಅದಕ್ಕೆ ಭಕ್ಷಿಯು ಮನೆಯಲ್ಲಿಯೇ ಹದ ಕೊಡುತ್ತಾನೆ. ಅವುಗಳು ಎಲ್ಲಿಯೋ ಮಾಯ ವಾಗಿ ಹೋಗುತ್ತವೆ. ಗುಂಪು ಗುಂಪಾಗಿ ಅಲೆಯುವ ಯುವಕರ ಹತ್ತಿರವೆಲ್ಲಾ ಇಂಥದು ಒಂದೊಂದು ಬಾಕು ಇದೆ ಮೊಹರಂ ಹಬ್ಬದಲ್ಲಿಯೂ, ನವರಾತ್ರಿಯಲ್ಲಿಯೂ ಈ ಯುವಕರು ಕರಿಯ ಚಡ್ಡಿಗಳು, ಕೆಂಪು ಅಂಗಿಗಳು ಆಕಾಶ ಬಣ್ಣದ ಕಚ್ಚಿನ ರುಮಾಲುಗಳನ್ನು ಧರಿಸಿಕೊಂಡು ಚರ್ಮದ ನಡುಕಟ್ಟುಗಳನ್ನು ಕಟ್ಟಿಕೊಂಡು ಪದ ಗಳನ್ನು ಹಾಡುತ್ತಾ ಉತ್ಸವಗಳನ್ನು ಮಾಡುತ್ತಾರೆ ಈ ದಿರಸುಗಳೆಲ್ಲಾ ಇಮಾಂ ತಯಾರು ಮಾದಿದ್ದು ಇಂತಹ ನೂರಾರು ಗುಂಪುಗಳು ದಕ್ಷಿಣ ಕರ್ಣಾಟಕದಲ್ಲೆಲ್ಲಾ ಇದೆ ಭಕ್ಷಿಯ ಹೆಸರು ಎಲ್ಲೆಲ್ಲಿಯೂ ಇದೆ ಈ ಭಕ್ಷಿಯು ಯಾರೆಂಬುದನ್ನು ಯಾರೂ ಅರಿಯರು !

ಭಕ್ಷಿಯು ಐಶ್ವರ್ಯವಂತನಂತೆ ಕಾಣುವುದಿಲ್ಲ ಕುಲುಮೆಯ ಮೇಸ್ತ್ರಿ ! ಸಣ್ಣ ಬಟ್ಟೆಯಂಗಡಿಯ ಮಾಲೀಕ ಅವನ ಮನೆಯಲ್ಲಿ ಹೆಂಡರಿಲ್ಲ. ಮಕ್ಕಳಿಲ್ಲ. ಆಳು ಕಾಳುಗಳಿಲ್ಲ. ಬಂದ ಹಣದಲ್ಲಿ ತನ್ನ ಹೊಟ್ಟೆ ಬಟ್ಟೆಗಳಿಗಿಟ್ಟುಕೊಂಡು, ಮಸೀದಿಗಳಲ್ಲಿ, ಲಂಗರುಖಾನೆಗಳಲ್ಲಿ ದಾನಮಾಡಿಬಿಡುತ್ತಾನೆ. ಆದರೂ "ಭಕ್ಷಿಯು ದುಡ್ಡು ಕೊಡು ತ್ತಾನೆ, ಭಕ್ಷಿಯು ದುಡ್ಡು ಕೊಡುತ್ತಾನೆ" ಎಂಬ ವದಂತಿಯು ಜಿಲ್ಲೆಯಲ್ಲೆಲ್ಲಾ ಹರ ಡಿದೆ. ಅವನ ವಿಷಯದಲ್ಲಿ ಅನೇಕ ಕಟ್ಟು ಕಥೆಗಳನ್ನು ಅಲ್ಲಲ್ಲಿ ಮಾತನಾಡಿಕೊಳ್ಳು ತ್ತಾರೆ ಆ ಮನೆಯನ್ನು ಕಟ್ಟುವಾಗ ಭಕ್ಷಿಗೆ ಕೊಪ್ಪರಿಗೆ ಸಿಕ್ಕಿತು ಎಂದು ಅನೇಕರು ಹೇಳುತ್ತಾರೆ. ಆ ಊರಿನಲ್ಲಿ, ಊರಿನ ಹೊರಗೆ ಹಾಳು ಮಂಟಪದಲ್ಲಿರುವ ಫಕೀರ ನೊಬ್ಬನು ಚಿನ್ನವನ್ನು ಮಾಡುತ್ತಾನೆ. ಭಕ್ಷಿಯು ಆ ಫಕೀರನ ಭಕ್ತ. ಆ ಫಕೀರನು

ಪ್ರತಿದಿನವೂ ಎರಡು ಕೋಳಿಯ ಮೊಟ್ಟೆಗಳಷ್ಟು ಗಾತ್ರ ಚಿನ್ನವನ್ನು ಕೊಡುತ್ತಾನೆ ಎಂದು ಕೆಲವರು ಹೇಳುತ್ತಾರೆ ಇದೆಲ್ಲಾ ಊರಿನ ಕಥೆಗಳು ಒಂದು ಊರಿನಲ್ಲಿ ಒಂದು ವಿಧ, ಮತ್ತೊಂದೂರಿನಲ್ಲಿ ಇನ್ನೊಂದು ವಿಧ ಕಥೆಗಳು ಹಬ್ಬಿವೆ ಇದೆಲ್ಲಾ ಫೌಜುದಾರ್ ಕುತುಬುದ್ದೀನರವರಿಗೆ ಮುಟ್ಟಲ್ಲ.

## ಜಂಗಮರ ಹಾವಳಿ

ಕಾರ್ಕಳವು ದಕ್ಷಿಣ ಕನ್ನಡದಲ್ಲಿ ಒಂದು ಮುಖ್ಯಸ್ಥಳ. ಈ ದಿನ ಈ ಕಾರ್ಕಳ ಪೇಟೆಯಲ್ಲಿ ಬಲು ಗದ್ದಲ ಬಹಳ ಸಡಗರ ಊರೆಲ್ಲಾ ತಳಿರು ತೋರಣಗಳಿಂದ ಅಲಂಕೃತವಾಗಿದೆ ಕಛೇರಿಯವರಿಗೆಲ್ಲಾ ಬಲು ಓಡಾಟ ! ಇಂದು ಫೌಜುದಾರ್ ಕುತುಬುದ್ದೀನರು ಈ ಊರಿಗೆ ಬರುತ್ತಾರೆ ಈ ದಿನ ಜಮಾಬಂದಿ ಫೌಜುದಾರರು ಎಲ್ಲ ಸಲ್ತರ್ನೊಡನೆ ಬಂದಿದ್ದಾರೆ ಸುಲ್ತಾನರೇ ಬಂದರೆ ಎಷ್ಟು ಅಟ್ಟಹಾಸವೋ, ಅಷ್ಟು ಅಟ್ಟಹಾಸವೂ ಇದೆ ಹತ್ತಾರು ಮಂದಿ ದೊಡ್ಡ ಮನುಷ್ಯರು ಸರ್ಕಾರೀ ಹಣ ವನ್ನು ಕಟ್ಟಿಬಿಟ್ಟದ್ದಾರೆ. ಬಡವರೆಲ್ಲಾ ಬರೀ ಕೈಲಿ ಬಂದಿದ್ದಾರೆ ಬರಗಾಲ. ಏನು ಕೊಟ್ಟಾರು ? ಎಲ್ಲಾ ವಿಚಾರಣೆಯಾಯಿತು ಕೊನೆಗೆ ಕುತುಬುದ್ದೀನರು ನಿಮ್ಮ ಊರಿನ ಜಮಾಬಂದಿಯು ಪೂರ್ತಿಯಾಗದಿದ್ದರೆ ನಿಮ್ಮ ಊರಿಗೆ ಅಗೌರವ ಯಾರಾ ದರೂ ವಹಿಸಿಕೊಂಡು ಸರ್ಕಾರದ ಹಣ ಕಟ್ಟಿಬಿಟ್ಟರೆ ಬಹಳ ಗೌರವ ಎಂದು ಹೇಳಿ ದರು. ದೊಡ್ಡ ಮನುಷ್ಯರೆಲ್ಲರೂ ಅದನ್ನೇ ಪುಷ್ಟೀಕರಿಸಿದರು. ಭರಣಯ್ಯನವರು ಮುಂದೆ ಬಂದು "ಒಂದು ಲಕ್ಷ ರೂಪಾಯಿಗಳನ್ನು ನಾನೇ ಕೊಟ್ಟುಬಿಡುತ್ತೇನೆ ನೀವು ಗಳೆಲ್ಲಾ ಒಂದೆರಡು ತಿಂಗಳಲ್ಲಿ ಕೊಟ್ಟುಬಿಡಬೇಕು, ಇಲ್ಲದಿದ್ದರ ಜಮೀನೆಲ್ಲಾ ನನಗೇ ವಹಿಸಿಬಿಡಬೇಕು. ಅದಕ್ಕೆ ನೀವು ಒಪ್ಪದಿದ್ದರೆ ಸರ್ಕಾರವೇ ಖುದ್ದು ಬಂದಿದೆ. ಎಲ್ಲರ ಮನೆಯನ್ನೂ ಝುಡ್ತಿ ಮಾಡಿಬಿಡಲಿ" ಎಂದು ಖಡಾಖಂಡಿತವಾಗಿ ಹೇಳಿದರು. ದೊಡ್ಡವರೆಲ್ಲಾ "ನ್ಯಾಯ ! ನ್ಯಾಯ !" ಎಂದರು. ಫೌಜುದಾರರಿಗೆ ಒಂದು ಲಕ್ಷ ರೂಪಾಯಿಗಳನ್ನು ಒಪ್ಪಿಸುವುದಾಗಿ ಮಾತುಕೊಟ್ಟರು. ಕುತುಬುದ್ದೀನರು "ಭರಣ ಯ್ಯನವರಿಂದ ಈ ಊರಿಗೇ ಗೌರವ ಬಂತು ? ಊರಿಗೆ ಒಬ್ಬೊಬ್ಬರು ಇಂಥವರು ಇರಬೇಕು" ಎಂದು ಶ್ಲಾಘಿಸಿದರು.

ಬಡಜನರೆಲ್ಲಾ ಬಂದು ಬರಗಾಲ ಬಂದಿದೆ, ತಿನ್ನುವುದಕ್ಕಿಲ್ಲ ಎಂದು ಫೌಜು ದಾರರಲ್ಲಿ ಮೊರೆಯಿಟ್ಟರು. ಫೌಜುದಾರರು "ಏನು ಮಾಡಲಾದೀತು ! ಮಳೆ ಬೆಳೆ ದೇವರಿಗೆ ಸೇರಿದ್ದು ! ಅದಕ್ಕೆ ರಾಜರೇನು ಮಾಡಲಾದೀತು ? ದೇವರು ಕೊಡಬೇಕು, ಸುಖವಾಗಬೇಕು" ಎಂದು ಹೇಳಿದರು.

ಬ್ರಾಹ್ಮಣನೊಬ್ಬನು ಮುಂದೆ ಬಂದು ಎದೆ ಬಡಿದುಕೊಳ್ಳುತ್ತಾ, "ಮಹಾ ಸ್ವಾಮಿ! ಬಡಜನ ಹೊಟ್ಟೆಗಿಲ್ಲದೇ ಸಾಯುತ್ತೆ. ಸರ್ಕಾರದವರು ಏನಾದರೂ ಮಾಡಲೇಬೇಕು' ಎಂದು ದಿಟ್ಟತನದಿಂದ ಹೇಳಿದನು ಎಲ್ಲರೂ "ಹೌದು! ಹೌದು!" ಎಂದರು "ನೀವು ಸರಿಯಾಗಿ ಹೇಳಿದಿರಿ! ಅಷ್ಟು ತೀರ ಇಲ್ಲದವರಿಗೆ ಸರ್ಕಾರದವರು ಅಂಬಲಿ ಗಂಜಿ ಕಾಸಿಹಾಕಲು ಏರ್ಪಾಡು ಮಾಡುತ್ತೇವೆ" ಎಂದು ಫೌಜುದಾರರು ಹೇಳಿದರು ಕೊನೆಗೆ ಜಾತಿಯ ಮಾತು ಬಂತು ಫೌಜುದಾರರು "ಅದು ಬಲು ದೊಡ್ಡ ಪ್ರಶ್ನೆ! ಹಿಂದೂಗಳಲ್ಲಿ ಅನೇಕ ಜಾತಿಗಳಿವೆ ಒಂದು ಜಾತಿಯವರು ಮುಟ್ಟಿದ್ದು ಮತ್ತೊಂದು ಜಾತಿಯವರು ಉಣ್ಣುವುದಿಲ್ಲ ಇದಕ್ಕೆ ನಾವು ಕೈಹಾಕಿ ದರೆ ನಮಗೆ ಬಹಳ ಕೆಟ್ಟಹೆಸರು ಆದರ ತಂಟೆಗೆ ನಾವು ಬರಬಾರದು ನೀವು ನೀವೇ ನಿಮ್ಮ ನಿಮ್ಮ ಜಾತಿಯುವರಲ್ಲಿ ಯಾರಿಗೆ ತೀರಾ ಗತಿಯಿಲ್ಲವೋ ಅವರಿಗೆ ಅನ್ನ ಹಾಕಿರಿ!" ಎಂದುಬಿಟ್ಟರು.

ಕೆಂಪು ದಿರಸಿನ ಯುವಕನೊಬ್ಬನು ಮುಂದೆ ಬಂದು ಫೌಜುದಾರರಿಗೆ ಸಲಾಂ ಮಾಡಿದನು "ಹುಜೂರು! ಅನ್ನವಿಲ್ಲದೇ ಅನೇಕರು ಸಾಯುತ್ತಿದ್ದಾರೆ. ನಾವು ಅಲ್ಲಿ ಇಲ್ಲಿ ಭಿಕ್ಷವೆತ್ತಿ ಕಡುಬಡವರಿಗೆ ಗಂಜಿ ಹಾಕುತ್ತಿದ್ದೇವೆ ಆ ಭಿಕ್ಷವೂ ಸಿಕ್ಕು ವುದಿಲ್ಲ. ಈ ದುಡ್ಡುಳ್ಳ ದೊಡ್ಡ ಮನುಷ್ಯರೆಲ್ಲರೂ ನಮ್ಮ ಮಾತಿಗೆ ಕಿವಿಗೊಡುವುದೇ ಇಲ್ಲ. ಆ ಸಾಯುವ ಬಡಪ್ರಾಣಿಗಳ ಕಡೆ ತಿರುಗಿ ನೋಡುವುದೂ ಇಲ್ಲ ತಮ್ಮ ಸನ್ನಿಧಾನಕ್ಕೆ ಬಂದು ದಾನಧರ್ಮದ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಾರೆ ಸರ್ಕಾರದವರೇ ಅನ್ನ ಹಾಕಬೇಕು" ಎಂದನು

ಜನರ ಗುಂಪಿನಿಂದ "ಹೌದು! ಹೌದು!" ಎಂಬ ಸದ್ದು ಕೇಳಿಸಿತು

ಫೌಜುದಾರರು "ಸರ್ಕಾರದವರು ಏನು ಮಾಡಲೂ ಆಗುವದಿಲ್ಲ ನೀವೇ ಮಾಡಿರಿ. ಒಳ್ಳೇ ಕೆಲಸ! ಈ ದೊಡ್ಡಮನುಷ್ಯರಿಗೆಲ್ಲಾ ತಗ್ಗಿ ನಡೆಯಿರಿ. ಎಲ್ಲರೂ ಸಹಾಯ ಮಾಡುತ್ತಾರೆ ನಾನು ನೂರು ಮುಡಿ ಅಕ್ಕಿಯನ್ನು ಕೊಡಿಸುತ್ತೇನೆ ತೆಗೆದುಕೊಳ್ಳಿರಿ" ಎಂದು ಹೇಳಿದರು.

ಜನರೆಲ್ಲರೂ ಫೌಜುದಾರರನ್ನು ಕೊಂಡಾಡಿದರು

ಈ ಕೆಂಪು ದಿರಸಿನ ಗುಂಪಿನವರು ಬಡಬಗ್ಗರಿಗೆ ಸೇವೆ ಮಾಡುತ್ತಾರೆಂದು ಫೌಜುದಾರರಿಗೆ ತಿಳಿದಿತ್ತು. ಇವರು ಅಲ್ಲಲ್ಲಿ ಬಹುಜನರಿದ್ದಾರೆ ಸಮಯ ಬಂದಾಗ ಇವರನ್ನೆಲ್ಲಾ ಸೈನ್ಯಕ್ಕೆ ಸೇರಿಸಿಬಿಡಬಹುದು. ಆದರೂ ಈ ಯುವಕರ ಗುಂಪನ್ನು ನೋಡಿದರೆ ಏನೋ ಸಂದೇಹ!

ಬೆಳಗಾಗುತ್ತಲೇ ಊರಿನಲ್ಲೆಲ್ಲಾ ಗದ್ದಲ! ಎಲ್ಲೆಲ್ಲಿಯೂ ಗುಸುಗುಂಪಲು!

"ಕಳ್ಳರು ರಾತ್ರಿ ಧರಣಯ್ಯನವರ ಮನೆ ಲೂಟಿ ಮಾಡಿದರು ಕೊಳ್ಳೆ ಹೊಡೆದರು" ಎಂದು ಎಲ್ಲರೂ ಗಾಬರಿಯಿಂದ ಮಾತನಾಡಿಕೊಳ್ಳುತ್ತಿದ್ದರು

ರಾತ್ರಿ ಧರಣಯ್ಯನವರ ಮನೆಗೆ ಕಳ್ಳರು ನುಗ್ಗಿದರು ಗಂಡಸರನ್ನೆಲ್ಲಾ ಬಾಯಿಗೆ ಬಟ್ಟೆ ತುರುಕಿ ಹಜಾರದ ಕಂಬಗಳಿಗೆ ಕಟ್ಟಿಹಾಕಿದರು ಹೆಂಗಸರನ್ನೆಲ್ಲಾ ಕೋಣೆಗಳಲ್ಲಿ ಕೂಡಿದರು ನಗಗಳನ್ನೆಲ್ಲಾ ಸುಲಿಗೆ ಮಾಡಿದರು ಧರಣಯ್ಯನವರನ್ನು "ಹಣವೆಲ್ಲಿದೆ ಹೇಳು ? ಫೌಜುದಾರರಿಗೆ ಹಣ ಕಟ್ಟುತ್ತೀಯಾ ? ಊರನ್ನೆಲ್ಲಾ ಉಪವಾಸ ಕೆಡುವುತ್ತೀಯಾ ?" ಎಂದು ಹೇಳಿ ಬಾಕಿನಿಂದ ಚುಚ್ಚಿಬಿಡುವುದಾಗಿ ಹೆದರಿಸಿದರು. ಧರಣಯ್ಯನವರು ಮನಸ್ಸು ಗಟ್ಟಿ ಮಾಡಿ ಹಣವಿರುವ ಸ್ಥಳ ತೋರಿಸಲಿಲ್ಲ ದರೋಡೆಕೋರರು ಸ್ವಲ್ಪವೂ ಕರುಣೆ ತೋರುತ್ತಿರಲಿಲ್ಲ ಧರಣಯ್ಯನವರು ಪ್ರಾಣ ತೆತ್ತುಬಿಡುವರೆಂದು ಹೆದರಿ ಅವರ ಹೆಂಡತಿಯು ಖಜಾನೆಯನ್ನು ತೋರಿಸಿಬಿಟ್ಟರು ಅದನ್ನೆಲ್ಲಾ ಕಳ್ಳರು ಸ್ವಾಧೀನಪಡಿಸಿಕೊಂಡು ಹೊರಟು ಹೋದರು

ಈ ಸಮಾಚಾರವು ಊರಲ್ಲೆಲ್ಲಾ ಹರಡಿತು ಫೌಜುದಾರರಿಗೂ ತಿಳಿಯಿತು ಅವರಿಗೆ ಬಹಳ ಆಗ್ರಹ ಬಂದಿತು ನಾವಿರುವಾಗಲೇ ಈ ಊರಿನಲ್ಲಿ ಇಂಥಾ ಕೆಲಸ ನಡೆಯಿತೇ ಎಂದು ಎಲ್ಲ ಅಧಿಕಾರಿಗಳ ಮೇಲೆಯೂ ಆಗ್ರಹಗೊಂಡರು ದರೋಡೆಕೋರರನ್ನು ಈ ದಿನವೇ ಪತ್ತೆ ಮಾಡಬೇಕೆಂದು ಕೊತ್ವಾಲ ಚೌಕೀದಾರರಿಗೆ ಎಲ್ಲರಿಗೂ ಕಟ್ಟಪ್ಪಣೆ ಮಾಡಿದರು ಧರಣಯ್ಯನವರ ಮನೆಗೆ ಖುದ್ದಾಗಿ ಫೌಜುದಾರರ ಸವಾರಿಯು ಹೊರಟಿತು ಅವರನ್ನು ಸಮಾಧಾನ ಮಾಡಿದರು. ಯಾರೋ ದುರುಳರು ಈ ಕೆಲಸ ಮಾಡಿದ್ದಾರೆ ಒಂದೇ ದಿನದಲ್ಲಿ ಪತ್ತೆಯಾಗುತ್ತದೆಂದು ಧೈರ್ಯ ಹೇಳಿದರು.

ಊರಿನಲ್ಲೆಲ್ಲಾ ಇದೇ ಮಾತು ! ಅಂಥಾ ಧರ್ಮಾತ್ಮರಿಗೆ ಹೀಗಾಗಬಹುದೇ ಎಂದು ಪೇಚಾಡುವವರು ಕೆಲವರು ಅನ್ಯಾಯದ ದುಡ್ಡು ಆದದ್ದೇ ಸರಿ ಎಂಬುವವರು ಹಲವರು ಫೌಜುದಾರರು ಊರಿನಲ್ಲೇ ಇದ್ದಾರೆ ಖಂಡಿತ ಪತ್ತೆಯಾಗುತ್ತೆ. ಎಂದು ಕೆಲವರು ! ಹೋಗಿಬಿಟ್ಟಿತಪ್ಪಾ ! ಕಳ್ಳರ ಕೈಗೆ ಸಿಕ್ಕಿದ ಗಂಟು ! ಎನ್ನುವವರು ಮತ್ತೆ ಕೆಲವರು ಅಂತೂ ಆ ದಿನವೆಲ್ಲಾ ಹೀಗೆಯೇ ಕಳೆಯಿತು ! ಕಳ್ಳರ ಪತ್ತೆಯಾಗಲಿಲ್ಲ. ಫೌಜುದಾರರಿಗೆ ತಾವು ಈ ಊರಿನಲ್ಲಿರುವಾಗಲೇ ಇಷ್ಟು ದೊಡ್ಡ ಲೂಟಿ ನಡೆದುಹೋಯಿತಲ್ಲ. ಇನ್ನು ಸರ್ಕಾರದ ಬಿಗಿ ಇರುವುದು ಹೇಗೆ ಎಂದು ಬಹಳ ಆಗ್ರಹ ಬಂತು ಅಧಿಕಾರಿಗಳನ್ನೆಲ್ಲಾ ಕರೆಸಿ ಕ್ರೂರವಾದ ತಾಕೀತುಕೊಟ್ಟು ತಮ್ಮ ರಾಜಧಾನಿಗೆ ಹಿಂದಿರುಗಿದರು.

ಧರಣಯ್ಯನವರ ಮನೆ ಲೂಟಿಯಾದಂತೆ, ಎಲ್ಲೆಲ್ಲಿಯೂ ದೊಡ್ಡ. ಮನುಷ್ಯರಗಳ ಮನೆ ಕೊಳ್ಳೆ ಹೊಡೆಯುವುದು ಆರಂಭವಾಯಿತು. ಫೌಜುದಾರರಿಗೆ ಇಂತಹ

ಅನೇಕ ವರದಿಗಳು ಬಂದವು  ಕಳ್ಳರನ್ನು ಹಿಡಿಯಲು ಫೌಜುದಾರರು ಎಷ್ಟೋ ಏರ್ಪಾಡುಗಳನ್ನು ಮಾಡಿದರು ಏನೂ ಪತ್ತೆಯಾಗಲಿಲ್ಲ  ಈ ಸಮಾಚಾರಗಳು ಶ್ರೀರಂಗಪಟ್ಟಣಕ್ಕೆ ಹೇಗಾದರೂ ಮುಟ್ಟುತ್ತದೆ ತನಗೆ ಕೆಟ್ಟ ಹೆಸರು ಬರುತ್ತದೆ ಎಂದು ಭಯ ಹುಟ್ಟಿತು  ಅನೇಕ ಮಂದಿ ದೊಡ್ಡ ಮನುಷ್ಯರನ್ನು ಕರೆಸಿದರು. ಆಪ್ತರನ್ನು ಕರೆಸಿದರು. ಆಲೋಚನೆ ಮಾಡಿದರು  ಕ್ಷಾಮವು ಹೆಚ್ಚುತ್ತಿದೆ ಜನರಿಗೆ ಹೊಟ್ಟೆಗಿಲ್ಲ. ಅದರಿಂದಲೇ ಈ ದುಷ್ಕೃತ್ಯಗಳು ನಡೆಯುತ್ತಿವೆ ಎಂಬುದಾಗಿ ಅವರೆಲ್ಲರೂ ಅರಿಕೆ ಮಾಡಿದರು  ಇದನ್ನು ದಮನ ಮಾಡುವುದಕ್ಕೆ ಏನಾದರೂ ಮಾಡಬೇಕೆಂದು ತೀರ್ಮಾನವಾಯಿತು  ಫೌಜುದಾರರು ತಾವೇ ದೇಶದಲ್ಲೆಲ್ಲಾ ಸಂಚಾರ ಮಾಡಿ ಈ ಕಳ್ಳರನ್ನು ಅಡಗಿಸುವುದಾಗಿ ವಾಗ್ದಾನವಿತ್ತರು. ಲೂಟಿ, ದರೋಡೆಗಳ ವರದಿಗಳೇನೋ ಬರುತ್ತಲೇ ಇದ್ದುವು

ಇದೇ ಸಮಯದಲ್ಲಿ ವೀರಶೈವ ಜಂಗಮರು ದಕ್ಷಿಣ ಕನ್ನಡದಲ್ಲಿ  ವೀರಶೈವಮತ ಪ್ರಚಾರಕ್ಕೆ ಆರಂಭಿಸಿದ್ದರು  ಈ ಜಂಗಮಯ್ಯಗಳು ಬಹು ಮಂದಿ ಉತ್ತರಕರ್ಣಾಟಕದಿಂದ ಬಂದವರು  ಒಬ್ಬಿಬ್ಬರು ನಗರದ ಕಡೆಯವರು  ಈ ಜಂಗಮಯ್ಯಗಳಿಗೆ ಯಾವ ಭೀತಿಯೂ ಇರಲಿಲ್ಲ  ಇವರುಗಳು ವೀರಶೈವಮತಪ್ರಚಾರಕ್ಕೆ ಬಂದವರು ಆದರೂ ಅಲ್ಲಲ್ಲಿ ಮಾತನಾಡುವಾಗ "ನಗರದ ರಾಜ್ಯವು ಶಿವಪ್ಪನಾಯ್ಕನ ರಾಜ್ಯ, ವೀರಶೈವರ ರಾಜ್ಯ. ಅದು ಅಸ್ತವಾಗಿ ಹೋಯಿತು  ಕರ್ಣಾಟಕದಲ್ಲಿ ವೀರಶೈವರಾಜ್ಯವನ್ನು ಕಟ್ಟಬೇಕು" ಎಂದು ಹೇಳುತ್ತಿದ್ದರು. ಈ ವೀರಶೈವ ಜಂಗಮಯ್ಯಗಳು. ತಾವು ಮತಪ್ರಚಾರ ಮಾಡುವ ಕಡೆಯೆಲ್ಲಾ ಅನ್ನದಾನ ಮಾಡುತ್ತಿದ್ದರು  ಬರಗಾಲದಲ್ಲಿ ಇದು ಜನರನ್ನು ಚೆನ್ನಾಗಿ ಆಕರ್ಷಿಸುತ್ತಿತ್ತು  ಒಬ್ಬ ಜಂಗಮಯ್ಯನಿಗೆ "ಅನ್ನದಾನಯ್ಯ" ಎಂದೇ ಹೆಸರಾಗಿಹೋಗಿತ್ತು

ಇದನ್ನು ನೋಡಿ ಕೆಲವರು ಜೈನರಿಗೂ, ಬ್ರಾಹ್ಮಣರಿಗೂ ಸಹನೆ ಇರಲಿಲ್ಲ. ಇವರೆಲ್ಲಾ ಈ ವೀರಶೈವರಿಗೆ ಏನಾದರೂ ಬಲವಾದ ಪ್ರತೀಕಾರ ಮಾಡಬೇಕೆಂದು ಹವಣಿಸುತ್ತಿದ್ದರು  ಈ ವೀರಶೈವರಿಗೆ ವಿರೋಧಿಗಳಾದ ಕೆಲವರು ಮುಖಂಡರು ಫೌಜುದಾರ್ ಕುತುಬುದ್ದೀನರನ್ನು ಭೇಟಿ ಮಾಡಿದರು  ದಕ್ಷಿಣ ಕನ್ನಡದಲ್ಲಿ ನಡೆಯುತ್ತಿರುವ ಕೊಳ್ಳೆ ದರೋಡೆಗಳನ್ನೆಲ್ಲಾ ಈ ಜಂಗಮಯ್ಯಗಳೇ ಮಾಡಿಸುತ್ತಿದ್ದಾರೆಂದೂ, ಇಲ್ಲಿ ಸುಲಿಗೆ ಮಾಡುವ ಚಿನ್ನ ಬೆಳ್ಳಿಗಳನ್ನೆಲ್ಲಾ ಉತ್ತರ ಕರ್ನಾಟಕಕ್ಕೆ ಸಾಗಿಸುತ್ತಿದ್ದಾರೆಂದೂ ತಿಳಿಸಿದರು. ಫೌಜುದಾರನಿಗೆ ಇದು ಮನಸ್ಸಿಗೆ ಚೆನ್ನಾಗಿ ತಟ್ಟಿತು  ಅವನು ರಾಜಕರ್ಮಚಾರಿಗಳನ್ನು ಕರೆಸಿ ಈ ಜಂಗಮಯ್ಯಗಳ ಮೇಲೆ ನಿಗಾ  ಇಡಬೇಕೆಂದು ಹುಕ್ಕುಂ ಮಾಡಿದನು. ಈ ಜಂಗಮಯ್ಯಗಳು ಅಧಿಕಾರಿಗಳನ್ನು ತಿರಸ್ಕಾರದಿಂದ

ಕಾಣುತ್ತಿದ್ದರು. ಅಲ್ಲಲ್ಲಿ ಈ ಅಧಿಕಾರಿಗಳಿಗೂ, ವೀರಶೈವಮತಪ್ರಚಾರಕರಿಗೂ ಘರ್ಷಣೆಗಳಾಗುತ್ತಿತ್ತು.

ಮುಲ್ಕಿ ಎಂಬ ಸ್ಥಳದಲ್ಲಿ ಒಬ್ಬ ಮುಸಲ್ಮಾನ್ ಕಿಲ್ಲೇದಾರನಿದ್ದನು ಇವನು ಬಹಳ ದರ್ಪದಿಂದ ಮೆರೆಯುತ್ತಿದ್ದನು ಮುಲ್ಕಿಗೆ ಜಂಗಮಯ್ಯಗಳು ಬರಕೂಡದೆಂದು ಡಂಗೂರ ಸಾರಿಸಿದನು ಅಲ್ಲಿ ಮೂವರು ನಾಲ್ವರು ಹರವಾದಿಗಳಾದ ಜಂಗಮರು ಸೇರಿದರು. ಮುಲ್ಕಿಯ ಅಧಿಕಾರಿಗೂ, ಜಂಗಮರಿಗೂ ಮುಖಾಮುಖಿ ಜಗಳ ವಾಯಿತು. ರೋಷಾವೇಶವು ಹೆಚ್ಚಿತು ರಾಜಭಟರು ಅನೇಕರನ್ನು ದಂಡಿಸಿದರು ಅಲ್ಲಿ ಆ ದಿನ ರಾತ್ರಿ ದೊಡ್ಡ ದೊಂಬಿಯಾಗಿ ಕಿಲ್ಲೇದಾರರನ್ನು ಹೊಡೆದು ಕೊಂದುಬಿಟ್ಟರು ಈ ಸಮಾಚಾರವು ಫೌಜುದಾರರಿಗೆ ತಿಳಿಯತು. ಅವರಿಗೆ ಪ್ರಚಂಡ ಕೋಪ ಬಂತು ರಾಜಭಟರನ್ನು ನಾಲ್ಕು ಕಡೆ ಕಳುಹಿಸಿ ಕನ್ನಡ ಜಿಲ್ಲೆಯಲ್ಲಿರುವ ಜಂಗಮರನ್ನೆಲ್ಲಾ ಹಿಡಿದು ತರಬೇಕೆಂದು ಹುಕ್ಕುಂ ಮಾಡಿದರು. ಅನೇಕರು ತಲೆ ತಪ್ಪಿಸಿಕೊಂಡು ಓಡಿ ಹೋದರು ಕೆಲವರು ಜಂಗಮರು ಸಿಕ್ಕಿಕೊಂಡರು ಅವರನ್ನೆಲ್ಲಾ ಫೌಜುದಾರರ ಆಸ್ಥಾನಕ್ಕೆ ಹಿಡಿದು ತಂದರು ಕುತುಬುದ್ದೀನನು ಕೋಪಾವೇಶದಿಂದ ಅವರಲ್ಲಿ ಇಬ್ಬರು ಮೂವರನ್ನು ಶೂಲಕ್ಕೇರಿಸಿದನು ಕೆಲವರನ್ನು ಬಂದೀಖಾನೆಯಲ್ಲಿಡಿಸಿದನು ಅನೇಕರನ್ನು ಕಶೆಗಳಿಂದ ಹೊಡೆಸಿ ಗಡೀಫಾರು ಮಾಡಿಸಿದನು ಇದರಿಂದ ದೇಶವೆಲ್ಲಾ ಅಲ್ಲಕಲ್ಲೋಲವಾಯಿತು. ಫೌಜುದಾರನು ಸುಲ್ತಾನರ ಸಮ್ಮುಖಕ್ಕೆ ಒಂದು ಓಲೆಯನ್ನು ಬರೆಸಿ ಕಳಿಸಿದನು "ಜನರು ಮಂಗಳೂರಿನಲ್ಲಿ ಗುಲ್ಲೆಬ್ಬಿಸಿದ್ದಾರೆ ಕ್ಷಾಮದ ಬಾಧೆಯಿಂದ ಬಡಜನರು ಪೀಡಿತರಾಗಿದ್ದಾರೆ ಮಳೆ ಬೆಳೆಗಳೇ ಇಲ್ಲ. ದೇಶದಲ್ಲಿ ಎಲ್ಲೆಲ್ಲಿಯೂ ಕೊಳ್ಳೆ, ದರೋಡೆ, ಕಳವುಗಳು ನಡೆಯುತ್ತಿವೆ ಇದಕ್ಕೆಲ್ಲಾ ಉತ್ತರದ ಕಡೆಯಿಂದ ಬಂದಿದ್ದ ಜಂಗಮಯ್ಯಗಳೇ ಕಾರಣ. ಅವರೆಲ್ಲರನ್ನೂ ಪತ್ತೆ ಮಾಡಿಸಿ, ಹಿಡಿತರಿಸಿ ಸರಿಯಾದ ಶಿಕ್ಷೆ ಮಾಡಿಸಿದೆ. ಇನ್ನು ಈ ಪ್ರಾಂತ ಜಂಗಮಯ್ಯಗಳು ತಲೆ ಇಡದಂತೆ ಮಾಡಿದ್ದೇನೆ. ದಕ್ಷಿಣ ಕನ್ನಡವು ಶಾಂತಿಗೆ ಬಂದಂತೆಯೇ ಸರಿ" ಎಂಬುದಾಗಿ ಬರೆಸಿ ಇಲ್ಲಿಯ ಸಂಗತಿಗಳೆಲ್ಲವನ್ನೂ ವಿವರಿಸುವಂತೆ ರಾಜಕರ್ಮಚಾರಿಗಳನ್ನು ಕಳುಹಿಸಿಕೊಟ್ಟನು.

## ವಿಪ್ಲವದ ಮೂಲ ಪುರುಷನು ಭಕ್ಷಿಯೋ-ಫಕೀರನೋ

ವಿಪ್ಲವದ ಸ್ವರೂಪವೇ ಹೀಗೆ! ಯಾರೋ ವಿಪ್ಲವದ ಬೀಜಗಳನ್ನು ಬಿತ್ತುತ್ತಾರೆ ಅದು ಎಲ್ಲಿಯೋ ಮೊಳೆಯುತ್ತದೆ. ಎಲ್ಲಿಯೋ ಶಾಖೆಗಳು ಕಾಣಿಸಿಕೊಳ್ಳುತ್ತವೆ ಯಾವುದೋ ರೂಪಾಂತರಗಳನ್ನು ತಾಳುತ್ತದೆ. ಭಕ್ಷಿಯು ಯಾವುದೋ ರೂಪದಲ್ಲಿ ಬಿತ್ತಿದ ಈ ವಿಪ್ಲವ ಬೀಜವು ಜಂಗಮರ ಬಂಡಾಯರೂಪವನ್ನು ತಾಳಿ ಜಂಗಮರ

ವಧೆಯಲ್ಲಿ ಪರ್ಯವಸಾನವಾಯಿತು ಭಕ್ಷಿಯು ಇದನ್ನೆಲ್ಲಾ ಜಾಗರೂಕತೆಯಿಂದ ಕಾಯುತ್ತಿದ್ದನು ಈಗ ಕೆಂಪಂಗಿಯ ಭಟರು ಹತ್ತು ಸಾವಿರ ಮಂದಿ ಇದ್ದಾರೆ ಇವರಿಗೆಲ್ಲಾ ದಿರಸಿದೆ ದೊಣ್ಣೆಗಳಿವೆ ಕಠಾರಿಗಳಿವೆ ಎಷ್ಟೋಜನರಲ್ಲಿ ಒಳ್ಳೇ ಕತ್ತಿಗಳಿವೆ ಸಾವಿರಾರು ಬಂದೂಕಗಳಿವೆ ಭಕ್ಷಿಯು "ಯಾವ ಕ್ಷಣದಲ್ಲಿ ಅಂದರೆ ಆ ಕ್ಷಣ ಮಂಗಳೂರನ್ನು ಹಿಡಿಯಬಹುದು ಇಯಜ್‌ಖಾನರು ಹೊಸದೊಂದು ರಾಜ್ಯ ವನ್ನು ಕಟ್ಟುವುದಾಗಿ ಶಪಥ ಮಾಡಿದ್ದಾರೆ ನಾನು ಇಲ್ಲಿ ಹೊಸರಾಜ್ಯವನ್ನು ಸಿದ್ಧ ಮಾಡಿದ್ದೇನೆ ಅವರು ಇಲ್ಲಿಗೆ ದರ್ಶನವಿತ್ತರ ಒಂದೇ ದಿನದಲ್ಲಿ ಈ ಕೊಂಕಣ ರಾಜ್ಯ ವನ್ನು ಹಿಡಿದು ಅವರಿಗೆ ಒಪ್ಪಿಸಬಲ್ಲೆ !" ಎಂದುಕೊಳ್ಳುತ್ತಿದ್ದನು

ಕುತುಬುದ್ದೀನನು ಬಲು ಬುದ್ಧಿವಂತ ಈಗ ಅವನ ಕಣ್ಣುಮುಂದೆ ವಿಪ್ಲ ವವು ಚೆನ್ನಾಗಿ ಕಾಣುತ್ತಿದ. ಇದು ಕ್ಷಾಮವಲ್ಲ ಜಂಗಮರ ಬಂಡಾಯವೂ ಅಲ್ಲ. ಇದೆಲ್ಲಾ ಕೆಂಪಂಗಿಯ ತರುಣರ ಹಾವಳಿಯೇ ಸರಿ! ಇವರಿಗೆಲ್ಲ ಆಯುಧಗಳಿವೆ. ದಿರಸು ಇದೆ ಪ್ರಬಲವಾದ ಒಗ್ಗಟ್ಟಿದೆ ನಾವು ಇವರನ್ನು ಕೆಣಕಿದರೆ ನಮ್ಮ ಸೈನ್ಯದೊಡನೆ ಎದರು ನಿಂತು ಖಾಡಾಖಾಡಿ ಯುದ್ಧಮಾಡಬಲ್ಲರು ನಮ್ಮ ಸೈನ್ಯವು ಸ್ವಲ್ಪ ಕಂಗೆಟ್ಟಿದೆ ಕ್ಷಾಮದಿಂದ ಸೈನಿಕರ ಮನೆಮಂದಿ ಮಕ್ಕಳು ಕೊರಗಿದ್ದಾರೆ. ಯುದ್ಧವಾದರೆ ನಮಗೆ ಅಪಜಯವಾದರೂ ಆಗಬಹುದು ಯುದ್ಧಕ್ಕೆ ಬೇಕಾದ ಸಿದ್ಧತೆಗಳೂ ಇಲ್ಲ ಸುಲ್ತಾನರ ಅಪ್ಪಣೆಯಿಲ್ಲದೇ ಯುದ್ಧವನ್ನಾದರೂ ನಾನು ಎಬ್ಬಿ ಸುವುದೆಂತು ? ಹೀಗೆ ಯೋಚನೆ ಮಾಡತೊಡಗಿದನು ಈ ವಿಪ್ಲವದ ಮೂಲ ಪುರು ಷನಾರು ? ಇವನನ್ನು ಕಂಡು ಹಿಡಿಯದೆ ಯಾವುದನ್ನೂ ಮುಂದುವರಿಸಕೂಡದು ಇದು ಪ್ರಜಾಕ್ಷೋಭೆಯಲ್ಲ ರಾಜಕೀಯ ವಿಪ್ಲವ! ಯಾವನೋ ರಾಜಕೀಯ ಪುರುಷನು ಈ ವಿಪ್ಲವನನ್ನು ಆಡಿಸುತ್ತಿದ್ದಾನೆ ಇದಕ್ಕ ಎಷ್ಟೊಂದು ಹಣಬೇಕು ? ನಮ್ಮ ಖಜಾನೆಯೆಲ್ಲವನ್ನೂ ಬರಿದು ಮಾಡಿದರೂ ಇಷ್ಟು ಹಣವಿಲ್ಲ ಇಂಗ್ಲೀಷರು ಇದಕ್ಕೆ ಬೆಂಬಲ ಕೊಟ್ಟಿದ್ದಾರೆಯೇ ? ಇಲ್ಲ ! ಮರಾಟರು ಈ ಸೂತ್ರಗಳನ್ನು ಆಡಿಸು ತ್ತಿರಬಹುದೆ ? ಅಲ್ಲ ! ಹಾಗಾದರೆ ಯಾರು? ಈತನೆಲ್ಲಿದ್ದಾನೆ?

ರಾಜಕರ್ಮಚಾರಿಗಳು ಕೆಲವು ಸಮಾಚಾರಗಳನ್ನು ತಂದರು. ಕಾರ್ಕಳದಲ್ಲಿ ರುವ ಫಕೀರರೋ-ಮೂಡುಬಿದರೆಯಲ್ಲಿರುವ ಭಕ್ಷಿಯೋ ಈ ಕಂಪಂಗಿಯವರ ಮೂಲ ಪುರುಷರೆಂದು ಫೌಜುದಾರರಿಗೆ ಅರಿಕೆ ಮಾಡಿದರು "ಈ ಆಯುಧಗಳೆಲ್ಲಾ ಭಕ್ಷಿ ಯಿಂದಲೇ ತಯಾರಾದುವುಗಳೇನೋ ಖಂಡಿತ! ಈ ದಿರುಸುಗಳು ಇಮಾಮನ ಅಂಗಡಿಯಲ್ಲಿ ತಯಾರಾದುವುಗಳು" ಎಂದು ಬಿನ್ನವಿಸಿದರು "ಕಾರ್ಕಳದಲ್ಲಿ ಪದ್ಮ ನಾಭನೆಂಬ ಬ್ರಾಹ್ಮಣನಿದ್ದಾನೆ. ತನಗೆ ಹೆಚ್ಚಾಗಿ ಧನಸಹಾಯ ಮಾಡಿದರ ಈ ಗುಟ್ಟನ್ನು ಹಿಡಿದು ಕೊಡುವುದಾಗಿ ಹೇಳುತ್ತಾನೆ" ಎಂದು ಹೇಳಿದರು ಕುತುಬು

ದ್ದೀನನು ತಿರಸ್ಕಾರದಿಂದ ನಕ್ಕನು "ಕಾರ್ಕಳದಲ್ಲಿರುವ ಫಕೀರರು ಮಹಾಪುರುಷರು. ಅವರು ವಿರಕ್ತರು. ಅವರಿಗೇನು ಬೇಕಾಗಿದೆ ಅವರೇಕೆ ವಿದ್ರೋಹ ಮಾಡುತ್ತಾರೆ. ಭಕ್ಷಿಯನ್ನು ನೋಡಬೇಕು ಅಷ್ಟು ಸಾಧಾರಣ ಮನುಷ್ಯ, ಇಂಥಾ ಮಹತ್ಕಾರ್ಯಕ್ಕೆ ಕೈ ಹಾಕುವುದು ಅಸಂಭವ ಅವನು ಮುಸಲ್ಮಾನ! ಅವನಲ್ಲಿ ಅಷ್ಟೊಂದು ಅಪಾರ ಹಣವೆಲ್ಲಿಂದ ಬರಬೇಕು? ಮುಸಲ್ಮಾನರ ರಾಜ್ಯದಲ್ಲಿ ಮುಸಲ್ಮಾನರು ವಿದ್ರೋಹಮಾಡುತ್ತಾರೆಂಬುದನ್ನು ನಂಬುವುದಕ್ಕಾಗುವುದಿಲ್ಲ. ಆ ಕಾರ್ಕಳದ ಪದ್ಮನಾಭನ ಮೇಲೆ ಕಣ್ಣಿಟ್ಟಿರಿ. ಇದೆಲ್ಲಾ ಜಂಗಮರ ಬಂಡಾಯವೆಂದೇ ನಮ್ಮ ಭಾವನೆ ಆದರೂ ಎಲ್ಲಾ ಕಡೆಯೂ ಕಣ್ಣಿಟ್ಟಿರಬೇಕು" ಎಂದು ಹೇಳಿ ಅವರನ್ನು ಕಳಿಸಿಕೊಟ್ಟನು

ಒಬ್ಬೊಬ್ಬರಾಗಿ ಎಲ್ಲಾ ಊರಿನ ಖಿಲ್ಲೇದಾರರನ್ನೂ ಮಾಮಲೇದಾರರನ್ನೂ ಕರೆಸಿದನು ಉದಾಸೀನವಾದ ಧೋರಣೆಯಲ್ಲಿ ಕೆಂಪಂಗಿಯವರ ವಿಷಯ ಅವರಲ್ಲಿ ಪ್ರಸ್ತಾಪ ಮಾಡಿ ನೋಡಿದನು ಕೆಂಪಂಗಿಯವರ ಮೇಲೆ ಯಾವ ದೂರುಗಳೂ ಇಲ್ಲ ಅವರುಗಳಲ್ಲಿ ಅನೇಕರು ಬಂದು ಬಂದು ನಮ್ಮಲ್ಲಿ ಸುಲ್ತಾನರ ಫೌಜಿಗೇ ಸೇರುತ್ತೇವೆಂದು ಕೇಳುತ್ತಾರೆ. ನಮ್ಮ ದೇಶದಲ್ಲಿ ಇಷ್ಟೊಂದು ಕಳ್ಳತನಗಳಾಗಿದೆ ಒಂದು ನಗವಾದರೂ ಪತ್ತೆಯಾಗಿಲ್ಲ. ಕೆಂಪಂಗಿಯವರು ಈ ಕಳ್ಳತನವನ್ನು ಮಾಡುತ್ತಿದ್ದರೆ ಆ ನಗಗಳು ಇಲ್ಲೇ ಮಾರಾಟಕ್ಕೆ ಬರಬೇಕಾಗಿತ್ತು ಅದೆಲ್ಲಾ ದೇಶಾಂತರಕ್ಕೆ ಹೋಗುತ್ತಿವೆಯೆಂದೇ ನಮ್ಮ ಊಹೆ! ಈ ಕೊಳ್ಳೆ ದರೋಡೆಗಳಲ್ಲಿ ಮಹಾರಾಷ್ಟ್ರರು ಪ್ರಸಿದ್ಧರು ಈ ಕಳುವು ಕೊಳ್ಳೆ ದರೋಡೆಗಳನ್ನು ಮಹಾರಾಷ್ಟ್ರರೇ ಮಾಡುತ್ತಿದ್ದಾರೆ ಉತ್ತರ ದಿಕ್ಕಿನಲ್ಲಿ ಬಲವಾದ ಸೈನ್ಯವಿಟ್ಟು ಕಾವಲು ಕಾಯಬೇಕು, ಎಂದು ತಿಳಿಸಿದರು ಫೌಜುದಾರನಿಗೆ ಇದು ಸರಿಯೆಂದೇ ಹೊಳೆಯಿತು.

ಫೌಜುದಾರನು ಮೂಡುಬಿದರೆಯಲ್ಲಿ ಮೊಕ್ಕಾಂ ಮಾಡುವುದಾಗಿಯೂ, ಅಲ್ಲಿ ತಕ್ಕ ಏರ್ಪಾಡುಗಳನ್ನು ಮಾಡಬೇಕೆಂದೂ ಅಲ್ಲಿಯ ಮಾಮಲೇದಾರರಿಗೆ ರಾಯಸವನ್ನು ಕಳಿಸಿದನು ಫೌಜುದಾರರು ಬರುತ್ತಾರೆಂದರೆ ಮಾಮಲೇದಾರರಿಗೆ ಬಲು ಕಷ್ಟ! ಬಹಳ ದುಡ್ಡು ಖರ್ಚಾಗುತ್ತೆ ಮಾಮಲೇದಾರನು ಎಲ್ಲಾ ಏರ್ಪಾಟುಗಳನ್ನು ಮಾಡಿದನು ಫೌಜುದಾರರು ಊರಿಗೆ ಬಂದು ಇಳಿದರು ದೊಡ್ಡ ದೊಡ್ಡ ಮನುಷ್ಯರುಗಳೆಲ್ಲಾ ಒಬ್ಬೊಬ್ಬರಾಗಿ ಬಂದು ಭೇಟಿಮಾಡಿದರು ಬಡ ಜನರು ಬಂದು ಕಷ್ಟ ಸುಖಗಳನ್ನು ಹೇಳಿಕೊಂಡರು ಎಲ್ಲವನ್ನೂ ಸಾವಧಾನದಿಂದ ಕೇಳಿ ಸಮಾಧಾನ ಹೇಳಿ ಕಳುಹಿಸಿದನು ಅನಂತರ ಮಾಮಲೇದಾರನು ಮೂಡಬಿದರೆಯಲ್ಲಿ ಯಾವ ಕಳ್ಳತನಗಳೂ ನಡೆಯಲಿಲ್ಲವೆಂದು ತನ್ನ ಪ್ರತಾಪವನ್ನು ವಿನಯದಿಂದ ಹೇಳಿಕೊಂಡನು. ಈ ಊರಿನಲ್ಲಿ ಎಲ್ಲ ದೊಡ್ಡ ಮನುಷ್ಯರೂ ಬಂದು ನಮ್ಮ ಭೇಟಿ ಮಾಡಿ

ಕೊಂಡು ಹೋದರು "ಚೋಟಾಭಕ್ಷಿಯು ಮಾತ್ರ ಬರಲಿಲ್ಲ" ಎಂದು ಫೌಜುದಾರರು ಹೇಳಿದರು ಮಾಮಲೇದಾರರು "ಅವನು ಒಳ್ಳೆಯ ಮನುಷ್ಯ ಆದರೆ ಸನ್ನಿಧಾನಕ್ಕೆ ಬರುವಷ್ಟು ಗಣ್ಯಮನುಷ್ಯನಲ್ಲ!" ಎಂದು ಹೇಳಿದನು ಆದರೂ ಆ ಫೌಜುದಾರರು "ಆ ಚೋಟಾ ಭಕ್ಷಿಯು ಒಳ್ಳೆಯ ಕೆಲಸಗಾರನೆಂದು ಕೇಳಿದ್ದೇವೆ ಆತನನ್ನು ನೋಡಬೇಕು" ಎಂದು ಹೇಳಿದರು ಮಾಮಲೇದಾರರು ಡಲಾಯಿತನನ್ನು ಕಳಿಸಿ ಭಕ್ಷಿಯನ್ನು ಕರೆಸಿದರು ಭಕ್ಷಿಯು ಬಂದು ಬಹಳ ವಿನೀತಭಾವದಿಂದ ಫೌಜುದಾರರನ್ನು ಭೇಟಿಮಾಡಿದನು ಅವರು ವಿಶ್ವಾಸದಿಂದ ಭಕ್ಷಿಯನ್ನು ಕೂರಿಸಿಕೊಂಡು ಮಾತನಾಡಿದರು ಭಕ್ಷಿಯು ತನ್ನ ಯೋಗಕ್ಷೇಮವನ್ನೆಲ್ಲಾ ಸೂಕ್ಷ್ಮವಾಗಿ ತಿಳಿಸಿ ತನ್ನ ಕುಲುಮೆಯ ಕಾರ್ಖಾನೆಗೆ ಸವಾರಿ ಚಿತ್ತೈಸಬೇಕೆಂದು ಪ್ರಾರ್ಥಿಸಿದನು

ಫೌಜುದಾರ್—ಚೋಟಾಭಕ್ಷಿಯವರೇ, ನಾನು ನಿಮ್ಮನ್ನು ಒಂದೆರಡು ಪ್ರಶ್ನೆ ಕೇಳಬೇಕೆಂದಿದ್ದೇನೆ

ಭಕ್ಷಿ—ಅಗತ್ಯವಾಗಿ ಕೇಳಬಹುದು!

ಫೌಜುದಾರ್—ಈ ಕೆಂಪಂಗಿಯವರಿಗೂ, ನಿಮಗೂ ಏನಾದರೂ ಸಂಬಂಧ ಇದೆಯೋ?

ಭಕ್ಷಿ—ಹುಜೂರು! ಉಂಟು! ಅವರುಗಳು ಬಂದು ಕೇಳಿದರೆ ಅನ್ನ ಅರವಟ್ಟಿಗೆಗಳಿಗೆ ಸ್ವಲ್ಪ ಚಂದಾ ಕೊಡುತ್ತೇನೆ ಪ್ರತಿ ದಿನವೂ ಅದಕ್ಕಾಗಿ ನಮ್ಮ ಸಂಪಾದನೆಯಲ್ಲಿ ಸ್ವಲ್ಪ ತೆಗೆದಿಡುತ್ತೇವೆ. ನನಗೆ ಹೆಂಡರಿಲ್ಲ. ಮಕ್ಕಳಿಲ್ಲ ಸ್ವಲ್ಪ ಧರ್ಮದ ಕೆಲಸ ನಡೆಯಲಿ ಎಂದು ಆಕಾಂಕ್ಷ

ಫೌಜುದಾರ್—ಸರಿ! ಭಕ್ಷಿಗಳೇ ಒಳ್ಳೆಯ ಕೆಲಸವೇ. ನೀವು ಸ್ವಲ್ಪ ಧರ್ಮ ಮಾಡುತ್ತೀರೆಂದು ಕೇಳಿದ್ದೇವೆ ಸಂತೋಷ! ನಿಮ್ಮದು ಒಂದು ಬಟ್ಟೆ ಅಂಗಡಿ ಇದೆಯೋ?

ಭಕ್ಷಿ—ಇದೆ ಹುಜೂರು, ಒಂದು ಸಣ್ಣ ಅಂಗಡಿ!

ಫೌಜುದಾರ್— ಈ ಕೆಂಪು ದಿರಸಿನವರ ಅಂಗರೇಕುಗಳೆಲ್ಲಾ ನಿಮ್ಮ ಅಂಗಡಿಯಲ್ಲೇ ತಯಾರಾಗುತ್ತದೆಂದು ಹೇಳುತ್ತಾರೆ

ಭಕ್ಷಿ— ಹುಜೂರು! ಸರ್ಕಾರದಲ್ಲಿ ಹೇಳುವುದಕ್ಕೇನು? ಅದರಲ್ಲೊಂದು ವ್ಯಾಪಾರದ ಗುಟ್ಟದೆ ಬಿಳೀ ಬಟ್ಟೆಯನ್ನು ಕೊಂಡು ಅದಕ್ಕೆ ನಾವೇ ಬಣ್ಣಹಾಕುತ್ತೇವೆ. ಆ ಬಣ್ಣದ ಬಟ್ಟೆಗಳಿಗೆ ಒಂದಕ್ಕೆ ಎರಡರಷ್ಟು ಖರೀದಿ ಬರುತ್ತೆ ನಾವೇ ಹೊಲಿಯುತ್ತೇವೆ ಅದರಲ್ಲಿ ಬಹಳ ಲಾಭ ಬರುತ್ತೆ ನಮ್ಮ ಜಾತಿಯ ಅನೇಕ ಹೆಂಗಸರಿಗೆ ಜೀವನವಾಗುತ್ತೆ.

ಫೌಜುದಾರ್—ಈ ಜಿಲ್ಲೆಯ ಎಲ್ಲ ಸ್ಥಳಗಳಿಗೂ ನಿಮ್ಮ ಅಂಗಡಿಯಿಂದಲೇ ಈ ಕುಡುತಗಳು ರವಾನೆಯಾಗುತ್ತದೋ?

ಭಕ್ಷಿ—ಇಲ್ಲ! ಸರ್ಕಾರ್! ಹಾಗೇನೂ ಇಲ್ಲ ಮೊದಮೊದಲು ಈ ಊರಿಗೆ ಬಂದು ಬಟ್ಟೆಗಳನ್ನು ತೆಗೆದುಕೊಂಡು ಹೋಗುತ್ತಿದ್ದರು ಈಗ ಅವರವರೇ ಕಲಿತು ಬಿಟ್ಟಿದ್ದಾರೆ ಅವರವರೇ ಬಣ್ಣ ಹಾಕಿಕೊಳ್ಳುತ್ತಾರೆ ಅವರವರೇ ಹೊಲಿಸಿಕೊಳ್ಳುತ್ತಾರೆ ಆದರೂ ನಮ್ಮ ಬಟ್ಟೆ ಬಣ್ಣ ಗಟ್ಟಿಬಣ್ಣವೆಂದು ಹೆಸರುವಾಸಿ ಇದೆ ಕೆಲವರು ಪೋಕಿ ಹುಡುಗರು ಈಗಲೂ ನಮ್ಮ ಬಟ್ಟೆಯನ್ನೇ ಖಾಯಿಷ್ ಮಾಡುತ್ತಾರೆ

ಫೌಜುದಾರ್—ಒಳ್ಳೆಯದು!

ಫೌಜುದಾರರು ಅಲ್ಲಿಂದ ಎದ್ದು ಒಳಗೆ ಹೋಗಿ ಒಂದು "ಚಾಕು"ವನ್ನು ತಂದು ಭಕ್ಷಿಯ ಕೈಗೆ ಕೊಟ್ಟು "ಭಕ್ಷಿಯವರೇ! ಇದನ್ನು ನೋಡಿರಿ" ಎಂದರು

ಭಕ್ಷಿಯು ಚೆನ್ನಾಗಿ ನೋಡಿ "ಬಹಳ ಚನ್ನಾಗಿದೆ ಹುಜೂರು, ಒಳ್ಳೆಯಮಾಲು" ಎಂದನು.

ಫೌಜುದಾರ್— ಇದು ನಿಮ್ಮ ಕಾರ್ಖಾನೆಯಲ್ಲಿ ತಯಾರಾಗುತ್ತದೆಂದು ಹೇಳುತ್ತಾರೆ ಇದನ್ನು ನೀವು ತಯಾರ್ಮಾಡಬಲ್ಲಿರಾ?

ಭಕ್ಷಿ—ಇಲ್ಲ! ಸರ್ಕಾರ್! ನಮ್ಮ ಕಾರ್ಖಾನೆಯಲ್ಲಿ ಇದನ್ನು ತಯಾರು ಮಾಡಲು ಸಾಧ್ಯವಿಲ್ಲ ನಮ್ಮದೆಲ್ಲಾ ಒರಟು ಸಾಮಾನು ಮಕ್ಕಾಲು ಪಾಲು ಸಾಮಾನುಗಳೆಲ್ಲಾ ಕಬ್ಬಿಣದ್ದು ಯಾರಾದರೂ ಪರಮಾಯಿಷಿಯಿಂದ ತಯಾರು ಮಾಡಿಸಿದರೆ ಉಕ್ಕಿನ ಮಚ್ಚು ಕತ್ತಿ-ಚೂರಿಗಳನ್ನು ತಯಾರ್ಮಾಡಿ ಕೊಡುತ್ತೇವೆ ಚೆನ್ನಾಗಿ ಸಾಣೆಕೊಡಬಲ್ಲೆವು ಆದರೆ ಈ ಹದ ಕೂಡುವುದಕ್ಕೆ ಸಾಧ್ಯವಿಲ್ಲ. ಇದು ಕೊಡಗಿನ ನಮೂನೆ ಹುಜೂರು! ಅಲ್ಲಿ ಇದನ್ನು ತಲೆತಲಾಂತರದಿಂದ ಮಾಡುತ್ತಾರಂತೆ!

ಫೌಜುದಾರ್—ಹೌದು! ನಾವೂ ಹಾಗೆಯೇ ಕೇಳಿದ್ದೇವೆ. ಈ ಕುಲುಮೆಯ ಕಾರ್ಖಾನೆಯಿಂದ-ಬಟ್ಟೆಯಂಗಡಿಯಿಂದ ನಿಮಗೆ ಬಹಳ ಸಂಪಾದನೆಯಾಗುತ್ತದೊ?

ಭಕ್ಷಿ—ಆಗುತ್ತದೆ, ಹುಜೂರು! ಚೆನ್ನಾಗಿಯೇ ಸಂಪಾದನೆ ಆಗುತ್ತದೆ. ಆದರೆ ನಾವು ಕೆಲಸಗಾರರಿಗೆ ಚೆನ್ನಾಗಿ ಮಜೂರಿ ಕೊಡುತ್ತೇವೆ,

ಫೌಜುದಾರ್—ಏನೂ ಉಳಿತಾಯ ಮಾಡಿ ಕೂಡಿಟ್ಟಿಲ್ಲವೋ?

ಭಕ್ಷಿ ಉಳಿತಾಯ ಮಾಡಬಹುದು! ಕೆಲಸಗಾರರಿಗೆಲ್ಲಾ ಬಹಳ ಹೊಟ್ಟೆ ಕಿಚ್ಚು ಬರುತ್ತದೆ ಮತ್ತು ಈ ಕಾಲದಲ್ಲಿ ಕಳ್ಳಕಾಕರ ಭಯ ಹೆಚ್ಚು ಏನೋ ಅಲ್ಪ ಸ್ವಲ್ಪ ಉಳಿದರೆ ದಾನಧರ್ಮ ಮಾಡಿಬಿಡುತ್ತೇನೆ.

ಫೌಜುದಾರ್—ಒಳ್ಳೆಯದು, ಭಕ್ಷಿಯವರೇ ! ನಿಮಗೆ ನಿಮ್ಮ ಮನೆಯನ್ನು ಕಟ್ಟುವಾಗ ಕೊಪ್ಪರಿಗೆ ನಿಧಿ ಸಿಕ್ಕಿತೆಂದು ವರದಿ ಬಂದಿದೆ ಇದು ನಿಜವೆ ?

ಭಕ್ಷಿ—(ನಗುತ್ತಾ) ನನ್ನಲ್ಲಿ ಒಂದು ಕಾಸೂ ಇಲ್ಲ ! ಅಷ್ಟು ದುಡ್ಡು ಇದ್ದಿದ್ದರೆ ಒಂದು ದೊಡ್ಡ ಮಸೀದಿಯನ್ನು ಕಟ್ಟಿಸಿ, ಅನ್ನಶಾಲೆಯನ್ನಿಟ್ಟು ಪ್ರತಿದಿನವೂ ಸಾವಿರಾರು ಜನಕ್ಕೆ ಅನ್ನ ಹಾಕುತ್ತಿದ್ದ ಕ್ಷಾಮಕಾಲದಲ್ಲಿ ಅದಕ್ಕಿಂತಲೂ ಪುಣ್ಯ ಕೆಲಸವು ಮತ್ತೇನಿದ ?

ಫೌಜುದಾರ್—ನೋಡಿರಿ ಭಕ್ಷಿಯವರೇ ! ಈ ಕಾಲದಲ್ಲಿ ಸರ್ಕಾರಿ ಕೆಲಸಗಳಲ್ಲಿ ಬಹಳ ಹುಷಾರೀ ಬೇಕಾಗುತ್ತದೆ ಇಂತಹ ಸಮಾಚಾರಗಳು ಬಂದರೆ ಅದನ್ನು ಕೂಲಂಕಷವಾಗಿ ವಿಚಾರ ಮಾಡಲೇ ಬೇಕಾಗುತ್ತದೆ ಅದರಿಂದ ನಿಮ್ಮನ್ನು ಇಷ್ಟು ವಿಚಾರಿಸಿದೆ ಏನೂ ತಿಳಿದುಕೊಳ್ಳಬೇಡಿರಿ.

ಭಕ್ಷಿ—ಎಲ್ಲಾದರೂ ಉಂಟೆ ? ಸರ್ಕಾರವೆಂದರೆ ತಂದೆತಾಯಿಗಳಂತೆ ! ಮಾಬಾಪ್ ಸರ್ಕಾರ ಅನ್ನುವುದಿಲ್ಲವೇ ? ಹಾಗೆ ತಮಗೆ ಎಲ್ಲದಕ್ಕೂ ಹಕ್ಕುಂಟು

ಫೌಜುದಾರ್—ಭಕ್ಷಿಯವರೇ ! ನೀವು ಬಹಳ ಬುದ್ಧಿವಂತರಂತೆ ಕಾಣುತ್ತೀರಿ! ನಿಮ್ಮಲ್ಲಿ ಬಹಳ ಹಣವಿದೆಯೆಂದು ನಮ್ಮ ಜಿಲ್ಲೆಯಲ್ಲೆಲ್ಲಾ ವದಂತಿ ಇವೆ. ಇದಕ್ಕೆ ಕಾರಣವೇನಿರಬಹುದು ?

ಭಕ್ಷಿ—ಹುಜೂರು ! ತಮ್ಮಂಥಾ ಮಹಾಪುರುಷರಿಗೆ ಅದನ್ನು ತಿಳಿಯಕೊಳ್ಳಲು ಕಷ್ಟವಾಗುತ್ತದೆಯೇ ? ನಾನು ಅರಿಕೆ ಮಾಡುತ್ತೇನೆ ಕೇಳೋಣವಾಗಲಿ ! ಬೇಅದಬ್, ಮಾಫ್ ಮಾಡೋಣವಾಗಲಿ ಈ ಪ್ರಾಂತದಲ್ಲಿ ಎಷ್ಟೋ ದೊಡ್ಡ ಮನುಷ್ಯರೆಂದು ಹುಜೂರಿನಲ್ಲಿ ಬಂದು ಅಟ್ಟಹಾಸ ಮಾಡುತ್ತಾರೆ ಕೊಟ್ಟವರ ದುಡ್ಡು ಕೊಡುವುದೇ ಇಲ್ಲ ಕೊಡಬೇಕಾದುದೆಂತೂ ಇಲ್ಲವೇ ಇಲ್ಲ ಮೋಸದಿಂದ ದುಡ್ಡು ಸಂಪಾದಿಸಬಾರದೆಂಬ ನೀತಿಯೇ ಇಲ್ಲ ಬಡವರ ದುಡ್ಡು ಕಿತ್ತುಕೊಳ್ಳಬಾರದೆಂಬ ಕರುಣೆ ಇಲ್ಲ ನಾನು ತಮ್ಮ ಅನುಗ್ರಹದಿಂದ ಹಾಗೆ ಮಾಡುವುದಿಲ್ಲ ಆಯಾ ದಿನ ಲೇಣಿದೇಣಿ ಎಲ್ಲಾ ಫೈಸಲ್ ಮಾಡಿಬಿಡುತ್ತೇನೆ ಕೆಲಸಗಾರರಿಗೆ ಒಂದಕ್ಕೆ ಎರಡರಷ್ಟು ಕೊಡುತ್ತೇನೆ ನಮ್ಮ ಹೊಟ್ಟೆ ಬಟ್ಟೆ ಕಳೆದು ನಾಲ್ಕು ಹಣ ಉಳಿದರ ಧರ್ಮ ಮಾಡಿಬಿಡುತ್ತೇನೆ. ಆದ್ದರಿಂದ ಜನರು ಐಶ್ವರ್ಯವಂತನೆಂದು ನನ್ನನ್ನು ಭಾವಿಸುವುದು ಸಹಜವೇ ಇದೆ

ಫೌಜುದಾರ್—ಭಕ್ಷಿಯವರೇ ! ನೀವು ಬಹಳ ಚೆನ್ನಾಗಿ ಪ್ರಪಂಚವನ್ನು ಅರಿತುಕೊಂಡಿದ್ದೀರಿ ಸಂತೋಷ ನಿಮ್ಮದು ಮಂತ್ರಿತ್ವ ಮಾಡುವುದಕ್ಕೆ ತಕ್ಕ ಬುದ್ಧಿ. ಯಾವಾಗಲಾದರೂ ನಮ್ಮಲ್ಲಿಗೆ ಬಂದು ಹೋಗುತ್ತಿರಿ

ಭಕ್ಷಿ—ಹುಜೂರು ! ಪರಮಾನುಗ್ರಹ ತಾವು ಈ ನಾಡಿನ ರಾಜರಂತೆಯೇ ಇದ್ದೀರಿ. ತಮಗೆ ಸಮಸ್ತ ಅಧಿಕಾರಗಳೂ ಇವೆ ನಾನು ಸನ್ನಿಧಾನಕ್ಕೆ ಪದೇ ಪದೇ

ಬಂದು ಹೋಗುತ್ತಿದ್ದರೆ ಅನೇಕರು ಬಂದು ನನ್ನ ಸ್ನೇಹ ಮಾಡಿ ತಮಗೆ ಶಿಫಾರಸು ಗಳಿಗೆ ಬಲಾತ್ಕರಿಸುತ್ತಾರೆ ಕೊನೆಗೆ ಅದು ಬಹಳ ಪ್ರಾಣಸಂಕಟಕ್ಕಿಟ್ಟುಕೊಳ್ಳುತ್ತದೆ ಕ್ಷಮಿಸಬೇಕು

ಫೌಜುದಾರ್—(ನಕ್ಕು) ಭಕ್ಷಿಯವರೇ ! ಮತ್ತೊಂದು ಮಾತು ಕಾರ್ಕಳದಲ್ಲಿ ರುವ ಆ ಫಕೀರನನ್ನು ನೀವು ಬಲ್ಲಿರಾ ?

ಭಕ್ಷಿ—ಇಲ್ಲ ! ಹುಜೂರು ! ಅವರು ಬಲು ದೊಡ್ಡವರೆಂದು ನಾನು ಕೇಳಿದ್ದೇನೆ ಒಂದು ಬಾರಿ ಹೋಗಿ ಅವರ ಭೇಟಿ ಮಾಡಿ ಬರಬೇಕೆಂದಿದ್ದೇನೆ

ಫೌಜುದಾರ್—ಒಳ್ಳೆಯದು

ಭಕ್ಷಿಯು ಫೌಜುದಾರರ ಅಪ್ಪಣೆ ಪಡೆದು ಹೊರಟುಹೋದನು

ಫೌಜುದಾರನು "ಈ ಭಕ್ಷಿಗೂ, ಈ ಕೆಂಪಂಗಿಯ ತರುಣರಿಗೂ ಏನೂ ಸಂಬಂಧ ವಿರುವಂತೆ ಕಾಣುವುದಿಲ್ಲ. ಇವನಲ್ಲಿ ದುಡ್ಡಿಲ್ಲದೇ ಇಲ್ಲ ಸ್ವಲ್ಪ ಹಣವನ್ನು ಕೂಡಿಟ್ಟು ಕೊಂಡಿದ್ದಾನೆ ಒಂದು ಪಕ್ಷ ಈ ಗದ್ದಲಗಳಿಗೆಲ್ಲಾ ಇವನೇ ಕಾರಣನಾಗಿದ್ದರೆ ಬಹಳ ಗಟ್ಟಿಗನೆಂದೇ ಹೇಳಬೇಕು ಎಂದಾದರೊಂದು ದಿನ ಸಿಕ್ಕಿಕೊಳ್ಳುತ್ತಾನೆ ನೋಡೋಣ!" ಎಂದುಕೊಂಡನು

ಭಕ್ಷಿಯು "ಫೌಜುದಾರನು ಬುದ್ಧಿವಂತ ಚೆನ್ನಾಗಿ ಆಡಳಿತ ನಡೆಸಬಲ್ಲ ಆದರೆ ಸ್ವಾರ್ಥಪರ ಲಂಚಕೋರ ಆದರಿಂದ ಜನರಲ್ಲಿ ಬಿಗಿ ತಪ್ಪಿಹೋಗಿದೆ ವ್ಯಭಿಚಾರಿ ಆದರಿಂದ ಅಧಿಕಾರಿಗಳಿಗೆ ಭಯ ತಪ್ಪಿಹೋಗಿದೆ ಕುಡುಕ,ಮನಶ್ಶಕ್ತಿಯಿಲ್ಲ ಯುದ್ಧವು ಪ್ರಾಪ್ತವಾದರೆ ಎರಡು ದಿನಗಳು ಕೂಡ ನಿಂತು ನಿಭಾಯಿಸಲಾರ ! ಓಡಿಹೋಗುತ್ತಾನೆ ನನ್ನ ವಿಚಾರವೆಲ್ಲಾ ಸ್ವಲ್ಪ ಸ್ವಲ್ಪ ಗೊತ್ತಾಗಿ ಹೋಗಿದೆ. ಆದರೆ ಸರಿಯಾಗಿ ಅರ್ಥ ಮಾಡಿಕೊಳ್ಳಲಾರ ಕಾರ್ಕಳದಲ್ಲಿರುವ ಫಕೀರರ ಮೇಲೆ ಸಂದೇಹ ಬಂದಿರುವಂತಿದೆ. ಪಾಪ ! ಆ ಫಕೀರರಿಗೇಕೆ ಈ ವ್ಯವಹಾರ ? ಅವರು ಯಾವಾಗಲೂ ಈ ರಾಜ್ಯದಲ್ಲಿ ಧರ್ಮವಿಲ್ಲ, ಆದರಿಂದಲೇ ಕ್ಷಾಮ ಬಂದಿದೆ ಎಂದು ಹೇಳುತ್ತಾರೆ ಈ ರಾಜ್ಯವು ಹೋಗಿಬಿಡುತ್ತದೆ ಎಂದು ಪ್ರವಾದಿಯಂತೆ ಭವಿಷ್ಯ ಹೇಳುತ್ತಾರೆ ಇದರಿಂದ ಆ ಫಕೀರ ರಿಗೆ ತಂಟೆ ಬರುತ್ತೆ ನೋಡೋಣ" ಎಂದು ಭಾವಿಸಿದನು.

ಫೌಜುದಾರನು ನಾಲ್ಕಾರು ದಿನಗಳಿದ್ದು ಸ್ಥಳ ವಿದ್ಯಮಾನಗಳನ್ನೆಲ್ಲಾ ತಿಳಿದು ಕೊಂಡನು ಭಕ್ಷಿಗೆ ಬೇಕಾದವರಾರು ? ಎಂದು ವಿಚಾರಿಸಿಕೊಂಡನು. ಭಕ್ಷಿಯ ಮೇಲೆ ಸರಿಯಾದ ನಿಗಾ ಇಡುವಂತೆ ತಾಕೀತು ಮಾಡಿ ಅಲ್ಲಿಂದ ಹೊರಟನು.

ಕಾರ್ಕಳದಲ್ಲಿರುವ ಫಕೀರನು ಸಾಮಾನ್ಯನಂತೆ ಕಾಣುವುದಿಲ್ಲ ತೇಜಸ್ವಿಯಾಗಿ ದ್ದಾನೆ. ಸುಮಾರು ೬೦ ವರ್ಷ ವಯಸ್ಸು ! ಹೆಚ್ಚು ಮಾತನಾಡುವುದಿಲ್ಲ. ಯಾರಲ್ಲಾ ದರೂ ಮಾತನಾಡಿದರೆ ಕಠಿಣವಾಗಿ ಮಾತನಾಡುತ್ತಾನೆ ಮನಸ್ಸು ಚುಚ್ಚುವಂತೆ

ಮಾತನಾಡುತ್ತಾನೆ ಐಶ್ವರ್ಯವಂತರೆಲ್ಲಾ ಪಾಪಿಗಳು ಎನ್ನುತ್ತಾನೆ. ಸರ್ಕಾರದ ಮಾತನ್ನೆತ್ತುವುದಿಲ್ಲ ಯಾರಾದರೂ ಸರ್ಕಾರದ ಮಾತನ್ನೆತ್ತಿದರೆ ದೇವರ ಸರ್ಕಾರ ದೊಡ್ಡದು ಅಲ್ಲಾನ ಸರ್ಕಾರದಲ್ಲಿ ಈ ಸರ್ಕಾರಗಳೆಲ್ಲಾ ಹರಾಂ ಎನ್ನುತ್ತಾನೆ. ಜ್ಯೋತಿಷ್ಯ ಹೇಳುತ್ತಾನೆ ಖಾಯಿಲೆಯುವರಿಗೆ ಔಷಧಿ ಕೊಡುತ್ತಾನೆ. ಅವನ ಔಷಧಿ ಯಲ್ಲಿ ಬಹಳ ಖರಾಮತ್ತಿದೆ ಐಶ್ವರ್ಯವಂತರು ಔಷಧಿ ಕೇಳಿದರೆ ನೀವು ಪಾಪ ಮಾಡಿದ್ದೀರಿ ನಿಮಗೆ ಅಲ್ಲಾ ಶಿಕ್ಷ ಕೊಟ್ಟಿದ್ದಾನೆ ಅನುಭವಿಸಿರಿ, ಇಲ್ಲಾ ಸಾಯಿರಿ! ಎಂದು ಶಪಿಸುತ್ತಾನೆ ಬಹುಜನರಿಗೆ ಅವನನ್ನು ಕಂಡರೆ ಸರಿಬೀಳುವುದಿಲ್ಲ ಆದರೂ ಅವನಲ್ಲಿ ಏನೋ ಒಂದು ಭಯ! ಫೌಜುದಾರನು ಕಾರ್ಕಳಕ್ಕೆ ಹೋದನು ಫಕೀರ ರನ್ನು ಕಾಣುವುದಕ್ಕೆ ಬರುವುದಾಗಿ ಹೇಳಿ ಕಳಿಸಿದನು ಫಕೀರನು ಅವರೇಕೆ ಬರ ಬೇಕು, ನಾನೇ ಅವರಲ್ಲಿಗೆ ಬರುತ್ತೇನೆ—ಎಂದು ಹೇಳಿದನು ಆ ದಿನ ಮಧ್ಯಾಹ್ನವೇ ಹೋಗಿ ಫೌಜುದಾರರನ್ನು ಭೇಟಿ ಮಾಡಿದನು ಫೌಜುದಾರರು ಬಹಳ ಮರ್ಯಾದೆ ಯಿಂದ ಮಾತನಾಡಿಸಿದರು ಫಕೀರನು ಬಹಳ ಸಮಾಧಾನದಿಂದ ಉತ್ತರ ಕೊಟ್ಟನು.

ಫಕೀರ—ಫೌಜುದಾರರೇ! ನನ್ನನ್ನೇಕೆ ಕರೆಯಿಸಿದಿರಿ?

ಫೌಜುದಾರ್—ತಮ್ಮ ಕೀರ್ತಿಯು ಈ ಪ್ರಾಂತದಲ್ಲೆಲ್ಲಾ ಹರಡಿದೆ ಆದಕ್ಕೆ ತಮ್ಮ ಭೇಟಿ ಮಾಡೋಣವೆಂದು ಬಂದೆ

ಫಕೀರ — ಒಳ್ಳೆಯದಾಯಿತು! ನಾನೂ ತಮ್ಮನ್ನು ನೋಡೋಣವೆಂದಿದ್ದೆ. ಫಕೀರನಿಗೇಕೆ ರಾಜರ ಸಹವಾಸ ಎಂದು ಬರಲಿಲ್ಲ ಅಷ್ಟೆ!

ಫೌಜುದಾರ್—ಹಾಗೆಂದರೇನು? ತಮ್ಮ ಸಹಾಯವು ನಮಗೆ ಬೇಕು!

ಫಕೀರ—(ನಕ್ಕು) ನನ್ನ ಸಹಾಯವೇ? ಏಕೆ? ನಿಮಗೇನಾದರೂ ಖಾಯಿಲೆ ಯಾಗಿದೆಯೋ? ನಿಮಗೆ ನನ್ನಲ್ಲಿ ಔಷಧಿ ಇಲ್ಲ ನಾನು ಹಕೀಮನಲ್ಲ! ಹಿಂದೂಗ ಳನ್ನು ಮುಸಲ್ಮಾನ ಧರ್ಮಕ್ಕೆ ಸೇರಿಸಿ ನಿಮ್ಮ ಸೈನ್ಯವನ್ನು ಕಟ್ಟಬೇಕಾಗಿದೆಯೇನು? ಅದು ನನ್ನಿಂದ ಆಗತಕ್ಕದ್ದೂ ಅಲ್ಲ ನಾನು ಖಾಜಿಯಲ್ಲ. ಮುಲ್ಲಾ ಅಲ್ಲ!

ಫೌಜುದಾರ್—ತಾವು ಒಳ್ಳೇ ಜ್ಯೋತಿಷ್ಕರೆಂದು ಕೇಳಿದ್ದೇನೆ

ಫಕೀರ—ಓಹೋ! ನಿಮಗೆ ಜ್ಯೋತಿಷ್ಯವು ಬೇಕೆ?

ಫೌಜುದಾರ್—ಹೌದು ನೋಡಿ, ಫಕೀರಜಿ! ಈ ರಾಜ್ಯದಲ್ಲಿ ಬರಗಾಲ ಬಂದಿದೆ ಜನಕ್ಕೆ ಬಹಳ ಕಷ್ಟವಾಗಿದೆ ರಾಜ್ಯದಲ್ಲಿ ಶಾಂತಿ ಸುಭಿಕ್ಷಗಳು ಯಾವಾಗ ಬರುತ್ತವೆ?

ಫಕೀರ—ಧರ್ಮವಿಲ್ಲ! ದೇವರಿಲ್ಲ! ಆದ್ದರಿಂದ ಬರಗಾಲ ಬಂದಿದೆ. ದೇವರು ಕುರುಡನೇನು? ನಿಮ್ಮ ಅಧರ್ಮಗಳನ್ನೆಲ್ಲಾ ನೋಡುತ್ತ ನಿಮಗೆ ಮಳೆ ಬೆಳೆ ಕೊಡ ಬೇಕು. ಇಲ್ಲಿ ರಾಜ್ಯವೆಲ್ಲಿದೆ? ನೀವು ಜನರಿಂದ ಕಪ್ಪ ಕಾಣಿಕೆಗಳನ್ನು ತೆಗೆದು

ಕೊಳ್ಳುತ್ತೀರಿ ಕಳ್ಳಕಾಕರು ಕೊಳ್ಳೆ, ದರೋಡೆಗಳನ್ನು ಮಾಡುತ್ತಾರೆ. ಅವರನ್ನೂ ನಿಮ್ಮನ್ನೂ ನೋಡಿ ಮೇಲೆ ದೇವರು ನಗುತ್ತಿದ್ದಾನೆ ನಿಮ್ಮ ರಾಜ್ಯವು ಹೋಗಿ ದೇವರ ರಾಜ್ಯವು ಬರಬೇಕು ಇದಕ್ಕೆ ಜ್ಯೋತಿಷ್ಯವೇಕೆ ? ನನ್ನ ಕಣ್ಣಿಗೆ ಕಾಣುತ್ತಿದೆ

ಫೌಜುದಾರ್—ನಿಮಗೇಕೆ ಈ ರಾಜ್ಯದ ಮೇಲೆ ಇಷ್ಟು ಕೋಪ ?

ಫಕೀರ—ನನಗೆಲ್ಲಿ ಕೋಪ! ದೇವರಿಗೆ ಕೋಪ ! ನನಗೆ ಪರಿತಾಪ ! ಫೌಜುದಾರರೇ, ಇಲ್ಲಿ ರಾಜ್ಯವಿಲ್ಲ. ಅನಾಯಕವಾಗಿದೆ !

ಫೌಜುದಾರ್—ಒಳ್ಳೆಯದು, ಫಕೀರರೇ ! ನೀವು ಬಹಳ ಮಾತನಾಡುತ್ತೀರಿ ನಿಮ್ಮ ಮೇಲೆ ಅನೇಕ ಅರ್ಜಿಗಳು ಬಂದಿವೆ. ನಿಮ್ಮ ವಿಚಾರಣೆಯಾಗಬೇಕಾಗಿದೆ

ಫಕೀರ—ವಿಚಾರಣೆ ಮಾಡಿರಿ

ಫೌಜುದಾರ್—ಈ ರಾಜ್ಯದಲ್ಲಿ ಕಳುವು, ದರೋಡೆಗಳನ್ನು ಮಾಡುತ್ತಿರುವವರೆಲ್ಲಾ ನಿಮ್ಮಲ್ಲಿ ಬಂದುಹೋಗುತ್ತಾರಂತೆ ?

ಫಕೀರ—ಬೀದಿಯಲ್ಲಿ ಅಲೆಯುವ ಭಿಕಾರಿಯಾದ ನನ್ನ ಹತ್ತಿರ ಎಷ್ಟೋ ಜನರು ಬರುತ್ತಾರೆ ನಾನೇನು ಮಾಡಲಿ ?

ಫೌಜುದಾರ್—ಅವರ ಸಹವಾಸವನ್ನು ನೀವೇಕೆ ಮಾಡುತ್ತೀರಿ ?

ಫಕೀರ—ನಾನು ಅವರ ಸಹವಾಸಕ್ಕೆ ಹೋಗುತ್ತಿಲ್ಲ ಅವರೇ ನನ್ನನ್ನು ಹುಡುಕಿಕೊಂಡು ಬರುತ್ತಾರೆ ಕಳ್ಳಕಾಕರೂ, ದುಡ್ಡು ಕಳೆದುಕೊಂಡ ಧನಿಕರೂ, ಹೊಟ್ಟೆಗಿಲ್ಲದ ದರಿದ್ರರೂ, ನಿಮಗೆ ಲಂಚ ರುಷುವತ್ತುಗಳನ್ನು ಕೊಡುವವರೂ, ನಿಮ್ಮಿಂದ ಮನೆ ತಪ್ಪಿ ದಿಕ್ಕೆಟ್ಟ ಹೆಂಗಸರೂ, ನಿಮ್ಮ ದರಬಾರಿನಿಂದ ನೊಂದವರೂ ಎಲ್ಲರೂ ನನ್ನ ಹತ್ತಿರ ಬರುತ್ತಾರೆ ಅವರಿಗೆಲ್ಲಾ ದೇವರಲ್ಲಿ ಮೊರೆಯಿಡಿರಿ ಎಂದು ಹೇಳುತ್ತೇನೆ

ಫೌಜುದಾರ್—ಸರಿ! ಫಕೀರರೇ ! ಇದು ಸುಲ್ತಾನರ ರಾಜ್ಯ ! ಹಿಂದೂಗಳ ರಾಜ್ಯವಾಗಿದ್ದರೆ ನಿಮ್ಮನ್ನು ಗಲ್ಲಿಗೇರಿಸುತ್ತಿದ್ದರು. ಸುಲ್ತಾನರ ರಾಜ್ಯದಲ್ಲಿ ನೀವು ಪೂಜ್ಯರು ಆದರೆ ನಿಮ್ಮಿಂದ ನಮ್ಮ ಆಡಳಿತಕ್ಕೆ ಬಹಳ ತೊಂದರೆಯಾಗಿದೆ ನೀವು ಮೂರು ದಿನಸಗಳ ಒಳಗಾಗಿ ಈ ಸರಹದ್ದನ್ನು ಬಿಟ್ಟು ಹೋಗಬೇಕೆಂದು ಅಪ್ಪಣೆ ಮಾಡಿದ್ದೇನೆ ತಾವು ಆ ಅಪ್ಪಣೆಯನ್ನು ಪಾಲಿಸದಿದ್ದರೆ ತಮ್ಮನ್ನು ಬಲಾತ್ಕಾರವಾಗಿ ಹಿಡಿದು ಬಂಧನದಲ್ಲಿಟ್ಟು ಶ್ರೀರಂಗಪಟ್ಟಣಕ್ಕೆ ಸುಲ್ತಾನರ ಸಮುಖಕ್ಕೆ ಕಳುಹಿಸಬೇಕಾಗುತ್ತದೆ

ಫಕೀರ—(ನಕ್ಕು) ನೋಡು, ಕುತುಬುದ್ದೀ ! ನಾನು ಹೇಳುವ ಮಾತನ್ನು ಕೇಳು ! ಮೊದಲು ನೀನು ಸುಲ್ತಾನರ ಸಮುಖಕ್ಕೆ ಹೋಗು ಅಲ್ಲಿ ನಾನು ಹೇಳಿದ್ದನ್ನೆಲ್ಲಾ ಹೇಳು ಅವರು ಏನು ಹೇಳುತ್ತಾರೋ ಕೇಳಿ ನನಗೆ ಬಂದು ಅಪ್ಪಣೆ

ಮಾಡು  ನೀನು ಅಲ್ಲಿಗೆ ಹೋಗಿ ಬರುವುದು ಹದಿನೈದು ದಿನಗಳಾದರೂ ಚಿಂತೆಯಿಲ್ಲ ನಾನು ಈ ಸ್ಥಳವನ್ನು ಬಿಟ್ಟು ಕದಲುವುದಿಲ್ಲ. ಅನ್ನ ತಿನ್ನುವುದಿಲ್ಲ ನೀರು ಕುಡಿಯುವುದಿಲ್ಲ ಮಾತನಾಡುವುದಿಲ್ಲ ಮುಚ್ಚಿದ ಕಣ್ಣನ್ನು ತೆರೆಯುವುದಿಲ್ಲ ಇಲ್ಲಿ ನಿನ್ನ ದರಬಾರು ಮುಳುಗಿಹೋಗುವುದಿಲ್ಲ ನೋಡೋಣ, ಸುಲ್ತಾನರಿಗಾದರೂ ಅಲ್ಲಾನು ಪ್ರಕಾಶವನ್ನು ಕೊಡುತ್ತಾನೇನೋ ? ಇಲ್ಲದಿದ್ದರೆ ಎಲ್ಲರೂ ಒಟ್ಟಿಗೆ ನರಕಕ್ಕೆ ಹೋಗೋಣ !

ಫೌಜುದಾರ್—ಫಕೀರರೇ ! ಹುಚ್ಚು ಹುಚ್ಚು ಮಾತನಾಡಬೇಡಿ, ಹೊರಡಿ ಈ ಸ್ಥಳವನ್ನು ಬಿಟ್ಟು ಹೊರಡಿ.

ಫಕೀರನು "ಆಗಲಿ ನನಗೆ ನಿನ್ನಿಂದ ಏನಾಗಬೇಕು ? ಹೊರಡುತ್ತೇನೆ"ಎಂದ ಹೇಳಿ ಹೊರಟುಹೋದನು

## ಫೌಜುದಾರ ಕುತುಬುದ್ದೀನ

ಫೌಜುದಾರನಿಗೆ ಪ್ರಬಲವಾದ ಯೋಚನೆಗೆ ಇಟ್ಟುಕೊಂಡಿತು ಈ ಫಕೀರನು ನಿಜವಾದ ಫಕೀರನಲ್ಲ ಯಾರೋ ರಾಜಕೀಯ ವ್ಯಕ್ತಿಯು ಫಕೀರನ ವೇಷವನ್ನು ಧರಿಸಿದ್ದಾನೆ ಇವನು ವಿದ್ರೋಹಿಯೇ ಸರಿ ಆದರೆ ಇವನು ಮುಸಲ್ಮಾನನೆಂಬುದರಲ್ಲಿ ಸಂದೇಹವೇ ಇಲ್ಲ ಸುಲ್ತಾನರ ರಾಜ್ಯದಲ್ಲಿ ಮುಸಲ್ಮಾನನು ವಿದ್ರೋಹವೆಸಗುವನೆ ? ಇವನನ್ನು ಹಿಡಿದು ಬಂಧನದಲ್ಲಿಡಬಹುದು ಈ ಸಮಾಚಾರವು ಸುಲ್ತಾನರಿಗೆ ತಿಳಿಯುತ್ತಲೇ ನನ್ನ ಮೇಲೆ ಅವರಿಗೆ ಆಗ್ರಹ ಬಂದರೂ ಬರಬಹುದು ಈ ಪ್ರಾಂತ್ಯದಲ್ಲಿ ಇಷ್ಟೊಂದು ಕೊಳ್ಳೆ, ದರೋಡೆಗಳಾದರೂ ಒಂದಾದರೂ ಪತ್ತೆಯಾಗಿಲ್ಲ ಇದಕ್ಕೇನು ಮಾಡುವುದು?

ಅಲ್ಲಲ್ಲಿ ಕೆಲವರ ಮೇಲೆ ಪ್ರಬಲವಾದ ಸಂದೇಹವಿತ್ತು ಫೌಜುದಾರನು ಅವರುಗಳನ್ನು ಹಿಡಿತರಿಸಿ ಬಂದೀಖಾನೆಯಲ್ಲಿಡಿಸಿದನು ಹೀಗೆ ನೂರಾರು ಜನರನ್ನು ಬಂದೀಖಾನೆಯಲ್ಲಿಟ್ಟನು ಒಂದು ದಿನ ಪಡುಬಿದರೆಯ ಬಂದೀಖಾನೆಯಲ್ಲಿ ದೊಡ್ಡ ಗದ್ದಲವೆದ್ದಿತು ರಾತ್ರಿಯ ಹೊತ್ತಿನಲ್ಲಿ ಪಹರೆಯವರನ್ನು ಕೊಂದು ಬಂದೀಖಾನೆಯ ಬಾಗಿಲುಗಳನ್ನು ಒಡೆದು ವಿದ್ರೋಹಿಗಳೆಲ್ಲಾ ಓಡಿಹೋದರು ಸೈನಿಕರು ಗುಂಡು ಹಾರಿಸಿದರು ಅಷ್ಟುಹೊತ್ತಿಗೆ ಬಂದೀಖಾನೆಯು ಬರಿದಾಗಿಹೋಗಿತ್ತು. ಫೌಜುದಾರನಿಗೆ ಕೋಪ ಬಂತು. ನಾಲ್ವರು ವಿದ್ರೋಹಿಗಳನ್ನು ಹಿಡಿದು ವಿಚಾರಣೆ ನಡೆಸಿದನು

ಇವರಲ್ಲಿ ಗೋವಿಂದಕಂತಿ ಎಂಬುವನು ಮುಖ್ಯನಾದವನು. ಇವನು ನಾಲ್ಕಾರ

ಕೆಂಪಂಗಿಯ ದಳಗಳಿಗೆ ಮುಖಂಡ ಇವನಿಗೆ ಸುಮಾರು ಇಪ್ಪತ್ತುನಾಲ್ಕು ವರ್ಷ ವಯಸ್ಸು ಮೈಬಣ್ಣ ನಿಂಬೇಹಣ್ಣಿನ ಬಣ್ಣ ಉಬ್ಬಿದ ಎದೆ ಭುಜಗಳು, ವಿಶಾಲವಾದ ಹಣೆ, ಉಜ್ವಲವಾದ ಕಣ್ಣುಗಳು ಬಹಳ ಬಂದೋಬಸ್ತಿನಿಂದ ವೀರಭಟರ ಕಾವಲಿನಲ್ಲಿ ಈ ನಾಲ್ವರನ್ನೂ ಫೌಜುದಾರರ ಸಮುಖಕ್ಕೆ ಕರತಂದರು ವಿಚಾರಣೆಯ ಕ್ರಮವು ವಿಚಿತ್ರವಾಗಿದ್ದಿತು ಬಹಳ ಅಂತರಂಗದಲ್ಲಿ ವಿಚಾರಣೆಯು ನಡೆಯಿತು

ಫೌಜುದಾರನು ಕ್ರಮವಾದ ವಿಚಾರಣೆ ನಡೆಸಲೇ ಇಲ್ಲ ಅವನು "ನಿಮ್ಮಲ್ಲಿ ಮುಖಂಡನಾರು ?" ಎಂದು ದರ್ಪದಿಂದ ಕೇಳಿದನು.

ಗೋವಿಂದಕಂಠಿಯು "ನಾನು" ಎಂದು ಮುಂದೆ ನಿಂತನು

ಫೌಜುದಾರನು "ನೀನು ! ಎಂಬುದು ಗೊತ್ತಿದೆ ಮುಂದೆ ಬಾ. ಹತ್ತಿರ ಬಾ ನಿಮ್ಮ ಅಪರಾಧಗಳಿಗೆಲ್ಲಾ ಸಾಕ್ಷಿಗಳಿವೆ ವಿಚಾರಣೆಯ ಅಗತ್ಯವೇ ಇಲ್ಲ ನೀನು ಎಲ್ಲವನ್ನೂ ಮುಚ್ಚುಮರೆ ಇಲ್ಲದೆ ಹೇಳಿಬಿಡು. ನಿನ್ನನ್ನು ಖುಲಾಸೆ ಮಾಡಿಬಿಡುತ್ತೇನೆ ಒಳ್ಳೆಯ ಹುಡುಗ ! ಎಲ್ಲಿಯಾದರೂ ಬದುಕಿಕೋ?" ಎಂದನು

ಗೋವಿಂದನು ವಿಕಟವಾದ ನಗುವನ್ನು ನಕ್ಕು "ಫೌಜುದಾರರೇ ! ಮುಚ್ಚುಮರೆ ಏನಿದೆ? ನಾವುಗಳು ಖಡಾಖಡಿಯಾಗಿ ನಿಮಗೆ ಹೇಳಲೇಬೇಕು ಇನ್ನೂ ಕಾಲವು ಬಂದಿಲ್ಲವೆಂದು ನಾವು ನಿಮ್ಮ ಮುಂದೆ ಬಂದಿಲ್ಲ ನಾನು ತಮ್ಮ ಅನುಗ್ರಹದಿಂದ ಶಿಕ್ಷೆಯನ್ನು ತಪ್ಪಿಸಿಕೊಂಡು ಎಲ್ಲಿಯೋ ಹೋಗಿ ಬದುಕುವುದೇಕೆ ? ಇಲ್ಲಿಯೇ ಇದ್ದು ಬದುಕುತ್ತೇನೆ

ಫೌಜುದಾರ್—ಗೋವಿಂದಕಂಠಿ ! ನೀನೇಕೆ ಈ ಅಕೃತ್ಯದಲ್ಲಿ ತೊಡಗಿದೆ

ಗೋವಿಂದ—ಫೌಜುದಾರರೇ ! ತಮ್ಮ ಕೈಲಿ ಅಧಿಕಾರವಿದೆ ಸರ್ಕಾರದ ಹುಕುಮತ್ತಿದೆ, ಸೈನ್ಯವಿದೆ, ಎಲ್ಲಾ ಇದೆ. ಆದ್ದರಿಂದ ನನ್ನನ್ನು ಅಪರಾಧಿಯೆಂದು ಹೇಳುತ್ತೀರಿ ನೀವು ನನ್ನನ್ನು ಬಂದೀಖಾನೆಯಲ್ಲಿಡಬಹುದು. ಶೂಲಕ್ಕೇರಿಸಬಹುದು ಆದರೆ, ಈ ದಕ್ಷಿಣಕನ್ನಡವನ್ನೆಲ್ಲಾ ಶೂಲಕ್ಕೇರಿಸಲಾರಿರಿ !

ಫೌಜುದಾರ್—ಕಮ್ತಿ ! ನಿನ್ನನ್ನು ನೋಡಿದರೆ ನನಗೆ ಅತ್ಯಂತ ಪ್ರೀತಿಯಾಗುತ್ತದೆ ಅದೇಕೋ ನಾನರಿಯೆ.

ಗೋವಿಂದ—ಅದು ನಿಜ ! ಕಾರಣವನ್ನು ನಾನು ಬಲ್ಲೆ

ಫೌಜುದಾರ್—ಕೇಳು ! ಹೇಳುತ್ತೇನೆ ಈ ದಕ್ಷಿಣ ಕನ್ನಡದ ಮೇಲೆ ಸುಲ್ತಾನರಿಗೆ ಬಹಳ ಪ್ರೀತಿ ಮೈಸೂರು ಕರ್ನಾಟಕ ರಾಜ್ಯ ಈ ರಾಜ್ಯವೆಲ್ಲಾ ಒಂದಾಗಿರಬೇಕು ಈ ರಾಜ್ಯದಲ್ಲಿ ಗೊಂದಲಗಳಾದರೆ ಮೈಸೂರಿನ ಶತ್ರುಗಳು ಬಂದು ಆಕ್ರಮಿಸುತ್ತಾರೆ. ದೊಡ್ಡ ದೊಡ್ಡ ಮನುಷ್ಯರೆಲ್ಲರೂ ನಮ್ಮ ಸರ್ಕಾರದಲ್ಲಿ ಬಹಳ ವಿಶ್ವಾಸದಿಂದ ಇದ್ದಾರೆ. ಅವರೆಲ್ಲರಿಗೂ ಸುಲ್ತಾನರಲ್ಲಿ ಬಹಳ ಭಕ್ತಿ ಇದೆ.

ಗೋವಿಂದ—ಫೌಜುದಾರರೇ! ತಾವು ಹೇಳುವುದೆಲ್ಲಾ ಭ್ರಾಂತಿ ತಮ್ಮ ದರಬಾರಿನಲ್ಲಿ ಈ ದೊಡ್ಡ ಮನುಷ್ಯರುಗಳೆಲ್ಲಾ ಎಷ್ಟೋ ಜನರ ಆಸ್ತಿಗಳನ್ನು ನುಂಗಿ—ಭಾಗ್ಯವಂತರಾಗಿದ್ದಾರೆ ಅವರಿಗೆ ಭಯ! ತಮಗೆ ಕೇಳಿದಷ್ಟು ದಂಡ ತೆರುತ್ತಾರೆ. ತಾವು—ರಾಜಧಾನಿಗೆ ಬಹಳ ಹಣ ಕಳಿಸಿದ್ದೀರಿ ತಾವು ಗುಟ್ಟಾಗಿ ಅಪಾರ ಐಶ್ವರ್ಯವನ್ನು ಗಳಿಸಿಟ್ಟುಕೊಂಡಿದೀರಿ ತಮ್ಮ ಅಧಿಕಾರಿಗಳೆಲ್ಲಾ ಹಣ ಗಳಿಸಿಟ್ಟುಕೊಂಡಿದ್ದಾರೆ. ಅನೇಕರು ಭಾಗ್ಯವಂತರು ತಮ್ಮ ಗುಂಪಿಗೆ ಸೇರಿಕೊಂಡಿದಾರೆ. ಬಹುಮಂದಿ ದುರಾತ್ಮರು ತಮ್ಮೊಡನೆ ಸೇರಿಕೊಂಡು ಭಾಗ್ಯವಂತರಾಗಿ ದೊಡ್ಡಮನುಷ್ಯರಾಗಿ ಮೆರೆಯುತ್ತಿದಾರೆ ಈ ರಾಜ್ಯದಲ್ಲಿ ನಡೆಯುತ್ತಿರುವ ಕಳ್ಳತನ ದರೋಡೆಗಳೆಲ್ಲಾ ಆ ಅಕೃತ್ಯಗಳಿಗೆ ತಕ್ಕ ಪ್ರಾಯಶ್ಚಿತ್ತವೆಂದು ಚೆನ್ನಾಗಿ ಅರಿತುಕೊಳ್ಳಿರಿ ಇನ್ನು ನಿಮ್ಮಗಳಿಗೆ ನಿಸ್ತಾರವಿಲ್ಲ ನನ್ನನ್ನು ತಾವು ಎಂದೂ ನೋಡಿಲ್ಲ ನನ್ನ ಮೇಲೆ ತಮಗೆ ಬಹಳ ಪ್ರೀತಿಯೆಂದು ಹೇಳಿದಿರಿ ಆದರ ಕಾರಣವನ್ನು ನಾನು ಹೇಳುತ್ತೇನೆ ಕೇಳಿರಿ! ನನಗೊಬ್ಬ ಸಹೋದರಿ ಇದ್ದಾಳೆ ಅವಳು ನನ್ನಂತೆಯೇ ಇದ್ದಾಳೆ. ಆ ನಿರ್ಭಾಗ್ಯ ಹೆಣ್ಣು ವಿಧವೆ ಒಂದು ದಿನ ರಾತ್ರಿ ಯಾರೋ ಅವಳನ್ನು ಅಪಹರಿಸಿದರು. ಎಷ್ಟೋ ಹುಡುಕಿದೆ. ಸಿಕ್ಕಲಿಲ್ಲ ಮಾಮಲೇದಾರರಲ್ಲಿ ಹೋಗಿ ಹೇಳಿಕೊಂಡೆ ಫಲವಿಲ್ಲ ಅದೇ ದುಃಖದಿಂದ ಅನ್ನ ನೀರು ಬಿಟ್ಟು ನನ್ನ ತಾಯಿ ಮೃತಳಾದಳು. ಬಹು ಕಷ್ಟಪಟ್ಟು ಅವಳಿರುವ ಸ್ಥಳವನ್ನು ಪತ್ತೆಮಾಡಿದ್ದೇನೆ ಹೆಸರು ಮಾಧವೀ! ಅವಳೇ ಈಗ ತಮ್ಮ ಅಂತಃಪುರದಲ್ಲಿರುವ ಮೋತೀಬೀ. ಅವಳ ಮೇಲಿರುವ ಮೋಹವು ತಮಗೆ ನನ್ನ ಮೇಲಿನ ಪ್ರೀತಿಯಂತೆ ಭಾಸವಾಗುತ್ತದೆ ಅದು ನಿಜವಾದ ಪ್ರೀತಿಯಲ್ಲ. ಪಾಪದ ಭಯಂಕರ ಛಾಯೆ

ಕುತುಬುದ್ದೀನನಿಂದ ಇದನ್ನು ಕೇಳಲಾಗಲಿಲ್ಲ ಅವನು "ಗೋವಿಂದಕಮ್ತಿ! ನೀನು ಹೇಳುವುದೆಲ್ಲಾ ಸುಳ್ಳು! ನೀವುಗಳು ಕಳ್ಳತನ ದರೋಡೆ ಮುಂತಾದ ಅಕೃತ್ಯಗಳನ್ನು ಮಾಡುತ್ತಾ ವಿದ್ರೋಹಿಗಳೆಂದು ಜಂಭಕೊಚ್ಚಿಕೊಳ್ಳುತ್ತಾ ತಿರುಗುತ್ತೀರಿ ಜನರಲ್ಲಿ ದ್ವೇಷವನ್ನು ಉಂಟುಮಾಡುವುದಕ್ಕೋಸ್ಕರ ನಮ್ಮ ಮೇಲೆ ಈ ಸುಳ್ಳುಕಥೆಗಳನ್ನು ಕಟ್ಟಿ ಹರಡುತ್ತೀರಿ! ನಿಮ್ಮ ಗೊಡ್ಡು ಬೆದರಿಕೆಗೆ ಭಯಪಟ್ಟು ಸುಲ್ತಾನರು ಈ ರಾಜ್ಯವನ್ನು ಬಿಟ್ಟು ಹೋಗುವುದಿಲ್ಲ ನಿಮ್ಮ ಮುಖಂಡರನ್ನೆಲ್ಲಾ ಅಲ್ಲಲ್ಲಿ ಹಿಡಿದು ಶೂಲಕ್ಕೇರಿಸುತ್ತೇವೆ ನಿನಗೆ ನಾನು ಇದೊಂದು ದಿನ ಪ್ರಾಣದಾನ ಮಾಡಿದ್ದೇನೆ. ನಾಳೆ ದಿನ ಪ್ರಾತಃಕಾಲದೊಳಗಾಗಿ ನೀನು ನಿನ್ನ ಅಕೃತ್ಯಗಳಿಗೆ ಪರಿತಾಪಗೊಂಡು ಕ್ಷಮಾಪ್ರಾರ್ಥನೆ ಬೇಡಿದರೆ ಸುಲ್ತಾನರ ಅನುಗ್ರಹಕ್ಕೆ ಪಾತ್ರನಾಗುವಿ ಇಲ್ಲದಿದ್ದರೆ ನಾಳೆಯೇ ನಿನ್ನ ಕಡೆಯದಿನ! ಎಂದು ಘರ್ಜಿಸಿದನು.

ಗೋವಿಂದನು ಇದನ್ನು ಕೇಳಿ ಗಹಗಹಿಸಿ ನಕ್ಕನು.

ಫೌಜುದಾರನು ಹೊರಟು ಹೋದನು

ಗೋವಿಂದನಿಗೂ ಅವನ ಜತೆಗಾರರಿಗೂ ಬಲವಾದ ಸರಪಣಿ ಬೇಡಿಗಳನ್ನು ಹಾಕಿದಾರೆ. ಅಲುಗಾಡಲು ಸಾಧ್ಯವಿಲ್ಲ ಫೌಜುದಾರನು ಹೊರಟುಹೋಗುತ್ತಲೇ ಅವರು ಆಲೋಚನೆ ಮಾಡತೊಡಗಿದರು ಇಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಹೋಗಬೇಕು ಆದಕ್ಕೆ ಮಾರ್ಗವೇನು ಎಂದು ಆಲೋಚಿಸಿದರು ಏನೂ ತೋರ ಲಿಲ್ಲ ಅಷ್ಟರಲ್ಲಿ ಇವರೆಲ್ಲರಿಗೂ ಭೋಜನವು ಬಂತು ಜಮಾದಾರನು ಬಂದು ಬಹಳ ದರ್ಪದಿಂದ "ಎಲ್ಲರೂ ಊಟ ಮಾಡಿರಿ!" ಎಂದು ಹೇಳಿದನು ಕೈಕೋಳ ಗಳನ್ನು ಬಿಚ್ಚಿದನು. "ನಾವು ಊಟ ಮಾಡುವುದಿಲ್ಲ ನೀವು ಮುಸಲ್ಮಾನರು ಮುಟ್ಟಿದ ಅನ್ನವನ್ನಿಟ್ಟು ಜಾತಿ ಕೆಡಿಸುತ್ತೀರಿ" ಎಂದರು

ಜಮಾದಾರನಿಗೆ ಕೋಪ ಬಂತು "ಕಾಫರ, ಬದಮಾಷ್! ನಮ್ಮ ಗುಲಾ ಮನಾಗಿ ಬಂದೀಖಾನೆಯಲ್ಲಿ ಬಿದ್ದಿರುವಾಗ ಮುಸಲ್ಮಾನರನ್ನು ಬೈಯುತ್ತೀಯಾ, ಗೋ ಮಾಂಸವನ್ನು ತರಿಸಿ ಬಾಯಿಗೆ ತುರುಕಿಸುತ್ತೇನೆ" ಎಂದು ಗದ್ದರಿಸಿದನು.

ಗೋವಿಂದಕಮ್ತಿಯು "ಬಂದೀಖಾನೆಯಲ್ಲಿ ಮಾತನಾಡಿದ್ದರಿಂದ ಬದುಕಿ ಕೊಂಡೆ! ಹೊರಗೆ ನಿನ್ನ ಅಧಿಕಾರ ತೋರಿಸಿದ್ದರೆ ಇಷ್ಟು ಹೊತ್ತಿಗೆ-ನಿನ್ನ ತಲೆಯನ್ನು ಹಾರಿಸುತ್ತಿದ್ದೆ" ಎಂದು ಕಪಾಲಕ್ಕೆ ಒಂದೇಟು ಎತ್ತಿ ಹೊಡೆದನು

ಜಮಾದಾರನಿಗೆ ತಲೆ ತಿರುಗಿದಂತಾಯಿತು ಕೋಪಬಂತು! ಪುನಃ ಎಲ್ಲ ರಿಗೂ ಕೈಗೆ ಕೋಳಗಳನ್ನು ಹಾಕಿಸಿ ನೆಲದ ಮೇಲೆ ಕೆಡವಿ "ಸೂಳೆಮಕ್ಕಳ! ಕೊಬ್ಬಿ ಹೋಗಿದ್ದೀರಿ ಬಿದ್ದಿರಿ" ಎಂದು ಹೇಳಿ ಹೊರಟುಹೋದನು

ಅದೆಲ್ಲಾ ಫೌಜುದಾರರಿಗೆ ವರದಿಯಾಯಿತು ಅವರು "ಆ ಖೈದಿಗಳು ನಾಳೆ ಸಾಯುತ್ತಾರೆ. ಇವತ್ತು ಮೃಷ್ಟಾನ್ನ ಭೋಜನ ಮಾಡಿಸಲೇ ಬೇಕು. ಹಿಂದೂ ಜಮಾದಾರನು ಹೋಗಿ ಊಟಮಾಡಿಸಲಿ" ಎಂದು ಹುಕ್ಕುಂ ಮಾಡಿದರು, ಎಲ್ಲರಿಗೂ ಆಶ್ಚರ್ಯವಾಯಿತು ಹಿಂದೂ ಜಮಾದಾರರು ಬಂದೀಖಾನೆಯೊಳಗೆ ಬಂದರು ಖೈದಿಗಳ ಬೇಡಿಗಳನ್ನೆಲ್ಲಾ ತೆಗೆಸಿದರು "ಎಲೋ ಹುಡುಗಣ್ಣಗಳಿರಾ? ನಾಳೆ ಸಾಯುವುದು ಗೊತ್ತೇ ಇದೆ ಬದುಕುತ್ತೀರೋ ಸಾಯುತ್ತೀರೋ ಯಾರಿಗೆಗೊತ್ತು? ದೇವರೊಬ್ಬಬಲ್ಲ ಇಂದಾದರೂ ಚೆನ್ನಾಗಿ ಊಟಮಾಡಿರೋ" ಎಂದು ಹೇಳಿದನು. ಯುವಕರು ಊಟಕ್ಕೆ ಕುಳಿತರು ಭೋಜನವನ್ನು ತಂದವನು ಪದ್ಮನಾಭಭಟ್ಟ ಅವನನ್ನು ನೋಡುತ್ತಲೇ ಎಲ್ಲರಿಗೂ ಆಶ್ಚರ್ಯವಾಯಿತು ಅವನು ಅವರ ಗುಂಪಿಗೆ ಸೇರಿದವನು ಎಲ್ಲರೂ ನಗುತ್ತ ಕಣ್ಣುಸನ್ನೆ ಮಾಡಿದರು. ಅವನು ಗಟ್ಟಿಯಾಗಿ —"ನಾನಾರೆಂದು ಸಂಶಯ ಪಡುತ್ತೀರಾ? ನಾನು ಬ್ರಾಹ್ಮಣ. ಫೌಜುದಾರರ

ಬಿಡದಿಯಲ್ಲಿ ಅಡಿಗೆಯ ಕೆಲಸ ನನಗೆ ಊಟಮಾಡಿ ಎಲ್ಲಾ ಚೆನ್ನಾಗಿ ಮಾಡಿದ್ದೇನೆ" ಎಂದನು

ಎಲ್ಲರೂ ಊಟಕ್ಕೆ ಕುಳಿತರು ಹರಟೆ ಹೊಡೆಯುತ್ತಾ ಊಟ ಮಾಡುತ್ತಿದ್ದರು.

ಗೋವಿಂದ—(ಪಿಸುಮಾತಿನಲ್ಲಿ) ಭಟ್ಟ ಏನು ಚೆನ್ನಾಗಿ ಮಾಡಿದ್ದಿ ?

ಪದ್ಮನಾಭ—ಕಾವಲುಗಾರರಿಗೆ ಚನ್ನಾಗಿ ಕೈತುಂಬ ಕೊಟ್ಟಿದ್ದೇನೆ ರಾತ್ರಿ ಎಲ್ಲರಿಗೂ ಹೆಂಡ ಕುಡಿಸುತ್ತೇನೆ ನೀವು ನಾಲ್ಕು ಜನರೂ ಪರಾರಿಯಾಗುವ ಏರ್ಪಾಡಾಗಿದೆ

ಗೋವಿಂದ—ಕಾವಲುಗಾರರ ತಲೆ ಹೋಗುತ್ತೆ,

ಪದ್ಮನಾಭ—ಹೋದರೆ ಹೋಯಿತು ಕಾವಲುಗಾರರಿಗೆ ಏನೂ ಆಗುವುದಿಲ್ಲ ಜಮಾದಾರರ ಪ್ರಾಣಕ್ಕೆ ಬರುತ್ತೆ ಸಂಚಕಾರ !

ಎಲ್ಲರೂ ನಕ್ಕರು.

ಪದ್ಮನಾಭಭಟ್ಟನು ಪಾತ್ರೆಗಳನ್ನೆಲ್ಲಾ ತೆಗೆದುಕೊಂಡು ಹೊರಗೆ ಹೊರಟನು. ಜಮಾದಾರನು ಪುನಃ ಎಲ್ಲರಿಗೂ ಬೇಡಿಗಳನ್ನು ಹಾಕಿಸಿ ಖೈದುಮಾಡಿ ಹೊರಟು ಹೋದನು

ಸಂಧ್ಯಾಕಾಲ ಏಳು ಗಂಟೆಗೆ ಪುನಃ ಪದ್ಮನಾಭ ಭಟ್ಟನು ಊಟ ತಂದನು

ಗೋವಿಂದನು—"ಎಷ್ಟು ಹೊತ್ತಿಗೆ ?" ಎಂದು ಕೇಳಿದನು.

ಪದ್ಮನಾಭ—ನಗುತ್ತಾ "ಮಧ್ಯರಾತ್ರಿ ಸರಿಯಾಗಿ ಹನ್ನೆರಡು ಗಂಟೆಗೆ"

ರಾತ್ರಿ ಭೋಜನವಾದ ಮೇಲೆ ನಾಲ್ವರನ್ನು ಬೇರೆ ಬೇರೆ ಕೋಣೆಗಳಲ್ಲಿಟ್ಟರು ಎಲ್ಲರಿಗೂ ಕೊಂಚ ಗಾಬರಿಯಾಯಿತು ಗೋವಿಂದನು ಒಬ್ಬರನ್ನೊಬ್ಬರು ಬಿಟ್ಟು ಅಗಲುವಾಗ 'ಪದ್ಮನಾಭ ಭಟ್ಟಿಗ. ಹೆದರಬೇಡಿ' ಎಂದು ಹೇಳಿದನು

ರಾತ್ರಿ ಒಂಭತ್ತು ಗಂಟೆಯಾಯಿತು ಹೆಬ್ಬಾಗಿಲಿನ ತುತ್ತೂರಿಯ ಸದ್ದು ಕೇಳಿಸಿತು ಬಾಗಿಲುಗಳು ಹಾಕಿದ ದಡಬಡ ಸದ್ದು ಕಿವಿಗೆ ಬಿತ್ತು. ಸ್ವಲ್ಪ ಹೊತ್ತು ಸರ್ವತ್ರ ನಿಶ್ಶಬ್ದ ! ಗೋವಿಂದನು ಬಾಗಿಲಿನ ಕಡೆಯೇ ನೋಡುತ್ತಿದ್ದನು ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ಅವನ ಕೋಣೆಯ ಬಾಗಿಲು ತೆರೆಯಲ್ಪಟ್ಟಿತು ಆಪಾದಮಸ್ತಕ ಅವಕುಂಠನವತಿಯೊಬ್ಬಳು ಒಳಗೆ ಬಂದು ಮಾತನಾಡದೇ ಗೋವಿಂದನನ್ನು ಕೈಹಿಡಿದು ಎಬ್ಬಿಸಿದಳು ಅವನನ್ನು ಜೊತೆಯಲ್ಲಿ ಕರೆದುಕೊಂಡು ಹೊರಗೆ ಹೋದಳು! ಇಬ್ಬರೂ ಹಜಾರಕ್ಕೆ ಸದ್ದಿಲ್ಲದೇ ಹೋದರು. ಆ ಯುವತಿಯು ಅಲ್ಲಿ ತನ್ನ ಅವಕುಂಠನವನ್ನು ತೆಗೆದು ಗೋವಿಂದನನ್ನು ಅಪ್ಪಿಕೊಂಡು ಚುಂಬಿಸಿದಳು ಅವಳ ಕಣ್ಣುಗಳಿಂದ

ಧಾರಾಕಾರವಾಗಿ ನೀರು ಸುರಿಯುತ್ತಿತ್ತು ! ಗೋವಿಂದನು ಅಪ್ರತಿಭನಾಗಿ ಅಲ್ಲಿದ್ದ ಬೆಳಕಿನಲ್ಲಿ ಆ ಯುವತಿಯ ಮುಖವನ್ನು ನೋಡಿದನು ಅವಳು ಮಾಧವಿ !

ಗೋವಿಂದನ ಮೈ ಜುಮ್ಮೆಂದಿತು

ಗೋವಿಂದ--ಮಾಧವಿ ! ನೀನೆಲ್ಲಿ ಬಂದೆ ಮಾಧವಿ ! ನಿನ್ನ ಸಮಾಚಾರನೇನು?

ಮಾಧವಿ--ಅಣ್ಣ ! ನನ್ನ ಕಥೆಯನ್ನು ಕೇಳಬೇಡ ನೀನು ನನ್ನ ವಿಚಾರವನ್ನು ಸರಿಯಾಗಿ ತಿಳಿದುಕೊಂಡಿದ್ದಿ ಆದರೆ ನಾನು ಇಂದು ಸುಖವಾಗಿದ್ದೇನೆ. ಫೌಜು ದಾರನು ನನ್ನನ್ನು ತನ್ನ ಪ್ರಾಣಕ್ಕಿಂತಲೂ ಹಚ್ಚಾಗಿ ಪ್ರೀತಿಸುತ್ತಾನೆ ನನಗೆ ಅಪಾರ ವಾದ ಐಶ್ವರ್ಯವಿದೆ

ಗೋವಿಂದ—ಮಾತನಾಡಬೇಡ ಮಾಧವಿ ! ನಿನ್ನ ಹೇಯ ಜೀವನವನ್ನು ಕಿವಿ ಯಾರ ಕೇಳಲಾರೆ ನಾನು ಈಗ ಫೌಜುದಾರನ ಬಂದಿ ನಾನು ಸ್ವತಂತ್ರನಾಗಿದ್ದರೆ ನಿನ್ನನ್ನು ಕತ್ತರಿಸಿ ತುಂಡುತುಂಡು ಮಾಡುತ್ತಿದ್ದೆ ಮಾಧವಿ ! ನನ್ನನ್ನು ಮರೆತುಬಿಡು ಇದೇ ನಮ್ಮಿಬ್ಬರ ಕಡೆಯ ದರ್ಶನ ನಾಳೆ ಪ್ರಾತಃಕಾಲ ನಮ್ಮನ್ನು ಶೂಲಕ್ಕೇರಿಸು ತ್ತಾರೆ. ನಿನ್ನ ಈ ಹೊಲಸು ಜೀವನದ ಅಪಮಾನದಿಂದ ದಹಿಸುತ್ತಿರುವ ನನ್ನ ಮನಸ್ಸು ನಾಳೆ ಶಾಂತವಾಗುತ್ತದೆ.

ಮಾಧವಿ--ಅಣ್ಣ ! ಇಂದಿಗೂ ನಿನಗೆ ನನ್ನ ಮೇಲೆ ಅಧಿಕಾರವಿದೆ. ತೆಗೆದುಕೋ ಇದರಿಂದ ನನ್ನ ಪ್ರಾಣವನ್ನು ಹಾರಿಸಿಬಿಡು ! ನಾವಿಬ್ಬರೂ ನರಕದಲ್ಲಿಯಾದರೂ ಚಿರ ಕಾಲ ಸೋದರ ಸೋದರಿಯರಾಗಿ ಸಂತೋಷದಿಂದ ಇರುವ ! ಎಂದು ಒಂದು ಥಳಥಳಿ ಸುವ ಬಾಕನ್ನು ಗೋವಿಂದನ ಕೈಗೆ ಕೊಟ್ಟಳು ಅದನ್ನು ನೋಡಿ

ಗೋವಿಂದನು—"ಮಾಧವಿ ! ಇದು ನಿನಗೆಲ್ಲಿ ಸಿಕ್ಕಿತು!" ಎಂದನು

ಮಾಧವಿ—ಫೌಜುದಾರನು ಕೊಟ್ಟನು ಇದು ನಿನ್ನ ಆಯುಧವೆಂದು ಹೇಳಿದನು.

ಗೋವಿಂದ—ಮಾಧವಿ ! ಇದನ್ನು ನೀನೇ ತೆಗೆದುಕೋ. ಎಂದಾದರೊಂದು ದಿನ ಇದನ್ನು ಫೌಜುದಾರನ ಹೃದಯದಲ್ಲಿ ಇರಿದುಬಿಡು ! ಆಗ ನೀನು ನನ್ನ ಪ್ರಿಯ ಳಾದ ಸೋದರಿಯಾಗುವಿ. ಆಮೇಲೆ ನಾವಿಬ್ಬರೂ ನಿಜವಾದ ಸೋದರಸೋದರಿಯ ರಾಗಿ ಈ ಲೋಕದಲ್ಲಿ ಸಂತೋಷವಾಗಿ ಬದುಕೋಣ

ಮಾಧವಿಯು ಅಣ್ಣನನ್ನು ಆಲಿಂಗಿಸಿದಳು. ಈಗ ಅವಳು ಅಳುತ್ತಲಿಲ್ಲ ನಗುತ್ತಿದ್ದಾಳೆ.

ಗೋವಿಂದ--ಮಾಧವಿ ! ನೀನು ಹೋಗು ! ನಾನು ನನ್ನ ಬಂದೀಖಾನೆಗೆ ಹೋಗುತ್ತೇನೆ.

ಮಾಧವಿ—ಇಲ್ಲವಣ್ಣ, ಇಲ್ಲ ಇನ್ನು ನಿನಗೆ ಬಂದೀಖಾನೆ ಇಲ್ಲ, ನೀನು ಬೇಕಾದಲ್ಲಿಗೆ ಹೋಗು!

ಗೋವಿಂದ—ಮಾಧವಿ! ನಾನು ಹೋಗುವುದಿಲ್ಲ ನನ್ನ ಜೊತೆಗಾರರನ್ನು ಬಿಟ್ಟು ನಾನು ಪ್ರಾಣ ಉಳಿಸಿಕೊಂಡು ಹೋಗುವುದಿಲ್ಲ

ಮಾಧವಿ—ಫೌಜುದಾರರು ನಿಮ್ಮೀನಾಲ್ವರನ್ನೂ ಖುಲಾಸೆ ಮಾಡಿದ್ದಾರೆ ತೆಗೆದುಕೊ ಮುದ್ರೆಯೊತ್ತಿದ ಖುಲಾಸಾನಾಮೆಯು ಇಲ್ಲಿದೆ.

ಕುತುಬುದ್ದೀನನು ಇಂದು ಅತ್ಯಂತ ಚಿಂತಾಕ್ರಾಂತನಾಗಿದ್ದಾನೆ. ಅವನ ಬುದ್ಧಿಯು ತೀಕ್ಷ್ಣವಾದುದು ರಾಜನೀತಿಯನ್ನು ಬಹು ಚೆನ್ನಾಗಿ ಬಲ್ಲ ಯುದ್ಧದಲ್ಲಿ ಅವನು ಒಂದು ಪರಾಕ್ರಮವನ್ನೂ ತೋರಿಲ್ಲ ಆದರೂ ಆಡಳಿತದಲ್ಲಿ ಘಟ್ಟಿಗ. ಅವನು ಮಂಗಳೂರಿನ ಸಮಾಚಾರಗಳನ್ನೆಲ್ಲಾ ವಿವರವಾಗಿ ಸುಲ್ತಾನರವರಿಗೆ ವರದಿ ಮಾಡಿಲ್ಲ ಅವರಿಗೆ ದೊಡ್ಡ ದೊಡ್ಡ ವಿಚಾರಗಳಿವೆ ಪ್ರಬಲವಾದ ಯುದ್ಧವಿಗ್ರಹಗಳು ಕಾದಿವೆ ಈ ದಕ್ಷಿಣ ಕನ್ನಡದ ವಿಚಾರವು ಅಷ್ಟೇನೂ ಮುಖ್ಯವಾದುವಲ್ಲ ಆದರೆ ಇದು ಅಲಕ್ಷ್ಯ ಮಾಡತಕ್ಕದೂ ಅಲ್ಲ ಮಹಾರಾಷ್ಟ್ರರಾಗಲೀ, ಫರಂಗಿಯವರಾಗಲೀ, ಈ ಪಿತೂರಿಗಳಿಗೆ ಪ್ರೋತ್ಸಾಹಕರಲ್ಲ ಇದರಲ್ಲಿ ಅವರಿಗೆ ಕೈವಾಡವಿದ್ದಿದ್ದರೆ ಅತ್ತಿಂದಿತ್ತ ರಾಜಕರ್ಮಚಾರಿಗಳು ಓಡಾಡುತ್ತಿದ್ದರು ಇದು ಇಲ್ಲಿಯೇ ಹುಟ್ಟಿದೆ ಇಲ್ಲಿಯವರೇ ಯಾರೋ ಈ ವಿಪ್ಲವಗಳಿಗೆ ಕಾರಣಕರ್ತರಾಗಿದ್ದಾರೆ ಅಂಥಾ ಶಕ್ತರು ಯಾರೂ ಕಾಣುವುದಿಲ್ಲ ಇಲ್ಲಿ ಯಾರಾದರೂ ಹಿಂದಿನ ರಾಜಮನೆತನದವರೋ ದೊಡ್ಡ ಪಾಳೆಯಗಾರರೋ ಇದ್ದಿದ್ದರೆ ಅವರ ಕಡೆಗೆ ಲಕ್ಷ್ಯವಿಡಬಹುದಾಗಿತ್ತು ಈ ಗದ್ದಲಗಳನ್ನು ರಾಜವಿಪ್ಲವವೆಂದು ಗುರ್ತಿಸಲು ಬೇಕಾದಷ್ಟು ಕಾರಣಗಳಿವೆ ದೊಡ್ಡದೊಡ್ಡ ಐಶ್ವರ್ಯವಂತರ ಮನೆಗಳು ಲೂಟಿಯಾಗಿವೆ ಇದೆಲ್ಲಾ ಹೊಟ್ಟೆಗಿಲ್ಲದವರ ಕಾರ್ಯಗಳೆಂದು ಹೇಳಲಾಗುವುದಿಲ್ಲ ಇತ್ತೀಚೆಗೆ ಕೊಲೆಗಳಿಗೂ ಆರಂಭವಾಗಿದೆ ಅಪರಾಧಿಗಳು ಬಂದೀಖಾನೆಯನ್ನು ಒಡೆದು ಹೊರಟುಹೋದ ಪ್ರಕರಣವಂತೂ ಸಾಮಾನ್ಯವಲ್ಲ ಇದನ್ನೆಲ್ಲಾ ಸುಲ್ತಾನರವರಿಗೆ ವರದಿಮಾಡಿಬಿಡುವುದು ಕರ್ತವ್ಯ—ಎಂದು ಕುತುಬುದ್ದೀನನು ಯೋಚಿಸುತ್ತಾನೆ

ಮತ್ತೊಮ್ಮೆ "ಈ ವಿಪ್ಲವದ ಮೂಲಪುರುಷರನ್ನುಗೊತ್ತುಹಚ್ಚದೆ ಸುಲ್ತಾನರಿಗೆ ಅರಿಕೆ ಮಾಡುವುದು ಶ್ರೇಷ್ಠ ಮುತ್ಸದ್ದಿತನವಲ್ಲ. ಈ ದಕ್ಷಿಣ ಕರ್ನಾಟಕವು ಸುಭಿಕ್ಷವಾಗಿಲ್ಲ ಶಾಂತಿಯಿಂದಿಲ್ಲ ಭದ್ರವಾಗಿಲ್ಲ ಆದಾಗ್ಯೂ ಈ ರಾಜ್ಯವು ನಮ್ಮ ಕೈ ತಪ್ಪಿಹೋಗುವ ಚಿಹ್ನೆಗಳಾವುವೂ ಇಲ್ಲ ಈ ಪರಿಸ್ಥಿತಿಯನ್ನು ಹುಜೂರಿಗೆ ತಿಳಿಸಿದರೆ ನಾನು ಸಮರ್ಥನಲ್ಲವೆಂದು ಬೇರೊಬ್ಬರನ್ನು ಕಳಿಸುತ್ತಾರೆ. ಬೇರೊಬ್ಬರು ಬಂದು

ತಾನೇ ' ಇಲ್ಲಿ ಮಾಡುವುದೇನಿದೆ. ಒಂದೇ ದಿನಕ್ಕೆ ಈ ಗೊಂದಲವನ್ನೆಲ್ಲಾ ನಿಲ್ಲಿಸಬಲ್ಲರೆ ? ಅದು ಸರ್ವಥಾ ಸಾಧ್ಯವಿಲ್ಲ ಮುಖ್ಯವಾಗಿ ಮುಖಂಡರನ್ನು ಕಂಡು ಹಿಡಿಯಬೇಕು ಈ ವಿಪ್ಲವದಲ್ಲಿ ಒಂದು ವೈಚಿತ್ರ್ಯವಿದೆ ದೊಡ್ಡ ಮನುಷ್ಯ ರೊಬ್ಬರೂ ಇದಕ್ಕೆ ಬೆಂಬಲವಾಗಿಲ್ಲ ನಮ್ಮ ಮುಂದ ಕಂಡುಬರುವವರೆಲ್ಲರೂ ಶೂರ ರಂತೆ ಪರಾಕ್ರಮಿಗಳಂತೆ ಮಾತನಾಡುತ್ತಾರೆಯೇ ಹೊರತು ಒಬ್ಬನಾದರೂ ಸಮರ್ಥ ನಲ್ಲ. ಮೂವರ ವಿಚಾರದಲ್ಲಿ ನನಗೆ ಸಂದೇಹ ಉಂಟಾಗುತ್ತಿದೆ ಅವರು ನಮ್ಮಲ್ಲಿ ಬರು ವುದೇ ಇಲ್ಲ ಚೋಟಾಭಕ್ಷಿಯೊಬ್ಬ ಇವನನ್ನು ನಾನಾ ವಿಧವಾಗಿ ಪರೀಕ್ಷೆ ಮಾಡು ತ್ತಲೇ ಇದ್ದೇವೆ ಒಂದಾದರೂ ತಪ್ಪು ಕಂಡುಬರುವುದಿಲ್ಲ ಆದರೆ ನನ್ನ ಸಂದೇಹವು ಹೋಗಿಲ್ಲ ಕಾರ್ಕಳದ ಫಕೀರ ಅವನು ವಿರೋಧವಾಗಿ ಮಾತನಾಡುತ್ತಾನೆ ಯಾವ ಕಾರ್ಯದಲ್ಲಿಯೂ ಅವನ ಸಂಬಂಧವು ಕಾಣುವುದಿಲ್ಲ ಮಂಗಳೂರಿನಲ್ಲಿರುವ ಅಲ್ಲೀ ಸೇಟ್ ಒಬ್ಬ ! ಅವನು ಬಲು ದೊಡ್ಡ ವ್ಯಾಪಾರಿಯಂತೆ ! ಮಲಬಾರಿನಿಂದ ಬೊಂಬಾಯಿನವರೆಗೆ ಅವನ ವ್ಯಾಪಾರವು ನಡೆಯುತ್ತದೆ ನೂರಾರು ಪತ್ತೇಮಾರಿ ಗಳೂ, ದೋಣಿಗಳೂ ಅವನ ಕಡೆಯವುಗಳು ಇಹನಿಗೆ ಇಂಗ್ಲಿಷರ ಸ್ನೇಹವಿದೆ ನಮಗೆ ಕೊಡಬೇಕಾದ ರಾಜಾದಾಯನ್ನು ಅವನ ಗುಮಾಸ್ತರು ಮುಂಗಡವಾಗಿಯೇ ಕಟ್ಟಿಬಿಡುತ್ತಾರೆ ಅವರ ಕಡೆ ಎಷ್ಟೋ ಹಣ ನಮ್ಮ ಖಜಾನೆಯಲ್ಲಿಯೇ ಇಟ್ಟಿರುತ್ತಾರೆ ಅವರು ನಮ್ಮ ವಿದ್ರೋಹಿಗಳಾದರೆ ಇಷ್ಟು ಹಣ ನಮ್ಮ ಭಂಡಾರದಲ್ಲಿಡುತ್ತಿದ್ದರೆ ? ಇರಲಿ ಅವರ ಮೇಲೆ ನನಗೆ ಸಂದೇಹವಿಲ್ಲದಿದ್ದರೂ ಅವರನ್ನು ನೋಡಬೇಕು ಎಂದು ಅಂದುಕೊಳ್ಳುತ್ತಾನೆ ಇತ್ತೀಚೆಗೆ ಭಕ್ಷಿಗೆ ಅನೇಕ ತೊಂದರೆಗಳಿಗೆ ಆರಂಭವಾಗಿದೆ ಎಲ್ಲಿ ಕಳವು ದರೋಡೆಗಳಾಗಲೀ, ಸರಕಾರದವರು ಭಕ್ಷಿಯನ್ನು ಬಂದು ಕೇಳುತ್ತಾರೆ ಎಲ್ಲಿ ಕೊಲೆಯಾಗಲೀ ಕೊಲೆ ಕಡುಕರಾರೆಂದು ಹುಡುಕಿಕೊಂಡು ಭಕ್ಷಿಯ ಮನೆಗೆ ಬರುತ್ತಾರೆ. ಇದರಿಂದ ಭಕ್ಷಿಗೆ ವ್ಯಥೆಯಾಗಿಲ್ಲ ಅವನು ಸಂತೋಷಪಡುತ್ತಾನೆ ಮುಂದೇನು ಮಾಡಬೇಕೆಂದು ಆಲೋಚನೆ ಮಾಡುತ್ತಾನೆ. ಭಕ್ಷಿಯು ಕುಲುಮೆ ಕಾರ್ಖಾನೆಯನ್ನು ಮುಚ್ಚಿಬಿಟ್ಟನು ಇಮಾಮುನ ಬಟ್ಟೆಯಂಗಡಿಯನ್ನೂ ಹರಾಜು ಮಾಡಿಬಿಟ್ಟನು ಈಗ ಇಮಾಮನೂ, ಗೋಪಾಲನೂ, ಭಕ್ಷಿಯ ಸೇನಾನಾಯಕರು ಅವರ ಉತ್ಸಾಹಕ್ಕೆ ಕೊನೆ ಮೊದಲಿಲ್ಲ ಭಕ್ಷಿಯು ಎಲ್ಲ ಕಡೆಯೂ ಸಂಚಾರ ಮಾಡು ತ್ತಾನೆ ತರುಣರಿಗೆಲ್ಲಾ ಮುಂದಿನ ಕಾರ್ಯವನ್ನು ಬೋಧನೆ ಮಾಡುತ್ತಾನೆ ಅವರಿ ಗೆಲ್ಲಾ "ಇನ್ನು ಮುಂದೆ ನೀವುಗಳು ಕಳ್ಳಕಾಕರಂತೆ ಕೊಳ್ಳ ಹೊಡೆಯುವವರಲ್ಲ ದರೋಡೆ ಮಾಡುವವರಲ್ಲ ನೀವೆಲ್ಲ ಬಲವಾದ ಯೋಧರಂತೆ ಹೋರಾಡತಕ್ಕವರು ಒಂದು ಪ್ರಾಣವನ್ನು ಕೊಡಬೇಕಾದರೆ ಹತ್ತು ಪ್ರಾಣಗಳನ್ನು ತೆಗೆದುಕೊಂಡಿರಬೇಕು" ಎಂದು ಹುರಿದುಂಬಿಸುತ್ತಾನೆ.

ಅಧಿಕಾರಿಗಳಿಗೆಲ್ಲಾ ಭಕ್ಷಿಯ ಸಮಾಚಾರವು ಸ್ಪಷ್ಟವಾಗಿ ಗೊತ್ತಾಗುತ್ತ ಬಂತು! ಇವೆಲ್ಲಾ ಫೌಜುದಾರನಿಗೂ ವರದಿಯಾಯಿತು

ಭಕ್ಷಿಯು ಕಾರ್ಕಳದ ಫಕೀರನ ವಿಷಯವಾಗಿ ಅನೇಕ ಸಮಾಚಾರಗಳನ್ನು ಕೇಳಿದ್ದನು ಅವನ ವಯಸ್ಸು, ರೂಪು ಮೈಕಟ್ಟು ನಡೆನುಡಿಗಳು ಇದನ್ನೆಲ್ಲ ಕೇಳಿದರೆ ಇದೆಲ್ಲಾ ಲಕ್ಷಣಗಳೂ ಇಯಜ್‌ಖಾನರಿಗೆ ಹೋಲಿಕೆಯಾಗುತ್ತೆ ' "ಆ ಫಕೀರರು ನಮ್ಮ ಖಾನರೇ ಇರಬಹುದೆ ? ಹಾಗಾದರೆ-ಅವರೇಕೆ ನನ್ನನ್ನು ಹುಡುಕಿಸಲಿಲ್ಲ" ಎಂದು ಆಲೋಚಿಸಿದನು "ಹೇಗಾದರೂ ಇರಲಿ ! ನಾನು ಹೋಗಿ ಆ ಫಕೀರರನ್ನು ನೋಡಿ ಬರುತ್ತೇನೆ" ಎಂದು ನಿಶ್ಚಯಿಸಿದನು

ಭಕ್ಷಿಯು ಒಂದು ದಿನ ಕಾರ್ಕಳಕ್ಕೆ ಹೋಗಿ ಫಕೀರರ ಭೇಟಿ ಮಾಡಿದನು ಅವರು ಮೃದುವಚನಗಳಿಂದ ಮಾತನಾಡಿದರು "ಬೇಟಾ ನಿನಗೇನು ಬೇಕು" ಎಂದು ಕೇಳಿದರು

ಭಕ್ಷಿಯು ಫಕೀರರನ್ನು ಆಪಾದಮಸ್ತಕವಾಗಿ ನೋಡಿದನು ಅವರ ದನಿಯನ್ನು ಕೇಳಿದನು ತನ್ನಷ್ಟಕ್ಕೆ ತಾನೆ ಮುಗುಳು ನಗುವನ್ನು ನಕ್ಕು "ನಾನೆಂತಹ ಹುಚ್ಚ ! ನಮ್ಮ ಖಾನರು ಫಕೀರರಾಗುವುದುಂಟೆ ?" ಎಂದುಕೊಂಡನು ಆದರೂ "ಈ ಫಕೀರನು ತೇಜಸ್ವಿಯಾಗಿದ್ದಾನೆ ಇವನು ಸುಲ್ತಾನರ ರಾಜ್ಯಕ್ಕೆ ವಿರೋಧಿಯಾಗಿ ಕಾಣುತ್ತಾನೆ. ಮಾತನಾಡಿಸಿ ನೋಡೋಣ" ಎಂದುಕೊಂಡನು

ಭಕ್ಷಿ—ದಾದಾಜಿ ! ಜೋತಿಷ್ಯವನ್ನು ಕೇಳುವುದಕ್ಕೆ ಬಂದಿದ್ದೇನೆ ನಾನು ಬಹಳ ಸಂಕಟಕ್ಕೆ ಸಿಕ್ಕಿದೇನೆ ನನ್ನ ಗ್ರಹಚಾರವನ್ನು ಸ್ವಲ್ಪ ನೋಡಿ ಹೇಳುತ್ತೀರಾ ?

ಫಕೀರನು ಭಕ್ಷಿಯ ಹಸ್ತವನ್ನು ನೋಡಿದನು ಆಶ್ಚರ್ಯಚಕಿತನಾಗನು "ಬೇಟಾ ! ನೀನು ಏನು ಕೆಲಸ ಮಾಡುತ್ತೀ ?" ಎಂದು ಪ್ರಶ್ನೆಮಾಡಿದನು

ಭಕ್ಷಿ—ಬಡಗಿಯ ಮಗ ! ಕಮ್ಮಾರನ ಕೆಲಸ ಮಾಡುತ್ತೇನ

ಫಕೀರ—ನಿನಗೆ ಸಂಸಾರವಿದೆಯೇ ?

ಭಕ್ಷಿ—ಇಲ್ಲ .... ಏಕಾಂಗಿ !

ಫಕೀರ—ನಿನ್ನ ಕೈಯ್ಯಲ್ಲಿ ಸಾವಿರಾರು ಜನರನ್ನು ಕಾಪಾಡುವ ಅನ್ನರೇಖೆ ಇದೆ. ಖಡ್ಗರೇಖೆ ಇದೆ. ಧ್ವಜರೇಖೆ ಇದೆ. ಈ ರಾಜಲಕ್ಷಣಗಳುಳ್ಳ ನಿನಗೆ ಗ್ರಹಚಾರವೆಂದರೇನು ?

ಭಕ್ಷಿ—ದಾದಾಜಿ ! ಆಗ್ರಹ ಮಾಡದಿದ್ದರೊಂದು ಮಾತು ಹೇಳುತ್ತೇನೆ !

ಫಕೀರ—ಹೇಳು ! ಕೇಳುತ್ತೇನೆ !

ಭಕ್ಷಿ—ನಿಮ್ಮ ಜ್ಯೋತಿಷ್ಯವು ಸುಳ್ಳು ! ಇದುವರೆಗೆ ಕಬ್ಬಿಣದ ಕಲಸ ಮಾಡಿ ಜೀವನ ಮಾಡುತ್ತಿದ್ದೆ ಈ ರಾಜ್ಯಾಧಿಕಾರಿಗಳ ಕಾಟ ! ಅದನ್ನೂ ಬಿಟ್ಟು ಬಟ್ಟೆ !

ಫಕೀರ—ಏಕೆ! ನಿನ್ನಲ್ಲಿ ಹಣವಿದೆಯೇನು? ಲಂಚ ಕೇಳುತ್ತಾರೇನು?

ಭಕ್ಷಿ—ಇಲ್ಲ! ಅದೊಂದೂ ಅಲ್ಲ! ಈ ರಾಜ್ಯದಲ್ಲಿ ಕಳ್ಳಕಾಕರ ಹಾವಳಿ ಬಹಳವಾಗಿದೆ ಅವರನ್ನು ಹುಡುಕಿಕೊಂಡು ನನ್ನ ಹತ್ತಿರ ಬಂದು ಪೀಡಿಸುತ್ತಾರೆ

ಫಕೀರ—ನಾನು ಸಾಕ್ಷಿ ಹೇಳುತ್ತೇನೆ. ನೀನು ಕಳ್ಳನಲ್ಲವೆಂದು

ಭಕ್ಷಿ—(ನಕ್ಕನು) ದಾದಾಜಿ! ಕಷ್ಟ ಬಂದರ ತಮ್ಮ ಹತ್ತಿರ ಬರುತ್ತೇನೆ.

ಫಕೀರ—ಬೇಟಾ! ನಾನೊಂದು ಮಾತು ಹೇಳುತ್ತೇನೆ ನೀನು ಶ್ರೀರಂಗಪಟ್ಟಣಕ್ಕೆ ಹೋಗು ಸುಲ್ತಾನರನ್ನು ಭೇಟಿಮಾಡಿ ಅವರ ಹತ್ತಿರ ಸೇರಿಕೋ ದೊಡ್ಡ ಸೇನಾನಾಯಕನಾಗುವೆ ರಾಜಾಧಿಕಾರಿಯಾಗುವೆ!

ಭಕ್ಷಿಯು ವಂದಿಸಿ ಹೂರಟು ಹೋದನು

ನವರಾತ್ರಿ ಹಬ್ಬ ಬಂತು ಕರ್ನಾಟಕದಲ್ಲೆಲ್ಲಾ ನಾಡು ಹಬ್ಬದ ಕೋಲಾಹಲ! ಚಿಕ್ಕ ಚಿಕ್ಕ ಹುಡುಗರು ನವರಾತ್ರಿಪದಗಳನ್ನು ಹಾಡಿಕೊಂಡು ಊರುಗಳಲ್ಲೆಲ್ಲಾ ತಿರಿಯುತ್ತಿದ್ದರು ಇದೇ ಸಮಯದಲ್ಲಿ ಕೆಂಪಂಗಿಯವರ ಜಂಗುಳಿಗೆ ಆರಂಭವಾಯಿತು ಸಾವಿರ ಸಾವಿರ ಜನ ತರುಣರು ಸೇರಿದರು ಭೂಮಿ ನಡುಗುವಂತೆ ಪೇಟೆಗಳಲ್ಲ ಕವಾಯಿತು ನಡಸಿದರು

ಸಂಧ್ಯಾಕಾಲ ತರುಣನೊಬ್ಬನು ಭಾಷಣ ಮಾಡಿದನು "ನೀವೆಲ್ಲರೂ ದೇಶೋದ್ಧಾರದ ಸ್ವಸ್ನೈಕರು ಕರ್ಣಾಟಕ ರಾಜ್ಯವನ್ನು ಉದ್ಧಾರ ಮಾಡಿರಿ ಅಧರ್ಮರಾಜ್ಯವು ಹೋಗಬೇಕು. ಧರ್ಮ ರಾಜ್ಯವನ್ನು ಸ್ಥಾಪಿಸಬೇಕು" ಎಂದು ಬೋಧಿಸಿದನು ಎಲ್ಲಾ ಕಡೆಯೂ ಜಯಜಯಕಾರಗಳಾದುವು ಇದೆಲ್ಲಾ ವಿವರವಾಗಿ ಫೌಜುದಾರರಿಗೆ ವಿವರವಾಗಿ ವರದಿಯಾಯಿತು

ಭಕ್ಷಿಯ ಹತ್ತಿರ ಹಣವಿಲ್ಲ ರಾಜ್ಯವನ್ನು ಆಕ್ರಮಿಸಬೇಕು ಇಯಜ್‌ಖಾನರು ಎಲ್ಲಿದ್ದಾರೆಯೋ ಪತ್ತೆ ಆಗಬೇಕು ಈ ಕರ್ನಾಟಕವನ್ನು ಆಕ್ರಮಿಸಿ ಅವರಿಗೆ ಒಪ್ಪಿಸಬೇಕು ಆಗಲೀಗ ಈ ಟಿಪ್ಪೂಸುಲ್ತಾನನು ಇಯಜ್‌ಖಾನರಿಗೆ ಮಾಡಿದ ಅಪಕಾರಕ್ಕೆ ಪ್ರತೀಕಾರ ಮಾಡಿದಂತಾಗುತ್ತದೆ, ಇಯಜ್‌ಖಾನರೆಲ್ಲಿ? ಹಣಕ್ಕೇನು ಮಾಡುವುದು? ಎಂಬ ಆಕಾಂಕ್ಷಯು ಬಂತು ಸಹಪಾಟಿಗಳೆಲ್ಲಾ "ಸರ್ಕಾರದ ಭಂಡಾರವನ್ನು ಲೂಟಿ ಮಾಡಬೇಕು" ಎಂದು ಹೇಳಿದರು ಭಕ್ಷಿಯು ಅದನ್ನೊಪ್ಪಲಿಲ್ಲ "ನನ್ನಲ್ಲಿ ಹಣವಿದೆ ಬೇಕಾದಷ್ಟಿದ ಭಯಪಡಬೇಡಿರಿ" ಎಂದು ಹೇಳಿದನು.

ತನ್ನ ಮನೆಗೆ ಬಂದು ಫಾತಿಮಾಬೇಗಂರವರಿಗೆ ಪತ್ರ ಬರೆದನು ಗೋಪಾಲನನ್ನೂ ಇಮಾಂನನ್ನೂ ಕರೆದು "ನೀವು ಈ ಒಂದು ಮಹತ್ಕಾರ್ಯವನ್ನು ಮಾಡಬೇಕಾಗಿದೆ ನೀವು ಫಕೀರರ ವೇಷವನ್ನು ಹಾಕಿಕೊಂಡು ನಗರಕ್ಕೆ ಹೋಗಬೇಕು. ಅಲ್ಲಿ ದರಿಯಾಬಾಗಿನಲ್ಲಿ ಮಹಮದಾಲಿಯವರ ಗೋರಿ ಇದೆ. ಆ ಗೋರಿಯ ಸಮಿಾ

ಪದಲ್ಲಿ ಬೇಗಂಸಾಹೇಬರು ಒಬ್ಬರು ಇರುತ್ತಾರೆ ಈ ಪತ್ರವನ್ನು ಅವರಿಗೆ ತಲಪಿಸಬೇಕು ಅವರು ಹಣ ಕೊಡುತ್ತಾರ ಅದನ್ನು ಜಾಗರೂಕತೆಯಿಂದ ತರಬೇಕು ಈ ಪತ್ರವು ಯಾ ೨ ಕ್ಕೆಗಾದರೂ ದೊರೆತರೆ ಪ್ರಮಾದವಾಗುವುದು' ಎಂದು ಹೇಳಿದನು.

ಅವರು ಪ್ರಯಾಣಕ್ಕೆ ಸಿದ್ಧರಾಗಿ ತರಳಿದರು

ಮಾರನೆಯ ದಿನವೇ ಈ ಇಬ್ಬರು ರಾಯಭಾರಿಗಳೂ ದರಿಯಾಬಾಗನ್ನು ಸೇರಿದರು ಬೇಗಂಸಾಹೇಬರನ್ನು ಭೇಟಿಮಾಡಿದರು ಆಪ ಕೈಗೆ ಆ ಪತ್ರವನ್ನು ಕೊಟ್ಟರು

ಬೇಗಂ ಸಾಹೇಬರು "ಯಾರದು ಪತ್ರ ?" ಎಂದು ಕೇಳಿದರು

ಗೋಪಾಲನು "ಮಹಾರಾಣಿಯವರೇ ! ಅದು ಭಕ್ಷಿಯವರದು' ಎಂದನು

ಬೇಗಂ ಭಕ್ಷಿಯವರಾರು ?

ಸನ್ನಿಧಾನದ ಸಹೋದರರಂತೆ !

ಬೇಗಂ ಸಾಹೇಬಳು ಮನಸ್ಸಿನಲ್ಲಿಯೇ "ಈ ಜಗತ್ತಿನಲ್ಲಿ ನನಗಾರೂ ಇಲ್ಲ ! ಈ ನನ್ನ ಸಹೋದರನು ಯಾರಿರಬಹುದು ? ಯಾರಾದರೇನು ! ಪತ್ರವನ್ನು ನೋಡುವುದಕ್ಕೆ ಆಕ್ಷೇಪಣೆಯೇನು ?" ಎಂದುಕೊಂಡು ಲಕೋಟೆಯನ್ನು ಬಿಚ್ಚಿ ಓದಿಕೊಂಡಳು ನಕ್ಕಳು 'ಹೌದು ! ಇವರು ನನ್ನ ಸಹೋದರರು" ಎಂದಳು

ಪತ್ರವು ಈ ಪರಿಯಾಗಿತ್ತು

ಬೇಗಂ ಸಾಹೇಬ —

"ಮಹಮದಾಲಿಯ ಸಮಾಧಿ ಬಳಿಯಲ್ಲಿ ತಾವು ರಾಜ್ಯವನ್ನು ಕಟ್ಟಬೇಕೆಂದು ಪ್ರೇರೇಪಿಸಿದಿರಿ ನಾನು ಈ ಕರ್ನಾಟಕದಲ್ಲಿ ರಾಜಕಾರ್ಯವನ್ನು ಆರಂಭಿಸಿದೆ ಹತ್ತು ಸಹಸ್ರ ಸೈನ್ಯವನ್ನು ಕಟ್ಟಿದ್ದೇನೆ ಈ ದಕ್ಷಿಣ ಕನ್ನಡದಲ್ಲಿ ಒಂದೇ ದಿನದಲ್ಲಿ ಸುಲ್ತಾನೀ ರಾಜ್ಯವನ್ನು ನಾಶ ಮಾಡಬಲ್ಲೆ ಇಲ್ಲಿ ಸುಲ್ತಾನೀ ರಾಜ್ಯವಿಲ್ಲ ಇದು ನನ್ನ ರಾಜ್ಯ ಇಲ್ಲಿ ಸುಲ್ತಾನರ ಪ್ರತಿನಿಧಿ ಒಬ್ಬ ಫೌಜುದಾರನಿದ್ದಾನ ಅವನು ಹುಲಿಯ ಗುಹೆಯಲ್ಲಿ ಸಿಕ್ಕಿದ ಕುರಿಯ ಮರಿಯಂತೆ ನನ್ನ ಕೈಲಿ ಸಿಕ್ಕಿಕೊಂಡಿದ್ದಾನೆ ಅವನು ಆಯುಷ್ಯದ ದಿನಗಳನ್ನು ಎಣಿಸುತ್ತಿದಾನೆ ಆದರ ಎಷ್ಟು ಅನ್ವೇಷಣ ಮಾಡಿದ. ನಮ್ಮ ನವಾಬರು ಎಲ್ಲಿದಾರೆಯೋ ತಿಳಿಯಲಿಲ್ಲ ಅವರು ಇರುವ ಅಭಿಜ್ಞಾನವು ದೊರೆತರೆ ಒಂದೇ ದಿನದಲ್ಲಿ ಈ ದಕ್ಷಿಣ ಕರ್ನಾಟಕವನ್ನು ಅವರಿಗೆ ಒಪ್ಪಿಸಿಬಿಡುತ್ತೇನೆ

ನಮಗೆ ಇಲ್ಲ ಹಣಬೇಕು ತಾವು ಅಂದೇ ಹಣಕೊಡುವುದಾಗಿ ಅಪ್ಪಣೆ ಕೊಡಿಸಿದಿರಿ ! ತಾವು ತಮ್ಮಲ್ಲಿರುವ ಹಣವನ್ನೆಲ್ಲಾ ನಮಗೆ ಅನುಗ್ರಹಿಸಬೇಕು ಇದನ್ನು ಸನ್ನಿಧಾನಕ್ಕೆ ಸಕಾಲದಲ್ಲಿ ವಾಪಸು ಸಮರ್ಪಿಸುತ್ತೇವೆ,

ತಮ್ಮ ಸೇವಕ, ಮೈಸೂರು ಖಡ್ಗ

ಬೇಗಂ ಸಾಹೇಬಳು ಪತ್ರವನ್ನು ಮತ್ತೊಮ್ಮೆ ಓದಿದಳು. ನಕ್ಕಳು

ಬೇಗಂ— ನಿಮ್ಮ ಯಜಮಾನನ ಹೆಸರು "ಭಕ್ಷಿ" ಎಂದೋ?

ಗೋಪಾಲ— ಹೌದು! ಹುಜೂರು!

ಬೇಗಂ—ನಾನೆಷ್ಟು ಹಣವನ್ನು ಕೊಡಬೇಕು

ಗೋಪಾಲ— ಐದು ಸಾವಿರ ವರಹಗಳೆಂದು ಭಕ್ಷಿಯವರು ಹೇಳಿದ್ದಾರೆ

ಬೇಗಂ—ಭಕ್ಷಿಯವರು ತಪ್ಪು ಹೇಳಿದ್ದಾರ ಐವತ್ತು ಸಾವಿರ ವರಹಗಳನ್ನು ಕೊಡುತ್ತೇನೆ

ಗೋಪಾಲ— ಐವತ್ತು-ಐವತ್ತು ಸಾವಿರ ವರಹಗಳು!

ಬೇಗಂ— ಹೇಗೆ ತೆಗೆದುಕೊಂಡು ಹೋಗುತ್ತೀರಿ?

ಗೋಪಾಲ— ತಾಯಿ! ಕೊಂಚ ಕೊಂಚವಾಗಿ ಸಾಗಿಸುತ್ತೇವೆ ಈ ನಗರದ ಗಡಿ ದಾಟುವವರೆಗೆ ನಮಗೆ ಭಯ! ದಕ್ಷಿಣದ ಕನ್ನಡ ಗಡಿಯನ್ನು ಮುಟ್ಟಿದರೆ ನಾವು ನಿರ್ಭಯವಾಗಿ ಸಾಗಿಸಬಲ್ಲೆವು

ಭಕ್ಷಿಗೆ ಈಗ ಹಣದ ಕೊರತೆ ಇಲ್ಲ ಭಕ್ಷಿಯ ಗುಪ್ತ ಭಂಡಾರದಲ್ಲಿ ಬೇಕಾದಷ್ಟು ಹಣವಿದೆ ಇನ್ನು ಕಾಲಹರಣ ಮಾಡಕೂಡದೆಂದು ಭಕ್ಷಿಯು ಇಯಜ್‌ಖಾನರ ಅನ್ವೇಷಣಕ್ಕೆ ಹೊರಟನು!

ಫೌಜುದಾರನು ಭಕ್ಷಿಯನ್ನು ಹಿಡಿಸಿ ಬಂಧನದಲ್ಲಿಡಿಸಬೇಕೆಂದು ಧೃಢ ಸಂಕಲ್ಪ ಮಾಡಿದನು. ಭಕ್ಷಿಯು ಅನ್ವೇಷಣೆಗೆ ಗುಪ್ತಚಾರರನ್ನು ನೇಮಿಸಿದನು

ಭಕ್ಷಿಯು ಈ ವಿಪ್ಲವದಲ್ಲಿ ಮುಳುಗಿ ಈಜುತ್ತಿರಲಿ ಅವನು ಆ ಮಹಾ ಸಮುದ್ರದ ದಡವನ್ನು ಸೇರುವಷ್ಟರಲ್ಲಿ ಇಯಜ್‌ಖಾನರ ಸಮಾಚಾರವೇನೆಂದು ನೋಡೋಣ

## ಇಯಜ್‌ಖಾನರ ಅನ್ವೇಷಣ

ಭಕ್ಷಿಯು ದಕ್ಷಿಣ ಕನ್ನಡದಲ್ಲಿ ಎಲ್ಲ ವ್ಯವಸ್ಥೆಗಳನ್ನು ಮಾಡಿದನು ಎಂಥಾ ಅವಸರದ ಸಂದರ್ಭಗಳು ಬಂದರೂ ಸರಕಾರದ ಮೇಲೆ ಪ್ರತ್ಯಕ್ಷವಾಗಿ ಕೈಮಾಡಕೂಡದೆಂದು ತಾಕೀತು ಮಾಡಿದನು ಇಷ್ಟೆಲ್ಲಾ ವ್ಯವಸ್ಥೆ ಮಾಡಿ ಮಲಬಾರಿಗೆ ಪ್ರಯಾಣ ಹೊರಟನು ಮಂಗಳೂರಿನಿಂದ ಒಂದು ಪತ್ತೇಮಾರಿಯನ್ನು ಮಲಬಾರಿಗೆ ಕರೆದುಕೊಂಡು ಹೋಗಬೇಕೆಂದು ಪ್ರಾರ್ಥಿಸಿದನು ಅವರು ಇವನು ಮೆಣಸು ವ್ಯಾಪಾರಕ್ಕೆ ಮಲಬಾರಿಗೆ ಹೋಗುವ ವ್ಯಾಪಾರಿಯೆಂದು ತಿಳಿದು ಕರದುಕೊಂಡು ಹೊರಟರು ಮಳೆಗಾಲ ಸಮುದ್ರ ಮಾರ್ಗವು ಅಷ್ಟೇನೂ ಸುಗಮವಾಗಿರಲಿಲ್ಲ ಆ ನೌಕೆಯು ಮಂಗಳೂರಿನಿಂದ ತಲಚೇರಿಗೆ ಹೊರಟಿತ್ತು. ಅದು ತಲಪುವುದಕ್ಕೆ ಹತ್ತು ದಿನಗಳಾ

ಯಿತು ಆ ದೋಣಿಯಲ್ಲಿ ಇನ್ನೂ ಕೆಲವರು ಪ್ರಯಾಣಿಕರಿದ್ದರು ಭಕ್ಷಿಯು ಅವರೊಡನೆ ಲೋಕಾಭಿರಾಮವಾಗಿ ಮಾತನಾಡಿದನು. ಮಾತು ಕಥೆಗಳಲ್ಲಿ ಅಲ್ಲೀಸೇಟ್ ಎಂಬುವನು ಬಲು ದೊಡ್ಡ ವ್ಯಾಪಾರಿಯೆಂದೂ ತಲಚೇರಿಯಿಂದ ಬೊಂಬಾಯಿನ ವರೆಗೆ ಅಲ್ಲೀಸೇಟ್‌ನ ವ್ಯಾಪಾರವು ನಡೆಯುತ್ತಿದೆಯೆಂದೂ ಫ್ರಂಚರಿಗೆ ಸೇರಿದ ಮಾಹಿಯಲ್ಲಿಯೂ, ಪೋರ್ಚುಗೀಸರ ಗೋವಾದಲ್ಲಿಯೂ ಅಲ್ಲೀಸೇಟನ ವ್ಯಾಪಾರವು ನಡೆಯುತ್ತಿದೆಂದೂ ಹೇಳಿದರು ತಲಚೇರಿಗೆ ಪತ್ತೇಮಾರಿಯು ತಲಪುವ ಹೊತ್ತಿಗೆ ಕತ್ತಲಾಗುತ್ತಿತ್ತು ಮಳೆಯು ಸುರಿಯುತ್ತಿತ್ತು ಭಕ್ಷಿಯು ಪ್ರಯಾಣದಿಂದ ಬಹಳ ದಣಿದಿದ್ದನು ತಲಚೇರಿಯಲ್ಲಿ ಅಲ್ಲೀಸೇಟರ ಗಡಂಗಿನಲ್ಲಿಯೇ ಹೋಗಿ ಇಳಿದನು. ಅಲ್ಲಿ ಪರಸ್ಥಳದವರು ತಂಗುವುದಕ್ಕೆ ತಕ್ಕ ಏರ್ಪಾಡುಗಳಿದ್ದವು ರಾತ್ರಿ ಭಕ್ಷಿಗೆ ಒಳ್ಳೆಯ ಭೋಜನ ಸಿಕ್ಕಿತು ಉಂಡು ಮಲಗಿದನು ಬೆಳಿಗ್ಗೆ ಎದ್ದು ಊರೊಳಗೆ ಹೋಗಿ ವಿಚಾರಿಸಿದನು ಅಲ್ಲಿಯ ರಾಜಕೀಯವನ್ನೆಲ್ಲಾ ವಿಚಾರಿಸಿ ತಿಳಿದುಕೊಂಡನು

ತಲಚೇರಿಯು ಇಂಗ್ಲೀಷರ ಬಲವಾದ ಸೈನ್ಯವಿರುವ ಸ್ಥಳ ಕಲ್ಲೀಕೋಟೆ, ಕನ್ನಾನೂರು ಮುಂತಾದುವುಗಳು ಟಿಪ್ಪೂಸುಲ್ತಾನರ ಪ್ರಭಾವವಿರುವ ಕೋಟೆಗಳು ಈ ಸಮಯದಲ್ಲಿ ಸುಲ್ತಾನರೂ-- ಇಂಗ್ಲೀಷರೂ ಸ್ನೇಹದಿಂದ ಇದ್ದಾರೆ ಆದರೆ ಒಳಗೊಳಗೇ ದ್ವೇಷವು ಉರಿಯುತ್ತದೆ ಇದೆಲ್ಲವನ್ನೂ ತಿಳಿದುಕೊಂಡನು ವ್ಯಾಪಾರದ ನೆವದಿಂದ ಎಲ್ಲ ಊರುಗಳಿಗೂ ಹೋಗಿ ಇಯಜ್‌ಖಾನರ ಸಮಾಚಾರವೇನಾದರೂ ಇದೆಯೋ ಎಂದು ನೋಡಿದನು ಇಲ್ಲಿ ಅನೇಕ ರಾಜರುಗಳ ರಾಜ್ಯಗಳಿವೆ ಅಲ್ಲೆಲ್ಲಾ ಹೋಗಿ ಹುಡುಕಿದನು ಅನಂತಶಯನಕ್ಕೂ-ಕೊಚ್ಚಿಗೂ ಹೋಗಬೇಕೆಂದುಕೊಂಡನು.

ಈ ಅಲ್ಲೀಸೇಟ್ ಎಂಬುವನಾರೋ, ಅವನನ್ನು ಭೇಟಿ ಮಾಡಿಯೇ ಬಿಡಬೇಕೆಂದು ಸಂಕಲ್ಪಿಸಿದನು ಕನ್ನಾನೂರಿನಲ್ಲಿ ಒಬ್ಬ ರಾಣಿ ಇದ್ದಾಳೆ ಅವಳ ಪ್ರಸಿದ್ಧಿಯು ಮಲಬಾರಿನಲ್ಲೆಲ್ಲಾ ಇದೆ ಆ ರಾಣಿಯ ಹೆಸರು "ಬೀಬಿ" ಯಾವ ರಾಜ್ಯದಲ್ಲಿರಲಿ-ಯಾವ ರಾಜರ ರಾಜ್ಯವಾಗಿರಲಿ, ಅಲ್ಲಿರುವ ಮಾಪಿಳ್ಳೆಯವರಿಗೆಲ್ಲಾ "ಬೀಬಿ"ಯೇ ಮಹಾರಾಣಿ ! ಈ ನೀರಿನ ಮೇಲೆ ದೋಣಿಗಳಲ್ಲಿ ನಡೆಯುವ ವ್ಯಾಪಾರವೆಲ್ಲಾ ಬೀಬಿಯದೇ ಎಂದು ಅನೇಕರು ಮಾತನಾಡಿಕೊಳ್ಳುತ್ತಾರೆ ಕನ್ನಾನೂರಿನಲ್ಲಿಯೂ, ಕೋಟೆ ಬಂದರಿನಲ್ಲಿಯೂ ಅಲ್ಲೀಸೇಟನ ದೊಡ್ಡ ದೊಡ್ಡ ಗಡಂಗುಗಳಿವೆ. ಭಕ್ಷಿಯು ಅಲ್ಲಿ ಹೋಗಿ ಮೆಣಸಿನ ವ್ಯಾಪಾರಕ್ಕೆ ಆರಂಭಿಸಿದನು ಅಲ್ಲೀಸೇಟರ ಗಡಂಗಿನಲ್ಲಿ ಒಬ್ಬ ಬ್ರಾಹ್ಮಣನು ಗುಮಾಸ್ತನಾಗಿದ್ದನು ಸ್ವಲ್ಪ ಅವನ ಸ್ನೇಹ ಮಾಡಿಕೊಂಡನು. ಮಧ್ಯಾಹ್ನಾನಂತರ ಅವನ ಮನೆಗೆ ಹುಡುಕಿಕೊಂಡು ಹೋದನು ಭಕ್ಷಿಯು ತಾನು ಮಂಗಳೂರು ಕಡೆಯವನೆಂದೂ ಈಗ ಹೊಸದಾಗಿ ವ್ಯಾಪಾರವನ್ನು ಆರಂಭಿಸುವುದಾಗಿಯೂ, ಅದಕ್ಕೆ ತನ್ನ ಕಾರ್ಯಸ್ಥನಾಗಿ ಈ ಮಲೆಯಾಳದಲ್ಲಿ ಕೆಲಸ ಮಾಡಿದರೆ

ಹೆಚ್ಚು ಸಂಬಳ ಕೊಡುವುದಾಗಿಯೂ ಹೇಳಿದನು ಆ ಬ್ರಾಹ್ಮಣನ ಹೆಸರು ವೈದ್ಯನಾಥಯ್ಯ ಆತನು "ಅಯ್ಯೋ, ಸಾಹೇಬರೇ! ನಿಮ್ಮ ವ್ಯಾಪಾರವೆಲ್ಲಿ? ಅಲ್ಲೀ ಸೇಟರ ವ್ಯಾಪಾರವೆಲ್ಲಿ? ಸೇಟರ ವ್ಯಾಪಾರಕ್ಕೆ ಸೇರಿದವರಾರೂ ನಿಮಗೆ ಕೆಲಸಕ್ಕೆ ದೊರಕಲಾರರು ಅವರು ಕೊಡುವಷ್ಟು ಸಂಬಳ ಮತ್ತಾರೂ ಕೊಡಲಾರರು!" ಎಂದನು

ಭಕ್ಷಿ—ಸೇಟ್‌ರವರದು ಎಷ್ಟು ದೋಣಿಗಳಿವೆ

ಐಯ್ಯರ್—ಸಾವಿರಾರು ಇವೆ! ದೋಣಿಗಳು—, ಪತ್ತೆಮಾರಿಗಳು—, ಮೂರು ನಾಲ್ಕು ಜಹಜುಗಳೂ ಇವೆ

ಭಕ್ಷಿ—ಇದರಲ್ಲಿ ನಡೆಯುವ ವ್ಯಾಪಾರವೇನು?

ಅಯ್ಯರ್—ಮೆಣಸು, ಯಾಲಕ್ಕಿ, ಮೀನುಗಳು, ಹದಮಾಡಿದ ಚರ್ಮ ಇವೆಲ್ಲವೂ ವ್ಯಾಪಾರ ನಡೆಯುತ್ತವೆ ಮತ್ತು ಇಂಗ್ಲೀಷರು ತಮ್ಮ ಕೋಠಿಗಳಿಗೆಲ್ಲಾ ಸೇಟರ ದೋಣಿಗಳಲ್ಲಿಯೇ ಸಾಮಾನು ಸಾಗಿಸುತ್ತಾರೆ ಮದ್ದು ಗುಂಡುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ರವಾನಿಸುತ್ತಾರೆ

ಭಕ್ಷಿ—ನಿಮ್ಮ ಸೇಟರ ವ್ಯಾಪಾರವು ಇಷ್ಟೆಯೋ?

ಅಯ್ಯರ್—ಸೇಟರದು ಹರಬಾಬು ವ್ಯಾಪಾರವಿದೆ ಚಿನ್ನ, ಬೆಳ್ಳಿ, ಮುತ್ತು, ವಜ್ರಗಳು, ಜವಾಹಿರಿಗಳು, ರೇಷ್ಮೆ ಬಟ್ಟೆಗಳು, ಪೀತಾಂಬರಗಳು ಇದಲ್ಲ ಮಾರಾಟವಾಗುತ್ತವೆ, ಕಾಶ್ಮೀರದಿಂದ ಅರಬ್ಬೀದೇಶದಿಂದ ವ್ಯಾಪಾರಿಗಳು ಬರುತ್ತಾರೆ ಇಲ್ಲಿರುವ ರಾಜರಲ್ಲೆಲ್ಲಾ ಸೇಟರು ಸ್ವತಃ ಜವಾಹಿರೀ ವ್ಯಾಪಾರವನ್ನು ಮಾಡುತ್ತಾರೆ ಅನೇಕ ರಾಜರು ಸೇಟರಲ್ಲಿ ಹಣ ಸಾಲ ಮಾಡಿದ್ದಾರೆಂದು ಕೂಡ ವದಂತಿ ಇದೆ

ಭಕ್ಷಿ—ತಲಚೇರಿಯಲ್ಲಿ ಈ ವ್ಯಾಪಾರವನ್ನೆಲ್ಲಾ ಬೀಬಿರಾಣಿಯವರದು ಎಂದು ಹೇಳುತ್ತಾರೆ ಸೇಟರು ರಾಣಿಯವರ ಕಾರ್ಯಕರ್ತರೆಂದು ಮಾತನಾಡಿಕೊಳ್ಳುತ್ತಾರೆ

ಅಯ್ಯರ್—ಅದೆಲ್ಲಾ ನಿಜವೆಂದು ಹೇಳಲಾಗುವುದಿಲ್ಲ ಬೀಬಿ ರಾಣಿಯವರಿಗೂ ನಮ್ಮ ಸೇಟರಿಗೂ ಬಹಳ ಸ್ನೇಹ

ಭಕ್ಷಿ—ಸೇಟರಿಗೆ ಮದುವೆಯಾಗಿದೆಯೋ?

ಅಯ್ಯರ್—ಅದೆಲ್ಲಾ ನಮಗೇನು ಗೊತ್ತು? ಮುಸಲ್ಮಾನರ ಸಮಾಚಾರ ನಾವು ಬ್ರಾಹ್ಮಣರು ಅದನ್ನೆಲ್ಲಾ ಹುಡುಕಿಕೊಂಡು ಹೊರಟರೆ ತಲೆ ಹಾರಿಸಿ ಬಿಡುತ್ತಾರೆ

ಭಕ್ಷಿ—ನನಗೂ ಅದೆಲ್ಲಾ ಬೇಕಾಗಿಲ್ಲ ನೀನು ನನಗೆ ಒಂದು ಬಾರಿ ಆ ಸೇಟರ ಭೇಟಿ ಮಾಡಿಸಬಲ್ಲೆಯಾ?

ಅಯ್ಯರ್—ಅದು ಅಸಾಧ್ಯವಾದ ಕಲಸ ! ನೀನು ಒಂದು ಸಾವಿರ ರೂಪಾಯಿ ಗಳನ್ನು ಕೊಟ್ಟರೂ ಅದು ನನ್ನಿಂದ ಆಗದು ಎಷ್ಟೋ ಮಂದಿ ಇಂಗ್ಲೀಷ್ ಸರದಾರರು ಅವರ ಭೇಟಿ ಮಾಡಬೇಕೆಂದು ತಲೆ ಕೆಳಗಾಗಿದ್ದಾರೆ ಊಹೂ ! ಟಿಪ್ಪೂಸುಲ್ತಾನರು ತಮ್ಮ ಕಡೆ ವಕೀಲರನ್ನು ಕಳಿಸಿದ್ದಾರೆ ಊಹೂ !

ಭಕ್ಷಿ—ಓಹೋ ! ಇಂಗ್ಲಿಷ್ ಸರದಾರರಿಗೂ, ಸುಲ್ತಾನರಿಗೂ ಈ ಸೇಟರಿಂದ ಏನಾಗಬೇಕು ? ನಿಮ್ಮ ಸೇಟರು ರಾಜಕೀಯ ವ್ಯಕ್ತಿಗಳೇನು ?

ಅಯ್ಯರ್—ಅವರಿಗೂ ರಾಜಕೀಯಕ್ಕೂ ಯಾವ ಸಂಬಂಧವೂ ಇಲ್ಲ. ಆದರೆ ಯಾವುದಾದರೂ ಸಂಧಾನಕ್ಕೆ ಉಪಯೋಗಿಸಬೇಕೆಂದು ಎಲ್ಲರಿಗೂ ಆಶೆ !

ಭಕ್ಷಿ—ಸೇಟರ ಅಭಿಪ್ರಾಯವೇನು ?

ಅಯ್ಯರ್—ಸೇಟರಿಗೆ ಸಂಧಾನದಲ್ಲಿ ನಂಬಿಕೆ ಇಲ್ಲ ಇಂಗ್ಲೀಷರೂ ಸುಲ್ತಾನರೂ ಮರಾಟೆಯವರೂ ಅವರವರ ಶಕ್ತಿ ಇದ್ದಷ್ಟು ಸೈನ್ಯ ಕಟ್ಟಿ ಯುದ್ಧ ಮಾಡಿ ಬಿಡಲ ! ಕೊನೆಯವರಿಗೂ ಯುದ್ಧವಾಗಲಿ ಯಾರು ಜಯಿಸುತ್ತಾರೋ ಅವರದು ರಾಜ್ಯ ಎನ್ನುತ್ತಾರೆ ಸೇಟರು !

ಭಕ್ಷಿ—ಅದು ಸರಿಯಾಗಿಯೇ ಇದೆ. ಹೇಗಾದರೂ ನಾನು ಸೇಟರ ಭೇಟಿ ಮಾಡಬೇಕಲ್ಲ ?

ಅಯ್ಯರ್—ನನ್ನಿಂದ ನಿನ್ನ ಕೆಲಸವಾಗುವುದಿಲ್ಲ ನೀನು ಯಾರೋ ರಾಜಕೀಯ ಪುರುಷನಂತ ಕಾಣುತ್ತಿ ನಿನ್ನೊಡನೆ ಮಾತನಾಡುವುದಕ್ಕೆ ನನಗೆ ಭಯ ! ಈ ಮುಸಲ್ಮಾನರ ಸಹವಾಸ ಬಲು ಕಷ್ಟ ! ಇತ್ತೀಚೆಗೆ ಯಾರೋ ಸರದಾರರನ್ನೇ ಟಿಪ್ಪೂ ಸುಲ್ತಾನರು ಶೂಲಕ್ಕೇರಿಸಿದರೆಂದು ಕೇಳಿದೆ ಈ ತಂಟೆಗೆ ನನ್ನನ್ನು ಗಂಟು ಹಾಕಬೇಡ ನೀನು ಮುಸಲ್ಮಾನ ಹೇಗಾದರೂ ತಪ್ಪಿಸಿಕೊಳ್ಳುತ್ತಿ ನಾನು ಬ್ರಾಹ್ಮಣ ನನಗೆ ಬರುತ್ತೆ ಪೀಕಲಾಟ

ಭಕ್ಷಿ—ಇಲ್ಲ ! ಸ್ವಾಮಿ ! ನನಗೂ ಆ ತಂಟೆ ಬೇಡ ತೆಪ್ಪಗೆ ಹೋಗುತ್ತೇನೆ. ಆದರೆ ಒಂದು ಮಾತು ಆ ಅಲ್ಲೀಸೇಟರು ಯಾವ ದೇಶದವರು ? ಅವರು ನಮ್ಮ ದೇಶದವರೆಂದು ಕೇಳಿದ್ದೇನೆ

ಅಯ್ಯರ್—ಅಯ್ಯೋ, ಹುಚ್ಚ ! ಅವರು ಶುದ್ಧ ಅರಬ್ಬೀ ದೇಶದವರು

ಅಲ್ಲಿಗೆ ಭಕ್ಷಿಯ ಆಸೆಯು ಭಗ್ನವಾಗಿ ಹೋಯಿತು ಈ ಅಲ್ಲೀಸೇಟನು ಇಯಜ್‌ಖಾನನಲ್ಲ ನಾನೇಕೆ ಇವನನ್ನು ನೋಡಬೇಕು ? ಎಂದುಕೊಂಡು ಹೊರಟು ಹೋದನು ಹಾಗಾದರೆ ಇಯಜ್‌ಖಾನರೆಲ್ಲಿ ? ಖಾನರು ಮಲಬಾರಿಗೆ ಬಂದರೆಂಬುದ ರಲ್ಲಿ ಸಂಧೇಹವೇ ಇಲ್ಲ. ಅನಂತಶಯನ, ಕೊಚ್ಚಿ ಹಿಂದುಗಳ ರಾಜ್ಯ, ಅಲ್ಲಿ ಇಯಜ್

ಖಾನರು ಹೋಗಿ ಸೇರಿಕೊಂಡಿರಲಾರರು ಇಂಗ್ಲೀಷರು ಪ್ರಬಲವಾಗಿರುವ ಕಡೆ ಖಾನರು ಒಂದು ದಿನವೂ ಇರುವುದಿಲ್ಲ. ಈ ಮಲಬಾರಿನಲ್ಲಿರುವ ಇತರ ರಾಜರೆಲ್ಲಾ ಹೇಡಿಗಳು ಒಬ್ಬೊಬ್ಬರಾಗಿ ಹೋಗಿ ಇಂಗ್ಲೀಷರ ಜೊತೆಗೆ ಸೇರಿಕೊಳ್ಳುತ್ತಿದ್ದಾರೆ ಈ ಮಾಪಳಾ ಜನರು ಮಾತ್ರ ಇಂಗ್ಲೀಷರಿಗೆ ಬಗ್ಗುವವರಲ್ಲ ಅವರಿಗೂ ಇಂಗ್ಲೀಷರಿಗೂ ಬದ್ಧದ್ವೇಷ ಅವರ ರಾಣಿಯಾದ ಬೀಬೀ ರಾಣಿಯೊಬ್ಬಳು ಸ್ವತಂತ್ರಳಾಗಿದ್ದಾಳೆ ಖಾನರಿದ್ದರೆ ಇಲ್ಲೇ ಇರಬೇಕು. ಅವರಿಲ್ಲಿ ಅಜ್ಞಾತವೇಷದಲ್ಲಿರಬಹುದೇ ? ಖಾನರು ಇಷ್ಟು ದಿನ ಗುಪ್ತ ವೇಷದಲ್ಲಿರುವುದು ಅಸಂಭವ. ಮಹಾಪುರುಷ ಲಕ್ಷಣಗಳಿರುವ ಆ ಮನುಷ್ಯನನ್ನು ಯಾರುತಾನೇ ಸಾಮಾನ್ಯ ಮನುಷ್ಯನೆಂದುಕೊಂಡಾರು ? ಇರಲಿ. ಇನ್ನೂ ನಾನು ಸರಿಯಾಗಿ ಪರಿಶೋಧನೆ ಮಾಡಿಲ್ಲ ನೋಡೋಣ ಎಂದುಕೊಂಡನು.

ಭಕ್ಷಿಯು ಇಯಜ್‌ಖಾನನನ್ನು ಹುಡುಕುತ್ತಿರಲಿ ! ಅಲ್ಲೀಸೇಟರ ಭೇಟಿಗೆ ಪ್ರಯತ್ನ ಮಾಡುತ್ತಿರಲಿ ! ವಾಚಕರು ಈಗಾಗಲೇ ಈ ಅಲ್ಲೀಸೇಟ್ ಎಂಬುವನೇ ಇಯಜ್‌ಖಾನನೆಂದು ಖಚಿತಮಾಡಿಕೊಂಡಿದ್ದಾರೆ ಇಯಜ್‌ಖಾನನು ಇಲ್ಲಿಗೆ ಹೇಗೆ ಬಂದನು ? ಇಲ್ಲಿ ಅಲ್ಲೀಸೇಟ್ ಆದುದು ಹೇಗೆ ಎಂಬುದನ್ನು ತಿಳಿದುಕೊಳ್ಳಲು ವಾಚಕರು ಆತುರರಾಗಿದ್ದಾರೆ ಇಯಜ್‌ಖಾನನು ನಗರದಿಂದ ಹೊರಟು ಫ್ರೆಂಚರ ರೇವು ಪಟ್ಟಣವಾದ ಮಾಹೀ ಎಂಬ ಪಟ್ಟಣಕ್ಕೆ ಹೋಗಿ ಸೇರಿದನು ಅಲ್ಲಿ ಕೆಲವು ದಿವಸಗಳು ಗುಪ್ತವಾಗಿದ್ದನು ಮಾಹಿಯಲ್ಲಿ ತಾನೊಂದು ಮನೆಯನ್ನು ಮಾಡಿಕೊಳ್ಳಬೇಕೆಂದೂ, ಮಲಬಾರಿನಲ್ಲಿ ಸಂಚಾರ ಮಾಡಲು ಒಂದೆರಡು ಪತ್ತೇಮಾರಿಗಳನ್ನು ಕೊಂಡುಕೊಳ್ಳಬೇಕೆಂದೂ ನಿಶ್ಚಯಿಸಿದನು ಆದರೆ ಅಲ್ಲಿ ವಾಸಮಾಡಬೇಕಾದರೆ ಅಲ್ಲಿದ್ದ ಫ್ರೆಂಚ್ ಗವರ್ನರರ ಅಪ್ಪಣೆಯು ಬೇಕಾಗಿತ್ತು ಖಾನನು ಗವರ್ನರರನ್ನು ಹೋಗಿ ಭೇಟಿ ಮಾಡಿದನು. ತಾನು ಮಾಹಿಯಲ್ಲಿ ವಾಸಮಾಡಲು ಅಪ್ಪಣೆಯನ್ನು ಬೇಡಿದನು ಗವರ್ನರರ ಹತ್ತಿರ ತನ್ನ ಪರಿಚಯವನ್ನು ಮುಚ್ಚಿಡುವುದು ಅಷ್ಟು ಬುದ್ಧಿವಂತಿಕೆಯಲ್ಲವೆಂದು ಇಯಜ್‌ಖಾನನು ಆಲೋಚಿಸಿದನು ಗವರ್ನರರಲ್ಲಿ ತನ್ನ ಪೂರ್ವ ವೃತ್ತಾಂತವನ್ನೆಲ್ಲಾ ಯಥೋಚಿತವಾಗಿ ತಿಳಿಸಿ ತನ್ನ ಪರಿಚಯವು ಯಾರಿಗೂ ತಿಳಿಯದಂತೆ ಇಡಬೇಕೆಂದೂ, ಗವರ್ನರರು ತನ್ನನ್ನು ಪೂರ್ಣವಾಗಿ ನಂಬಿ ಸ್ನೇಹಿತನಂತೆ ಭಾವಿಸುವುದಾದರೆ ಫ್ರೆಂಚರಿಗೆ ಆಗುವ ಸಮಸ್ತ ಸಹಾಯವನ್ನೂ ಮಾಡುವುದಾಗಿಯೂ ಹೇಳಿದನು ಇಲ್ಲದಿದ್ದರೆ ತಾನು ಮಾಹಿಯನ್ನು ಬಿಟ್ಟು ಹೊರಟು ಹೋಗುವುದಾಗಿ ತಿಳಿಸಿದನು ಇಯಜ್‌ಖಾನನ ಮುಖವನ್ನು ನೋಡುತ್ತಲೇ ಗವರ್ನರನಿಗೆ ಗೌರವವೂ, ವಿಶ್ವಾಸವೂ ಹುಟ್ಟಿದುವು ಗವರ್ನರರು ಖಾನನಿಗೆ ಎಲ್ಲ ವಿಧವಾದ ಸಹಾಯಗಳನ್ನು ನೀಡುವುದಾಗಿಯೂ, ಅವನ ಪರಿಚಯವನ್ನು ಗುಪ್ತವಾಗಿಡುವುದಾಗಿಯೂ ಅಭಯವಿತ್ತನು. ಕೆಲವು ದಿನಗಳಲ್ಲಿಯೇ ಅವರಿಬ್ಬರೂ ಪರಮ

ಮಿತ್ರರಾದರು ಇಯಜ್‍ಖಾನನು ಮಲಬಾರಿನಲ್ಲಿ ಸಂಚಾರಮಾಡುವುದನ್ನು ನಿಶ್ಚ ಯಿಸಿದನು ಮಾಹಿಯಲ್ಲಿದ್ದ ಗವರ್ನರನು ಬೇಕಾದಷ್ಟು ಹಣ ಸಹಾಯ ಮಾಡು ವುದಾಗಿಯೂ ಒಪ್ಪಿದನು ಖಾನನು ಅಲ್ಲಿಂದ ತಲಚೇರಿಗೆ ಸಾಮಾನ್ಯ ಮನುಷ್ಯ ನಂತೆ ಪ್ರಯಾಣ ಮಾಡಿದನು ತಲಚೇರಿಯಲ್ಲಿ ಒಬ್ಬ ರಾಜನಿದ್ದಾನೆ ಅವನು ಶಾಂತಸ್ವಭಾವದವನು ಇಂಗ್ಲೀಷರೊಡನೆ ಸ್ನೇಹವನ್ನು ಬೆಳೆಸಿದ್ದನು ನಾಯರು ಜನರೆಲ್ಲರೂ ಆ ರಾಜನಲ್ಲಿ ವಿಶ್ವಾಸವುಳ್ಳವರಾಗಿದ್ದರು ಮಾಪಳಾಜನರು ಅಷ್ಟು ವಿಶ್ವಾಸವುಳ್ಳವರಾಗಿರಲಿಲ್ಲ ಆದರೂ ಆ ರಾಜನಲ್ಲಿ ಅವರಿಗೆ ಗೌರವವಿತ್ತು ಅವ ರಿಗೂ ಕನ್ನಾನೂರಿನ ಅಲ್ಲೀರಾಜನಿಗೂ ವಿರೋಧವಿತ್ತು ಅಲ್ಲೀರಾಜನು ವಿಷಯ ಲೋಲುಪನಾಗಿದ್ದನು ಒಳ್ಳೇ ಯೌವನದಲ್ಲಿ ಮೃತನಾದನು ತಲಿಚೇರಿಯ ರಾಜನು ಬೀಬೀರಾಣಿಯನ್ನು ತಾನು ಮದುವೆಯಾಗಬೇಕೆಂದು ಎಷ್ಟೋ ಸನ್ನಾಹಗಳನ್ನು ನಡೆಸುತ್ತಿದ್ದನು ಅವನು ಸಫಲ ಮನೋರಥನಾಗಲಿಲ್ಲ.

ಬೀಬೀರಾಣಿಯು ಪತಿವಿಯೋಗದಿಂದ ಬಹಳ ದುಃಖಿತಳಾಗಿದ್ದಳು ಆ ತರುಣದಲ್ಲಿಯೇ, ತಲಚೇರಿಯ ರಾಜನು ವಿವಾಹ ಸಂಧಾನವನ್ನು ನಡೆಸಿದ್ದರಿಂದ ಬೀಬಿಯು ಖತಿಗೊಂಡಳು ಸ್ವಲ್ಪ ಕಾಲವು ಕಳೆದಮೇಲೆ ರಾಜಕೀಯ ಕಾರಣ ಗಳಿಂದ ಕನ್ನಾನೂರಿನವರಿಗೂ, ತಲಚೇರಿಯವರಿಗೂ ವಿರೋಧವು ಬೆಳೆದುಹೋಗಿತ್ತು. ಇದೆಲ್ಲಾ ಇಯಜ್‍ಖಾನನಿಗೆ ತಿಳಿಯಿತು ಖಾನನು ಇಷ್ಟರೊಳಗಾಗಿ ತಲಚೇರಿ ಯಲ್ಲಿಯೂ, ಕನ್ನಾನೂರಿನಲ್ಲಿಯೂ ಒಂದೊಂದು ಕೋಠಿಗಳನ್ನು ತೆರೆದಿದ್ದನು ಅಲ್ಲಿ ವ್ಯಾಪಾರವು ನಡೆಯುತ್ತಿದ್ದಿತು ಅನೇಕ ದೋಣಿಗಳನ್ನೂ, ಪತ್ತೇಮಾರಿಗಳನ್ನೂ ಕೊಂಡುಕೊಂಡಿದ್ದನು ಖಾನನ ಈ ಕಾರ್ಯಗಳಲ್ಲೆಲ್ಲಾ ಬಹಳ ಶಿಸ್ತು ಇತ್ತು ಇಂಗ್ಲೀಷರ ಕೋಠಿಗಳ ವ್ಯಾಪಾರಕ್ಕಿಂತಲೂ, ಖಾನನ ವ್ಯಾಪಾರವು ಬಹಳ ಪ್ರವೃದ್ಧ ಮಾನವಾಗಿತ್ತು ಇಂಗ್ಲೀಷರು ಈಗ ರಾಜ್ಯಸ್ಥಾಪನೆಯಲ್ಲಿ ತೊಡಗಿದ್ದಾರೆ ಅವರಿಗೆ ಅಷ್ಟು ವ್ಯಾಪಾರದಲ್ಲಿ ಆಸಕ್ತಿಯಿಲ್ಲ ಇಂಗ್ಲೀಷರು ತಮ್ಮ ಅಲ್ಪ ಸ್ವಲ್ಪ ವ್ಯಾಪಾರ ವನ್ನು ಖಾನನ ಕೋಠಿಗಳಿಗೇ ವಹಿಸುತ್ತಿದ್ದರು ಇದಕ್ಕೆ ಮತ್ತೊಂದು ಕಾರಣವಿತ್ತು ಈ ಕೋಠಿಗಳ ಕಾರ್ಯಕಾರಿಗಳೆಲ್ಲಾ ಬಹುಮಟ್ಟಿಗೆ ಬ್ರಾಹ್ಮಣರು ಇವರಲ್ಲಿ ಅನೇ ಕರು ಇಂಗ್ಲೀಷರ ಕೋಠಿಗಳಲ್ಲಿ ತಯಾರಾದವರು ಇವರಿಗೆ ಇಂಗ್ಲೀಷ್ ಮತ್ತು ಫ್ರೆಂಚ್ ಭಾಷೆಗಳು ಚೆನ್ನಾಗಿ ಬರುತ್ತಿದ್ದುವು ಒಂದೆರಡು ಬಾರಿ ಇಂಗ್ಲೀಷರು ಬೊಂಬಾಯಿನಿಂದ ಮದ್ದು ಗುಂಡುಗಳನ್ನು ಸಾಗಿಸಬೇಕಾಗಿತ್ತು ಹೇರಳವಾದ ಹಣ ವನ್ನು ಕೊಟ್ಟು, ಈ ಅಲ್ಲೀಸೇಟರ ದೋಣಿಗಳನ್ನು ಗೊತ್ತುಮಾಡಿದರು ಅವರ ಸಾಮಾನುಗಳು ಕರಾರ್ವಾಕ ಕಾಲಕ್ಕೆ ಸರಿಯಾಗಿ ಬಂದು ತಲಪಿದವು ಒಂದೆರಡು ಬಾರಿ ಇಂಗ್ಲೀಷ್ ರಾಯಭಾರಿಗಳು ಮಾಹೀಗೆ ಮತ್ತು ಗೋವಾಕ್ಕೆ ಪ್ರಯಾಣಮಾಡ

ಬೇಕಾಯಿತು ಅಲ್ಲೀಸೇಟರ ದೋಣಿಗಳನ್ನೇ ಗೊತ್ತುಮಾಡಿಕೊಂಡರು ಸೇಟರ ಕಡೆ ಜನರ ನಡವಳಿಕೆಗಳಿಂದ ಆ ಸರದಾರರು ಬಹಳ ತೃಪ್ತರಾದರು ಕಲವು ಸಂದರ್ಭಗಳಲ್ಲಿ ಇಂಗ್ಲೀಷ್ ಅಧಿಕಾರಿಗಳು ತಮ್ಮ ಸರ್ಕಾರೀ ಹಣವನ್ನು ಸೇಟರ ಕೋಠಿಗಳ ಮೂಲಕ ರವಾನಿಸುತ್ತಿದ್ದರು ಈ ಎಲ್ಲ ಕಾರಣಗಳಿಂದ ಅಲ್ಲೀಸೇಠರ ಕೋಠಿಗಳು ಮಂಗಳೂರು, ಗೋವಾ, ಬೊಂಬಾಯಿಗಳಲ್ಲಿ ತೆರೆಯಲ್ಪಟ್ಟವು

ಒಂದು ದಿನ ತಲಚೇರಿಯಲ್ಲಿದ್ದ ಇಂಗ್ಲೀಷ್ ಅಧಿಕಾರಿಯು ಅಲ್ಲೀ ಸೇಠರನ್ನು ನೋಡಬೇಕೆಂದು ಹೇಳಿ ಕಳುಹಿಸಿದನು ಅಲ್ಲೀ ಸೇಠರು ಹೋಗಿ ಅಧಿಕಾರಿಯನ್ನು ಭೇಟಿ ಮಾಡಿದರು ಆ ಅಧಿಕಾರಿಯು ಬಹಳ ಉಪಚಾರ ಮಾಡಿ ಗೌರವಿಸಿದನು

ಅಧಿಕಾರಿ—ಸೇಠ್ ಸಾಹೇಬರೇ ! ನಿಮ್ಮ ವ್ಯಾಪಾರವು ಚೆನ್ನಾಗಿದೆಯೋ ?

ಸೇಠ್—ಚೆನ್ನಾಗಿದೆ !

ಅಧಿಕಾರಿ—ದೇಶದಲ್ಲಿ ಈಗ ಯುದ್ಧ ವಿಗ್ರಹಗಳ ಕಾಲ ! ನಿಮ್ಮ ನಿಮ್ಮ ವ್ಯಾಪಾರವು ಸುಸೂತ್ರವಾಗಿ ನಡೆಯುತ್ತದೆಯೇ ?

ಸೇಠ್—ಹೌದು, ಲಾರ್ಡ್ ! ನೀವು ಇಂಗ್ಲೀಷರು ವ್ಯಾಪಾರದಲ್ಲಿ ಒಲುಗಟ್ಟಿಗರು ನೀವು ವ್ಯಾಪಾರವನ್ನು ಬಿಟ್ಟು ರಾಜ್ಯಸ್ಥಾಪನೆಯಲ್ಲಿ ತೊಡಗಿದ್ದೀರಿ ಚೆನ್ನಾಗಿ ನಡೆಸಿದರೆ ಕ್ರಮೇಣ ವ್ಯಾಪಾರವೆಲ್ಲಾ ನಮ್ಮ ಕೈಗೇ ಬರುತ್ತದೆ

ಅಧಿಕಾರಿ—ಬಹಳ ಸರಿ ! ಆದರೆ ಇಲ್ಲಿ ಯುದ್ಧಗಳಾದರೆ ಅವರವರ ಸರಹದ್ದಿನೊಳಗಿರುವ ನಿಮ್ಮ ದೋಣಿಗಳನ್ನು ಅವರವರೇ ಹಿಡಿದುಕೊಳ್ಳಬಹುದು ನಿಮ್ಮ ಹಣವನ್ನು ಕೂಡ ಅವರುಗಳು ವಶಪಡಿಸಿಕೊಳ್ಳಬಹುದು

ಸೇಠ್—ಹಾಗೇ ಆಗುತ್ತದೆಂದು ನನಗೆ ತೋರುತ್ತದೆ ಆದರಿಂದ ನಮಗೆ ಬಹಳ ನಷ್ಟವಾಗುವುದಿಲ್ಲ ನಾವು ಪ್ರತಿರೋಧ ಮಾಡುವುದಿಲ್ಲ ದೋಣಿಗಳನ್ನು ತೆಗೆದುಕೊಳ್ಳಲಿ ವ್ಯಾಪಾರದಲ್ಲಿ ಚಲಾವಣೆಯಲ್ಲಿರುವ ಹಣವನ್ನು ಅವರುಗಳು ತೆಗೆದುಕೊಳ್ಳಬಹುದು ನಮ್ಮಲ್ಲಿ ಇನ್ನೂ ಹಣವು ಶೇಖರವಾಗಿಲ್ಲ ಒಂದು ಪಕ್ಷ ಶೇಖರಿಸಲ್ಪಟ್ಟರೆ ನಾವು ಈ ಸ್ಥಳೀಯ ರಾಜರುಗಳಿಗೆ ಸಾಲ ಕೊಡುತ್ತೇವೆ ಆಮೇಲೆ ಯಾವ ರಾಜ್ಯವು ಸ್ಥಾಪಿಸಲ್ಪಟ್ಟರೂ ಈ ರಾಜರುಗಳಿಗೆ ಚ್ಯುತಿ ಇಲ್ಲ. ನಮ್ಮ ಹಣ ನಮಗೆ ಬರುತ್ತೆ ಇಂಗ್ಲೀಷರು ವ್ಯಾಪಾರದ ಜನಾಂಗ. ಅವರು ನಮ್ಮ ಹಣವನ್ನು ದೋಚುವುದಿಲ್ಲವೆಂಬುದು ನನ್ನ ನಂಬಿಕೆ

ಅಧಿಕಾರಿ—ಸೇಟರೇ ! ನೀವು ಒಳ್ಳೇ ಬುದ್ಧಿವಂತರು ವ್ಯಾಪಾರದ ಮರ್ಮವನ್ನೂ, ರಾಜಕೀಯವನ್ನೂ ಚೆನ್ನಾಗಿ ಅರಿತುಕೊಂಡಿದ್ದೀರಿ ಸುಲ್ತಾನರ ರಾಜ್ಯದಲ್ಲಿ ನಿಮ್ಮ ಕೋಠಿಗಳಿವೆಯೋ ?

ಸೇಠ್—ಇಲ್ಲ! ಮಂಗಳೂರಿನಲ್ಲಿ ಒಂದು ಕೋಠಿ ಇದೆ ಕಲ್ಲೀಕೋಟೆಯಲ್ಲಿ ಒಂದಿದೆ ಅಲ್ಲೆಲ್ಲಾ ವ್ಯಾಪಾರವೇನೂ ಇಲ್ಲ. ಸುಲ್ತಾನರಿಗೆ ವ್ಯಾಪಾರದ ಮೇಲೆ ಅಷ್ಟು ದೃಷ್ಟಿಯಿಲ್ಲ ಅವರ ಅತ್ಯಧಿಕ ತೆರಿಗೆಗಳನ್ನು ತೆರಬೇಕು ಹಾಗೆಯೇ ಕೊಡುತ್ತಿದ್ದೇವೆ. ನಾನು ಮುಸಲ್ಮಾನನಾದುದರಿಂದ ಸುಲ್ತಾನರು ನನ್ನನ್ನು ವಿರೋಧಿಸುವುದಿಲ್ಲ

ಅಧಿಕಾರಿ—ಸುಲ್ತಾನರಿಗೂ, ನಮಗೂ ಮಂಗಳೂರಿನ ಕರಾರು ಆಗಿರುವುದು ನಿಮಗೆ ಗೊತ್ತೇ ಇದೆಯಷ್ಟೆ!

ಸೇಠ್—ಗೊತ್ತಿದೆ ಅದರಿಂದಲೇ ಧೈರ್ಯನಾಗಿ ವ್ಯಾಪಾರ ನಡೆಸುತ್ತಿದ್ದೇವೆ. ಆದರೆ ಅದು ಬಹುಕಾಲ ನಿಲ್ಲುವುದಿಲ್ಲವೆಂದು ನನ್ನ ಭಾವನೆ

ಅಧಿಕಾರಿ—ಅದೇಕೆ? ಸುಲ್ತಾನರೂ, ಕಂಪನಿಯವರೂ ಸ್ನೇಹದಿಂದ ನಡೆದುಕೊಂಡರೆ ಈ ದೇಶಕ್ಕೆ ಸುಭಿಕ್ಷವಲ್ಲವೆ?

ಸೇಟ್—ಹೌದು, ಲಾರ್ಡ್! ಹಾಗೆ ಆಗುವ ಸಂಭವವಿಲ್ಲ. ಸುಲ್ತಾನರದು ದಕ್ಷಿಣದಲ್ಲಿ ಬಹು ವಿಸ್ತಾರವಾದ ರಾಜ್ಯ ಅವರಿಗೆ ಅಂತರಂಗದಲ್ಲಿ ಇಂಗ್ಲೀಷರನ್ನು ಕಂಡರಾಗದು ನೀವು ಅಷ್ಟೊಂದು ಪ್ರಭಾವಶಾಲಿಗಳಾದ ಸುಲ್ತಾನರನ್ನು ಇರಗೊಟ್ಟರೆ ದಕ್ಷಿಣದಲ್ಲಿ ನಿಮ್ಮ ರಾಜ್ಯವನ್ನು ಸ್ಥಾಪಿಸುವುದು ಸಾಧ್ಯವೇ ಇಲ್ಲ ಅಷ್ಟೇ ಅಲ್ಲ ಹಿಂದೂ ಜನರಿಗೆ ಸುಲ್ತಾನರನ್ನು ಕಂಡರಾಗದು!

ಅಧಿಕಾರಿ—ಸೇಟರೇ! ಒಂದು ಪಕ್ಷ ಕಂಪನಿಯವರಿಗೂ ಸುಲ್ತಾನರಿಗೂ ಯುದ್ಧವಾದರೆ ಯಾರಿಗೆ ಜಯವಾಗಬಹುದು?

ಸೇಟ್– ಅದನ್ನು ನಿರ್ಣಯಿಸುವುದು ಕಷ್ಟ! ಸುಲ್ತಾನರು ಸಾಮಾನ್ಯರಲ್ಲ. ಯುದ್ಧದಲ್ಲಿ ಮಹಾ ಪರಾಕ್ರಮಶಾಲಿಗಳು ಅವರಲ್ಲಿಯೂ ಬಹಳ ಬಲವಾದ ಸೈನ್ಯವಿದೆ

ಅಧಿಕಾರಿ—ನಿಮಗೂ ಅವರಿಗೂ ಯಾವ ಸಂಬಂಧವೂ ಇಲ್ಲವೋ!

ಸೇಟ್—ಇದುವರೆಗೆ ಇಲ್ಲ! ಆದರೆ ಅವರು ಈಗಲೇ ನಮ್ಮನ್ನು ವಿಚಾರಿಸಿ ತಿಳಿದುಕೊಂಡಿದ್ದಾರೆ ನಮ್ಮಿಂದ ಸ್ವಲ್ಪ ಸಾಲವನ್ನು ತೆಗೆಯಬೇಕೆಂದು ಒಂದೆರಡು ಬಾರಿ ಸಂಧಾನ ಮಾಡಿದ್ದಾರೆ.

ಅಧಿಕಾರಿ –ಕೊಡಲು ಒಪ್ಪಿದಿರೇನು?

ಸೇಟ್ —ಕೊಡುತಿದ್ದೆ ಅವರು ಸಾಲವನ್ನು ತೀರಿಸುವ ಭರವಸೆ ನನಗಿಲ್ಲ. ಒಂದು ಪಕ್ಷ ನಮ್ಮ ಸಾಲವನ್ನು ತೀರಿಸಬೇಕಾದರೂ ದೇಶವನ್ನು ಕೊಳ್ಳೇ ಹೊಡೆದು ನಮ್ಮ ಸಾಲವನ್ನು ತೀರಿಸಬೇಕು. ಆ ಹಣವನ್ನು ತೆಗೆದುಕೊಂಡರೆ ಜನರ ದ್ವೇಷಕ್ಕೆ ನಾವು ಪಾತ್ರರಾಗುತ್ತೇವೆ.

ಅಧಿಕಾರಿ—ಹಾಗಾದರೆ ನೀವು ಅವರಿಗೆ ಸಾಲ ಕೊಡುವುದಿಲ್ಲ

ಸೇಟ್—ಕೊಡುತ್ತೇವೆ ಜವಾಹಿರಿಗಳನ್ನು ತಂದಿಟ್ಟರೆ ಹೆಚ್ಚು ಬೆಲೆಯನ್ನು ಕೊಡುವುದಾಗಿ ಹೇಳಿದ್ದೇನೆ

ಈ ಅಧಿಕಾರಿಯು ಖಾನನನ್ನು ಬಹಳ ಮನ್ನಣೆ ಮಾಡಿ ಕಳುಹಿಸಿದನು "ಅಲ್ಲೀ ಸೇಟನು ಬಹು ಬುದ್ಧಿವಂತ, ಒಳ್ಳೆ ವ್ಯಾಪಾರದ ಗುಣಗಳಿವೆ ನಾನು ಈ ಹಿಂದೂಸ್ಥಾನದಲ್ಲಿ ಇಷ್ಟು ಬುದ್ಧಿವಂತನನ್ನು ಕಂಡಿಲ್ಲ ಈ ಯುದ್ಧ ಸಮಯದಲ್ಲಿ ಇಷ್ಟು ಧೈರ್ಯದಿಂದ ವ್ಯಾಪಾರ ಮಾಡುವ ಧೀರನನ್ನು ನೋಡಿಲ್ಲ ಶಾಬಾಷ್ !" ಎಂದುಕೊಂಡನು

ಅಲ್ಲೀ ಸೇಟ್ ಕನ್ನಾನೂರಿನ ರಾಣಿಯನ್ನು ಭೇಟಿ ಮಾಡಬೇಕೆಂದಿದ್ದನು ಅಷ್ಟೊಂದು ದೊಡ್ಡ ವ್ಯಾಪಾರಿಗೆ ರಾಣಿಯು ಭೇಟಿ ಕೊಡುವುದೇನೂ ಅತಿಶಯವಲ್ಲ

ಆದರೆ ಸೇಟನೇ ಹಿಂದೆಗೆಯುತ್ತಿದ್ದನು ರಾಣಿಯು ಅತುಳ ರೂಪವತಿಯೆಂದು ಕೇಳಿದ್ದೇನೆ. ವೀರರಮಣಿಯೆಂದು ಆ ಪ್ರಾಂತ್ಯದವರೆಲ್ಲರೂ ಹೇಳುತ್ತಿದ್ದರು ಆ ರಾಣಿಗೂ ಇಂಗ್ಲೀಷರಿಗೂ ಸ್ವಲ್ಪ ವಿರೋಧವಿದ್ದಂತೆ ತಿಳಿದಿದ್ದಿತು ರಾಣಿಗೆ ಟಿಪ್ಪೂ ಸುಲ್ತಾನರಲ್ಲಿ ಬಹಳ ಗೌರವವಿದೆಯೆಂದು ಜನರೆಲ್ಲರೂ ಅಂದುಕೊಳ್ಳುತ್ತಿದ್ದರು

ಅಲ್ಲೀಸೇಟನು ಕನ್ನಾನೂರಿನ ತನ್ನ ಕೋಠಿಯಲ್ಲಿ ಹೋಗಿ ಇಳಿದನು ರಾಣಿಯವರ ಭೇಟಿ ಮಾಡಬೇಕೆಂದು ಹೇಳಿಕಳಿಸಿದನು ರಾಣಿಯವರು ಬಹಳ ಆದರದಿಂದ ಭೇಟಿಯನ್ನು ಒಪ್ಪಿದರು ಸೇಟನು ರಾಣಿಯವರ ಅರಮನೆಗೆ ಹೋದನು ಅರಮನೆಯ ಹಜಾರದಲ್ಲಿ ಭೇಟಿಯ ಏರ್ಪಾಡಾಗಿತ್ತು. ಅಲ್ಲೀಸೇಟನು ನಜರುಗಳನ್ನು ಇಟ್ಟುಕೊಂಡು ಕಾದಿದ್ದನು ಬೀಬೀರಾಣಿಯು ಪರಿಜನರೊಡನೆ ಗಂಭೀರವಾಗಿ ಅಡಿಯಿಡುತ್ತಾ ಹಜಾರಕ್ಕೆ ಬಂದಳು ಅಲ್ಲೀಸೇಟ್ ಎದ್ದು ಸಲಾಂ ಮಾಡಿದನು ಬೀಬೀ ರಾಣಿಯು ನಸುನಗುತ್ತಾ ಸೇಟರ ಯೋಗಕ್ಷೇಮವನ್ನು ವಿಚಾರಿಸಿದಳು ಸೇಟರವರ ಭೇಟಿಯಿಂದ ಬಹಳ ಸಂತೋಷವಾಯಿತೆಂದು ಅರುಹಿದಳು ತನ್ನರಾಜ್ಯದಲ್ಲಿ ಸೇಟರ ವ್ಯಾಪಾರಕ್ಕೆ ಏನಾದರೂ ಸೌಲತ್ತುಗಳು ಬೇಕಾದಲ್ಲಿ ಒದಗಿಸುವುದಾಗಿ ವಚನವಿತ್ತಳು. ಸಂಪ್ರದಾಯ ಪ್ರಕಾರವಾಗಿ ಎಲ್ಲಾ ಪೂರೈಸಿದನಂತರ ರಾಣಿಯವರು ಸೇಟರನ್ನು ಬಹಳ ಮರ್ಯಾದೆಯಿಂದ ಬೀಳ್ಕೊಂಡು ಕಳುಹಿಸಿದರು ಮಾರನೆಯ ದಿನವೇ ರಾಣಿಯವರೂ ಆಪ್ತಸಚಿವರೂ ಒಂದು ಸೇಟರನ್ನು ಭೇಟಿಮಾಡಿದರು. ರಾಣಿಯವರಿಗೆ ಹತ್ತು ಸಹಸ್ರ ವರಹಗಳು ಸಾಲವಾಗಿ ಬೇಕಾಗಿವೆಯೆಂದು ಬೇಡಿದರು ಸೇಟನು ರಾಣಿಯವರು ಬಹಳ ಐಶ್ವರ್ಯವಂತರೆಂದು ಕೇಳಿದ್ದನು. ಅವರು ಹೊಸ ಪರಿಚಯದ ಸೇಟರಲ್ಲಿ ಹತ್ತುಸಹಸ್ರ ವರಹಗಳನ್ನುಕೇಳುವುದೆಂದರೆ ಸೇಟನಿಗೆ ಸೋಜಿಗವೆನಿಸಿತು.

ಏನೋ ಪರೀಕ್ಷೆಯು ನಡೆಯುತ್ತಿದೆಯೆಂದುಕೊಂಡನು ಆ ದ್ರವ್ಯವನ್ನು ಮೂರು ದಿನಗಳಲ್ಲಿ ತಂದೊಪ್ಪಿಸುವುದಾಗಿ ಉತ್ತರ ಕೊಟ್ಟನು ಆದರೆ ಅದಕ್ಕೆ ತಕ್ಕ ಜವಾಹಿರಗಳನ್ನು ತನ್ನಲ್ಲಿ ಠೇವಣಿಯಾಗಿಡಬೇಕೆಂದು ಸೂಚಿಸಿದನು ಸಚಿವರು ರಾಣಿಯವರ ಅಭಿಪ್ರಾಯವನ್ನರಿತು ಅದಕ್ಕೆ ಒಪ್ಪಿದರು ವಾಯಿದೆಗೆ ಸರಿಯಾಗಿ ಸೇಟನು ಹಣವನ್ನು ತಂದೂಪ್ಪಿಸಿದನು ಸಚಿವರು ಜವಾಹಿರಗಳನ್ನು ತಂದುಕೊಡುವುದಾಗಿ ಹೇಳಿದರು ತಾನೇ ಬಂದು ರಾಣಿಯವರ ಭೇಟಿ ಮಾಡಿ ಜವಾಹಿರಗಳನ್ನು ಪಡೆದುಕೊಳ್ಳುವುದಾಗಿ ಸೇಟನು ತಿಳಿಸಿದನು ರಾಣಿಗೆ ಸೇಟನ ವರ್ತನೆಯು ಆಶ್ಚರ್ಯವನ್ನುಂಟುಮಾಡಿತು ಈ ವ್ಯಾಪಾರಿಯು ಜವಾಹಿರಗಳನ್ನು ಕೇಳಿದನೇಕೆ ? ಅದನ್ನು ತೆಗೆದುಕೊಳ್ಳಲಿಲ್ಲವೇಕೆ ? ಇದೊಂದೂ ರಾಣಿಗೆ ಗೊತ್ತಾಗಲಿಲ್ಲ ಹೇಗಾದರೂ ಇರಲಿ ! ಎಂದುಕೊಂಡು ಕೆಲವು ಜವಾಹಿರಗಳನ್ನು ತರಿಸಿ ಒಂದು ಪೆಟ್ಟಿಗೆಯಲ್ಲಿಟ್ಟು ಮೊಹರು ಮಾಡಿ ಸೇಟನಿಗೆ ಕಳುಹಿಸಿಬಿಟ್ಟಳು ದಿನದಿನಕ್ಕೆ ಬೀಬೀರಾಣಿಯವರಿಗೂ ಅಲ್ಲೀಸೇಟರಿಗೂ ಸ್ನೇಹ ವಿಶ್ವಾಸಗಳು ಬೆಳೆಯುತ್ತ ಬಂದುವು

ಅಲ್ಲೀಸೇಟರಿಗೆ ಕೋಚೀ ಬಂದರಿನಲ್ಲಿ ಒಂದು ವಾಸಸ್ಥಾನವಿತ್ತು ಇದು ಅತ್ಯಂತ ರಮಣೀಯವಾದ ಪ್ರದೇಶದಲ್ಲಿತ್ತು ಮಲಬಾರಿನ ಪ್ರಕೃತಿಸೌಂದರ್ಯವು ಮನೋಹರವಾದುದು ಒಂದುದಿನ ಒಳ್ಳೆಯ ಬೆಳದಿಂಗಳಿನಲ್ಲಿ ಸೇಟನು ಸಮುದ್ರತೀರದಲ್ಲಿ ನಿಂತು ನೋಡುತ್ತಿದ್ದನು ಅವನ ಮನಸ್ಸು ಕಳವಳಿಸುತ್ತಿದ್ದಿತು. ಅವನಿಗೆ ತನ್ನ ಜೀವನವು ಸಮಾಧಾನಕರವಾಗಿದೆಯೇ ಎನ್ನಿಸಿತು ಸಮುದ್ರದ ಕಡೆಗೆ ದಿಟ್ಟಿಸಿ ನೋಡಿದನು ಈ ಮಹಾಸಮುದ್ರದ ಮೇಲಿನ ನೀರಿನ ಗುಳ್ಳೆಯಂತಿದೆ, ನನ್ನ ಜೀವನ ! ದೇಶದ ರಾಜಕೀಯದ ಕಡೆಗೆ ನೋಡಿದನು ಈ ಸಾಗರದ ಅಲ್ಲಕಲ್ಲೋಲದಂತಿದೆ ಈ ರಾಜಕೀಯ ಎಂದುಕೊಂಡನು ಈ ಸ್ಥಳವು ನನಗೆ ಸರಿಯಾಗಿದೆ ಆದರೆ ನನ್ನ ಜೀವನವು ಅಜ್ಞಾತವಾಸ ! ದೌಲತ್ತಳಿಲ್ಲದ ಜೀವನವು ಮರುಭೂಮಿಯಂತೆ ! ನಾನು ಹೋಗಿ ಬೇಡಿದರೆ, ದೌಲತ್ತಳು ಇಲ್ಲಿಗೆ ಬರುವಳು ಇಲ್ಲಿ ನಾವೆಷ್ಟೋ ಸುಖವಾಗಿರಬಹುದು ಆದರೆ ದೌಲತ್ತಳು ಈ ಅಜ್ಞಾತವಾಸದಲ್ಲಿರಲು ಒಪ್ಪುವುದಿಲ್ಲ, ಎಂದು ನಿಟ್ಟುಸಿರು ಬಿಟ್ಟನು ತನ್ನ ಮನೆಯನ್ನು ಪ್ರವೇಶ ಮಾಡಿದನು ಪರ್ಯಂಕದ ಮೇಲೆ ಬಿದ್ದನು ದೌಲತ್ತಳ ಮೂರ್ತಿಯನ್ನು ಧ್ಯಾನ ಮಾಡುತ್ತಿದ್ದನು, ಮನಸ್ಸು ಸುಡುತ್ತಿತ್ತು ! ಎಲ್ಲಿಯೋ ಬಹುದೂರದಲ್ಲಿ ಬೋಯಿಗಳು ಧ್ವನಿಮಾಡುವ ಸದ್ದು ಕೇಳಿಸಿತು ಸೇಟನು ಅದು ಈ ಲೋಕದ ಧ್ವನಿಯಲ್ಲ, ಎಲ್ಲಿಯೋ ಯಾವ ಲೋಕದಲ್ಲಿಯೋ ಆ ಧ್ವನಿಯು ಕೇಳುತ್ತಿದೆ ಎಂದುಕೊಂಡನು ಹಾಗೆಯೇ ಮೊಬ್ಬು ಬಂತು. ಸೇಟನು ಕಣ್ಣು ಬಿಟ್ಟು ನೋಡಿದಾಗ ಸಮೀಪದಲ್ಲಿ ಅವಕುಂಠನವತಿಯೊಬ್ಬಳು ನಿಂತಿದ್ದಳು ತಕ್ಷಣ ಅವಳನ್ನು ಗುರುತಿಸಿದನು ಅವಳು ಬೀಬೀರಾಣಿ !

ಆ ವಿಶಾಲವಾದ ತೇಜೋಮಯವಾದ ಕಣ್ಣುಗಳು ದೀರ್ಘವಾದ ಹುಬ್ಬು. ವಿಶಾಲವಾದ ಹಣೆ, ಎಳಸಾದ ನಾಸಿಕ, ತೆಳುವಾದ ಕೆಂದುಟಿಗಳು, ಥಳಿಸುವ ಕಪೋಲಗಳು, ಮೊನಚಾದ ಚಿಬುಕು, ಎರಡು ಕಡೆಯ ಜೋಲುತ್ತಿರುವ ಜಡೆಗಳು, ದೊಡ್ಡ ದೊಡ್ಡ ಮುತ್ತಿನ ಮಣಿಗಳಿಂದ ಶೋಭಿಸುತ್ತಿರುವ ಕಂಠ, ಬಳಕುವ ಶರೀರ, ದೀರ್ಘವಾದ ತೆಳು— ಬಾಹುಯುಗ್ಮ, ಎಳೆಗಂಪನ್ನು ಸೂಸುತ್ತಿರುವ ಹಸ್ತಗಳು. ಬಿಳಿಯ ಮಸ್ಲಿನ್ನಿನ ಶೀರೆಯನ್ನುಟ್ಟಿದ್ದಾಳೆ ಆಕಾಶ ಬಣ್ಣದ ಬಗುನಾದ ಕಂಚುಕವನ್ನು ತೊಟ್ಟಿದ್ದಾಳೆ ಊದಾಬಣ್ಣದ ತೆಳುವಾದ ಚೀನಾಂಬರವನ್ನು ಹೊದ್ದಿದ್ದಾಳೆ. ಸೇಟನು ತನ್ನ ಮನೆಯಲ್ಲಿ ಆ ಬೀಬೀ ರಾಣಿಯನ್ನು ನೋಡಿ ಅಪ್ರತಿಭನಾದನು. ಎದ್ದು ಆಸನವನ್ನು ಅಂಗೀಕರಿಸಬೇಕೆಂದು ಪ್ರಾರ್ಥಿಸಿದನು

ರಾಣಿಯು ನಸುನಗುತ್ತಾ "ಇಷ್ಟೊಂದು ಸಡಗರವೇಕೆ— ಸೇಟರೆ ?" ಎಂದಳು.

ಅಷ್ಟರಲ್ಲಿ ಸೇಟನ ಕಣ್ಣು ಕತ್ತಲೆ ಕಟ್ಟಿತು ತಲೆ ತಿರುಗಿತು ಪರ್ಯಂಕದ ಮೇಲೆ ಬಿದ್ದುಬಿಟ್ಟನು

ರಾಣಿಗೆ ಗಾಬರಿಯಾಯಿತು ಕ್ಷಣಹೊತ್ತು ಸ್ತಂಭೀಭೂತಳಾಗಿ ನಿಂತಿದ್ದಳು. ಅಷ್ಟರಲ್ಲಿ ಚೇತರಿಸಿಕೊಂಡು, ಪರ್ಯಂಕದ ಕಡೆ ನಾಲ್ಕು ಅಡಿ ಮುಂದಿಟ್ಟು ಬಗ್ಗಿ ನೋಡಿದಳು ಸೇಟನು ಜ್ಞಾನಶೂನ್ಯನಾಗಿದ್ದನು ಕನ್ನೆಯ ಮೇಲೆ ತನ್ನ ಮೃದು ಹಸ್ತವನ್ನಿಟ್ಟು ನೋಡಿದಳು. ಜ್ವರದ ಕಾವು ಬಹಳವಾಗಿದ್ದಿತು ಪರ್ಯಂಕದ ಮೇಲೆ ಕುಳಿತು, ತನ್ನ ತೊಡೆಯ ಮೇಲೆ ಅವನ ತಲೆಯನ್ನು ತೆಗದಿಟ್ಟುಕೊಂಡು ಕುಳಿತಳು ಇವನಿಗೇಕೆ ಈ ದೆಶೆಯು ಬಂದಿದೆ, ಎಂದು ಆಲೋಚಿಸತೊಡಗಿದಳು

ಹೀಗೆಯೇ ಒಂದು ಜಾವ ಕಳೆದ ಮೇಲೆ ಸೇಟನು ಕಣ್ಣು ಬಿಟ್ಟನು ಜ್ವರ ವೇಗವು ಸ್ವಲ್ಪ ಕಡಿಮೆಯಾಗಿದ್ದಂತೆ ಕಂಡಿತು.

ರಾಣಿಯು ಸೇಟನ ತಲೆ ಸವರುತ್ತಾ, "ಸೇಟರೇ, ವಿಶ್ರಮಿಸಿಕೊಳ್ಳಿರಿ ! ನೀವೇಕೆ ಇಷ್ಟು ಬಳಲಿದ್ದೀರಿ, ನಿಮ್ಮ ಈ ದುರವಸ್ಥೆಗೆ ಕಾರಣವೇನು ?" ಎಂದಳು

ಸೇಟ್—ರಾಣಿಯವರೇ ! ಏನೂ ಇಲ್ಲ ಸ್ವಲ್ಪ ಜ್ವರ ಬಂದಿದೆ ಅದು ಅಷ್ಟೇನೂ ದಾರುಣವಾದುದಲ್ಲ. ಮನೋವೇದನೆಯು ಬಹಳವಾಗಿದೆ. ತಾವು ಈಗ ಇಲ್ಲಿಗೆ ಬಂದಿದ್ದು ದೇವರ ಪ್ರಸಾದದಂತೆ ನನಗೆ ಒಂದು ಕ್ಷಣವೂ ಈ ಜೀವವನ್ನು ಧರಿಸಲು ಇಷ್ಟವಿಲ್ಲ ಭಗವಂತನು ತಾನಾಗಿ ಕರೆದುಕೊಳ್ಳದಿದ್ದರೆ, ನಾನೇ ಆ ಮಹಾಸಮುದ್ರದಲ್ಲಿ ಹಾರಿ ಶಾಂತಸಮಾಧಿಯನ್ನು ಅನುಸರಿಸಬೇಕೆಂದಿದ್ದೆ ನಾನು ನಾಳೆಯ ಪ್ರಾತಃಕಾಲದವರೆಗೆ ಜೀವಂತನಾಗಿರುವುದಿಲ್ಲ ಮತ್ತಾರನ್ನೂ ನೋಡುವುದೂ ಇಲ್ಲ ನನ್ನ ಸರ್ವಸ್ವವನ್ನೂ ತಮಗೆ ಒಪ್ಪಿಸಬೇಕೆಂದಿದ್ದೆ ಇದನ್ನು ಪರೋಕ್ಷವಾಗಿ ತಮಗೆ ಬರೆದು ಕಳುಹಿಸುತ್ತಿದ್ದೆ. ರಾಣಿಯವರೇ ಪ್ರತ್ಯಕ್ಷವಾಗಿ ದಯಮಾಡಿಸಿದ್ದು ನನ್ನ ಪುಣ್ಯ.

ರಾಣಿ—(ಗದ್ಗದ ಧ್ವನಿಯಿಂದ) ಅಲ್ಲೀ, ನೀವು ಸಾಯುವುದಿಲ್ಲ ನಾನು ನಿಮ್ಮನ್ನು ಸಾಯಲು ಬಿಡುವುದೂ ಇಲ್ಲ ನಿಮಗೆ ಏನಾಗಿದೆ, ಹೇಳಿರಿ ! ನಿಮ್ಮ ಮನೋವ್ಯಥೆಯ ಕಾರಣವನ್ನು ಬಿಚ್ಚಿ ಹೇಳಿರಿ ನಾನು ಅದನ್ನು ಪರಿಹರಿಸಬಲ್ಲೆ

ನೇಟ್—(ಮುಗುಳುನಗುವನ್ನು ನಕ್ಕು) ದೇವಿಯವರೇ ! ನನ್ನ ಈ ಜೀವನವು ನನಗೆ ಅಸಹ್ಯವಾಗಿದೆ ನಾನು ಅಜ್ಞಾತವಾಸದಲ್ಲಿದ್ದೇನೆ ಇದನ್ನು ನಾನು ಸಹಿಸಲಾರೆ ನನ್ನಲ್ಲಿರುವ ಈ ಹಣವೆಲ್ಲಾ ಮಣ್ಣು ಕಲ್ಲುಗಳಂತೆ ನನಗೆ ಈ ಐಶ್ವರ್ಯ, ಆಡಂಬರ ಗಳು ರುಚಿಸವು ನನ್ನ ಮನವು ಸರ್ವದಾ ಯುದ್ಧಭೂಮಿಯಲ್ಲಿ ಹರ್ಷವಾಗಿರುತ್ತದೆ ನೀವು ನನ್ನನ್ನು ಬದುಕಿಸುವುದಾದರ, ಇಂದೇ ಪ್ರತ್ಯಕ್ಷವಾಗಿ ಒಂದು ಮಹಾ ಸಮ ರಾಂಗಣದಲ್ಲಿ ನಿಲ್ಲಿಸಿರಿ ನಾನು ಅಜರಾಮರವಾಗಿ ಬದುಕುತ್ತೇನೆ

ರಾಣಿಯು, ನೇಟನ ಎರಡು ಕೈಗಳನ್ನೂ ಎತ್ತಿ ಮುದ್ದಿಟ್ಟಳು

ರಾಣಿ—ನೇಟರೇ ! ನನ್ನ ಸಮಸ್ಯೆಯು ಈಗ ಬೆಳಕಾಯಿತು ತಮ್ಮ ಪ್ರಥಮ ದರ್ಶನದಲ್ಲಿಯೇ ತಾವು ಒಬ್ಬ ವೀರಪುರುಷರೆಂದು ಕಂಡುಕೊಂಡೆ ವೇಷಾಂತರದಲ್ಲಿ ರುವ ಒಬ್ಬ ಮಹಾರಾಜರೆಂದು ನನ್ನ ಆತ್ಮವು ಹೇಳಿತು ಅಂದಿನಿಂದಲೇ ನನ್ನಮನವು ತಮ್ಮಲ್ಲಿ ಒಲಿಯುತ್ತಿದೆ ನಾನು ತಮ್ಮ ಗುಟ್ಟು ಕಂಡುಹಿಡಿದಿದ್ದೇನೆಂದು ಹೇಳುವುದಕ್ಕೇ ಈ ನಿಶಿರಾತ್ರಿಯಲ್ಲಿ ಇಲ್ಲಿಗೆ ಬಂದೆ ತಮ್ಮ ನಿಜವಾದ ಪರಿಚಯವನ್ನು ದಯವಿಟ್ಟು ಕೊಡಿರಿ !

ನೇಟ್—ಇಲ್ಲ ! ಮಹಾರಾಣಿಯವರೇ ! ನಿಮ್ಮ ಊಹೆಯಲ್ಲಾ ಭ್ರಾಂತಿ ನಿಜವಾಗಿಯೂ ನಾನೊಂದು ರಾಜ್ಯದ ರಾಜನಲ್ಲ ನಾನೊಬ್ಬ ಭಿಕಾರಿ. ಆ ಭಗ ವಂತನು ನಿಜವಾಗಿಯೂ ನನ್ನನ್ನು ಒಬ್ಬ ರಾಜನ ಹೊಟ್ಟೆಯಲ್ಲಿ ಹಾಕಿದ್ದಿದ್ದರೆ ಈ ಹಿಂದೂಸ್ಥಾನದ ಪರಿಸ್ಥಿತಿಯು ಹೀಗಿರುವುದನ್ನು ನಾನು ಒಂದು ಕ್ಷಣವೂ ಸಹಿಸುತ್ತಿರ ಲಿಲ್ಲ ಸಮರಭೂಮಿಯಲ್ಲಿ ತಪಸ್ಸು ಮಾಡಿ, ಆ ಭಗವಂತನಿಗೆ ಒಲಿದಾನ ಮಾಡು ತ್ತಿದ್ದ.

ರಾಣಿ—ಮಹಾರಾಜರೇ ! ಆ ದೇವರು ಸುಳ್ಳು ನೀವು ಪಾಮರ ಜನರಂತೆ ಆ ದೇವರ ಕಡೆಗೇಕೆ ಕೈ ತೋರುತ್ತೀರಿ ನಾನು ನಿಮ್ಮನ್ನು ನಾಳೆ ಪ್ರಾತಃಕಾಲ ನಮ್ಮ ರಾಜ್ಯದ ಸಿಂಹಾಸನದಲ್ಲಿ ಕೂಡಿಸುತ್ತೇನೆ ತಾವು ರಾಜ್ಯವಾಳಿರಿ ಸಮರವನ್ನು ಹೂಡಿರಿ.

ನೇಟ್—ರಾಣಿಯವರೇ ! ತಮ್ಮಂಥಾ ವೀರರಮಣಿಯು, ರಾಜ್ಯತ್ಯಾಗ ಮಾಡಿ ನನ್ನಂಥಾ ಭಿಕಾರಿಗೆ ರಾಜ್ಯವನ್ನೊಪ್ಪಿಸುವುದೇ ? ನನಗೆ ರಾಜ್ಯವನ್ನೊಪ್ಪಿಸಿ ತಾವೇನು ಮಾಡುವಿರಿ ?

ರಾಣಿ—ಮಹಾರಾಜರೇ ! ಹೀಗೇಕೆ ಅಪ್ರಬುದ್ಧರಂತೆ ಮಾತನಾಡುವಿರಿ "ನಾನು ತಮ್ಮ ಮಹಾರಾಣಿಯಾಗಿರುವೆನು" ಎಂದು ಸೇಟ್‌ನನ್ನು ಆಲಿಂಗಿಸಿ ಚುಂಬಿಸಿದಳು

ಸೇಟನಿಗೆ ಎಷ್ಟೋ ಹೊತ್ತು ತಾನು ಯಾವ ಲೋಕದಲ್ಲಿದ್ದೇನೆ ಎಂಬುದೇ ಬೋಧೆಯಾಗಲಿಲ್ಲ ಆ ರಾಣಿಯ ಬಾಹುಬಂಧನದಿಂದ ಬಿಡಿಸಿಕೊಂಡು ಸೇಟನು ನಿರಾಶೆಯ ನಗುವನ್ನು ನಕ್ಕು, "ಬೀಬಿ, ನಿನ್ನ ರಾಜ್ಯವು ರಾಜ್ಯವಲ್ಲ ಈ ರಾಜ್ಯಗಳಾವುವೂ ಉಳಿಯುವುದಿಲ್ಲ ಈ ದಕ್ಷಿಣಹಿಂದೂಸ್ಥಾನದಲ್ಲಿ ಸುಲ್ತಾನೀರಾಜ್ಯವು ಸ್ಥಿರವಾಗಿ ಸ್ಥಾಪನೆಯಾಗಬೇಕು ಇಲ್ಲವೇ ಇಂಗ್ಲೀಷರ ರಾಜ್ಯ ! ಬೇರೆ ರಾಜ್ಯಗಳೊಂದೂ ಒಂದು ಕ್ಷಣ ಉಳಿಯಲಾರದು ರಾಣಿಯವರೇ, ನನ್ನದು ಬರೀ ರಾಜ್ಯಲೋಭವಾಗಿದ್ದರೆ, ನನ್ನ ಪಾಲಿಗೆ ಬಂದ ರಾಜ್ಯವನ್ನೇ ನಾನು ಇಟ್ಟುಕೊಂಡಿರುತ್ತಿದ್ದೆ ಆದನ್ನೇಕೆ ತ್ಯಾಗಮಾಡಬೇಕು ? ನನ್ನ ರಾಜ್ಯವು ಇದಕ್ಕಿಂತಲೂ ದೊಡ್ಡ ರಾಜ್ಯ ವೀರಭೂಮಿ ಇಂಗ್ಲೀಷರ ದಂಡು ನಮ್ಮ ರಾಜ್ಯದ ಮೇಲೆ ಬಂದಿದ್ದರೆ, ನೂರು ಯುದ್ಧಗಳಾದರೂ ಅವರಿಗೆ ಅಪಜಯವು ಸಿದ್ಧ !" ಎಂದು ಹೇಳತೊಡಗಿದನು

ಬೀಬಿಯು ಮಾತಿಗೆ ಅಡ್ಡಬಂದು, ತನ್ನ ಬಾಹುಗಳಿಂದ ಸೇಟನ ಕಂಠವನ್ನು ಬಿಗಿದಪ್ಪಿ, "ಮಹಾರಾಜರೇ! ತಾವು ಯಾವ ರಾಜ್ಯದ ರಾಜರು ಹೇಳಿ ! ನಾನು ನಿಮ್ಮನ್ನು ಬಿಡುವುದಿಲ್ಲ ನಾನು ಈ ಅಂಧಕಾರದಲ್ಲಿರಲಾರೆ ಹೇಳಿ" ಎಂದಳು

"ಬೀಬಿರಾಣಿಯವರೇ ! ನಾನು ನಗರದ ನವಾಬ ರಾಜ್ಯತ್ಯಾಗ ಮಾಡಿದ ನಿರ್ಭಾಗ್ಯ ಇಯಜ್‌ಖಾ"

"ಇಯಜ್‌ಖಾ ! ಇಯಜ್‌ಖಾ ! ನೀವೇ ಆ ಮಹಾಪುರುಷ ! ಇದೇ ವೀರಮೂರ್ತಿಯನ್ನು ಮೂರು ವರ್ಷಗಳಿಂದ ಒಂದುಸಾವಿರ ರಾತ್ರಿಗಳು ಧ್ಯಾನಮಾಡಿ ಹಂಬಲಿಸುತ್ತ ಕಳೆದಿದ್ದೇನೆ. ನನ್ನ ಪತಿ ಅಲ್ಲೀರಾಜರು ನಿಮ್ಮ ಪರಾಕ್ರಮವನ್ನೆಷ್ಟೋ ಹೊಗಳುತ್ತಿದ್ದರು. ನೀವು ನಮ್ಮ ಮಲಬಾರಿನವರು ಇಂದು ಈ ಮಲಬಾರು ನಿಮ್ಮದು ನೀವೇಕೆ ಆ ರಾಜ್ಯಲಕ್ಷ್ಮಿಯನ್ನು ಕಾಲಿನಿಂದ ಒದೆಯುತ್ತೀರಿ. ನೀವು ಈ ರಾಜ್ಯವನ್ನು ಒಪ್ಪಿರಿ-ಬಿಡಿರಿ, ನಾನು ನಿಮ್ಮವಳು ಅಲ್ಲೀರಾಜರು ನನ್ನನ್ನು ಬಹಳವಾಗಿ ಪ್ರೀತಿಸಿದರು. ನಾನು ಅವರನ್ನು ಪ್ರೀತಿಸಿ ಸಂಪೂರ್ಣವಾಗಿ ಗೆದ್ದೆ. ನಿಮ್ಮ ವೀರ್ಯ ಪರಾಕ್ರಮಗಳನ್ನು ಕೇಳಿ ಧ್ಯಾನಮಾಡಿ, ಧ್ಯಾನಮಾಡಿ ಇಂದು ನಿಮ್ಮ ದರ್ಶನಮಾಡಿ ಸೋತಿದ್ದೇನೆ"

ಇಯಜ್‌ಖಾನನು ಆ ಪ್ರೇಮದ ವೇಗವನ್ನು ನೋಡಿ ಬೀಬೀರಾಣಿಯ ಮುಖವನ್ನು ಚುಂಬಿಸಿದನು ಆ ಚುಂಬನದಿಂದ ಆ ವದನಾರವಿಂದವು ಕಳೆಯೇರಿ ನೂರ

ರಷ್ಟು ಸುಂದರವಾಗಿ ಪ್ರಕಾಶಮಾನವಾಗಿತ್ತು  ಖಾನನೂ ರಾಣಿಯೂ ಎಷ್ಟೋ ಹೊತ್ತು ಹಾಗೆಯೇ ಕಳೆದರು  ಖಾನನು ತಾನು ಹೀಗೆ ಅಜ್ಞಾತವಾಗಿರುವೆನೆಂದೂ, ದಕ್ಷಿಣಾವರ್ತದಲ್ಲಿ ಯುದ್ಧದ ಮೋಡಗಳು ಕವಿಯುತ್ತಿವೆಯೆಂದೂ, ಮಹಾಯುದ್ಧವು ಪ್ರಾಪ್ತವಾಗುತ್ತದೆಂದೂ, ಅಂದು ಆ ಸಮರಾಂಗಣದಲ್ಲಿ ತನ್ನ ಸರ್ವಶಕ್ತಿಯಿಂದ ಯುದ್ಧಮಾಡುವುದಾಗಿಯೂ ಹೇಳಿದನು ತನ್ನ ಗುಟ್ಟನ್ನು ಕಾಪಾಡಬೇಕೆಂದು ರಾಣಿಯನ್ನು ಬೇಡಿಕೊಂಡನು  ರಾಣಿಯು ನಸು ಬೆಳಕಿನಲ್ಲಿ ಆ ಅಲ್ಲೀಸೇಟನನ್ನು ಬೀಳ್ಕೊಂಡು ಕನ್ನಾನೂರಿಗೆ ತೆರಳಿದಳು.

ಸೇಟನು ಬೀಬೀರಾಣಿಯ ಪ್ರೇಮಪಾಶದಲ್ಲಿ ಸಿಲುಕಿದ್ದಾನೆ  ದಿನದಿನಕ್ಕೆ ಆ ಬೀಬಿಯ ಪ್ರೇಮಸಾಗರದಲ್ಲಿ ತೇಲುವ ಸಣ್ಣ ನೌಕೆಯಂತಾಗಿದ್ದಾನೆ ಈ ಸೇಟ್. ಸೇಟನು ದೌಲತ್ತಳನ್ನು ಮರೆತಿದ್ದಾನಯೇ? ಇಲ್ಲ  ದೌಲತ್ತಳನ್ನು ಒಲಿದು ಓಲೈಸಿ ಅವಳ ಅನುಗ್ರಹವನ್ನು ಪಡೆದನು  ರಾಣಿಯು ತಾನಾಗಿ ಸೇಟನನ್ನು ಮೆಚ್ಚಿ ಪ್ರೇಮಿಸಿ ತನ್ನ ಪ್ರೇಮಸಾಗರದಲ್ಲಿ ಮುಳುಗಿಸಿದ್ದಾಳೆ. ಸೇಟನು ಜನ್ಮತಃ ಹಿಂದೂ  ಶ್ರೀಮನ್ನಾರಾಯಣನ ಶ್ರೀದೇವಿ ಭೂದೇವಿಯರಂತೆ ಅವನಿಗೆ ದೌಲತ್ ಮತ್ತು ಬೀಬಿ!

ಭಕ್ಷಿಯು ಅಲ್ಲೀಸೇಟನ ದರ್ಶನಕ್ಕೆ ಅಲೆದು ಅಲೆದು ಬೇಸತ್ತನು. ಎಷ್ಟೋ ಜನರನ್ನು ಉಪಾಯದಿಂದ ಮಾತನಾಡಿಸಿ ಶೋಧನೆ ಮಾಡಿದನು  ಇಷ್ಟು ಸಾಹಸ ಮಾಡಿ ಭಕ್ಷಿಯು ಒಂದು ಗುಟ್ಟನ್ನು ಕಂಡುಹಿಡಿದನು  ಬೀಬೀರಾಣಿಯೂ, ಸೇಟನೂ ಪ್ರಣಯಿಗಳು ಎಂಬುದು ಅವನಿಗೆ ಖಚಿತವಾಯಿತು  ಆ ರಾಣಿಯನ್ನು ನೋಡಬೇಕೆಂಬ ಕುತೂಹಲವು ಹೆಚ್ಚಿತು  ಸೇಟನ ದರ್ಶನವೇ ದೊರೆಯಲಿಲ್ಲ  ಇನ್ನು ರಾಣಿಯನ್ನು ನೋಡುವುದು ಹೇಗೆ? ಆದರೆ ಭಕ್ಷಿಯು ಹಿಡಿದ ಪ್ರಯತ್ನವನ್ನು ಬಿಡುವವನಲ್ಲ  ರಾಣಿಯು ಆಗಾಗ ದೋಣಿಯಲ್ಲಿ ಪ್ರಯಾಣ ಮಾಡುತ್ತಾಳೆಂದು ಕೇಳಿದ್ದನು  ಆ ದೋಣಿಯ ಯಜಮಾನನೊಬ್ಬ ಮುದುಕ  ಅವನ ಗುಡಿಸಲಿಗೆ ಹೋಗಿ ಭಕ್ಷಿಯು ಆ ಮುದುಕನನ್ನು ನೋಡಿದನು  “ಯಜಮಾನನೇ! ನೀನು ನನಗೊಂದು ಉಪಕಾರ ಮಾಡಬೇಕು’ ಎಂದು ಕೈಮುಗಿದು ಬೇಡಿದನು  ನಾಲ್ಕು ಚಿನ್ನದ ವರಹಗಳನ್ನು ತೆಗೆದು ಆ ಮುದುಕನ ಕೈಗೆ ಕೊಟ್ಟನು  ಮುದುಕನಿಗೆ ಆನಂದವಾಯಿತು  “ನಾನೇನುಮಾಡಬಲ್ಲೆನಪ್ಪಾ! ನಿನಗೆ” ಎಂದು ಕೇಳಿದನು. “ಏನೂ ಇಲ್ಲ  ಒಂದು ಬಾರಿ ರಾಣಿಯವರ ಭೇಟಿಮಾಡಿಸಬೇಕು  ನೀನು ಭೇಟಿ ಮಾಡಿಸಿದರೆ ನಿನಗೆ ಇನ್ನೂ ಹಣಕೊಡುತ್ತೇನೆ” ಎಂದು ಭಕ್ಷಿಯು ಹೇಳಿದನು. ಮುದುಕ ಭಕ್ಷಿಯು ಮುಖವನ್ನು ದಿಟ್ಟಿಸಿ ನೋಡಿದನು  ನಕ್ಕನು “ಯುವಕ ಒಳ್ಳೆ ಸುಂದರನಾಗಿದ್ದಾನೆ  ರಾಣಿಯು ಸೌಂದರ್ಯದ ಖನಿಯೆಂದು ಕೇಳಿದ್ದಾನೆ ಆಶೆ! ಪಾಪ! ನೋಡಿದರ ದಣುವಾರುತ್ತದೆಯೇ!” ಎಂದುಕೊಂಡು “ಅಯ್ಯಾ! ಯುವ

ಕನೇ! ನಿನ್ನ ಹೆಸರೇನು ? ರಾಣಿಯು ನಿನ್ನ ರೂಪು ನೋಡಿ ನಿನ್ನನ್ನು ವರಿಸುವಳೆಂದು ಭಾವಿಸಿರುವೆಯಾ? ಯುವಕರಿಗೆ ಎಷ್ಟೊಂದು ಹುಚ್ಚು!" ಎಂದು ನಕ್ಕನು.

"ಯಜಮಾನನೇ! ನೀನು ಒಳ್ಳೆ ರಸಿಕನೆಂದು ಕಾಣುತ್ತದೆ ನಾನು ರಾಣಿಯವರ ಸೌಂದರ್ಯವನ್ನು ನೋಡುವುದಕ್ಕೆ ಬಂದಿಲ್ಲ ಅವರಲ್ಲಿ ಒಂದು ಗೌರವವಾದ ಚಾಕರಿ ಸಂಪಾದಿಸಲು ಬಂದಿದ್ದೇನೆ"

"ಒಳ್ಳೆಯದು! ರಾಣಿಯವರ ಭೇಟಿಮಾಡಿಸುತ್ತೇನೆ ಆದರೆ ನೀನು ನಾವಿಕನಾಗಬೇಕು ನಿನಗೆ ಹುಟ್ಟು ಹಾಕುವುದಕ್ಕೆ ಬರುತ್ತದೋ?"

"ಬರುತ್ತದೆ"

ಮಾರನೆಯ ಸಂಧ್ಯಾಕಾಲ ರಾಣಿಯು ಭವ್ಯವಾದ ದೋಣಿಯಲ್ಲಿ ಕುಳಿತು ಕೋಬಾಕ್ಕೆ ಹೊರಟಳು ಇತರ ನಾವಿಕರೊಡನೆ ಭಕ್ಷಿಯೂ ಹುಟ್ಟು ಹಾಕುತ್ತಿದ್ದನು. ಒಂದೆರಡು ಬಾರಿ ರಾಣಿಯು ಭಕ್ಷಿಯ ಮುಖವನ್ನು ನೋಡಿದಳು ಪುನಃ ಏನೋ ಯೋಚನೆ ಮಾಡುತ್ತಾ ಅನ್ಯಮನಸ್ಕಳಾದಳು

ಭಕ್ಷಿಯು "ಇಂದು ರಾಣಿಯು ದೋಣಿ ಇಳಿದು ಹೊರಡುತ್ತಲೇ ಅವಳ ಬೆನ್ನು ಹತ್ತುತ್ತೇನೆ ನಾನೇಕೆ ಈ ರಾಣಿಗೆ ಹೆದರಬೇಕು ? ಅವಳು ಆಗ್ರಹಗೊಂಡರೆ ನನ್ನನ್ನೇನು ಮಾಡಬಲ್ಲಳು ? ಒಂದುಬಾರಿ ಮಾತನಾಡಿಸಿ ನೋಡುತ್ತೇನೆ" ಎಂದುಕೊಂಡನು.

ದೋಣಿಯು ಹೋಗಿ ದಡವನ್ನು ಸೇರಿತು ಎದುರಿಗೆ ಸ್ವಲ್ಪ ದೂರದಲ್ಲಿ ಸೇಟನ ಭವ್ಯ ಭವನವು ಕಾಣುತ್ತಿತ್ತು ಸೂರ್ಯಾಸ್ತಮಯವಾಗಿ ಎರಡು ಗಳಿಗೆ ಆಗಿತ್ತು ಪ್ರಕಾಶವಾದ ಚಂದ್ರಕಿರಣಗಳು ನೀರಿನ ಮೇಲೆ ನರ್ತನ ಮಾಡುತ್ತಿದ್ದುವು ಮರಳಿನಮೇಲೆ ಹಾಲು ಚೆಲ್ಲಿದಂತೆ ಚಂದ್ರಿಕೆಯು ಹರಡಿತ್ತು ದೋಣಿಯು ದಡದಲ್ಲಿ ನಿಲ್ಲುತ್ತಲೇ ರಾಣಿಯು ದೋಣಿಯಿಂದ ಹರಿಣಿಯಂತೆ ನೆಲದ ಮೇಲೆ ಹಾರಿದಳು ಕಾಲಿನ ಪಾದರಕ್ಷೆಗಳನ್ನು ದೋಣಿಯಲ್ಲಿಯೇ ಮರೆತಿದ್ದಳು "ಮತಾಯಿ! ಅಲ್ಲಿ ದೋಣಿಯಲ್ಲಿ ನನ್ನ ಪಾದರಕ್ಷೆಗಳಿವೆಯೇ ನೋಡು!" ಎಂದಳು

ಅಷ್ಟರಲ್ಲಿ ಭಕ್ಷಿಯು ಹುಟ್ಟನ್ನು ಕೆಳಗಿಟ್ಟು ದೋಣಿಯಲ್ಲಿದ್ದ ಪಾದರಕ್ಷೆಗಳನ್ನು ತೆಗೆದುಕೊಂಡು ದುಮಿಕಿದನು ಅಷ್ಟರಲ್ಲಿ ರಾಣಿಯವರು ಹತ್ತು ಹೆಜ್ಜೆ ಮುಂದೆ ಹೋಗಿದ್ದರು ಭಕ್ಷಿಯು ರಾಣಿಯವರ ಮುಂದೆ ಹೋಗಿ ಆ ಪಾದರಕ್ಷೆಗಳನ್ನು ಎದುರಿಗಿಟ್ಟನು. ಮಂಡಿಯನ್ನು ಊರಿ ನೆಲದ ಮೇಲೆ ಕುಳಿತು ಮೃದುವಾಗಿ ರಾಣಿಯವರ ಪಾದವನ್ನು ಮುಟ್ಟಿದನು ರಾಣಿಯು ನಗುತ್ತಾ ಪಾದವನ್ನು ಭೂಮಿಯಿಂದ ಮೇಲೆ ತೆಗೆದಳು. ಭಕ್ಷಿಯು ಅದನ್ನು ಎರಡು ಕೈಗಳಿಂದಲೂ ಹಿಡಿದುಕೊಂಡು ತನ್ನ ವಸ್ತ್ರದಿಂದ ವರೆಸಿ ಪಾದರಕ್ಷೆಯನ್ನು ತೊಡಿಸಿದನು. ಹಾಗೆಯೇ ಮತ್ತೊಂದು ಕಾಲಿಗೂ ತೊಡಸಿ

ಸಲಾಂ ಮಾಡಿದನು ರಾಣಿಯು ಪ್ರಸನ್ನಳಾಗಿ ನಗುತ್ತಾ ತನ್ನ ಚೀಲದಲ್ಲಿ ಕೈಹಾಕಿ ಒಂದು ಚಿನ್ನದ ವರಹವನ್ನು ತೆಗೆದು ಅವನ ಕೈಲಿಟ್ಟು "ನಿನ್ನ ಹೆಸರೇನು" ಎಂದು ಕೇಳಿದಳು ಭಕ್ಷಿಯು ವಿನಯದಿಂದ "ನನ್ನ ಹೆಸರು ಭಕ್ಷಿ" ಎಂದು ಹೇಳಿ ವರಹವನ್ನು ತೆಗೆದುಕೊಂಡು ಸಲಾಂ ಮಾಡಿದನು

ರಾಣಿಯು ಬೇಗ-ಬೇಗ ಹೆಜ್ಜೆಯನ್ನು ಹಾಕುತ್ತಾ ಮುಂದುವರೆದಳು ಸಖಿಯರಿಬ್ಬರೂ ಹಿಂಬಾಲಿಸಿದ್ದರು ಭಕ್ಷಿಯು ಅವರ ಹಿಂದ ಹೋದನು ಸಖಿಯೊಬ್ಬಳು ಹಿಂದಿರುಗಿ "ಎಲ್ಲಿಗೆ ಬರುತ್ತಿ ಹೋಗು!" ಎಂದು ಗದರಿಸಿದಳು

ಈ ಧ್ವನಿಯನ್ನು ಕೇಳಿ ರಾಣಿಯು ಹಿಂತಿರುಗಿ ಭಕ್ಷಿಯ ಕಡೆ ನೋಡಿ ನಗುತ್ತಾ "ಭಕ್ಷಿ!" ನಿನಗೇನು ಬೇಕು, ಎಂದಳು

"ಹುಜೂರು, ಸನ್ನಿಧಾನದಲ್ಲಿ ನನಗೊಂದು ಹುದ್ದೆಯನ್ನು ಕೊಡಬೇಕು"

ರಾಣಿಯು ಆಶ್ಚರ್ಯದಿಂದ ನಗುತ್ತಾ "ನೀನು ನಾವಿಕನಲ್ಲವೇನು ?"

"ರಾಣಿಯವರೇ! ನಾನು ನಾವಿಕನಲ್ಲ ಗತಿಯಿಲ್ಲದೇ ಆ ಮುದುಕನಲ್ಲಿ ಸೇರಿಕೊಂಡೆ."

"ನೀನೇನು ಮಾಡಬಲ್ಲೆ ?"

"ಹತ್ತು ಸಹಸ್ರ ಸೈನ್ಯವನ್ನಾದರೂ ನಡಿಸಬಲ್ಲೆ !"

"ಹಾಗಾದರೆ ಸೇನಾಧಿಪತಿಯಾಗಲು ಬಂದಿರುವೆಯಾ? ನಿನ್ನ ದೇಶವಾವುದು?"

"ಇಲ್ಲ! ನಾನು ಸನ್ನಿಧಾನದ ಸೇವಕನಾಗಲು ಬಂದಿದ್ದೇನೆ ನನ್ನ ದೇಶವು ಮೈಸೂರು !"

ಭಕ್ಷಿಯು ಹೊರಬಾಗಿಲಿನಲ್ಲೇ ನಿಂತನು ಸಖಿಯರಿಬ್ಬರೂ ಅವನನ್ನು ದುರದುರ ನೋಡುತ್ತಿದ್ದರು

ರಾಣಿಯು ಸೇಟರ ಮಹಲಿನೊಳಗೆ ಹೋಗಿ ಸೇಟನನ್ನು ನೋಡಿದಳು ಸೇಟನು "ರಾಣೀಸಾಹೇಬ್! ಯಾರೋ ಬೆನ್ನು ಹತ್ತಿರುವಂತಿದೆ ಈ ರಾಜಕಾರ್ಯಗಳನ್ನೆಲ್ಲಾ ರಾಜಧಾನಿಯಲ್ಲಿಯೇ ಮುಗಿಸಿ ಬರಬಾರದೇ ? ಇಲ್ಲಿಗೇಕೆ ಎಳತಂದಿರಿ" ಎಂದನು

ರಾಣಿ—(ನಗುತ್ತಾ) ಸೇಟರೇ! ತಾವು ಏಕಾಂಗಿಗಳಾಗಿ ಬಹಳ ತೊಂದರೆ ಪಡುತ್ತಿದ್ದೀರಿ. ತಮಗೊಂದು ನಜರು ತಂದಿದೇನೆ ಒಬ್ಬ ಶಿಷ್ಯನನ್ನು ಕರತಂದಿದೇನೆ. ಅವನು ನಿಮ್ಮ ಸೇವೆ ಮಾಡುತ್ತ ಇಲ್ಲಿರಲಿ !

ಸೇಟ್—ಅವನಾರು ?

ರಾಣಿ—ಅವನಾರೋ ಮೈಸೂರಿನವನಂತೆ ಸೇನಾಪತಿಯಾಗಬೇಕಂತೆ ಹತ್ತು ಸಾವಿರ ಸೈನ್ಯವನ್ನು ನಡಸುತ್ತಾನಂತೆ. ಹಸರು ಭಕ್ಷಿ

ಸೇಟನು ಸ್ವಲ್ಪ ಹೊತ್ತು ಆಲೋಚಿಸಿದನು. ಅಂಥವನಾವನೋ ಮೈಸೂರಿನವನು ಗೊತ್ತಾಗಲಿಲ್ಲ. "ಹೋಗಲಿ, ನನಗೇಕೆ ? ಯಾರಾದರೂ ಸುಲ್ತಾನರ ಶಿಷ್ಯರಿರ ಬಹುದು. ಅಥವಾ ಗೂಢಚಾರರಿರಬಹುದು " ಎಂದನು

ರಾಣಿ—ಅದಕ್ಕೇನು ಅವನನ್ನು ಇಲ್ಲಿಗೆ ಕರತರುತ್ತೇನೆ ನೋಡಿರಿ ! ನಿಮಗೆ ಸರಿಯಾಗಿದ್ದರೆ ಒಬ್ಬ ಒಳ್ಳೇ ಸೇವಕನು ದೊರೆತಂತಾಯಿತು ಇಲ್ಲದಿದ್ದರೆ ಕಳಿಸಿ ಬಿಡೋಣ ಅವನೇನಾದರೂ ಕುತಂತ್ರದಿಂದ ಇಲ್ಲಿಗೆ ಬಂದಿದ್ದರೆ ಸಾಯುವವರೆಗೂ ಬೆಳಕನ್ನು ಕಾಣದ ಬಂದೀಖಾನೆ ಇದ್ದೇಇದೆ.

ಅನಂತರ ರಾಣಿಯು ಬಾಗಿಲಿಗೆ ಬಂದು "ಭಕ್ಷಿ" ಎಂದು ಕರೆದಳು

ಭಕ್ಷಿಯು ವಿನಯದಿಂದ ರಾಣಿಯ ಮುಂದೆ ಹೋಗಿ ನಿಂತನು

"ಭಕ್ಷಿ ! ನನ್ನ ಜೊತೆಯಲ್ಲಿ ಬಾ ! ಇಲ್ಲೊಬ್ಬ ಮಹಾರಾಜರಿದ್ದಾರೆ ನೀನು ಅವರ ಸೇವೆಗೆ ಲಾಯಕ್ಕಾಗಿದ್ದೀಯೇನೋ, ನೋಡೋಣ!"

ಭಕ್ಷಿಯು ರಾಣಿಯ ಹಿಂದೆಹಿಂದೆ ಹೋದನು ರಾಣಿಯು ಭಕ್ಷಿಯನ್ನು ಸೇಟನ ಸಮ್ಮುಖದಲ್ಲಿ ನಿಲ್ಲಿಸಿದಳು

ಇಬ್ಬರೂ ಪರಸ್ಪರ ನೋಡಿದರು

ಸೇಟನು ಭಕ್ಷಿಯ ಯೋಗಕ್ಷೇಮವನ್ನು ಆಮೂಲಾಗ್ರವಾಗಿ ವಿಚಾರಿಸಿದನು ಭಕ್ಷಿಯು ಎಲ್ಲವನ್ನೂ ವಿವರಿಸಿದನು ರಾಧಾರಾಣಿಯವರ ಮತ್ತು ದೌಲತ್‌ರಾಣಿಯ ಯವರ ಸಮಾಚಾರಗಳನ್ನೆಲ್ಲಾ ತಿಳಿಸಿದನು ಭಕ್ಷಿಯು ಗಂಗೆಯನ್ನು ಕರೆತಂದ ಭಗೀರಥನಂತೆ ಸಂತುಷ್ಟನಾದನು. ಅವನು ಸೇಟರನ್ನು ಕುರಿತು "ಮಹಾಸ್ವಾಮಿ! ತಮಗೆ ಈ ಅಜ್ಞಾತವಾಸವೇಕೆ ? ಈ ಗುಪ್ತನಾಮವೇಕೆ? ಇದನ್ನು ತಿಳಿಯದಿದ್ದರೆ ನಾನು ಇಲ್ಲಿಗೆ ಬಂದು ಇಲ್ಲಿ ಇಷ್ಟು ಅನ್ವೇಷಣೆ ಮಾಡಿದ ಕಷ್ಟವೆಲ್ಲಾ ನಿರರ್ಥಕ ವಾಗುವುದು" ಎಂದನು

"ಹುಸೇ‌ನ್, ಅದಕ್ಕೆ ವಿಶೇಷ ಕಾರಣಗಳುಂಟು ! ಈಗ ದಕ್ಷಿಣ ಹಿಂದೂಸ್ಥಾನದ ರಾಜಕೀಯವು ಹಾಗಿದೆ ನಾನು ಇನ್ನುಮೇಲೆ ಯಾವಾಗಲೂ ಅಲ್ಲೀಸೇಟನೇ !"

ರಾಣಿಯು ಪರಿಹಾಸ್ಯವಾಗಿ ನಗುತ್ತಾ "ಸೇಟರೇ ! ಇವನಾರೋ ಗುರುತು ಕಂಡ ಕಳ್ಳನಂತೆ ಕಾಣುತ್ತಾನೆ ಏನೋ ಪಾಲುಗಾರಿಕೆಗೆ ಬಂದಿರುವಂತಿದೆ ಇವರ ಪರಿಚಯವನ್ನು ನನಗಷ್ಟು ಮಾಡಿಸುವಿರಾ?" ಎಂದಳು

ಸೇಟ್ — ರಾಣಿಯವರೇ ಇವನ ಹೆಸರು ಹುಸೇನ್‌ಖಾ‌ನ್! ಮಹಾಪರಾಕ್ರಮಿ ಶಾಲಿಯಾದ ಸೇನಾಪತಿ ! ಇವನು ಮಂಗಳೂರನ್ನು ಸುಲ್ತಾನರಿಂದ ತಪ್ಪಿಸಿ ಕರ್ನಾ ಟಕ ರಾಜ್ಯವನ್ನು ಕಟ್ಟಬೇಕಂತೆ ! ಅಲ್ಲಿ ದೊಡ್ಡ ವಿಪ್ಲವವನ್ನು ಎಬ್ಬಿಸಿದ್ದಾನೆ ಇವರ ಕಡೆಯವರೂ ಒಂದು ಬಾರಿ ನಮ್ಮ ಕೋರಿಯನ್ನು ಸೂರೆ ಮಾಡಲು ಬಂದಿದ್ದರಂತೆ.

ಮಂಗಳೂರಿನ ಕಾರ್ಯಕರ್ತರು ಇವರಿಗೆ ಲಂಚ ಕೊಟ್ಟು ತಪ್ಪಿಸಿಕೊಂಡರಂತೆ ನಾವು ಈ ರಾಜ್ಯದಲ್ಲಿ ನಿಮ್ಮಂಥಾ ಮಹಾರಾಣಿಯವರಿಗೆ ರಾಜಾದಾಯವನ್ನು ಕೊಟ್ಟು ಉಳಿದುಕೊಳ್ಳಬಹುದು ಅಲ್ಲಿ ಸುಲ್ತಾನರಿಗೊಂದು ರಾಜಾದಾಯ ಈ ಭಕ್ಷಿಯವರಿಗೊಂದು ರಾಜಾದಾಯ ಅವರ ಫೌಜುದಾರರಿಗೊಂದು ರಾಜಾದಾಯ. ಹೀಗೆ ಮುಪ್ಪಟ್ಟಿ ಕಪ್ಪ ಕಾಣಿಕೆಗಳನ್ನು ತೆರಬೇಕು ಮಹಾರಾಣಿಯವರಿಗೆ ಇವರ ಪರಿಚಯವು ಇದಕ್ಕಿಂತ ಹೆಚ್ಚಾಗಿ ಏನು ಬೇಕಾಗಿದೆ ?

ರಾಣಿಯು ತಲೆದೂಗಿದಳು !

ಸೇಟ್—ರಾಣಿಯವರೇ ! ಈ ಭಕ್ಷಿಯವರನ್ನು ತಮ್ಮ ಜೊತೆಯಲ್ಲಿಯೇ ಕರೆದುಕೊಂಡು ಹೋಗಿರಿ ಇವರಿಗೊಂದು ರಹದಾರಿಯನ್ನು ಕೊಟ್ಟು ಸಾಗುಹಾಕಿಸಿ. ಈ ಮಲಬಾರಿನಲ್ಲಿ ಎಲ್ಲಿಯಾದರೂ ಸಿಕ್ಕಿಕೊಂಡು ಪೇಚಾಡುವಂತಾದೀತು

ರಾಣಿಯವರು ಭಕ್ಷಿಯನ್ನು ಜೊತೆಯಲ್ಲಿ ಕರೆದುಕೊಂಡು ಹೊರಟರು ಬರುವಾಗ ನಾವಿಕನಾಗಿ ಹುಟ್ಟು ಹೊಡೆಯುತ್ತ ಬಂದ ಭಕ್ಷಿಯು ಹಿಂದಿರುಗಿ ಹೋಗುವಾಗ ರಾಣಿಯವರ ಸಮಾನಾಸನದಲ್ಲಿ ಕುಳಿತು ಹೋಗುತ್ತಾನೆ ಎಲ್ಲೀಗೂಆಶ್ಚರ್ಯ ನಾವಿಕರ ಯಜಮಾನನು ಕಣ್ಣು ಹಾರಿಸಿ ನಕ್ಕನು

ಬೀಬೀರಾಣಿಯು ಭಕ್ಷಿಯನ್ನು ತನ್ನ ಅರಮನೆಗೆ ಕರೆದುಕೊಂಡು ಹೋದಳು ಅಲ್ಲಿಯೇ ರಾಜಯೋಗ್ಯವಾದ ಬಿಡಾರವನ್ನು ಏರ್ಪಡಿಸಿ ಊಟ ಉಪಚಾರಗಳಿಗೆಲ್ಲಾ ವ್ಯವಸ್ಥೆಯಾಯಿತು ಆ ದಿನವೆಲ್ಲಾ ಭಕ್ಷಿಯು ಪುನಃ ರಾಣಿಯನ್ನು ಕಾಣಲಿಲ್ಲ ಭಕ್ಷಿಗೆ ಇನ್ನು ಇಲ್ಲಿ ಕೆಲಸವಿಲ್ಲ ಅವನು ತನ್ನ ಊರಿಗೆ ಹೊರಡಬೇಕು ರಾಣಿಯ ಅಪ್ಪಣೆ ಇಲ್ಲದೆ ಈ ಸ್ಥಳವನ್ನು ಬಿಟ್ಟು ಹೊರಡುವಂತಿಲ್ಲ ಮಾರನೆಯ ದಿನ ರಾಣಿಯು ಭಕ್ಷಿಯನ್ನು ತನ್ನ ಅಂತಃಪುರಕ್ಕೆ ಕರಸಿದಳು ಅವನೊಡನೆ ಎಷ್ಟೋ ಮಾತುಕತೆಗಳನ್ನಾಡಿದಳು ನಗರದ ವಿಚಾರವಾಗಿ ಎಷ್ಟೋ ವಿಚಾರಿಸಿದಳು ದರಿಯಾಬಾಗಿನ ವಿಚಾರಗಳನ್ನು ಎಷ್ಟೋ ಪ್ರೇಮದಿಂದ ಕೇಳಿದಳು ಭಕ್ಷಿಯು ತಾನು ತನ್ನ ದೇಶಕ್ಕೆ ಹೋಗಲು ಅಪ್ಪಣೆ ಬೇಡಿದನು

ರಾಣಿಯು "ಭಕ್ಷಿಯವರೇ ! ನೀವು ನಮ್ಮಲ್ಲಿ ನೌಕರಿ ಕೇಳಿದಿರಿ ನಾನು ಒಪ್ಪಿಕೊಂಡೆ ಈಗ ಹೊರಡುವುದೆಲ್ಲಿ ಬಂತು ?" ಎಂದಳು.

"ರಾಣಿಯವರೇ ! ನನ್ನ ಅಪರಾಧವನ್ನು ಮನ್ನಿಸಿರಿ ನಾನು ತಮ್ಮಲ್ಲಿ ಕೇಳಿದ್ದು ನೌಕರಿಯನ್ನಲ್ಲ ನಾನು ತಮ್ಮ ಆಶ್ರಯ ಭಿಕ್ಷೆಯನ್ನು ಕೇಳಿದೆ. ತಾವು ದಯಪಾಲಿಸಿದಿರಿ ನಾನು ಆಮರಣಾಂತ ತಮ್ಮ ಆಶ್ರಿತ."

"ನೀವು ನಿಮ್ಮ ಊರಿಗೆ ಹೋಗಿ ಏನು ಮಾಡುವಿರಿ ?"

"ಮಂಗಳೂರನ್ನು ಆಕ್ರಮಿಸಿ ಸ್ವಾಧೀನಪಡಿಸಿಕೊಳ್ಳುತ್ತೇನೆ "

"ಸೇಟರು ರಾಜ್ಯಭಾರ ಮಾಡುವುದಿಲ್ಲವೆನ್ನುತ್ತಾರೆ ಅವರು ಆ ರಾಜ್ಯವನ್ನು ಪುನಃ ಸುಲ್ತಾನರವರಿಗೆ ಒಪ್ಪಿಸಿಬಿಡುತ್ತಾರೆ"

"ರಾಣಿಯವರೇ ! ಅದಕ್ಕೆ ನಾನೇನು ಮಾಡಲಾದೀತು ? ನಗರದ ರಾಜ್ಯವನ್ನು ಅವರು ಸುಲ್ತಾನರಿಗೆ ಒಪ್ಪಿಸಿದರು ನಾವು ಅನಾಥರಾದೆವು ಈಗ ಪುನಃ ಅದೇ ಕಥೆ ! ಪುನಃ ಅನಾಥರಾಗಿ ದೇಶ ದೇಶ ಅಲೆಯಬೇಕು "

"ಅದೆಲ್ಲಾ ಏಕೆ ? ನೀವು ಇಲ್ಲೇ ಇದ್ದು ಬಿಡಿರಿ !"

"ಅದು ಹೇಗೆ ಆದೀತು ? ತಾಯಿ ! ಸುಲ್ತಾನರವರು ವಿಪ್ಲವಕಾರರನ್ನೆಲ್ಲಾ ಯಜ್ಞ ಮಾಡಿ ಬಿಡುತ್ತಾರೆ"

"ನೀವು ಅವರನ್ನೆಲ್ಲಾ ಉದ್ಧಾರ ಮಾಡಬಲ್ಲಿರಾ ?"

"ಉದ್ಧಾರ ಮಾಡಬಲ್ಲೆ ! ಅಥವಾ ಅವರ ಜೊತೆಯಲ್ಲಿ ಸಂತೋಷವಾಗಿ ಸಾಯ ಬಲ್ಲೆ !"

"ನೀವೇಕೆ ಈ ವಿಪ್ಲವವನ್ನು ಹೂಡಿದಿರಿ "

"ಸುಲ್ತಾನರ ಮೇಲಿನ ಛಲಕ್ಕಾಗಿ ! ಅವರಿಗೆ ಒಂದು ಕೈ ತೋರಿಸಬೇಕೆಂದು ಹಟ ತೊಟ್ಟಿದ್ದೇನೆ ದೈವಯೋಗವಿದ್ದರೆ ಒಂದು ಬಾರಿ ಅವರೊಡನೆ ಸಮರ ಕ್ಷೇತ್ರದಲ್ಲಿ ಸರಿ ಸರಿಯಾಗಿ ನಿಂತು ಮನದಣಿಯ ಯುದ್ಧ ಮಾಡಬೇಕೆಂದಿದೇನೆ "

"ಆ ಯುದ್ಧದಲ್ಲಿ ನೀವು ಬಿದ್ದರೆ ನಾವುಗಳು ಒಬ್ಬ ಮಹಾ ವೀರನನ್ನು ಕಳೆದು ಕೊಂಡಂತಾಗುವುದು ಸುಲ್ತಾನರು ಬಿದ್ದರೆ ಸುಲ್ತಾನೀ ರಾಜ್ಯವೇ ಅಸ್ತಂಗತವಾಗು ವುದು !"

"ರಾಣಿಯವರೇ ! ಅದೇ ಭಗವಂತನ ಇಚ್ಛೆ !"

ರಾಣಿಯು ಎಷ್ಟೋ ವಿಧವಾಗಿ ಸಮಾಧಾನಗೊಳಿಸಿದಳು ಕೊನೆಗೆ ಅವರ ಪ್ರಯಾಣಕ್ಕೆ ಬೇಕಾದ ಸಿದ್ಧತೆಯನ್ನು ಮಾಡುವುದಾಗಿ ಹೇಳಿದಳು

"ರಾಣಿಯವರೇ ! ಯಾವ ಸಿದ್ಧತೆಯೂ ಬೇಕಾಗಿಲ್ಲ ನಾನು ಇಲ್ಲಿಗೆ ಬಂದು ಹೋದುದು ಯಾರಿಗೂ ಪ್ರಕಾಶವಾಗಬಾರದು ನನಗೆ ರಹದಾರಿಯನ್ನು ಕೊಡಿಸಿದರೆ ಸಾಕು ಇಲ್ಲದಿದ್ದರೂ ನಾನೇ ನನ್ನ ದೇಶಕ್ಕೆ ಹೋಗಬಲ್ಲೆ"

ಭಕ್ಷಿಯು ರಾಣಿಯವರಿಂದ ರಹದಾರಿಯನ್ನು ಪಡೆದು ರಾಣಿಯವರನ್ನು ವಂದಿಸಿ ಬೀಳ್ಕೊಂಡು ಹೊರಟನು. ಮಂಗಳೂರಿಗೆ ಬಂದು ಸೇರಿದನು.

# ವಿಪ್ಲವದ ಭೈರವ

ಭಕ್ಷಿಯು ಹಿಂದಿರುಗುವ ಹೊತ್ತಿಗೆ ಮಂಗಳೂರು ಶಾಂತವಾಗಿರಲಿಲ್ಲ ಮಂಗಳೂರಿನ ಸಮಾಚಾರವು ಪುಂಖಾನುಪುಂಖವಾಗಿ ರಾಜಧಾನಿಗೆ ತಲುಪಿತು. ಸುಲ್ತಾನರಿಗೆ ಬಹಳ ಆಗ್ರಹ ಬಂದಿತು ಭಕ್ಷಿಯನ್ನು ಹಿಡಿದು ಶೂಲಕ್ಕೇರಿಸಬೇಕೆಂದೂ, ಫೌಜುದಾರನನ್ನು ರಾಜಧಾನಿಗೆ ಕಳುಹಿಸಬೇಕೆಂದೂ, ಮಂಗಳೂರಿನ ಅಧಿಕಾರವನ್ನು ನಗರದ ದಿರ್ವಾರವರಾದ ಜನಾಲುದ್ದೀನರೇ ವಹಿಸಿಕೊಳ್ಳಬೇಕೆಂದೂ ಸುಲ್ತಾನರಿಂದ ಹುಕ್ಕುಂ ಬಂತು ಈ ಆಜ್ಞೆಯನ್ನು ದಿರ್ವಾರವರು ಫೌಜುದಾರರಿಗೆ ಕಳುಹಿಸಿದರು ರಾಜಚಾರರು ಭಕ್ಷಿಯನ್ನು ಹುಡುಕುವುದಕ್ಕೆ ಆರಂಭಿಸಿದ್ದರು ನಗರದ ದಿರ್ವಾರವರು ಸೈನ್ಯಸಮೇತವಾಗಿ ಮಂಗಳೂರಿಗೆ ಬರುವರೆಂದು ಬಲವಾದ ವದಂತಿಯು ಹರಡಿತ್ತು

ಈ ಸಮಾಚಾರವೆಲ್ಲಾ ಭಕ್ಷಿಗೆ ತಿಳಿಯಿತು ಭಕ್ಷಿಯು ಇದರಿಂದ ಎಳ್ಳಷ್ಟೂ ಭಯಪಡಲಿಲ್ಲ ಜನಾಲುದ್ದೀನರಿಗೂ ತನಗೂ ಯುದ್ಧವಾದರೆ, ದಿರ್ವಾರಿಗೆ ಅಪಜಯವು ಸಿದ್ಧವೆಂದು ನಿಶ್ಚಯಿಸಿದನು ಆದರೆ ಅವನು ಮಾಡಬೇಕಾದ ಕೆಲಸಗಳು ಇನ್ನೂ ಉಳಿದಿತ್ತು ಮೊದಲು ರಾಧಾರಾಣಿಯವರಿಗೂ ದೌಲತ್‌ರಾಣಿಯವರಿಗೂ ಇಯಜ್‌ಖಾನರ ಸಮಾಚಾರವನ್ನು ತಿಳಿಸಬೇಕು ಫಾತಿಮಾಬೇಗಂರವರಿಗೆ ವಿಪ್ಲವದ ಕೊನೆಯ ಕಾಂಡವು ಆರಂಭವಾಗಿದೆಯೆಂಬುದನ್ನು ಅರುಹಬೇಕು

ದೌಲತ್‌ರಾಣಿಯವರಿಗೆ ಒಂದು ಪತ್ರವನ್ನು ಬರೆದನು ಆ ಪತ್ರವು ಈಪರಿಯಾಗಿದ್ದಿತು

"ಮಾತೃ ಶ್ರೀ ದೌಲತ್‌ರಾಣಿಯವರೇ,

"ನಾನು ಪ್ರಯಾಸದಿಂದ ಇಯಜ್‌ಖಾನರವರನ್ನು ಅನ್ವೇಷಣ ಮಾಡಿದೆ. ಅವರು ಸುಖದಿಂದ ಇದಾರೆ ತಮ್ಮನ್ನು ಮತ್ತು ರಾಧಾರಾಣಿಯವರನ್ನು ಬಹಳವಾಗಿ ವಿಚಾರಿಸಿದರು ಅವರು ಈಗ ಸುಲ್ತಾನರವರನ್ನು ಮರತೇಬಿಟ್ಟಿದ್ದಾರೆಂದು ಹೇಳಬಹುದು ತಾವು ಇನ್ನು ಒಂದು ವಾರದೊಳಗಾಗಿ ಕನ್ನಡಜಿಲ್ಲೆಗೆ ಬಂದರೆ, ಅವರ ಸಮಾಚಾರವನ್ನು ಪೂರ್ತಿಯಾಗಿ ತಿಳಿಯಬಹುದು. ಆದರೆ ದಕ್ಷಿಣ ಕನ್ನಡದಲ್ಲಿ ಮಹಾವಿಪ್ಲವವು ಎದ್ದಿದೆ ಸುಲ್ತಾನರ ಕಡೆಯವರು ವಿಪ್ಲವದ ಮೂಲಪುರುಷನಾದ ಭಕ್ಷಿಯನ್ನು ಹಿಡಿಯಲು ಸರ್ವಪ್ರಯತ್ನವನ್ನೂ ಮಾಡುತ್ತಿದ್ದಾರೆ. ಈ ವಿಪ್ಲವಕಾಲದಲ್ಲಿ ತಾವು ಈ ಪ್ರಾಂತ್ಯ ಬರುವುದು ಅಷ್ಟು ಕ್ಷೇಮವಲ್ಲ. ಆದರೆ ವಿಪ್ಲವಕಾರರು ಸ್ತ್ರೀಯರಮೇಲೆ ಕೈ ಎತ್ತುವುದಿಲ್ಲವಂತೆ ತಮ್ಮಂಥಾ ವೀರರಮಣೀಯರಿಗೆ ಭಯವೆಲ್ಲಿ ಬಂತು ?

"ಆದರೆ ದಕ್ಷಿಣಕನ್ನಡವು ಸುಲ್ತಾನರ ಕೈತಪ್ಪಿಹೋದಂತೆಯೇ !

ತಮ್ಮ ಸೇವಕ

ಹುಸೇನ್‌ಖಾನ್"

ಈ ಪತ್ರವನ್ನು ಗೋಪಾಲನ ಕೈಗೆ ಕೊಟ್ಟು ಅವನನ್ನು ಗುಪ್ತವೇಷದಿಂದ ನಗರಕ್ಕೆ ಹೋಗುವಂತೆ ಆಜ್ಞಾಪಿಸಿದನು ಅವನು ಹೊರಡುವಾಗ ಅವನ ಕೈಗೆ ಮತ್ತೊಂದು ಪತ್ರವನ್ನು ಕೊಟ್ಟು ಇದನ್ನು ಬಹಳ ಎಚ್ಚರಿಕೆಯಿಂದ ತೆಗೆದುಕೊಂಡು ಹೋಗಬೇಕು ದೌಲತ್‌ರಾಣಿಯವರ ಪತ್ರವು ಸುಲ್ತಾನರ ಕಡೆಯವರಿಗೆ ಸಿಕ್ಕಿದರೂ ಅಪಾಯವಿಲ್ಲ ಈ ಪತ್ರವು ಮಾತ್ರ ಶತ್ರುಗಳ ಕೈಗೆ ಸಿಕ್ಕಕೂಡದು ನೀನು ಅಕಸ್ಮಾತ್ ಶತ್ರುಗಳ ಕೈಗೆ ಸಿಕ್ಕಿದರೆ ಈ ಪತ್ರವನ್ನು ಸಂಪೂರ್ಣವಾಗಿ ನಾಶಗೊಳಿಸಿ ಬಿಡಬೇಕು" ಎಂದು ಹೇಳಿದನು ಅದು ಘಾತಿಮಾಬೇಗಂರವರಿಗೆ ಬರೆದಿದ್ದ ಪತ್ರ ಗೋಪಾಲನು ಫಕೀರನ ವೇಷವನ್ನು ಧರೆಸಿಕೊಂಡು ಎರಡು ಪತ್ರಗಳನ್ನೂ ತೆಗೆದುಕೊಂಡು ಹೊರಟನು

ಯಾವ ಅಡಚಣೆಯೂ ಇಲ್ಲದೆ ನಗರಕ್ಕೆಹೋಗಿ ತಲಪಿದನು ದರಿಯಾಬಾಗಿಗೆ ಹೋಗಿ ದೌಲತ್‌ರಾಣಿಯವರ ಭೇಟಿ ಮಾಡಿದನು ಆ ಪತ್ರವನ್ನು ಲಗುಬಗೆಯಿಂದ ಓದಿದರು ಫಕೀರನನ್ನು ವಿಶ್ರಮಿಸಿಕೊಳ್ಳುವಂತೆ ಹೇಳಿ ರಾಧಾರಾಣಿಯ ಹತ್ತಿರ ಹೋಗಿ ಆ ಪತ್ರವನ್ನು ತೋರಿಸಿದಳು ಅವರಿಬ್ಬರೂ ಆ ಪತ್ರಿಕಗೆ ನಾನಾವಿಧವಾದ ಅರ್ಥಗಳನ್ನು ಮಾಡಿ ಮಾತನಾಡಿಕೊಂಡರು.

ರಾಧಾರಾಣಿಯು "ದೌಲತ್ ! ಆ ವಿಪ್ಲವಕಾರನಾದ ಭಕ್ಷಿಯೇ ಇಯಜ್‌ಖಾನರಿರಬಹುದೆ ?" ಎಂದಳು

ದೌಲತ್ತಳು ನಕ್ಕು "ರಾಧಾರಾಣಿಯವರೇ ! ತಮ್ಮ ಬುದ್ಧಿಯು ಇಷ್ಟು ಕುಂಠಿತವಾಯಿತೇಕೆ ? ಮಹಾಪುರುಷರಾದ ಖಾನರು ವಿಪ್ಲವ ಮಾಡುವರೇ ? ಸರ್ವಥಾ ಇಲ್ಲ! ಈ ಭಕ್ಷಿಯು ಯಾರೋ ಒಬ್ಬ ಬಿಸಿ ರಕ್ತದ ಯುವಕನಿರಬೇಕು ಸಾಹಸಿಯೇ ಇರಬಹುದು ಪಾಪ ! ಆದರೇನು ಜನಾಲುದ್ದೀನರ ಕೈಗೆ ಸಿಕ್ಕಿ ಅನ್ಯಾಯವಾಗಿ ಸಾಯುವನು." ಎಂದಳು.

ದೌಲತ್ ಮತ್ತು ರಾಧಾರಾಣಿಯವರು ಮಂಗಳೂರಿಗೆ ಹೊರಡುವುದೆಂದೂ ಅಲ್ಲಿ ಇಯಜ್‌ಖಾನರ ದರ್ಶನವಾಗುವುದೆಂದೂ ನಿಶ್ಚಯಿಸಿದರು

ಆ ಫಕೀರನನ್ನು ಕರೆಕಳುಹಿಸಿ "ಫಕೀರರೇ ! ನಿಮಗೆ ಈ ಹುಸೇನ್‌ಖಾನರಿರುವ ಸ್ಥಳವು ಗೊತ್ತಿದೆಯೋ ?" ಎಂದು ರಾಧಾರಾಣಿಯು ಕೇಳಿದಳು

ಫಕೀರ—"ರಾಣಿಯವರೇ ! ಚೆನ್ನಾಗಿ ಬಲ್ಲೆ "

ರಾಧಾ—"ತಾವು ನಮ್ಮ ಜೊತೆಯಲ್ಲಿಯೇ ಬರುತ್ತಿರಾ ? ನಮಗೆ ಹುಸೇನ್ ಖಾನರಿರುವ ತಾವನ್ನು ತೋರುತ್ತೀರಾ ?"

ಫಕೀರ—"ನಾನು ತಮ್ಮ ಜೊತೆಯಲ್ಲಿ ಬರಲು ಒಪ್ಪುವುದಿಲ್ಲ ತಾವು ರಾಜಕೀಯ ಮಹಾ ವ್ಯಕ್ತಿಗಳು ತಮ್ಮ ಜೊತೆಯಲ್ಲಿ ನನ್ನಂತಹವರಿದ್ದರೆ ಅಪಾಯವಿದೆ. ತಾವು ಮಂಗಳೂರಿನ ಅರಮನೆಯಲ್ಲಿ ಬಂದಿಳಿದರೆ ಹುಸೇನ್ ಖಾನರು ಅಲ್ಲಿಗೆ ಬಂದು ಸನ್ನಿಧಾನದ ಭೇಟಿ ಮಾಡುವಂತೆ ಏರ್ಪಾಡು ಮಾಡುತ್ತೇನೆ.

ರಾಧಾ—ಫಕೀರರೇ ! ನಮ್ಮ ಜೊತೆಯಲ್ಲಿದ್ದರೆ ನಿಮಗೇನು ಅಪಾಯ ?"

ಫಕೀರ—ರಾಣಿಯವರೇ ! ದಕ್ಷಿಣ ಕನ್ನಡದಲ್ಲಿ ವಿಪ್ಲವವು ಬಹಳ ಉಗ್ರ ರೂಪವನ್ನು ತಾಳಿದೆ ಸುಲ್ತಾನರ ಕಡೆಯವರು ಯಾರೇ ಆಗಲಿ. ಅವರು ಫಕೀರರಾಗಲೀ ಗೋಸಾಯಿಗಳಾಗಲೀ ಅವರ ತಲೆಯನ್ನು ವಿದ್ರೋಹಿಗಳು ಹಾರಿಸಿಬಿಡುತ್ತಾರೆ !

ದೌಲತ್—ಅಚ್ಛಾ ! ವಿದ್ರೋಹಿಗಳು ಅಷ್ಟು ಗಟ್ಟಿಗರೇ !

ಫಕೀರ—ಹೌದು ! ತಾಯಿ ! ಸಂದೇಹವೇನು ? ಈ ಬಾರಿ ನಗರದ ದಿವಾನರು ಹೋಗಲೀ, ಸ್ವಯಂ ಸುಲ್ತಾನರೇ ಬರಲಿ ಈ ವಿದ್ರೋಹವನ್ನು ಅಣಗಿಸಲಾಗುವುದಿಲ್ಲ ಕ್ರಾಂತಿಗೇ ಜಯ

ದೌಲತ್ತಳು ನಕ್ಕಳು

ದೌಲತ್—ಫಕೀರರೇ ನಮಗೇಕೆ ಈ ವಿದ್ರೋಹದ ಚಿಂತೆ ? ಆದರೂ ಆ ಭಕ್ಷಿಯನ್ನು ಒಂದು ಬಾರಿ ನೋಡಬೇಕೆನಿಸುತ್ತದೆ

ಫಕೀರ—ಹೌದು ರಾಣಿಯವರೇ, ಅಂತಹ ಮಹಾಪುರುಷನೇ ಅವನು.

ದೌಲತ್—ಫಕೀರರೇ, ನೀವು ಆ ಭಕ್ಷಿಯನ್ನು ನೋಡಿದ್ದೀರೇನು ?

ಫಕೀರ—ನೋಡಿದ್ದೇನೆ

ದೌಲತ್—ನೀವು ಚಿಕ್ಕವಯಸ್ಸಿನವರಂತೆ ಕಾಣುತ್ತೀರಿ ನೀವೇಕೆ ಫಕೀರರಾದಿರಿ

ಫಕೀರ—ರಾಣಿಯವರೇ, ನಾನು ನಿಜವಾದ ಫಕೀರನಲ್ಲ. ವೇಷಧಾರಿ.

ದೌಲತ್—ಈ ವೇಷವೇಕೆ ನಿಮಗೆ ?

ಫಕೀರ—ಈ ವಿಪ್ಲವ ಕಾಲದಲ್ಲಿ ಈ ವೇಷವಿದ್ದರೆ ಉಭಯ ಪಕ್ಷಗಳಿಂದಲೂ ರಕ್ಷಣೆ ಇದೆ.

ದೌಲತ್—ಹಾಗಾದರೆ ನಿಮ್ಮ ನಿಜವಾದ ಪರಿಚಯವನ್ನು ಕೊಡುವಿರಾ ?

ಫಕೀರ—ನನ್ನ ಪರಿಚಯವೇ ? ಅದರಿಂದ ನಿಮಗೇನು ಲಾಭ ? ರಾಣಿಯವರೇ ನಾನೊಬ್ಬ ವಿದ್ರೋಹಿ ?

ದೌಲತ್ತಳೂ ರಾಧೆಯೂ ಚಕಿತರಾದರು.

ಫಕೀರ—ರಾಣಿಯವರೇ! ನನಗೆ ಅಪ್ಪಣೆ ಕೊಡಿರಿ! ನಾನು ಹೊರಡುತ್ತೇನೆ

ದೌಲತ್—ಎಲ್ಲಿಗೆ ಹೋಗುತ್ತೀರಿ!

ಮಂಗಳೂರಿಗೆ ಹಿಂದಿರುಗುತ್ತೇನೆ

ರಾಧೆ—(ನಗುತ್ತಾ) ಫಕೀರರೇ ಬಹಳ ದಣಿದು ಬಂದಿದ್ದೀರಿ ಈ ರಾತ್ರಿ ಇಲ್ಲಿ ವಿಶ್ರಮಿಸಿಕೊಳ್ಳಿರಿ. ನಾಳೆ ಪ್ರಯಾಣಮಾಡಬಹುದು.

ಫಕೀರ—ರಾಣಿಯವರೇ ನಾನು ವಿದ್ರೋಹಿ ಇಲ್ಲಿ ಹೇಗಿರಲಿ?

ರಾಧಾ—ನೀವು ನಮ್ಮ ವಿದ್ರೋಹಿಗಳಲ್ಲ! ನಮ್ಮ ಕಾರ್ಯಾರ್ಥವಾಗಿ ಇಲ್ಲಿಗೆ ಬಂದಿದ್ದೀರಿ. ನಿಮ್ಮನ್ನು ಉಪಚರಿಸುವುದು ನಿಮಗೆ ರಕ್ಷಣೆ ಕೊಡುವುದು ನಮ್ಮ ಕರ್ತವ್ಯ

ದೌಲತ್—ಫಕೀರರೇ ತಮ್ಮಲ್ಲಿ ಮತ್ತೊಂದು ಮಾತು ಹೇಳಬೇಕಾಗಿದೆ ತಮಗೂ ಈ ಹುಸೇಖಾನರಿಗೂ ಹೇಗೆ ಸ್ನೇಹ?

ಫಕೀರ—ನನಗೂ ಅವರಿಗೂ ಸ್ನೇಹವಿಲ್ಲ ನಮ್ಮ ಭಕ್ಷಿಯವರಿಗೂ ಹುಸೇಖಾನರಿಗೂ ಏಕದೇಹನ್ಯಾಯ

ಇಬ್ಬರು ರಾಣಿಯರ ಮುಖವೂ ವಿವರ್ಣವಾಯಿತು

ಫಕೀರ—(ದೌಲತ್ ರಾಣಿಯವರ ಕಡೆ ತಿರುಗಿ) ರಾಣಿಯವರೇ! ನಮ್ಮಲ್ಲಿ ತಮಗೆ ಸಂದೇಹವಾಗಿದೆಯೇನು? ಇದರಲ್ಲೇನೋ ವಿದ್ರೋಹಿಗಳ ಪಿತೂರಿಯಿದೆ ಯೆಂದು ಭಯಪಡುವಿರೇನು?

ದೌಲತ್—ಇಲ್ಲ. ಫಕೀರರೇ, ನಮಗೆ ಭಯವೆಂಬುದೇ ಇಲ್ಲ. ಇದೆಲ್ಲಾ ವಿಚಿತ್ರವಾಗಿದೆ

ರಾಧಾರಾಣಿಯು ಫಕೀರನಿಗೆ ಭೋಜನ ವಿಶ್ರಾಂತಿಗಳಿಗೆ ತಕ್ಕ ಏರ್ಪಾಡು ಮಾಡಿ, “ಫಕೀರರೇ! ನೀವು ಇಂದು ದರಿಯಾಬಾಗಿನಲ್ಲಿ ಸುಖವಾಗಿ ಕಳೆಯಿರಿ. ನಾಳೆಯ ದಿನ ನಿಮ್ಮನ್ನು ಕಳಿಸಿಕೊಡುವೆವು” ಎಂದಳು.

ಗೋಪಾಲನು ದರಿಯಾಬಾಗಿಗೆ ಬಂದುದು ಇದೇನು ಹೊಸದಲ್ಲ ಅವನಿಗೆ ಇಲ್ಲಿಯ ವಿದ್ಯಮಾನಗಳೆಲ್ಲವೂ ಚೆನ್ನಾಗಿ ಗೊತ್ತಿದೆ ಬಹಳ ಉಪಾಯದಿಂದ ಫಾತಿಮಾ ಬೇಗಂರನ್ನು ಕಂಡುಮಾತನಾಡಿದನು ಅವರಿಗೆ ಭಕ್ಷಿಯ ಪತ್ರಿಕೆಯನ್ನು ತಲುಪಿಸಿದನು.

ಫಾತಿಮಳು ಆ ಪತ್ರಿಕೆಯನ್ನು ಬಿಚ್ಚಿ ಓದಿದಳು ಪುನಃ ಪುನಃ ಓದಿದಳು. ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು, ಮೈ ನಡುಗುತ್ತಿತ್ತು! ಪತ್ರಿಕೆಯ ವಿವರವು ಹೀಗಿತ್ತು.

"ಪ್ರಿಯ ಸಹೋದರಿ ಫಾತಿಮಾಬೇಗಂರವರೇ !

"ಮಂಗಳೂರಿನಲ್ಲಿ ವಿಪ್ಲವವು ಧಗಧಗನೆ ಉರಿಯುತ್ತಿದೆ. ಇಲ್ಲಿ ಸುಲ್ತಾನರ ಅಧಿಕಾರವು ಹೋಗಿಬಿಟ್ಟಿದೆ ನಾವು ಈ ರಾಜ್ಯವನ್ನು ಇಂದೋ ನಾಳೆಯೋ ಹಿಡಿಯುತ್ತೇವೆ ನಾವು ಈ ರಾಜ್ಯದ ಅಧಿಕಾರಿಗಳೆಂದು ಡಂಗುರ ಹೊಡಿಸಿಲ್ಲವೇ ಹೊರತು ಈಗ ನಿಜವಾದ ಅಧಿಕಾರಿಗಳು ನಾವೇ ಆಗಿದೇವೆ.

"ನಗರದ ದಿರ್ವಾರವರು ವಿಪ್ಲವವನ್ನು ಅಣಗಿಸಲು ಇಲ್ಲಿಗೆ ಬರುತ್ತಾರಂತೆ. ಅವರು ವೀರಾಗ್ರೇಸರರೆಂಬುದನ್ನು ನಾನು ಬಲ್ಲೆ ಆದರೆ ಅವರಿಗೆ ಪರಾಭವವು ಕಟ್ಟಿಟ್ಟಿದೆ ಸ್ವಯಂ ಸುಲ್ತಾನರೇ ಬಂದಿದ್ದರೂ ಇಷ್ಟೆ ಆದರೂ ಜಯಾಪಜಯಗಳು ಸ್ಥಿರವಲ್ಲ ನಮ್ಮನ್ನು ಹಿಡಿದು ಶೂಲಕ್ಕೇರಿಸಬೇಕೆಂದು ಸುಲ್ತಾನರ ಆಜ್ಞೆಯಾಗಿದೆ.

ನಾವು ಗೆದ್ದರೆ ಈ ರಾಜ್ಯದ ರಾಜತ್ವವು ನಮ್ಮದು ತಮ್ಮ ಸಂಕಲ್ಪವು ಫಲಿಸಿದಂತಾಯಿತು ದೈವಯೋಗದಿಂದ ನಾನು ಸುಲ್ತಾನರ ಕಡೆಯವರ ಕೈಗೆ ಸಿಕ್ಕಿಬಿಟ್ಟರೆ ನನ್ನನ್ನು ಶೂಲಕ್ಕೇರಿಸುವುದು ಖಂಡಿತ ಒಂದು ಪಕ್ಷ ಹಾಗಾದರೆ ತಾವು ದುಃಖಿಸಬೇಡಿರಿ ಇದೇ ತಮ್ಮ ಸೋದರನ ಕಡೆಯ ವಂದನೆಗಳು

ತಮ್ಮ ಪ್ರೀತಿಯ ಸಹೋದರ

ಭಕ್ಷಿ"

ಮಾರನೆಯ ದಿನ ಗೋಪಾಲನು ರಾಣಿಯವರ ಅಪ್ಪಣೆ ಪಡೆದು ಹೊರಟನು. ಹೊರಡುವ ಮುನ್ನ ಫಾತಿಮಾಬೇಗಂರವರನ್ನು ಭೇಟಿ ಮಾಡಿದನು "ನಾನು ಅಲ್ಲಿಗೆ ಬಂದು ಭಕ್ಷಿಯವರ ಭೇಟಿ ಮಾಡುವುದಾಗಿ ತಿಳಿಸು" ಎಂದು ಅವರು ಹೇಳಿದರು. ಗೋಪಾಲನು ದಕ್ಷಿಣಕನ್ನಡಕ್ಕೆ ಹೋಗಿ ಸೇರಿದನು

ವಿಪ್ಲವವು ಭಯಂಕರ ರೂಪವನ್ನು ತಾಳಿತ್ತು ಎಲ್ಲೆಲ್ಲಿಯೂ ಸರ್ಕಾರದ ಭಂಡಾರಗಳನ್ನು ಲೂಟಿ ಮಾಡಲಾರಂಭಿಸಿದರು ಒಂದರ ಮೇಲೊಂದರಂತೆ ದುಷ್ಟರಾದ ಅಧಿಕಾರಿಗಳ ಕೊಲೆಗಳಿಗೆ ಆರಂಭವಾಯಿತು. ಸರ್ಕಾರದ ಅಧಿಕಾರಿಗಳು ಎಷ್ಟೋ ಜನ ಯುವಕರನ್ನು ಗುಂಡುಹೊಡೆದು ಕೊಂದರು

ಕುತುಬುದ್ದೀನನು ತನ್ನ ಸರ್ವ ಶಕ್ತಿಯನ್ನೂ ವಿನಿಯೋಗಿಸಿ ಭಕ್ಷಿಯನ್ನು ಹಿಡಿಯಬೇಕೆಂದು ಪ್ರಯತ್ನ ಮಾಡುತ್ತಿದ್ದನು ಭಕ್ಷಿಯನ್ನು ಹಿಡಿದುಕೊಟ್ಟರೆ ಹೆಚ್ಚು ಹಣ ಕೊಡುವುದಾಗಿ ಕೆಲವರಿಗೆ ಗುಪ್ತವಾಗಿ ವಾಗ್ದಾನ ಮಾಡಿದ್ದನು. ನಗರದ ದಿರ್ವಾರವರು ಬಂದು ಮಂಗಳೂರಿನ ಅಧಿಕಾರವನ್ನು ವಹಿಸಿಕೊಳ್ಳುತ್ತಾರೆಂದು ತನ್ನನ್ನು ಸುಲ್ತಾನರ ಸಮ್ಮುಖಕ್ಕೆ ಕಳುಹಿಸುತ್ತಾರೆಂದು ಗೊತ್ತಾಗಿಹೋಗಿತ್ತು. ಸುಲ್ತಾನರ ಸಮ್ಮುಖಕ್ಕೆ ಹೋದರೆ ಅಲ್ಲಿಗೆ ತನ್ನ ಭವಿಷ್ಯವು ತೀರಿತೆಂದು ಖಚಿತ ಮಾಡಿಕೊಂಡಿದ್ದನು.

ಭಕ್ಷಿಯು ಈ ವಿಪ್ಲವಕಾರರೊಡನೆ ಸೇರಿರುವುದೇನೋ ನಿಜ! ಆದರೆ ಇವನೇ ಮೂಲಪುರುಷನಲ್ಲವೆಂದೂ ಕಾರ್ಕಳದಲ್ಲಿರುವ ಫಕೀರನೋ ಅಥವಾ ಮತ್ತಾವನೋ ಈ ವಿಪ್ಲವದ ಮೂಲಪುರುಷನೆಂದೂ ಅವನ ನಂಬಿಕೆ ಇತ್ತು ಒಂದೆರಡು ದಿನಗಳಲ್ಲಿ ಈ ಭಕ್ಷಿಯನ್ನು ಹೇಗಾದರೂ ಮಾಡಿ ಹಿಡಿಯಬೇಕು ಅವನೊಡನೆ ಸ್ನೇಹ ಮಾಡಿ ಕೊಳ್ಳಬೇಕು ಈ ಪಿತೂರಿಯೆಲ್ಲಾ ಇಂಗ್ಲೀಷರದೋ ಅಥವಾ ಮರಾಟರದೋ, ಎಂದು ಸಾಬೀತು ಮಾಡಿಡಬೇಕು. ಇದೆಲ್ಲಾ ಭಕ್ಷಿಯಿಂದಲೇ ಮಾಡಿಸಬೇಕು ಭಕ್ಷಿಯನ್ನು ಸುಲ್ತಾನರ ಸಮ್ಮುಖಕ್ಕೆ ಕಳಿಸಬೇಕು ಅವನನ್ನು ಉಳಿಸುವ ಪ್ರಯತ್ನ ಮಾಡಬೇಕು ಇಷ್ಟು ಮಾಡಿದರೆ ತಾನು ಬದುಕಿಕೊಂಡೆ ಎಂದು ಭಾವಿಸಿದನು ಇದೆಲ್ಲಾ ದಿವಾನರು ಮಂಗಳೂರಿಗೆ ಬರವುದರೊಳಗೆ ಮಾಡಿಡಬೇಕು ಎಂದು ಕೊಂಡನು ಸರ್ಕಾರದ ಅಧಿಕಾರಿಗಳು ವಿಪ್ಲವದ ಮುಖಂಡರುಗಳನ್ನು ಹಿಡಿಯಲು ಸರ್ವಪ್ರಯತ್ನವನ್ನೂ ಮಾಡುತ್ತಿದ್ದರು

ಪೆರಡೂರು ಎಂಬ ಸ್ಥಳದಲ್ಲಿ ಗೋವಿಂದನನ್ನು ಹಿಡಿದರು ಅವನನ್ನು ಪಡು ಬಿದುರೆಗೆ ಕರೆತಂದು ಫೌಜುದಾರರಿಗೆ ಒಪ್ಪಿಸಿದರು ಫೌಜುದಾರನಿಗೆ ಆಶಾಕಿರಣವು ಮೊಳೆಯಿತು ಗೋವಿಂದನನ್ನು ಬಹಳ ಆದರದಿಂದ ಮಾತನಾಡಿಸಿದನು ಅವನಿಗೆ ನಾನಾವಿಧವಾಗಿ ಬೋಧನೆ ಮಾಡಿದನು

ಫೌಜುದಾರ್ ಗೋವಿಂದ್! ಹಿಂದೆ ಒಂದುಬಾರಿ ನಾನು ನಿನ್ನನ್ನು ನೋಡಿದ್ದೆ ಅಂದೇ ನಾನು ನಿನಗೆ ಹೇಳಿದೆ ನಿನ್ನನ್ನು ನೋಡಿದರೆ ನನಗೆ ನಿನ್ನ ಮೇಲೆ ಬಹಳ ಪ್ರೀತಿಯುಹುಟ್ಟುತ್ತಿದೆಯೆಂದು ಅಂದು ನಿನ್ನ ಮೇಲಿನ ಕರುಣೆಯಿಂದ ನಿನಗೆ ಜೀವ ದಾನ ಮಾಡಿದೆ ಪುನಃ ಈ ಕೆಲಸಕ್ಕೆ ಏಕೆ ಹೋದೆ! ಪುನಃ ಏಕೆ ಸಿಕ್ಕಿಕೊಂಡೆ? ಈಗ ನಾನು ನಿನ್ನನ್ನು ಹೇಗೆ ತಪ್ಪಿಸುವುದು?

ಗೋವಿಂದ—ಫೌಜುದಾರನೆ! ನೀನು ಅಂದು ನನ್ನನ್ನು ಬಿಟ್ಟೆ ನಿಜ, ಆದರೆ ನನ್ನ ಮೇಲಿನ ಕರುಣೆಯಿಂದ ಬಿಡಲಿಲ್ಲ ಅಂದೂ ನಿನ್ನ ಕರುಣೆಯು ನನಗೆ ಬೇಕಾಗಿ ರಲಿಲ್ಲ ಇಂದೂ ಬೇಕಾಗಿಲ್ಲ ನೀನು ಮೋತೀಬೀ ಮೋಹದಿಂದ ನನ್ನನ್ನು ಬಿಟ್ಟೆ. ನೀನು ಅಂದು ನನ್ನನ್ನು ಕೊಲೆ ಮಾಡಿದ್ದರೆ ಈ ಮಂಗಳೂರು ಅಂದೇ ನಿಮ್ಮ ಕೈ ತಪ್ಪಿಹೋಗುತ್ತಿತ್ತು ಅಷ್ಟೆ ಅಲ್ಲ, ನಿನ್ನ ಮೋತೀಬೀ ಅಂದೇ ನಿನ್ನನ್ನು ಕೊಂದು ತಾನು ಪ್ರಾಣ ತೆಗೆದುಕೊಳ್ಳುತ್ತಿದ್ದಳು ನಿನ್ನಿಂದ ಅವಳ ತಾಯಿಯು ಮರುಮರುಗಿ ಸತ್ತಳು. ನಿನ್ನ ಕೈಯಿಂದಲೇ ಅವಳ ಸಹೋದರನು ಸತ್ತಿದ್ದರೆ, ಅವಳು ಮಾನವಿಯಾಗಿದ್ದರೆ ನಿನ್ನನ್ನು ಕ್ಷಮಿಸುತ್ತಿರಲಿಲ್ಲ ನೀನು ನನಗಾಗಿ ಪರಿತಾಪ ಪಡಬೇಡ. ನೀನು ನಿನಗಾಗಿ ಪರಿತಾಪ ಪಟ್ಟುಕೋ ಏಕೆಂದರೆ ಇವು ನಿನ್ನ ಕಡೆಯ ದಿನಗಳು.

ಫೌಜುದಾರ್—ಗೋವಿಂದ, ನೀನು ಎಲ್ಲಾ ಬಲ್ಲೆ ! ಮುಚ್ಚಿಡುವುದರಿಂದ ಫಲವೇನು ? ನಾನು ನನ್ನ ಮೋತೀಬೀಯನ್ನು ಪ್ರಾಣಕ್ಕಿಂತಲೂ ಹಚ್ಚಾಗಿ ಪ್ರೀತಿಸುತ್ತೇನೆ ಈಗ ಅವಳು ನನ್ನ ಪತ್ನಿ ನೀನು ನನ್ನ ಬಂಧು ನೋಡು, ನಿಮ್ಮ ವಿಪ್ಲವವು ಜಯಿಸುವುದಿಲ್ಲ ಕೊನೆಗೆ ಸುಲ್ತಾನರ ದಂಡು ಬಂದು ನಿಮ್ಮೆಲ್ಲರನ್ನು ಧ್ವಂಸ ಮಾಡಿಬಿಡುತ್ತಾರೆ ನೀನು ನನಗೆ ಭಕ್ಷಿಯನ್ನು ತೋರಿಸಿಕೊಡು ನಾನು ಅವನಿಗೆ ಯಾವ ತೊಂದರೆಯನ್ನು ಕೊಡುವುದಿಲ್ಲ ಅಪಮಾನ ಮಾಡುವುದಿಲ್ಲ ಅವನಲ್ಲಿ ಸ್ನೇಹ ಮಾಡಿಕೊಳ್ಳುತ್ತೇನೆ ಅದರಿಂದ ನಾವೆಲ್ಲರೂ ಸುಖವಾಗಿರಬಹುದು

ಗೋವಿಂದ—ಅಯ್ಯೋ ! ಹುಚ್ಚ ! ಕತ್ತಿಯಿದ್ದರೆ ಕೊಡು ನನ್ನ ಪ್ರಾಣವನ್ನು ನನ್ನ ಕೈಯಿಂದಲೇ ಕಿತ್ತು ನಿನ್ನ ಕೈಗೆ ಕೊಡುತ್ತೇನೆ ನಾನು ಭಕ್ಷಿಯನ್ನು ನಿನಗೆ ಹಿಡಿದು ಕೊಡುವುದೇ ? ಅದನ್ನೆಂದಿಗೂ ಸ್ಮರಣೆ ಮಾಡಬೇಡ, ಭಕ್ಷಿಯನ್ನು ನೀನು ಹಿಡಿಯಲಾರೆ ನಿಮ್ಮ ಸುಲ್ತಾನರ ಸೈನ್ಯವು ಇಲ್ಲಿಗ ಬಂದು ಏನೂ ಮಾಡಲಾರದು ಈಗ ಇಲ್ಲಿಗೆ ನಿಮ್ಮ ಸೈನ್ಯವು ಬಂದರೆ ಈ ಇಡೀ ದಕ್ಷಿಣ ಕರ್ನಾಟಕವು ಜ್ವಾಲಾಮುಖಿಯಂತೆ ಸಿಡಿದು ಅಗ್ನಿ ವರ್ಷವನ್ನು ಕಾರುತ್ತದೆ ಈ ಬಾರಿಗೆ ಮಂಗಳೂರು ನಿಮ್ಮ ಕೈ ಬಿಟ್ಟು ಹೋಯಿತು ಇದಕ್ಕೆ ನೀನೇ ಕಾರಣ ವಿಪ್ಲವಕಾರರಾದರೂ ಇಂದೋ ನಾಳೆಯೋ ನಿನ್ನ ಪ್ರಾಣಾಪಹಾರ ಮಾಡುತ್ತಾರೆ. ನೀನು ತಪ್ಪಿಸಿಕೊಂಡು ಉಳಿದರೆ ಸುಲ್ತಾನರು ನಿನ್ನನ್ನು ಗಲ್ಲಿಗೇರಿಸುತ್ತಾರೆ ನಿನಗೆ ಇದು ಕಡೆಯ ದಿನ

ಫೌಜುದಾರನು ನಿರಾಶನಾಗಿ ಗೋವಿಂದನನ್ನು ಗುಪ್ತವಾಗಿ ಬಂಧನದಲ್ಲಿರಿಸಿ ಹೊರಟುಹೋದನು

ತನ್ನ ಅಂತಃಪುರದಲ್ಲಿ ಮಾಧವಿ ಯಿರುವ ಮಹಲಿಗೆ ಹೋಗಿ ಅವಳನ್ನು ಭೇಟಿ ಮಾಡಿದನು ಮಾಧವಿಯು ವಿಲಾಸಮಯಿ ಅವಳಿಗೆ ಹೊರಗಡೆ ಧೂಮಾವೃತವಾಗಿರುವ ಜಗತ್ತು ಕಾಣುತ್ತಲೇ ಇಲ್ಲ ಕುತುಬುದ್ದೀನನು ತನ್ನನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಮಾಡುತ್ತಾನೆ ಸರ್ವ ಸೌಖ್ಯಗಳೂ ತನಗಿದೆ ಮತ್ತೇನು ಬೇಕು ? ಅವಳು ನಗುತ್ತ ಕುಣಿಯುತ್ತ ಬಳಕುತ್ತ ಬಂದು ಬಾಹುಗಳಿಂದ ಕುತುಬುದ್ದೀನನನ್ನು ಆಲಂಗಿಸಿ ಚುಂಬಿಸಿದಳು ಕುತುಬುದ್ದೀನನ ಮುಖದಲ್ಲಿ ಜೀವಕಳೆಯೇ ಇಲ್ಲ ನಿಸ್ಸತ್ವನಾಗಿ ನಿಸ್ತೇಜಸ್ಕನಾಗಿದ್ದಾನೆ ಅವನು ಮಾಧವಿಯ ಬಾಹುಬನ್ಧನದಿಂದ ಬಿಡಿಸಿಕೊಂಡು ಆಸನದಲ್ಲಿ ಕುಳಿತನು ಮಾಧವಿಯೂ ಅವನ ಸಮೀಪದಲ್ಲಿ ಕುಳಿತಳು ಅವನು ನಿರ್ವಿಣ್ಣನಾಗಿ ಸ್ಖಲಿತ ವಚನಗಳಿಂದ ಮಾತನಾಡತೊಡಗಿದನು. “ಮಾಧವಿ ! ನಾನು ನಿನ್ನನ್ನು ನೋಡಿದಂದಿನಿಂದ ಒಂದೇ ವಿಧವಾಗಿ ಪ್ರೀತಿ ಮಾಡಿದೆ ನೀನು ನನ್ನಲ್ಲಿ ಒಲಿದು ಬಂದೆ ನಿಮ್ಮ ಬಂಧುಗಳು ಈ ಹಿಂದೂಜನ ನಾನು ಬಲಾತ್ಕರಿಸಿ ನಿನ್ನನ್ನು ತಂದೆನೆಂದು ದೂರುತ್ತಾರೆ ಅದರಿಂದ ಈಗ ಏನೂ

ಬಾಧಕವಿಲ್ಲ. ನನ್ನ ನಿನ್ನ ಋಣಾನುಬಂಧ ತೀರಿತು ನೀನು ಹೊರಟುಹೋಗು ಎಲ್ಲಿಯಾದರೂ ಸುಖವಾಗಿರು. ನಿನ್ನ ಆಭರಣಗಳನ್ನೆಲ್ಲಾ ನೀನೇ ತೆಗೆದುಕೊಂಡು ಹೋಗು ಬೇಕಾದಷ್ಟು ಹಣ ಕೊಡುತ್ತೇನೆ ಮತ್ತೇನು ಮಾಡಬಲ್ಲೆ ?" ಎಂದು ಹೇಳಿದನು.

ಆ ನ ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು

ಮಾಧವಿಗೆ ಗಾಬರಿಯಾಯಿತು ಅವಳಿಗೆ ತಡೆಯಲಾರದಷ್ಟು ದುಃಖ ಬಂತು. ಬಿಕ್ಕಿ ಬಿಕ್ಕಿ ಅಳುತ್ತಾ "ಏಕೆ, ನಾನೇಕೆ ಹೋಗಬೇಕು ? ನೀವೇಕೆ ಇಷ್ಟು ಖಿನ್ನರಾಗಿದ್ದೀರಿ ? ನನ್ನದೇನು ಅಪರಾಧ ?" ಎಂದಳು

"ಅಪರಾಧ ! ಅಪರಾಧವು ನನ್ನದು ವಿಪ್ಲವವು ಮೇರೆ ಮೀರಿ ಉರಿಯುತ್ತಿದೆ. ನನ್ನ ಅಧಿಕಾರವು ಇಂದೋ ನಾಳೆಯೋ ಪರಿಸಮಾಪ್ತವಾಗುತ್ತದೆ ಈ ವಿಪ್ಲವವನ್ನು ಅಡಗಿಸಲಾಗಲಿಲ್ಲವೆಂದು ಸುಲ್ತಾನರು ನನ್ನನ್ನು ಶಿಕ್ಷಿಸುತ್ತಾರೆ ನಿನ್ನ ಸಹೋದರನು ವಿಪ್ಲವಕಾರರ ಮುಖಂಡ ! ಅವನ ತಂಗಿ ನೀನೆಂದು ಸುಲ್ತಾನರವರಗೂ ವರದಿಯಾಗುತ್ತದೆ ನಾನು ವಿಪ್ಲವಕಾರರಿಗೆ ಮದತ್ತಾಗಿದ್ದೇನೆಂದೂ ತುಫಾನು ಬಂದರೂ ಬರಬಹುದು ಸರ್ಕಾರದ ಅಧಿಕಾರಿಗಳು ಗೋವಿಂದನನ್ನು ಹಿಡಿದುಬಿಟ್ಟಿದ್ದಾರೆ. ನಾನು ಅವನನ್ನು ಗಲ್ಲಿಗೇರಿಸಬೇಕು. ನನ್ನ ಕೈಯಿಂದಲೇ ಅವನ ಕೊಲೆಯಾದರೆ ನೀನೆಷ್ಟು ದುಃಖಿಸುವಿ ? ಅವರನ್ನು ಈ ಬಾರಿಯೂ ಬಿಟ್ಟುಬಿಟ್ಟರೆ ನಾನು ಗಲ್ಲಿನ ಮರಕ್ಕೆ ಏರಬೇಕಾಗುವುದು ಅದೆಲ್ಲದಕ್ಕೂ ಸಿದ್ಧನಾಗಿ ಈ ದುಃಖವಾರ್ತೆಯನ್ನು ನಿನಗೆ ಹೇಳಿಹೋಗಲು ಬಂದೆ. ಇದೇ ನಮ್ಮಿಬ್ಬರ ಕಡೆಯ ದರ್ಶನ !"

ಮಾಧವಿಯು ಅಳುತ್ತಾ ಕುತುಬುದ್ದೀನನನ್ನು ತಬ್ಬಿಕೊಂಡು "ಇಲ್ಲ ! ಅದಾಗದು. ನಿಮಗೂ ಅಶುಭವಾಗಬಾರದು ನನ್ನ ಪ್ರೀತಿಯ ಸಹೋದರನೂ ಉಳಿದುಕೊಳ್ಳಬೇಕು. ಅಂಥದೊಂದು ಉಪಾಯ ನೀವು ಹುಡುಕಬೇಕು" ಎಂದಳು

"ಇಲ್ಲ ! ಮಾಧವಿ ! ಅದೆಲ್ಲಾ ಮಾಡಿ ನೋಡಿದೆ ಫಲಿಸಲಿಲ್ಲ ಗೋವಿಂದನನ್ನು ನೋಡಿ ಎಷ್ಟೋ ವಿಧವಾಗಿ ಪ್ರಾರ್ಥನೆ ಮಾಡಿದೆ ಆ ಭಕ್ಷಿಯನ್ನು ಹಿಡಿದು ಕೊಡು—ಎಲ್ಲವೂ ಸರಿಹೋಗುತ್ತದೆಂದು !"

ಮಾಧವಿಯು ಆತುರದಿಂದ "ಭಕ್ಷಿಯನ್ನು ಹಿಡಿದುಕೊಟ್ಟರೆ ಎಲ್ಲಾ ಸರಿಹೋಗುವುದೇನು ?" ಎಂದಳು.

"ಹೌದು !"

"ಭಕ್ಷಿಯನ್ನು ಹಿಡಿದುಕೊಡುವಂತೆ ನಾನು ನನ್ನ ಅಣ್ಣನನ್ನು ಪ್ರೇರೇಪಿಸುತ್ತೇನೆ"

ಕುತುಬುದ್ದೀನನು ನಿರಾಶಪೂರಿತವಾದ ನಗುವನ್ನು ನಗುತ್ತಾ "ಮಾಧವಿ !

ಅದು ಸಾಧ್ಯವಿಲ್ಲ. ನಿನಗೆ ಈ ವಿಪ್ಲವಕಾರರ ಮನಸ್ಸು ಗೊತ್ತಿಲ್ಲ ಯಾವ ಉಪಾಯ ದಿಂದಲೂ ಅವರನ್ನು ಬಗ್ಗಿಸಲು ಸಾಧ್ಯವಿಲ್ಲ! ಅದು ಫಲವಿಲ್ಲದ ಯೋಚನೆ!" ಎಂದನು

ಮಾಧವಿ—ಸರಿ! ಆ ಭಕ್ಷಿಯನ್ನು ನಾವೇ ಹಿಡಿದುತಂದರೆ?

ಕುತುಬುದ್ದೀನ—ನೀನೂ, ನಾನೂ, ನಿಮ್ಮಣ್ಣನೂ ಎಲ್ಲರೂ ಉಳಿದುಕೊಳ್ಳ ಬಹುದು

ಮಾಧವಿ—ಹಾ! ಆ ಭಕ್ಷಿಯನ್ನು ನಾನು ಹಿಡಿದುಕೊಟ್ಟರೆ ಅವರನ್ನು ನೀವೇನು ಮಾಡುತ್ತೀರಿ? ಗೊತ್ತೇ ಇದೆ, ಶೂಲಕ್ಕೆ ಹಾಕುತ್ತೀರಿ ಉಹೂಂ! ನನ್ನಿಂದ ಆಗದು ನಾನು ಆ ಕೆಲಸವನ್ನು ಮಾಡಲಾರೆ

ಕುತುಬುದ್ದೀನ—ಇಲ್ಲ! ಮಾಧವಿ! ನಾನೆಂದೂ ಅಂತಹ ಕ್ರೂರಕರ್ಮವನ್ನು ಮನಸಾರೆ ಮಾಡಿಲ್ಲ ನೀನು ಬಲ್ಲೆ ನಿನ್ನ ಪ್ರೇಮವೇ ಅದಕ್ಕೆ ಸಾಕ್ಷಿ! ನಾನು ಭಕ್ಷಿಯನ್ನು ಸ್ನೇಹಮಾಡಿಕೊಳ್ಳುತ್ತೇನೆ ಅದರಿಂದ ಈ ವಿಪ್ಲವವು ಶಾಂತವಾಗು ತ್ತದೆ ಭಕ್ಷಿಯನ್ನು ಕಾಪಾಡುತ್ತೇನೆ ಸುಲ್ತಾನರ ಸಮ್ಮುಖದಲ್ಲಿ ಗೌರವ ಮಾಡಿ ಸುತ್ತೇನೆ

ಮಾಧವಿ—ಪ್ರಮಾಣವಾಗಿ ಹೇಳುವೆಯಾ?

ಕುತುಬುದ್ದೀನ—ಪ್ರಮಾಣವಾಗಿ! ನಿನ್ನ ಮೇಲಿನ ಆಣೆ

ಮಾಧವಿ—ನನ್ನ ಮೇಲಿನ ಆಣೆ! ಅಲ್ಲಾನ ಮೇಲಿನ ಆಣೆ!!

ಮಾಧವಿಯ ಆಶ್ವಾಸನದಿಂದ ಕುತುಬುದ್ದೀನನಿಗೆ ಸ್ವಲ್ಪ ಸಮಾಧಾನವಾ ಯಿತು ಸಂಧ್ಯಾಕಾಲವಾಗುತ್ತಲೇ ಮಾಧವಿಯು ಹಿಂದೂ ಹೆಂಗಸಿನಂತೆ ಸೀರೆಯ ನ್ನುಟ್ಟಳು ಕುಬುಸವನ್ನು ತೊಟ್ಟು ಹಣೆಗೆ ಕುಂಕುಮವನ್ನು ಇಟ್ಟುಕೊಂಡಳು ಇದೇನು ಅವಳಿಗೆ ಹೊಸದಲ್ಲ ಮೊದಲಿದ್ದ ವೇಷವೇ ಅದು ಈ ಅಲಂಕಾರವು ಅವಳಿಗೆ ಚೆನ್ನಾಗಿ ಒಪ್ಪುತ್ತದೆ ಸೊಂಟದಲ್ಲಿ ಗೋವಿಂದನು ಕೊಟ್ಟಿದ್ದ ಬಾಕನ್ನು ಸಿಕ್ಕಿಸಿ ಕೊಂಡಳು ತನ್ನ ಪೆಟ್ಟಿಗೆಯನ್ನು ತೆಗೆದು ಒಂದು ಚಿಕ್ಕ ಭರಣಿಯನ್ನು ಸೆರಗಿನಲ್ಲಿ ಗಂಟುಹಾಕಿದಳು ಒಬ್ಬ ಮುದುಕಿಯನ್ನು ಜೊತೆಯಲ್ಲಿ ಕರೆದುಕೊಂಡು ಮಹಲನ್ನು ಬಿಟ್ಟು ಹೊರಟಳು ಅಲ್ಲಿಂದ ಕಾರ್ಕಳಕ್ಕೆ ಪ್ರಯಾಣ ಮಾಡಿದಳು ಅಲ್ಲಿ ಒಬ್ಬಿ ಬ್ಬರು ವಿದ್ರೋಹಿಗಳನ್ನು ಕಂಡು ಮಾತನಾಡಿಸಿದಳು ತನ್ನನ್ನು ಸರ್ಕಾರದವರು ಹುಡುಕುತ್ತಿದ್ದಾರೆಂದೂ, ಸಿಕ್ಕಿದರೆ ಚಿತ್ರಹಿಂಸೆ ಮಾಡುತ್ತಾರೆಂದೂ, ತನ್ನನ್ನು ರಕ್ಷಣೆ ಮಾಡಬೇಕೆಂದೂ ಬೇಡಿದಳು ಯಾರೂ ಮಾತನಾಡಲಿಲ್ಲ ಅವರಷ್ಟಕ್ಕೆ ಅವರು ಹೊರಟುಹೋಗುತ್ತಿದ್ದರು

ಮಾಧವಿಯು ಮಸೀದಿಗೆ ಹೋಗಿ ಫಕೀರನನ್ನು ನೋಡಿದಳು ಅವನಿಗೆ ಕರುಣೆ ಹುಟ್ಟುವಂತೆ ಅತ್ತಳು ತನ್ನ ಕಥೆಯನ್ನು ಚಿತ್ರವಿಚಿತ್ರವಾಗಿ ವಿಸ್ತರಿಸಿ ಹೇಳಿದಳು ತನ್ನನ್ನು ರಕ್ಷಿಸಬೇಕೆಂದು ಬೇಡಿದಳು

ಫಕೀರ—ಮಗಳೇ ನೀನೇನು ಮಾಡಿದ್ದಿ ? ನಿಜವಾಗಿ ಹೇಳು. ಯಾರನ್ನಾದರೂ ಕೊಲೆಮಾಡಿರುವೆಯಾ ?

ಮಾಧವಿ—ಇಲ್ಲ ಗೋವಿಂದನೆಂಬುವನೊಬ್ಬ ದ್ರೋಹಿಯಿದ್ದಾನೆ ಅವನು ನಮ್ಮ ಮನೆಯಲ್ಲಿ ಔತುಕೊಂಡಿದ್ದನು ಸರ್ಕಾರದವರು ಹೇಗೆಯೋ ಪತ್ತೆ ಮಾಡಿ ಅವನನ್ನು ಹಿಡಿದರು ನಾನು ಅವನನ್ನು ಮುಚ್ಚಿಟ್ಟದ್ದುದೇ ತಪ್ಪು. ಅಲ್ಲಿಂದ ತಪ್ಪಿಸಿಕೊಂಡು ಹೇಗೆಗೋ ಬಂದೆ

ಫಕೀರ—ಮಗಳೇ, ನನ್ನ ಜೊತೆಯಲ್ಲಿರು ಭಯವಿಲ್ಲ ಈಗ ಸರ್ಕಾರದವರ ಕೈಗೆ ಸಿಕ್ಕಿದರೂ ಕಷ್ಟ ಈ ವಿದ್ರೋಹಿಗಳ ಜೊತೆಗೆ ಸೇರಿದರೂ ಕಷ್ಟ. ನಾನು ಮಂಗಳೂರಿಗೆ ಹೊರಟಿದ್ದೇನೆ ನೀನು ನನ್ನ ಜೊತೆಯಲ್ಲಿ ಬಾ! ನನಗೆ ಅಪಾಯ ಬಂದರೂ ನಿನ್ನ ರಕ್ಷಣೆಗೆ ಏರ್ಪಾಡು ಮಾಡುತ್ತೇನೆ ಮಗಳೇ ನಿನ್ನ ಹೆಸರೇನು ? ನಿನ್ನ ವಿವಾಹವಾಗಿದೆಯೋ ?

ಮಾಧವಿ—ಮದುವೆಯಾಗಿಲ್ಲ ನನ್ನ ಹೆಸರು ಮಾಧವಿ!

ಫಕೀರನು ಮಾಧವಿಯನ್ನು ಮಂಗಳೂರಿಗೆ ಕರೆದುಕೊಂಡು ಹೋದನು ಅಲ್ಲಿಗೆ ತಲಪುವ ಹೊತ್ತಿಗೆ ಕತ್ತಲಾಗಿತ್ತು ಫಕೀರನು ಊರು ಹೊರಗೆ ಒಂದು ಮನೆಗೆ ಕರೆದುಕೊಂಡು ಹೋದನು ಅಲ್ಲಿ ಒಬ್ಬ ಮುದುಕಿ ಇದ್ದಳು ಮಾಧವಿಯನ್ನು ಅವಳ ವಶಕ್ಕೊಪ್ಪಿಸಿ "ಇಲ್ಲಿ ಇರು, ಮಗಳೆ! ಇಲ್ಲಿ ನಿನಗೆ ಭಯವಿಲ್ಲ" ಎಂದು ಹೇಳಿ ಹೊರಟುಹೋದನು

ಮಾಧವಿಯು ತನ್ನ ಕೆಲಸವೆಲ್ಲಾ ಕೆಟ್ಟಿತೆಂದೂ ತಾನು ಬಂದು ಇಲ್ಲೊಂದು ಕಡೆ ಬಂಧನದಲ್ಲಿ ಸಿಕ್ಕಿಕೊಂಡಂತಾಯಿತೆಂದೂ ಭಾವಿಸಿದಳು ಆ ಮುದುಕಿಯೇ ಮಾಧವಿಯ ಯೋಗಕ್ಷೇಮವನ್ನು ವಿಚಾರಿಸಿದಳು ಇವಳು ಯಥಾಪ್ರಕಾರ ತನ್ನ ಕಥೆಯನ್ನು ಹೇಳಿದಳು. ಆ ಮುದುಕಿಗೆ ಕರುಣೆಬಂತು ಅವಳು "ಮಾಧವಿ, ನೀನು ಇಲ್ಲಿರು. ರಾತ್ರಿ ಭಕ್ಷಿಯು ಇಲ್ಲಿಗೆ ಬರುತ್ತಾನೆ ಅವನು ನಿನ್ನನ್ನು ಕಾಪಾಡಬಲ್ಲ" ಎಂದು ಹೇಳಿದಳು ಅವಳೆಷ್ಟೋ ವಿಪ್ಲವದ ಕಥೆಗಳನ್ನು ಹೇಳಿದಳು ವಿಪ್ಲವವು ಗೆಲ್ಲುತ್ತದೆಂದೂ ಭಕ್ಷಿಯು ರಾಜನಾಗುತ್ತಾನೆಂದೂ ಉತ್ಸಾಹದಿಂದ ಹೇಳಿದಳು. ಮಾಧವಿಯು ನಿಟ್ಟುಸಿರು ಬಿಟ್ಟು "ಯಾರು ರಾಜನಾದರೇನು ಅಜ್ಜಿ! ನಾನು ಉಳಿದುಕೊಂಡರೆ ಸಾಕು ನನಗೂ ಪ್ರಾಣ ಹೋಗುತ್ತದೆಂಬ ಭಯವಿಲ್ಲ. ಮಾನ ಕೆಡಿಸುತ್ತಾರೆ ಜಾತಿ ಕೆಡಿಸುತ್ತಾರೆ ಎಂದು ಭಯ" ಎಂದಳು.

ಆ ಮುದುಕಿಯು "ನೀನು ಬೆಳಿಗ್ಗೆಯಿಂದ ಊಟಮಾಡಿಲ್ಲ ಸ್ವಲ್ಪ ಊಟ ಮಾಡಮ್ಮಾ" ಎಂದು ಉಪಚರಿಸಿ ಊಟಮಾಡಿಸಿದಳು ಮಾಧವಿಯು ಭಯಪಟ್ಟವಳಂತೆ ಒಂದು ಮೂಲೆಯಲ್ಲಿ ಮುದುರಿಕೊಂಡು ಮಲಗಿದಳು ಅರ್ಧರಾತ್ರಿಯ ಸಮಯದಲ್ಲಿ ಭಕ್ಷಿಯು ಬಂದನು ಅವನು ಹಜಾರದಲ್ಲಿ ಬಂದು ಕುಳಿತುಕೊಂಡನು

'ಅಜ್ಜಿ, ಫಕೀರರು ಒಬ್ಬ ಹಿಂದೂ ಹುಡುಗಿಯನ್ನು ನಿನ್ನ ವಶಕ್ಕೆ ಒಪ್ಪಿಸಿದ್ದಾರೇನು ?"

"ಹೌದು" ಎಂದು ಹೇಳಿ, ಆ ಮೂಲೆಯಲ್ಲಿ ಮಲಗಿದ್ದ ಮಾಧವಿಯನ್ನು ಎಬ್ಬಿಸಿ ಕರೆತಂದು ಭಕ್ಷಿಯ ಮುಂದೆ ನಿಲ್ಲಿಸಿದಳು

ಭಕ್ಷಿ—ನೀನಾರಮ್ಮ, ನೀನೇಕ ಇಲ್ಲಿಗೆ ಬಂದೆ ?

ಮಾಧವಿ—ನಾನೊಬ್ಬ ನಿರ್ಭಾಗ್ಯಳು ಬಹಳ ಅವಗಡದಲ್ಲಿದ್ದೇನೆ ನಾನು ರಕ್ಷಣೆಗಾಗಿ ಆ ಫಕೀರನ ಹತ್ತಿರ ಬಂದೆ ಅವರು ತಂದು ನನ್ನನ್ನು ಇಲ್ಲಿಬಿಟ್ಟರು. ಇದು ವಿದ್ರೋಹಿಗಳ ನೆಲೆಯೆಂದು ಕಾಣುತ್ತದೆ ನಾನೊಂದು ಕ್ಷಣ ಇಲ್ಲಿರುವುದಿಲ್ಲ ಈ ವಿದ್ರೋಹಿಗಳನ್ನೆಲ್ಲಾ ಒಂದೆರಡು ದಿನದಲ್ಲಿ ಸರ್ಕಾರದವರು ಮಟ್ಟಹಾಕಿ ಬಿಡುತ್ತಾರ (ಅಜ್ಜಿಯ ಕಡೆ ತಿರುಗಿ) ಅಜ್ಜಿ ನಾನಿಲ್ಲಿರುವುದಿಲ್ಲ ಅಪ್ಪಣೆ ಕೊಡಿ ! ನಾನು ಹೋಗುತ್ತೇನೆ

ಎಲ್ಲಿಗೆ ಹೋಗುತ್ತೀಯಮ್ಮ ಈ ಅರ್ಧರಾತ್ರಿಯಲ್ಲಿ ?

ಎಲ್ಲಿಗಾದರೂ ಹೋಗುತ್ತೇನೆ

ಭಕ್ಷಿ—ಬೇಡ ತಾಯಿ, ಹದರಬೇಡ, ನಾನು ನಿನ್ನ ರಕ್ಷಣೆ ಮಾಡುತ್ತೇನೆ.

ಮಾಧವಿ–ನೀನಾರು ನೀನು ಒಬ್ಬ ವಿದ್ರೋಹಿಯಲ್ಲವೇ ?

ಹೌದು ನಾನೊಬ್ಬ ವಿದ್ರೋಹಿ.

ಮಾಧವಿ—ನಾನು ನಿನ್ನ ಜೊತೆಯಲ್ಲಿ ಖಂಡಿತ ಇರುವುದಿಲ್ಲ ನೀನು ನನಗೊಂದು ಉಪಕಾರ ಮಾಡುತ್ತೀಯಾ ? ಏನೂ ಇಲ್ಲ ಇದನ್ನು ತೆಗೆದುಕೋ.

ಎಂದು ಮಾಧವಿಯು ಸೊಂಟದಿಂದ ಒಂದು ಬಾಕನ್ನು ತೆಗೆದು ಅವನ ಕೈಗೆ ಕೊಟ್ಟಳು "ಇದು ಗೋವಿಂದನದು ಇದನ್ನು ವಿದ್ರೋಹಿಗಳ ಮುಖಂಡನಿಗೆ ತಲುಪಿಸಿ ಬಿಡಿ" ಎಂದಳು

ಭಕ್ಷಿ—ಗಾಬರಿಯಿಂದ ಇದು ನಿನಗೆಲ್ಲಿಂದ ಬಂತು

ಮಾಧವಿ—ನೀನು ಹೆಚ್ಚು ಕಥೆ ಕೇಳಬೇಡ ನಾನಿಲ್ಲಿ ಒಂದು ಕ್ಷಣ ಹೆಚ್ಚಾಗಿರುವುದಿಲ್ಲ ಈ ವಿದ್ರೋಹಿಗಳ ಸಂಬಂಧ ಇಲ್ಲಿಗೆ ತೀರಿತು ಇದು ಗೋವಿಂದನದು. ಮೊನ್ನೆಯರಾತ್ರಿ ಗೋವಿಂದನು ನನ್ನ ಮನೆಯಲ್ಲಿ ಅಡಗಿದ್ದ ಹೇಗೋ ಅಧಿಕಾರಿಗಳು ಅವನನ್ನು ಹಿಡಿದರು. ಆ ಸಮಯದಲ್ಲಿ ಈ ಬಾಕನ್ನು ನನ್ನ ಕೈಗೆ ಕೊಟ್ಟು,

"ತಂಗಿ, ನಾನು ಸಾಯುತ್ತೇನೆ ಇದನ್ನು ಯಾರಾದರೂ ವಿದ್ರೋಹಿಗಳ ಕೈಗೆ ಕೊಡು ನಮ್ಮ ಮುಖಂಡ ಭಕ್ಷಿಗೆ ತಲುಪಿಸಬೇಕೆಂದು ಹೇಳು ನನ್ನ ಅವತಾರವು ಇಲ್ಲಿಗೆ ಪರಿಸಮಾಪ್ತಿಯಾಯಿತು " ಎಂದು ಹೇಳಿ, ಅಧಿಕಾರಿಗಳ ಕೈಗೆ ಸಿಕ್ಕಿಬಿಟ್ಟ ! ನಾನು ಆ ಕ್ಷಣ ಮನೆಬಿಟ್ಟು ಹೊರಟೆ ಅಧಿಕಾರಿಗಳು ನನ್ನನ್ನು ಹುಡುಕುತ್ತಿದ್ದಾರೆಂದೂ, ಹಿಡಿದು ಶಿಕ್ಷಿಸುತ್ತಾರೆಂದೂ, ನಮ್ಮಜ್ಜಿಯು ನಿನ್ನೆ ಹೇಳಿದಳು ನಾನು ಅವರಿಗೆ ಸಿಕ್ಕುವುದಿಲ್ಲ (ತನ್ನ ಸೆರಗಿನಲ್ಲಿ ಕಟ್ಟಿದ್ದ ಭರಣಿಯನ್ನು ಹೊರಕ್ಕೆ ತೆಗೆದು ಭಕ್ಷಿಗೆ ತೋರಿಸಿ) ನೋಡು ! ಇದರಲ್ಲಿ ಭಯಂಕರವಾದ ವಿಷವಿದೆ ಹತ್ತು ಜನರನ್ನು ಒಂದು ಕ್ಷಣದಲ್ಲಿ ಕೊಲ್ಲಬಹುದು ಇದಿಷ್ಟನ್ನು ಒಂದೇ ಬಾರಿಗೆ ನುಂಗಿಬಿಡುತ್ತೇನೆ ಅವರ ಕೈಗೆ ಸಿಕ್ಕಿದರೆ ಮಾನಭಂಗ ಮಾಡುತ್ತಾರೆ ಜಾತಿ ಕೆಡಿಸುತ್ತಾರೆ

ಭಕ್ಷಿ—ಗೋವಿಂದನನ್ನು ಸರ್ಕಾರದವರು ಹಿಡಿದರೆ ?

ಮಾಧವಿ—ಹೌದು ! ಮೊನ್ನೆಯೇ ಹಿಡಿದರು ಇಷ್ಟು ಹೊತ್ತಿಗೆ ಅವನನ್ನು ಗಲ್ಲಿಗೆ ಹಾಕಿರಬಹುದು

ಭಕ್ಷಿ—ಇಲ್ಲಮ್ಮ! ಭಯಪಡಬೇಡ, ಅವನು ಇನ್ನೂ ಬದುಕಿದಾನೆ ನೀನು ಅವನಿಗೆ ಏನಾಗಬೇಕು ?

ಮಾಧವೀ—ಏನೂ ಇಲ್ಲ, ಅವನು ನಮ್ಮ ಸೋದರತ್ತೆಯ ಮಗ !

ಅಜ್ಜಿ—(ನಗುತ್ತಾ) ಮಾಧವಿ, ಗಂಡನಾಗಬೇಕೆಂದು ಹೇಳು ! ಅವನ ಮೇಲೆ, ಮೋಹಗೊಂಡಿದ್ದೀಯೆಂದು ಹೇಳು ನಿನ್ನಂತಹ ಯುವತಿಗೆ ಅದು ಸಹಜವೇ ! ಅದರಿಂದಲೇ ಅವನಿಗಾಗಿ ಇಷ್ಟು ಆಪತ್ತಿಗೆ ಗುರಿಯಾದೆ !

ಮಾಧವಿಯು ಸಣ್ಣ ನಗುವನ್ನು ನಕ್ಕಳು ಅಲ್ಲಿಂದ ಹೊರಡಲು ಆತುರವನ್ನು ತೋರಿದಳು ಬಾಗಿಲಿಗೆ ಹೊರಟೇ ಬಿಟ್ಟಳು

ಭಕ್ಷಿ—(ಧಡಕ್ಕನೆ ಎದ್ದು ಅವಳ ಕೈ ಹಿಡಿದುಕೊಂಡು) ಮಾಧವಿ ! ಹೋಗಬೇಡ ! ನೀನು ಈ ರಾತ್ರಿ ಇಲ್ಲಿಂದ ಹೊರಟರೆ ಅಪಾಯವು ಹೆಚ್ಚು ! ನಾನೂ ನಿನಗೆ ರಕ್ಷಣೆ ಕೊಡುತ್ತೇನೆ ಧೈರ್ಯದಿಂದಿರು ನನ್ನ ಪ್ರಾಣಹೋದರೂ, ನಿನ್ನನ್ನು ಕಾಪಾಡುತ್ತೇನೆ

ಮಾಧವಿ—(ಗಾಬರಿಯಿಂದ) ನೀನಾರು ಹೇಳು !

ಭಕ್ಷಿ—ನಾನು ವಿದ್ರೋಹಿಗಳ ಮುಖಂಡ ಭಕ್ಷಿ!

ಮಾಧವಿ—ಬೇಡ ! ಬೇಡ ! ನನ್ನ ಕೈಬಿಡು. ನಾನು ಕೂಗಿಕೊಳ್ಳುತ್ತೇನೆ. ಇಲ್ಲದಿದ್ದರೆ ಈ ಕ್ಷಣ ವಿಷ ತಿಂದುಬಿಡುತ್ತೇನೆ

ಭಕ್ಷಿ—(ಕೈಬಿಟ್ಟು) ಏಕೆ ? ತಾಯಿ, ನನ್ನನ್ನು ಕಂಡರೆ ಅಷ್ಟು ಭಯವೆ ?

ಮಾಧವಿ—ನಿನ್ನನ್ನು ಕಂಡರೆ ನನಗೆ ಭಯ. ನೀನು ಮಹಾ ಪುರುಷ ! ನಿನ್ನ

ಗುರುವಾರ ಫಕೀರನು ನನ್ನನ್ನು ಕರೆತಂದು ಇಲ್ಲಿಗೆ ಬಿಟ್ಟಿದ್ದಾನೆ ನೀನು ನನಗೆ ಕೊಂಚವೂ ಕೇಡನ್ನು ಮಾಡುವುದಿಲ್ಲ ಆದರೆ ಕುತುಬುದ್ದೀನನು ಇಂದೇ ನನ್ನನ್ನು ಹಿಡಿಯುತ್ತಾನೆ ಅವನ ಸರ್ವಸ್ವವನ್ನೂ ಸೂರೆಮಾಡಿ, ನಿನ್ನನ್ನು ಹಿಡಿಯುತ್ತಾನೆ. ಇಲ್ಲದಿದ್ದರೆ, ನಾಳೆದಿನ ಅವನ ಅಧಿಕಾರವು ಹೋಗಿ ಬಿಡುತ್ತದೆ

ಭಕ್ಷಿ—(ನಗುತ್ತಾ) ನಿನಗೆ ಇದನ್ನೆಲ್ಲಾ ಯಾರು ಹೇಳಿದರು? ಹುಚ್ಚು ಕಥೆ!

ಮಾಧವಿ—ಗೋವಿಂದನು ಎಲ್ಲವನ್ನೂ ಹೇಳಿದನು

ಭಕ್ಷಿ—ಗೋವಿಂದನಿಗೆ ಅದು ಗೊತ್ತಿಲ್ಲ! ನಾನು ಹೇಳುತ್ತೇನೆ ನನ್ನನ್ನು ಯಾರೂ ಹಿಡಿಯಲಾರರು

ಮಾಧವಿ—ಹೇಗೇ ಆಗಲಿ! ನಾನು ನಿನ್ನ ಜೊತೆಯಲ್ಲಿರುವುದಿಲ್ಲ ಈ ಸ್ಥಳದಲ್ಲಿರುವುದಿಲ್ಲ.

ಭಕ್ಷಿ—ನನ್ನೊಡನೆ ಬಾ! ಇನ್ನೂ ಸುರಕ್ಷಿತವಾದ ಸ್ಥಳದಲ್ಲಿಡುತ್ತೇನೆ.

ಮಾಧವಿಯು ಒಪ್ಪಿದಳು

ಭಕ್ಷಿಯು ಅವಳನ್ನು ಜೊತೆಯಲ್ಲಿ ಕರೆದುಕೊಂಡು ಆ ನಿಶಿರಾತ್ರಿಯಲ್ಲಿ ಎರಡು ಮೈಲಿ ನಡೆದುಹೋದನು ಹೊರಡುವಾಗ "ಮಾಧವಿ! ಈ ಬಾಕನ್ನು ನಿನ್ನ ಹತ್ತಿರಲೇ ಇಟ್ಟುಕೋ! ನಿನಗೆ ಅಪಾಯವು ಬಂದರೆ, ಸುಮ್ಮನೆ ಸಾಯಬೇಡ "ವೀರ ರಮಣಿಯಂತೆ, ನಿನ್ನ ಒಬ್ಬ ಶತ್ರುವನ್ನು ಕೊಂದು ನೀನೂ ಸಾಯಿ" ಎಂದು ಹೇಳಿ ಆ ಬಾಕನ್ನು ಅವಳ ಕೈಗೆ ಕೊಟ್ಟನು.

ಭಕ್ಷಿ—ನೋಡು! ಮಾಧವಿ! ನೀನೆಷ್ಟು ಭಯಪಟ್ಟೆ? ನಾವು ರಾಜಾರೋಷಾಗಿ ರಾಜ ಭಾಟಿಯಲ್ಲಿ ನಡೆದು ಬಂದೆವು ಯಾರಾದರೂ ನನ್ನ ತಂಟೆಗೆ ಬಂದರೇನು?

ಮಾಧವಿ—ಹೌದು ಭಕ್ಷಿಯವರೇ! ನನಗೂ ಅದೇ ಆಶ್ಚರ್ಯ! ಆದರೆ ಗೋವಿಂದನು ಸುಳ್ಳು ಹೇಳಿದಾನೆ.

ಭಕ್ಷಿ—ಇಲ್ಲ! ಮಾಧವಿ! ಅವನು ನಿಜವನ್ನೇ ಹೇಳಿದಾನೆ ಆದರೆ ಈ ಎರಡು ದಿವಸಗಳಿಂದ ಏನಾಗಿದೆಯೆಂಬುದು ಅವನಿಗೂ ಗೊತ್ತಿಲ್ಲ ಈ ಅಧಿಕಾರಿಗಳಿಗೆಲ್ಲಾ ನಮ್ಮ ಕಡೆಗೆ ಬಂದುಬಿಟ್ಟಿದಾರೆ ಫಕೀರನು ಎಲ್ಲರಿಂದಲೂ ಪ್ರಮಾಣಮಾಡಿಸಿದಾನೆ.

ಮಾಧವಿ—ಫೌಜುದಾರನಿಗೆ ಯಾರೂ ಸಹಾಯಕರಿಲ್ಲವೇ? ಸರಿ! ಈಗ ಸ್ವಯಂ ಫೌಜುದಾರನೇ ಬಂದು ನಮ್ಮನ್ನು ಹಿಡಿದರೆ ನೀನೇನು ಮಾಡುತ್ತಿ?

ಭಕ್ಷಿ-ಅವನು ಈಗ ನನ್ನೆದುರಿಗೆ ಬಂದರೆ ನಾನೇ ಅವನನ್ನು ಹಿಡಿದು ಬಂಧಿಸುತ್ತೇನೆ.

ಕಬ್ಬಿಣದ ಪಂಜರದಲ್ಲಿಡಿಸಿ ನಾಳೆ ದಿವಾನರ ಸಮ್ಮುಖದಲ್ಲಿ ವಿಚಾರಣೆ ಮಾಡಿಸುತ್ತೇನೆ.

ಮಾಧವಿಯು ಮಾತನಾಡಲಿಲ್ಲ

ಅಲ್ಲಿಯೇ ರಸ್ತೆಯ ಪಾರ್ಶ್ವದಲ್ಲಿದ್ದ ಒಂದು ಮನೆಗೆ ಹೋದನು ಬಾಗಿಲು ತಟ್ಟಿದನು. ಒಬ್ಬ ಆಜಾನುಬಾಹುವಾದ ವೃದ್ಧನು ಬಂದು ಬಾಗಿಲು ತೆಗೆದನು "ಮಾಧವಿ! ಈ ವೃದ್ಧನು ದೇವರಂಥಾ ಮನುಷ್ಯ ಪಾದ್ರಿ. ಮಲಯಾಳ ದೇಶದವನು ಇವರ ಮನೆಯಲ್ಲಿ ನೀನಿರು ಇವರ ಮೇಲೆ ಯಾರಿಗೂ ಸಂದೇಹವಿಲ್ಲ" ಎಂದನು

ಮಾಧವಿ—ಇವರೂ ವಿದ್ರೋಹಿಗಳೇನು ?

ಭಕ್ಷಿ—ಅಲ್ಲ! ನಿನ್ನಂಥಾ ಅನಾಥರನ್ನು ರಕ್ಷಿಸುವುದಾಗಿ ನನಗೆ ವಾಗ್ದಾನ ಮಾಡಿದಾರೆ

ಮಾಧವಿ—ಅವರು ವಿದ್ರೋಹಿಗಳಲ್ಲದಿದ್ದರೆ ನಾನು ಅವರಲ್ಲಿರಲು ಒಪ್ಪುತ್ತೇನೆ.

ಭಕ್ಷಿಯು ಕೇಕೆಹಾಕಿ ನಕ್ಕನು

ಮಾಧವಿಯನ್ನು ಭದ್ರವಾಗಿ ರಕ್ಷಿಸುವಂತೆ ಪ್ರಾರ್ಥಿಸಿದನು. ಅವನು ಸಂತೋಷದಿಂದ ಒಪ್ಪಿದನು

ಮಾಧವಿ—ಭಕ್ಷಿಗಳೇ! ನನ್ನದೊಂದು ಮಾತು! ನಾನು ಪ್ರಾಣಕ್ಕಾಗಿ ಅಂಜಲೇ ಇಲ್ಲ. ನನ್ನ ಪ್ರಾಣವು ಹೋಗಿಯೇಬಿಟ್ಟದೆ. ತಮ್ಮ ಭರವಸೆಯ ಮೇಲೆ ಒಂದು ದಿನ ಪ್ರಾಣವನ್ನಿಟ್ಟುಕೊಂಡಿರುತ್ತೇನೆ ನಾಳೆ ಸಂಧ್ಯಾಕಾಲದೊಳಗಾಗಿ ಗೋವಿಂದನು ಜೀವಂತನಾಗಿದ್ದಾನೆಯೇ ಇಲ್ಲವೇ ಎಂಬುದನ್ನು ನೀವು ನನಗೆ ತಿಳಿಸಬೇಕು ಅವನು ಬದುಕಿರುವ ವರೆಗೆ ನಾನು ಜೀವದಿಂದ ಇರುತ್ತೇನೆ ನಾಳೇ ದಿನ ಸಂಧ್ಯಾಕಾಲ ನಿಮ್ಮಿಂದ ಸಮಾಚಾರವು ತಿಳಿಯದಿದ್ದರೆ ನಾನು ಪ್ರಾಣ ಬಿಡುತ್ತೇನೆ. ನನಗೆ ಇಂದೇ ಕಡೆಯ ದಿನ!

ಭಕ್ಷಿ—ನನ್ನನ್ನು ಸರ್ಕಾರದವರು ಹಿಡಿಯದಿದ್ದರೆ ನಾಳೇ ದಿನ ರಾತ್ರಿ ಇಲ್ಲಿಗೆ ಬಂದು ನಿನ್ನನ್ನು ನೋಡುತ್ತೇನೆ ನಾನು ಬಾರದಿದ್ದರೆ ನಾನು ಸಿಕ್ಕಿ ಹೋದೆನೆಂದು ತಿಳಿದುಕೋ. ಒಂದು ಮಾತು! ನನ್ನ ಪ್ರಾಣವನ್ನಾದರೂ ಕೊಟ್ಟು ಗೋವಿಂದನನ್ನು ಉಳಿಸುತ್ತೇನೆ

ಮಾಧವಿ ತನ್ನ ತೀಕ್ಷ್ಣ ಕಟಾಕ್ಷವನ್ನು ಬೀರಿ, ಒಳ್ಳೆಯದು ಎಂದು ನಕ್ಕಳು

ಭಕ್ಷಿಯಲ್ಲದೆ ಮತ್ತಾವನಾದರೂ ಕಾಮುಕನಾದ ಪುರುಷನಾಗಿದ್ದರೆ ಆ ಕಟಾಕ್ಷದಲ್ಲಿ ಮುಳುಗಿ ಹೋಗುತ್ತಿದ್ದನು ಆ ನಗುವಿನಲ್ಲಿ ತೇಲಿ ಹೋಗುತ್ತಿದ್ದನು

ಭಕ್ಷಿಯು ಚೇತರಿಸಿಕೊಂಡು ಪಾದ್ರಿಯ ಅಪ್ಪಣೆಯನ್ನು ಪಡೆದು ಮತ್ತೊಂದು ಬಾರಿ ಮಾಧವಿಯ ಕಡೆ ತಿರುಗಿ ನೋಡಿ ಹೊರಟುಹೋದನು.

ಮಾರನೆಯ ದಿನ ಪ್ರಾತಃಕಾಲ ಮುದಿಭಿಕ್ಷುಕಳೊಬ್ಬಳು ಹಾಡುತ್ತ ಪ್ರಾದಿಯ ಮನೆಯ ಮುಂದೆ ಬಂದಳು. ಮಾಧವಿಯು ಧ್ವನಿಯಿಂದಲೇ ಗುರುತು ಹಿಡಿದಳು. ಅವಳು ಮಾಧವಿಯ ಜೊತೆಯಲ್ಲಿ ಬಂದಿದ್ದ ದಾಸಿ! ಅವಳು ಬಹಳ ಹುಷಾರಿಯಿಂದ ಅನುಸರಿಸಿ ಬಂದಿದ್ದಳು. ಮಧ್ಯರಾತ್ರಿ ಈ ಪಾದ್ರಿಯ ಮನೆಯೊಳಗೆ ಮಾಧವಿಯು ಬರುವವರೆಗೆ ಹಿಂಬಾಲಿಸಿದ್ದಳು. ಪ್ರಾತಃಕಾಲದಲ್ಲಿ ಮನೆಯ ಮುಂದೆ ಭಿಕ್ಷೆಗೆ ಬಂದಳು., ಪಾದ್ರಿಯು ಬಾಗಿಲು ತೆಗೆಯಲು ಎದ್ದನು.

ಮಾಧವಿ—ಬಾಗಿಲು ತೆಗೆಯಬೇಡಿ ಪಾದ್ರಿಗಳೇ! ಯಾರಾದರೂ ಗೂಢ ಚಾರರು ಬರುತ್ತಾರೆ. ಆ ಭಿಕ್ಷುಕಳು ಮತ್ತೆಲ್ಲಿಗಾದರೂ ಹೋಗಲಿ.

ಪಾದ್ರಿ—ಇದು ಬಹಳ ಬರಗಾಲ! ಎಲ್ಲಿಯೂ ಭಿಕ್ಷ ಸಿಕ್ಕುವುದಿಲ್ಲ. ನಾನು ಭಿಕ್ಷ ಹಾಕುತ್ತೇನೆಂದು ಪ್ರಸಿದ್ಧಿಯಾಗಿದೆ. ಗತಿಗೆಟ್ಟವರು ಇಲ್ಲಿಗೆ ಬರುತ್ತಾರೆ. ಭಯಪಡ ಬೇಡ ಮಗಳೇ! ಇಲ್ಲಿ ನಿನ್ನನ್ನು ಯಾರೂ ಹಿಡಿದುಕೊಂಡು ಹೋಗಲಾರರು. ಇಂಗ್ಲೀಷರಿಗೂ ಸುಲ್ತಾನರಿಗೂ ಮಂಗಳೂರು ಕರಾರಾಗಿದೆ. ಸುಲ್ತಾನರ ಸರ್ಕಾರ ದವರು ನಮ್ಮನ್ನು ಹಿಡಿಯಬೇಕಾದರೆ ಇಂಗ್ಲೀಷು ರಾಯಭಾರಿಗಳನ್ನೊಪ್ಪಿಸಬೇಕು. ನನ್ನ ರಕ್ಷಣೆಯಲ್ಲಿರುವ ನಿನ್ನನ್ನು ಹಿಡಿಯುವುದು ಸಾಮಾನ್ಯವಲ್ಲ.

ಮಾಧವಿ–(ನಕ್ಕು) ಪಾದ್ರಿಗಳೇ, ಹಾಗಾದರೆ ನಾನೇ ಭಿಕ್ಷವನ್ನು ಇಡುತ್ತೇನೆ.

ಪಾದ್ರಿ—ಭಿಕ್ಷ ಕೊಡು ಮಗಳೇ! ಹಿಂದೂಗಳು ಭಿಕ್ಷ ಹಾಕುವಂತೆ ಒಂದು ಮುಷ್ಟಿ ಭಿಕ್ಷ ಕೊಡಬೇಡ! ಒಂದು ಹೊತ್ತಿನ ಊಟಕ್ಕೆ ಆಗುವಷ್ಟು ಅಕ್ಕಿಯನ್ನು ಕೊಡು. ಆ ಕೋಣೆಯಲ್ಲಿದೆ. ತೆಗೆದುಕೊಂಡು ಬಾ.

ಮಾಧವಿಯು ಆ ಕೋಣೆಗೆ ಹೋಗಿ ಒಂದು ಪಾತ್ರೆಯಲ್ಲಿ ಅಕ್ಕಿಯನ್ನು ತುಂಬಿ ತಂದಳು. ಬೀದಿಬಾಗಿಲು ತೆಗೆದು ನಾಲ್ಕುಹೆಜ್ಜೆ ಮುಂದೆ ಹೋಗಿ, "ತೆಗೆದುಕೋ! ಭಿಕ್ಷುಕಿ!" ಎಂದು ಹೇಳಿದಳು.

ಕಿವಿಯಲ್ಲಿ "ನಾಳೆ ರಾತ್ರಿ ಸೈನಿಕರೊಡನೆ ಫೌಜುದಾರರೇ ಗುಪ್ತವಾಗಿ ಬಂದರೆ ಇಲ್ಲಿಯೇ ಶಿಕಾರಿ ಸಿಕ್ಕುತ್ತೆ. ನಾನು ಇಲ್ಲಿಯೇ ಇರುತ್ತೇನೆ" ಎಂದು ಪಿಸುಗುಟ್ಟಿದಳು.

ಭಿಕ್ಷುಕಿಯು "ಒಂದು ಪಡಿ ಅಕ್ಕಿಯನ್ನು ಕೊಡಲಿಲ್ಲ. ಒಂದು ಹೊತ್ತಿಗೆ ಸಾಲದು. ಪರದೇಶಿ ಹುಡುಗಿ!" ಎಂದು ಗಟ್ಟಿಯಾಗಿ ಬೈಯುತ್ತಾ ಹೊರಟುಹೋದಳು.

ಈ ಬೈಗಳು ಪಾದ್ರಿಯ ಕಿವಿಗೆ ಬಿತ್ತು. ಮಾಧವಿಯು ಒಳಗೆ ಬಂದು "ಈ ಬರಗಾಲದಲ್ಲಿ ಕೊಟ್ಟವರನ್ನು ಬೈಯ್ಯುತ್ತಾರೆ ಈ ಕೆಟ್ಟಜನ. ಪಾದ್ರಿಗಳೇ! ನೀವೇಕೆ ಕೊಡುತ್ತೀರಿ, ಇವರಿಗೆ" ಎಂದಳು.

"ಬಡವರಿಂದ ಬೈಗಳು ತಿಂದು ಅನ್ನಕೊಟ್ಟರೆ ಎರಡರಷ್ಟು ಫಲ ಕೊಡುತ್ತಾನೆ, ದೇವರು. ತಿಳಿದುಕೋ, ಮಗಳೇ!" ಎಂದನು ಪಾದ್ರಿ.

# ಫೌಜುದಾರನ ಪತ್ನಿ

ಪ್ರಾತಃಕಾಲ ಸೂರ್ಯೋದಯವಾಗಿ ಎರಡು ಘಳಿಗೆಯಾಗಿದೆ ಮಂಗಳೂರಿನಲ್ಲಿ ಬಲು ಗದ್ದಲ ನಗರದ ದಿವಾನರವರು ಬಂಡಿದ್ದಾರೆ ಅವರು ರಾಜಾಮಹಲ್‌ನಲ್ಲಿ ಬಿಡಾರ ಮಾಡಿದ್ದಾರೆ ಊರಿನ ಹೊರಗೆ ಪ್ರಶಸ್ತವಾದ ವಸ್ತ್ರಭವನಗಳು ನಿರ್ಮಿತವಾಗಿವೆ ಮಿತಪರಿವಾರದೊಡನೆ ಅಲ್ಲಿ ರಾಧಾರಾಣಿಯವರೂ, ದೌಲತ್‌ರಾಣಿಯವರೂ ಇಳಿದಿದ್ದಾರೆ ಊರಿನಲ್ಲೆಲ್ಲಾ ಹೊಸ ಜನ ಕಾವಲುಗಾರರು, ಪಹರೆಯವರು, ಕುದುರಯವರು ಎಲ್ಲರೂ ಹೊಸಬರೇ! ಅನೇಕರು ಸೇನಾಧಿಕಾರಿಗಳು ಬಂದಿದ್ದಾರೆ

ಬೀದಿಯ ಜನರು ನಾನಾವಿಧವಾಗಿ ಮಾತನಾಡುತ್ತಾರೆ ಹೊಸ ಫೌಜುದಾರರು ಬಂದಿದಾರೆ ಶ್ರೀರಂಗಪಟ್ಟಣದಿಂದ ದಿವಾನರು ಬಂದಿದಾರೆ ಶ್ರೀರಂಗಪಟ್ಟಣದ ಸುಲ್ತಾನರೇ ಬರುತ್ತಾರೆ ಎಂದು ಜನರು ಮಾತನಾಡಿಕೊಳ್ಳುತ್ತಾರ ಹತ್ತು ಸಾವಿರ ದಂಡು ಬಂದಿದೆ ವಿದ್ರೋಹಿಗಳನ್ನೆಲ್ಲಾ ಹಿಡಿದು ಆನೆಯಕಾಲಿಗೆ ಕಟ್ಟಿ ತುಳಿಸುತ್ತಾರೆ. ಫಿರಂಗಿಗಳ ಬಾಯಿಗೆ ಕಟ್ಟಿ ಸುಡಿಸುತ್ತಾರೆ ಭಕ್ಷಿಯನ್ನು ಹಿಡಿದಿದ್ದಾರೆ ಪಟ್ಟಣದಲ್ಲೆಲ್ಲಾ ಮೆರವಣಿಗೆ ಮಾಡಿಸಿ ಅರಮನೆಯ ಮುಂದಿನ ಚೌಕದಲ್ಲಿ ಗಲ್ಲಿಗೇರಿಸುತ್ತಾರೆ ಎನ್ನುತ್ತಾರೆ ಇನ್ನು ಕೆಲವರು ಫೌಜುದಾರರ ವಿಚಾರಣೆಯಾಗುತ್ತೆ ಫೌಜುದಾರರ ಗತಿ ಏನಾಗುತ್ತೋ ಎನ್ನುತ್ತಾರೆ ಹಳೆಯ ಅಧಿಕಾರಿಗಳಿಗೆಲ್ಲಾ ಅಧಿಕಾರ ಹೋಯಿತು ಹೊಸ ಅಧಿಕಾರಿಗಳು ಬಂದಿದಾರೆ ಎನ್ನುತ್ತಾರೆ ಕೆಲವರು! ಮೊದ ಮೊದಲು ಎಲ್ಲರೂ ಗುಸುಗುಸು ಮಾತನಾಡಿಕೊಳ್ಳುತ್ತಿದ್ದರು ಈಗ ಎಲ್ಲೆಲ್ಲಿಯೂ ಇದೇ ವಾದವಿವಾದಗಳು

ಫೌಜುದಾರನು ಕುದುರೆಯನ್ನೇರಿ ಆತ್ಯತೆಯಿಂದ ದಿವಾನರನ್ನು ಕಾಣಲು ಅರಮನೆಗೆ ಬಂದನು ದಿವಾನರವರು ಗೌರವದಿಂದ ಮಾತನಾಡಿಸಿದರು ಅಲ್ಲಿಯ ಪೂರ್ವೋತ್ತರಗಳನ್ನೆಲ್ಲಾ ಕೇಳಿದರು.

ಕುತುಬುದ್ದೀನ್—ಜಂಗಮರ ಗಲಾಟೆಯು ಮೊದಲು ಆರಂಭವಾಯಿತು ಅದೂ ಹಿಂದೂಗಳು ಸುಲ್ತಾನರ ಮೇಲೆ ಆರಂಭಿಸಿದ ವಿದ್ರೋಹವೆನ್ನಬಹುದು ಅದನ್ನೆಲ್ಲಾ ಅಣಗಿಸಬೇಕಾಯಿತು ಕೆಲವರು ಜಂಗಮರನ್ನು ಕೊಲ್ಲಿಸಬೇಕಾಯಿತು ಅವರೆಲ್ಲರೂ ಉತ್ತರ ಕರ್ಣಾಟಕದವರು! ಅದು ಮರಾಟರ ಪಿತೂರಿಯೆಂದು ಕಾಣುತ್ತದೆ ಆಮೇಲೆ ಬರಗಾಲವು ಬಂತು. ಅಲ್ಲಲ್ಲಿ ಕಳ್ಳತನ ವರೋಡೆಗಳಿಗೆ ಆರಂಭವಾಯಿತು. ಅನೇಕರನ್ನು ಹಿಡಿದು ಶಿಕ್ಷೆ ಮಾಡಿಸಿದೆವು ಅದೆಲ್ಲಾ ಶಮನವಾಗಿ ಹೋಯಿತು! ಇದೇ ಸಮಯವೆಂದು ವಿದ್ರೋಹಿಗಳು ತಲೆ ಎತ್ತಿದರು ಇವಕ್ಕೆಲ್ಲಾ ಕಾರ್ಕಳದ ಫಕೀರರೂ,

ಭಕ್ಷಿ ಎಂಬುವನೊಬ್ಬ ತರುಣನೂ ಮುಖ್ಯಸ್ಥರು ಇವರಿಬ್ಬರನ್ನೂ ಹಿಡಿದು ದಂಡಿಸ ಬೇಕೆಂದು ನಿಶ್ಚಯಿಸಿದೆ ಆದರೆ ಸುಲ್ತಾನರ ರಾಜ್ಯದಲ್ಲಿ ಪ್ರಭಾವಶಾಲಿಯಾದ ಫಕೀರ ನನ್ನು ಹಿಡಿದು ಶಿಕ್ಷಿಸುವುದು ಅಪರಾಧವಾಗುವುದೆಂದು ತಡೆದಿದ್ದೇನೆ ಆ ಫಕೀರನು ವಿಚಿತ್ರ ಪುರುಷ ! ಈಗಲೂ ವಿದ್ರೋಹದ ಮಾತುಗಳನ್ನಾಡುತ್ತಾನೆ ತಲೆ ಮರಸಿ ಕೊಂಡಿಲ್ಲ ರಾಜಾರೋಷಾಗಿ ಓಡಾಡುತ್ತಾನೆ ಎಲ್ಲ ಅಧಿಕಾರಿಗಳನ್ನೂ ನೋಡುತ್ತಾನೆ ನನ್ನಲ್ಲಿಯೂ ಒಂದು ಬಾರಿ ಬಂದಿದ್ದನು. ಭಕ್ಷಿಯು ಈಚೆಗೆ ಕೆಲವು ದಿವಸಗಳಿಂದ ತಲೆ ತಪ್ಪಿಸಿಕೊಂಡಿದ್ದಾನೆ ಇವನೇ ತರುಣರನ್ನೆಲ್ಲಾ ಎತ್ತಿ ಕಟ್ಟಿರುವ ಮುಂದಾಳೆಂದು ಎಲ್ಲರೂ ಹೇಳುತ್ತಾರೆ ಇತ್ತೀಚೆಗೆ ಕೆಲವು ರಾಜಭಂಡಾರದ ಲೂಟಿಗಳಾಗಿವೆ. ಈ ವಿದ್ರೋಹಿಗಳಿಗೆ ನಮ್ಮ ಭಂಡಾರವನ್ನು ಲೂಟಿ ಮಾಡುವಷ್ಟು ಧೈರ್ಯವಾಗಲೀ, ಬಲ ವಾಗಲೀ ಇಲ್ಲ ಇದೆಲ್ಲಾ ಪಿಂಡಾರಿಯವರು ಮಾಡಿದ್ದೆಂದು ಅನೇಕರು ಸ್ಥಳವಂದಿಗರು ಹೇಳುತ್ತಾರೆ ಆದರಿಂದ ಹೆಚ್ಚೇನೂ ನಷ್ಟವಾಗಿಲ್ಲ ಇತ್ತೀಚೆಗೆ ಕೆಲವರು ಮುಖ್ಯಾಧಿ ಕಾರಿಗಳ ಕೊಲೆಗಳೂ ಆಗಿವೆ ಅನೇಕರನ್ನು ಹಿಡಿದಿದ್ದೇವೆ ಇನ್ನೂ ಶಿಕ್ಷೆ ಮಾಡಿಲ್ಲ.

ದಿವಾ—ಫೌಜುದಾರರೇ ! ತಾವು ಹೇಳುವುದೆಲ್ಲಾ ಬಹುಮಟ್ಟಿಗೆ ಸರಿಯಾ ಗಿಯೇ ಇದೆ ಈ ಎಲ್ಲ ವಿದ್ಯಮಾನಗಳಿಂದ ರಾಜ್ಯದ ಬಿಗಿತಪ್ಪಿ ಹೋಗಿದೆಯಲ್ಲವೇ ?

ಫೌಜು—ಹೌದು ! ರಾಜ್ಯ ಸೂತ್ರಗಳು ಶಿಥಿಲವಾಗಿ ಹೋಗಿವೆ

ದಿವಾ—ಆದ್ದರಿಂದಲೇ ಸುಲ್ತಾನರವರು ನನ್ನನ್ನು ಇಲ್ಲಿಗೆ ಕಳಿಸಿದ್ದಾರೆ

ಫೌಜು—ನಾನು ಯಾವಾಗಲೂ ಶಿರಸಾವಹಿಸಿ ಆಜ್ಞೆಗೆ ಸಿದ್ಧನಾಗಿದ್ದೇನೆ.

ದಿವಾ—ನೀವು ಈ ವಿಪ್ಲವಕಾರರನ್ನೆಲ್ಲಾ ಮೊದಲೇ ಬಂದೋಬಸ್ತು ಮಾಡ ಲಿಲ್ಲವೇಕೆ ?

ಫೌಜು—ಅವರು ಸುಮಾರು ಹತ್ತು ಸಹಸ್ರ ಜನರಿದ್ದಾರೆ ಅವರನ್ನೆಲ್ಲಾ ಹಿಡಿದು ಬಹಿರಂಗವಾಗಿ ಶಿಕ್ಷಿಸುವುದು ರಾಜನೀತಿಯಲ್ಲವೆಂದು ಈ ಗರೀಬನ ಅಭಿ ಪ್ರಾಯ ? ಅದಕ್ಕೆ ಪ್ರತಿಯಾಗಿ ಆ ಮುಖಂಡರಲ್ಲಿಯೇ ಭೇದಕಲ್ಪನೆ ಮಾಡಬೇಕು ಕೆಲವರು ಮುಖಂಡರನ್ನು ಭಯಪಡಿಸಬೇಕು ಕೆಲವರನ್ನು ಶಿಕ್ಷೆಗೆ ಗುರಿಮಾಡಬೇಕು

ದಿವಾ—ಅದಕ್ಕೆ ನೀವೇನು ಮಾಡಿದ್ದೀರಿ ?

ಫೌಜು—ಈಗ ಅನೇಕ ಮುಖಂಡರು ಆ ಗುಂಪಿನಿಂದ ಒಡೆದುಹೋಗಿದ್ದಾರೆ ಭಕ್ಷಿಯನ್ನು ಇಂದೋ ನಾಳೆಯೋ ಹಿಡಿಯುವ ಪ್ರಯತ್ನ ಮಾಡಿದ್ದೇನೆ

ದಿವಾ—ನೀವು ಹೇಳತಕ್ಕದ್ದು ಇಷ್ಟೆಯೇ ?

ಫೌಜು—ಇನ್ನೂ ಒಂದೆರಡು ಮುಖ್ಯ ವಿಚಾರಗಳಿವೆ ಇಲ್ಲಿ ನಾವು ವಸೂಲು ಮಾಡುವ ರಾಜಾದಾಯವು ಬಲು ಹೆಚ್ಚು ! ಭೂಮಿಯ ಉತ್ಪತ್ತಿಯಲ್ಲಿ ಅರ್ಧ ಭಾಗ ವನ್ನು ವಸೂಲು ಮಾಡಬೇಕಾಗಿದೆ. ಅದರಿಂದ ಈ ದೇಶದ ಜನರಿಗೆ ಕ್ಷೋಭೆಯುಂಟಾ

ಗಿದೆ. ಇಲ್ಲಿ ಅಲ್ಲೀ ಸೇಟರೆಂಬ ಬಲು ದೊಡ್ಡ ವರ್ತಕರ ಕೋರಿಯೊಂದಿದೆ ಅವರು ಬೆಳೆದ ದವಸಕ್ಕೆಲ್ಲಾ ಹೆಚ್ಚುಬೆಲೆ ಕೊಟ್ಟು ಮಲಬಾರಿಗೆ ಸಾಗಿಸಿಬಿಟ್ಟರು ಈ ಬರಗಾಲದಲ್ಲಿ ಅದರಿಂದ ಬಹಳ ಹಾನಿಯಾಯಿತು ಇಲ್ಲಿ ಮುಸಲ್ಮಾನರ ರಾಜ್ಯವಿರುವುದು ಹಿಂದೂಗಳಿಗೆ ಸಮಾಧಾನವಿಲ್ಲವೆಂಬುದು ತಮ್ಮ ಚಿತ್ತಕ್ಕೆ ವೇದ್ಯವೇ ಇದೆ ಮರಾಟರ ಮತ್ತು ಕಂಪೆನಿಯವರ ಚಿತಾವಣೆಯು ಬಹಳವಾಗಿದೆಯೆಂದು ನನ್ನ ಖಚಿತಾಭಿಪ್ರಾಯ ! ಇಷ್ಟೇ ನಾನು ಅರಿಕೆ ಮಾಡತಕ್ಕದ್ದು ಅನುಭವಸ್ಥರೂ ಹಿರಿಯರೂ ಆದ ದಿವಾನರವರು ದಯಮಾಡಿಸಿದ್ದು ಬಹಳ ಒಳ್ಳೆಯದಾಯಿತು ರಾಜ್ಯವನ್ನು ಒಪ್ಪಿಸಿಕೊಳ್ಳಬಹುದು ಹೇಗೆ ಅಪ್ಪಣೆಯಾದರೆ ಹಾಗೆ ನಡೆಯುತ್ತೇನೆ

ದಿವಾನ್—ಫೌಜುದಾರರೇ ! ನೀವು ಹೇಳುವುದೆಲ್ಲಾ ಅಕ್ಷರಶಃ ಸರಿಯಾಗಿದೆ. ಆದರೆ ಆಯಾ ಕಾಲದಲ್ಲಿ ಅದಕ್ಕೆ ಮಾಡಬೇಕಾದ ಪರಿಹಾರೋಪಾಯವನ್ನು ನೀವು ಸರಿಯಾಗಿ ಮಾಡಿಲ್ಲವೆಂದು ನನ್ನ ಅಭಿಪ್ರಾಯ ತೀರ್ಮಾನವನ್ನು ಕೊಡುವವನು ನಾನಲ್ಲ. ಅದು ಸ್ವಯಂ ಸುಲ್ತಾನರ ಅಧಿಕಾರ ನಾವು ಇಲ್ಲಿಗೆ ಹೊಸಬರು ನಾವು ಅಧಿಕಾರವನ್ನು ಇನ್ನೂ ವಹಿಸಿಕೊಂಡಿಲ್ಲ ನಾವು ಸ್ವೀಕಾರಮಾಡುವವರಗೆ ನೀವು ದಕ್ಷತೆಯಿಂದ ನಿಮ್ಮ ಅಧಿಕಾರ ಚಲಾಯಿಸಿ ನಮ್ಮ ಹತ್ತಿರ ಹತ್ತು ಸಹಸ್ರ ಭದ್ರವಾದ ಸೈನ್ಯವಿದೆ ಭಯಪಡುವ ಕಾರಣವಿಲ್ಲ ! ಅವಶ್ಯಕತೆಯಿದ್ದರೆ ಈಕ್ಷಣವೇ ನಗರದಿಂದ ಇಪ್ಪತ್ತುಸಹಸ್ರ ಸೈನ್ಯವು ಬರುತ್ತದೆ

ಫೌಜು—ನಾನು ಈದಿನ ಹೇಗಾದರೂ ಮಾಡಿ ಭಕ್ಷಿಯನ್ನು ಹಿಡಿಸಬೇಕೆಂದಿದ್ದೇನೆ.

ದಿವಾನ್—ನಮಗೂ ಅದೇ ಸರಿಯೆಂದು ತೋರುತ್ತದೆ ಫೌಜುದಾರರೇ ! ಒಂದು ಮಾತು ಆ ಫಕೀರನನ್ನು ಮರ್ಯಾದೆಯಿಂದ ಕರೆಸಿ ನಮ್ಮಲ್ಲಿಗೆ ಕಳಿಸಿಕೊಡಿರಿ.

ಅಪ್ಪಣೆ ಎಂದು ಹೇಳಿ ಫೌಜುದಾರನು ಹೊರಗ ಬಂದನು.

ಫೌಜುದಾರನು ತನ್ನ ಬಿಡಾರಕ್ಕೆ ಹೋದನು ಅಲ್ಲಿ ಮುಖ್ಯ ಮುಖ್ಯಅಧಿಕಾರಿಗಳನ್ನೆಲ್ಲಾ ಕರಸಿದನು ಅವರೊಡನೆ ರಾಜಕೀಯವನ್ನೆಲ್ಲಾ ಆಲೋಚಿಸಿದನು ಭಕ್ಷಿಯನ್ನು ಏನಾದರೂ ಉಪಾಯದಿಂದ ಹಿಡಿಯಬೇಕೆಂದು ಅಪ್ಪಣೆ ಮಾಡಿದನು

ಎಲ್ಲರೂ ಹೊರಟುಹೋದ ನಂತರ ಆಲೋಚಿಸತೊಡಗಿದನು "ಮಾಧವಿಯು ಎಂಥಾ ಸಾಹಸಕಾರ್ಯವನ್ನು ಮಾಡಿದ್ದಾಳೆ ಭಕ್ಷಿಯಿರುವ ಸ್ಥಳವನ್ನು ನನಗೆ ಹಿಡಿದು ಕೊಟ್ಟಿದ್ದಾಳೆ ಈ ದಿನ ಏನಾದರೂ ಮಾಡಿ ಆ ಭಕ್ಷಿಯನ್ನು ಹಿಡಿಯುತ್ತೇನೆ. ಈ ಸುಲ್ತಾನರನ್ನು ನಂಬಬಾರದು. ಒಂದು ಬಾರಿ ಅವರಿಗೆ ಕೋಪ ಬಂದಮೇಲೆ ಅವರಲ್ಲಿ ಕ್ಷಮೆಯೇ ಇಲ್ಲ ಅವರು ಯಾವುದಾದರೂ ಮಹಾಪರಾಧವನ್ನು ನನ್ನಮೇಲೆ ಹೊರಸಿ ನನ್ನನ್ನು ಕ್ರೂರವಾದ ದಂಡನೆಗೆ ಗುರಿಮಾಡುತ್ತಾರೆ ನಾನು ಹೇಗಾದರೂ

ಮಾಡಿ ತಲೆ ತಪ್ಪಿಸಿಕೊಂಡು ದೂರದೇಶಕ್ಕೆ ಹೊರಟು ಹೋಗಬೇಕು ಎಲ್ಲಿಗೆ ಹೋದರೂ ನಿಸ್ತಾರವಿಲ್ಲ ನನ್ನಲ್ಲಿ ಬೇಕಾದಷ್ಟು ಐಶ್ವರ್ಯವಿದೆ ಈ ಮಾಧವಿಯೊಬ್ಬಳು ನನ್ನ ಸರ್ವಸ್ವ ! ಈ ಅಧಿಕಾರವು ಸಾಕು ! ನಾನು ಹೋಗಿ ಕುಂಪಣಿಯವರ ಶರಣು ಹೊಕ್ಕರೆ ಅವರು ಬಿಟ್ಟುಕೊಡುವುದಿಲ್ಲ" ಎಂದು ತನ್ನಲ್ಲಿ ತಾನೇ ನಿರ್ಧರಿಸಿಕೊಂಡನು. ಸೂರ್ಯಾಸ್ತಮಯವನ್ನೇ ಕಾಯುತ್ತಿದ್ದನು

ಇತ್ತ ದೌಲತ್ ರಾಣಿಯವರೂ ರಾಧಾರಾಣಿಯವರೂ ಮಂಗಳೂರಿಗೆ ಬಂದಿರುವ ಸುದ್ದಿಯು ಭಕ್ಷಿಗೆ ತಿಳಿಯಿತು ಭಕ್ಷಿಯು ಕುದುರೆಯನ್ನೇರಿ ರಾಣಿಯವರ ಬಿಡಾರಕ್ಕೆ ಹೋಗಿ ಅವರ ದರ್ಶನ ಮಾಡಿದನು

ಅವರು "ವಿಪ್ಲವದ ಸಮಾಚಾರಗಳನ್ನೇನಾದರೂ ಬಲ್ಲಿರಾ ?" ಎಂದು ಹುಸೇಖಾನನ್ನು ಪ್ರಶ್ನೆ ಮಾಡಿದರು

ಹುಸೇ—ಬಲ್ಲೆ ! ತಾಯೆ ! ಅದು ವಿಚಿತ್ರವಾಗಿದೆ. ಸುಲ್ತಾನರ ಮೇಲಿನ ಕ್ರೋಧದಿಂದ ಈ ವಿದ್ರೋಹವೆದ್ದಿದೆ ಎನ್ನುತ್ತಾರೆ ಫೌಜುದಾರರ ರಾಜ್ಯಾಧಿಕಾರವು ಸರಿಬೀಳದೇ ಈ ವಿಪ್ಲವವು ಹರಡಿದೆ ಎನ್ನುತ್ತಾರೆ ಇಲ್ಲಿ ಪ್ರಬಲವಾಗಿರುವ ಕ್ಷಾಮವೇ ಇದಕ್ಕೆ ಕಾರಣವೆನ್ನುತ್ತಾರೆ ಯಾವುದು ನಿಜ, ಯಾವುದು ಸುಳ್ಳು ಇತ್ಯರ್ಥಮಾಡುವುದು ಕಷ್ಟ !

ದೌಲತ್—ಇದಕ್ಕೆ ಮುಖಂಡರು ಯಾರು ?

ಹುಸೇ—ಒಬ್ಬ ಫಕೀರನಿದಾನಂತೆ ! ಅವನ ಊರಾವುದೋ ದೇಶವಾವುದೋ ಯಾರಿಗೂ ಗೊತ್ತಿಲ್ಲ ಮತ್ತೊಬ್ಬ ಭಕ್ಷಿ ಎಂಬ ತರುಣನಂತೆ. ಅವನು ಅಜ್ಞಾತ ಕುಲಗೋತ್ರದವ !

ದೌಲತ್—ಅಧಿಕಾರಿಗಳು ಇವರಿಬ್ಬರನ್ನೂ ನಿರ್ಬಂಧಿಸಲಿಲ್ಲವೇಕೆ ?

ಹುಸೇ—ಅದು ಅಧಿಕಾರಿಗಳಿಗೇ ಗೊತ್ತು. ಅವರಿಬ್ಬರೂ ರಾಜಾರೋಷಾಗಿ ಪ್ರತ್ಯಕ್ಷವಾಗಿಯೇ ತಿರುಗುತ್ತಿದ್ದಾರೆ

ದೌಲತ್—ಭಂಡಾರಗಳು ಲೂಟಿಯಾಗಿವೆಯಂತೆ !

ಹುಸೇ—ಹೌದು ಅದರಲ್ಲೇನು ಆಶ್ಚರ್ಯ ? ಒಂದಕ್ಕೆ ಹತ್ತರಷ್ಟು ಬಡಜನರಿಂದ ಸುಲಿಗೆ ಮಾಡಿ ಭಂಡಾರದಲ್ಲಿ ತುಂಬಿದ್ದರು ಬಂಡಾಯದವರು ಅದನ್ನು ಲೂಟಿಮಾಡಿ ಬಡಜನರಿಗೆ ಹಂಚಿದ್ದಾರೆ

ದೌಲತ್—ಕೆಲವರು ಅಧಿಕಾರಿಗಳ ಕೊಲೆಯಾಗಿದೆಯಂತೆ !

ಹುಸೇ—ಅಧಿಕಾರಿಗಳ ಅನ್ಯಾಯವು ಮೇರೆ ಮೀರಿತ್ತು. ಅವರ ಮೇಲೆ ದೂರು ಕೇಳುವರಿಲ್ಲ ಕಷ್ಟಗಳಿಂದ ನೊಂದವರು ಕೊಲೆ ಮಾಡಿರಬಹುದು.

ದೌಲತ್—ಹುಸೇ‌ಖಾ಼! ನೀವು ವಿದ್ರೋಹಿಗಳ ಕಡೆಗೇ ಮಾತನಾಡು ತ್ತೀರಿ. ಇದು ಸರಿಯೆ ?

ಹುಸೇ—ಮಹಾರಾಣಿಯವರೇ! ಇದು ಸರಿಯೋ ತಪ್ಪೋ ನಾನು ಹೇಳ ಲಾರೆ, ಆದರೆ ವಸ್ತುಸ್ಥಿತಿಯನ್ನು ನುಡಿಯುತ್ತಿದ್ದೇನೆ

ದೌಲತ್—ಹುಸೇ‌ಖಾ಼, ಈ ರಾಜ್ಯದಲ್ಲಿ ನೀವೇನು ಮಾಡುತ್ತಿದ್ದೀರಿ ?

ನಾನು ನಮ್ಮ ನವಾಬರನ್ನು ಅರಸುತ್ತಿದ್ದೆ ಅಜ್ಞಾತವಾಸದಲ್ಲಿದ್ದೆ

ದೌಲತ್—ನೀವು ಆ ಫಕೀರರನ್ನೂ ಭಕ್ಷಿಯನ್ನೂ ನೋಡಿದ್ದೀರಾ ?

ಹುಸೇ—ಚನ್ನಾಗಿ ಬಲ್ಲೆ!

ದೌಲತ್—ಅವರನ್ನು ನೀವು ಹಿಡಿದುಕೊಡಬಾರದೆ ?

ಹುಸೇ—ರಾಣಿಯವರೇ! ತಾವು ವಿದ್ರೋಹಿ ಮುಖಂಡರನ್ನು ಹಿಡಿಯಲು ಇಲ್ಲಿಗೆ ಬರೋಣವಾಗಿದೆಯೇನು ? ತಮಗೆ ಬೇಕಾದರೆ ಈ ಕ್ಷಣ ಆ ವಿದ್ರೋಹಿಗಳನ್ನು ಹಿಡಿದು ತಂದೊಪ್ಪಿಸುತ್ತೇನೆ- ಮಹಾರಾಣಿಯವರಿಗೆ ಈ ಕನ್ನಡ ರಾಜ್ಯವು ಬೇಕಾ ದರೆ ಇಂದೇ ಸಿಂಹಾಸನವನ್ನು ಏರಬಹುದು, ಇದು ರಾಣಿಯವರ ಸೇವೆಯಾದರೆ ತಮ್ಮ ಪಾದದಲ್ಲಿ ಈ ಪ್ರಾಣವನ್ನೊಪ್ಪಿಸುತ್ತೇನೆ ಇದು ದಿವಾ಼ರವರ ಕೆಲಸವಾದರೆ ನಾನೇಕೆ ಮಾಡಬೇಕು ? ಸುಲ್ತಾನರವರ ಸೇವೆಯಾದರೆ ನಾವೇಕೆ ಮಾಡಬೇಕು ?

ರಾಧಾ—ಹುಸೇ‌ಖಾ಼! ನೀವು ಯಾವಾಗಲೂ ಸುಲ್ತಾನರ ವಿರೋಧಿಗಳೆ ?

ಹುಸೇ—ಕ್ಷಮಿಸೋಣವಾಗಲಿ, ಹೌದು ನಾನು ಸುಲ್ತಾನರ ವಿರೋಧಿ

ದೌಲತ್—ಹುಸೇ‌ಖಾ಼, ನೀವು ಇಂದು ಇಯಜ್‌ಖಾನರು ಇಲ್ಲಿಗೆ ಬರುವ ರೆಂದು, ನಮಗೆ ವರ್ತಮಾನವನ್ನು ಕೊಟ್ಟಿರಿ ಅವರ ಭೇಟಿಯಾಗುವುದಾಗಿಯೂ ತಿಳಿಸಿದಿರಿ! ಈ ರಾಜ್ಯದಗೊಡವೆಯು ನಮಗೇಕೆ ? ನಾವು ಇಂದು ಇಯಜ್‌ಖಾನರ ದರ್ಶನಕ್ಕಾಗಿ ಹಾತೊರೆಯುತ್ತಿದ್ದೇವೆ ಈ ದಕ್ಷಿಣ ಕನ್ನಡದಲ್ಲಿ ಈ ವಿಪ್ಲವ! ದಿವಾ಼ ರವರ ಆಗಮನ-ಸುಲ್ತಾನರ ಸೈನ್ಯ ಬಂದಿರುವುದು. ಇದೇ ಸಮಯಕ್ಕೆ ಖಾನರು ಇಲ್ಲಿಗೆ ಬರುವುದು. ಸ್ವತಃ ಯುದ್ಧಪ್ರಿಯರಾದ ನೀವು ಇಲ್ಲೇ ಇರುವುದು, ಇದೆಲ್ಲಾ ನಮಗೆ ದಿಗ್ಭ್ರಮೆಯನ್ನುಂಟುಮಾಡಿದೆ ಇಯಜ್‌ಖಾನರೆಲ್ಲಿದ್ದಾರೆ

ಹುಸೇ—ರಾಣಿಯವರೇ! ಇಯಜ್‌ಖಾನರವರ ಭೇಟಿಗಾಗಿ ಒಂದುನೂರು ಮೈಲಿಗಳು ನೀರಿನಮೇಲೆ ಪ್ರಯಾಣಮಾಡಬೇಕಾಗುವುದು ಅದಕ್ಕೆ ತಾವು ಸಿದ್ಧ ರಾಗಿದ್ದೀರಾ ?

ದೌಲತ್—ನಕ್ಕು! ನೂರುಮೈಲಿಗಳೇಕೆ, ಸಾವಿರ ಮೈಲಿಗಳನ್ನಾದರೂ ದಾಟಿ ಹೋಗಲು ಸಿದ್ಧವಾಗಿದ್ದೇವೆ ಅವರ ದರ್ಶನದ ಯಾತ್ರೆಯಲ್ಲಿ ಈ ಶರೀರವು ಸಾಗ ರದ ಗರ್ಭದಲ್ಲಿ ಸೇರಿಹೋದರೂ ಸಂತೋಷವೇ?

ಹುಸೇ೯—ತಾಯಿ, ನಾನು ತಮ್ಮನ್ನು ಪರೀಕ್ಷೆ ಮಾಡುತ್ತಿಲ್ಲ. ಕ್ಷಮಿಸಬೇಕು. ಖಾನರವರು ಇಂದು ಇಲ್ಲಿ ದರ್ಶನ ಕೊಡುವುದಾಗಿ ಅಪ್ಪಣೆ ಕೊಡಿಸಿದ್ದರು. ರಾಣಿಯವರು ಇಲ್ಲಿಗೆ ದಯಮಾಡಿಸುವುದು ಅವರಿಗೆ ಗೊತ್ತಿಲ್ಲ ಈ ವಿಪ್ಲವದ ಸಮಾಚಾರ, ಈ ದಿವಾ೯ರವರ ಆಗಮನ ಈ ಮಹಾ ಸೈನ್ಯವು ಬಂದಿರುವುದು ಇದೆಲ್ಲಾ ಅವರಿಗೆ ತಿಳಿದಿದ್ದರೆ ಅವರು ಇಲ್ಲಿಗೆ ಬಾರದಿದ್ದರೂ ಇರಬಹುದು ಆದ್ದರಿಂದ ನಾನು ತಮ್ಮನ್ನು ಅವರಿರುವ ಸ್ಥಳಕ್ಕೆ ಕರೆದುಕೊಂಡು ಹೋಗಬೇಕಾಗುತ್ತದೆ

ದೌಲತ್—ನೀವು ಹೇಳುವುದು ಯುಕ್ತವಾಗಿದೆ ಹುಸೇ೯ಖಾ೯

ಹುಸೇ೯—ತಾಯಿಯವರೇ, ಇಂದು ರಾತ್ರಿ ಅಲ್ಲೀ ಸೇಟರ ಕೋಠಿಗೆ ಹೋಗಬೇಕು. ಅಲ್ಲಿ ತಮಗೆ ರಾಜಯೋಗ್ಯವಾದ ನಾವೆಯು ತಯಾರಾಗಿರುತ್ತದೆ ಆ ನಾವೆಯಲ್ಲಿ ಸಮುದ್ರದ ಮೇಲೆ ನಾಲ್ಕು ಮೈಲಿಗಳು ಹೋಗಬೇಕು ಅಲ್ಲಿ ಒಂದು ಸಣ್ಣ ಹಡಗು ಇರುತ್ತದೆ ಈ ಹಡಗಿನಲ್ಲಿ ನವಾಬರವರ ಸವಾರಿ ಇರುತ್ತದೆ

ದೌಲತ್—ನೀನು ನಮ್ಮ ಜೊತೆಯಲ್ಲಿ ಬರಬಾರದೇಕೆ ?

ಹುಸೇ೯—ನಾನು ಈಗಲೇ ಇಯುಜ್ ಖಾನರ ಸಮ್ಮುಖಕ್ಕೆ ಹೋಗುತ್ತೇನೆ

ದೌಲತ್—ಆಗಬಹುದು

ಭಕ್ಷಿಗೆ ಇಂದು ಎಷ್ಟೋ ಕೆಲಸಗಳಿವೆ ಶ್ರೀರಂಗಪಟ್ಟಣದ ಸುಲ್ತಾನರ ಸೈನ್ಯವು ಬಂದಿದೆ ಅವರುಗಳು ವಿದ್ರೋಹಿಗಳನ್ನು ಏನುಬೇಕಾದರೂ ಮಾಡಬಹುದು ದಿವಾ೯ರವರು ಬಂದಿದ್ದಾರೆ ವಿದ್ರೋಹಿಗಳು ಕ್ರೋಧೋದ್ದೀಪಿತರಾಗಿ ದಿವಾ೯ರನ್ನು ಕೊಲೆ ಮಾಡಬಹುದು ಅಥವಾ ಕುತುಬುದ್ದೀನರನ್ನು ಯಮಸದನಕ್ಕೆ ಕಳಿಸಬಹುದು. ಇದಾವುದರಿಂದಲೂ ಯಾವ ಕಾರ್ಯ ಸಾಧನೆಯೂ ಆಗುವುದಿಲ್ಲ. ಇಂದು ಮಂಗಳೂರನ್ನು ಸ್ವಾಧೀನಪಡಿಸಿಕೊಳ್ಳಬೇಕಾದರ ಈ ಮಹಾ ಸೈನ್ಯವನ್ನು ಗದ್ದು ರಾಜ್ಯವನ್ನು ಕೈಗೆ ತೆಗೆದುಕೊಳ್ಳಬೇಕು ಈ ವಿದ್ರೋಹಿಗಳಲ್ಲೆಲ್ಲಾ ಒಗ್ಗಟ್ಟಿದೆ ಪ್ರಬಲವಾದ ಕೆಚ್ಚಿದೆ. ನಾನೇ ಮುಂದೆ ನಿಂತು ಯುದ್ಧ ಮಾಡಬಹುದು ಇದನ್ನೆಲ್ಲಾ ಚಿಂತಿಸಿದನು ಮಧ್ಯಾಹ್ನ ಗುಪ್ತ ಸ್ಥಳದಲ್ಲಿ ವಿದ್ರೋಹದ ಮುಖಂಡರನ್ನೆಲ್ಲಾ ಸೇರಿಸಿಕೊಂಡು ಆಲೋಚನೆ ಮಾಡಿದನು.

ಮುಖಂಡರೆಲ್ಲಾ ಹುರಿತುಂಬಿದವರು ಅವರುಗಳು "ನಾವು ಈ ಸೈನ್ಯಕ್ಕೆ ಎದುರು ನಿಂತು ಯುದ್ಧ ಮಾಡುವುದು ಸರಿಯಲ್ಲ ಹಿಂದುಗಡೆಯಿಂದ ನುಗ್ಗಿ ಸಿಕ್ಕಿದಷ್ಟು ಸೈನ್ಯವನ್ನು ನಾಶಮಾಡುತ್ತಾ ಬರಬೇಕು ರಾತ್ರಿ ಎಲ್ಲಾ ಸುಲ್ತಾನರ ಸೈನ್ಯದ ಬೀಡುಗಳಿಗೆ ಬೆಂಕಿ ಹಚ್ಚಬೇಕು ಅವರ ಆಹಾರವನ್ನೆಲ್ಲಾ ನಾಶಪಡಿಸಬೇಕು ಕುಡಿಯುವುದಕ್ಕೆ ನೀರು ದೊರಕದಂತೆ ಮಾಡಬೇಕು. ಈ ಹೋರಾಟವು ಎಷ್ಟು ದಿನಗಳಾದರೂ ನಡೆಯಲಿ ! ಅವರೇ ಹಣ್ಣಾಗಿ ರಾಜಿಗೆ ಬರುತ್ತಾರೆ." ಎಂದು ಹೇಳಿದರು.

ಭಕ್ಷಿ—ನೀವು ಹೇಳುವುದು ಸರಿಯಾಗಿದೆ ಈಮಧ್ಯೆ ಕುಂಪಣಿಯವರೋ ಮರಾಟರೋ ಬಂದು ಈ ರಾಜ್ಯವನ್ನು ಆಕ್ರಮಿಸಿದರೆ ?

ಮುಖಂಡ—ಈ ಯೋಚನೆಯು ನಮಗೇಕೆ ? ಸುಲ್ತಾನರಿಗೆ ಆ ಯೋಚನೆ ಇಲ್ಲದ ಮೇಲೆ ನೀವೇಕೆ ಇದನ್ನು ಯೋಚಿಸುತ್ತೀರಿ ?

ಭಕ್ಷಿ—ಅದು ಸರಿಯೇ ? ಆದರೆ ಇನ್ನು ಎರಡು ಮೂರು ದಿವಸಗಳು ಚಲಿಸದೇ ಇರೋಣ. ದಿವಾನರು ಏನು ಮಾಡುತ್ತಾರೆಯೋ ನೋಡೋಣ

ಮುಖಂಡ—ಹಾಗೆ ಮಾಡಬಹುದು ! ವಿದ್ರೋಹಿಗಳನ್ನು ಅವರು ಹಿಡಿಯಲಾರರು. ನಮ್ಮ ಸೀಮೆಯವರಾರೂ ನಮ್ಮಗಳ ಗುರುತು ಕೊಡುವುದಿಲ್ಲ ಆದರೆ ನಿಮ್ಮನ್ನು ಹಿಡಿಯುತ್ತಾರೆಂದು ವದಂತಿ ಇದೆ ಸರ್ಕಾರದವರು ನಿಮ್ಮ ಗುರುತು ಕಂಡಿದ್ದಾರೆ. ನಿಮ್ಮನ್ನೇನಾದರೂ ಸಾಹಸಮಾಡಿ ಅವರು ಹಿಡಿದುಬಿಟ್ಟರೆ ಬಹಳ ಪ್ರಕೋಪಕ್ಕೆ ಬರುತ್ತದೆ

ಭಕ್ಷಿಯು ನಕ್ಕು "ಇಲ್ಲ. ಸಿಕ್ಕುವುದೇ ಇಲ್ಲ ಇನ್ನು ಮೂರು ನಾಲ್ಕು ದಿವಸಗಳು ನಾನು ಸಮುದ್ರದಲ್ಲಿ ಅಡಗಿರುತ್ತೇನೆ ಇವರಾರಿಗೂ ಸಮುದ್ರದ ಕಡೆ ದೃಷ್ಟಿ ಇಲ್ಲ. ಸುಲ್ತಾನರ ಸೈನಿಕರಿಗೆ ನೀರನ್ನು ಕಂಡರೆ ಭಯ ! ನೀವುಗಳು ಎಲ್ಲರೂ ಗುಪ್ತವೇಷಗಳಿಂದ ದೇಶವನ್ನೆಲ್ಲಾ ಕಾಯಬೇಕು ಸುಲ್ತಾನರ ಸೈನಿಕರಿಗಾಗಲೀ, ಹೆಂಗಸರಿಗಾಗಲೀ, ತೊಂದರೆ ಕೊಡದಂತೆ ಕಾಪಾಡಬೇಕು." ಎಂದು ಹೇಳಿದನು

ಈ ರೀತಿಯಾಗಿ ಭಕ್ಷಿಯು ಎಲ್ಲ ವ್ಯವಸ್ಥೆಯನ್ನೂ ಮಾಡಿದನು ಇಷ್ಟುಹೊತ್ತಿಗೆ ರಾತ್ರಿ ಒಂಭತ್ತು ಗಂಟೆಯಾಯಿತು. ಎಲ್ಲರನ್ನೂ ಕಳಿಸಿದನು ತಾನು ಪಾದ್ರಿಯ ಮನೆಗೆ ಹೊರಟನು.

ಸಮುದ್ರದ ದಡದಲ್ಲಿ ಒಂದು ಗುಡ್ಡದ ಪಕ್ಕದಲ್ಲಿ ಪಾದ್ರಿಯ ಮನೆ ಇದೆ ಸುತ್ತಲೂ ತೋಪು ! ಆ ತೋಪಿನಲ್ಲಿ ವೃಕ್ಷಗಳು ನಿಬಿಡವಾಗಿವೆ ಸ್ವಲ್ಪ ದೂರದಲ್ಲಿ ಒಂದು ಚಿಕ್ಕ ಚರ್ಚ್ ಇದೆ ಅಲ್ಲಲ್ಲಿ ಕ್ರಿಸ್ತರ ಗೋರಿಗಳಿವೆ ಪಾದ್ರಿಯ ಮನೆ ಪ್ರಶಸ್ತವಾಗಿದೆ ಭಕ್ಷಿಯು ಏಕಾಂಗಿಯಾಗಿ ಈ ಮನೆಗೆ ಹೋದನು ಬೀದಿಯ ಬಾಗಿಲು ಮುಚ್ಚಿತ್ತು ಒಳಗೆ ದೀಪವು ಉರಿಯುತ್ತಿತ್ತು. ಪಾದ್ರಿಯು ಒಂದು ಆಸನದ ಮೇಲೆ ಕುಳಿತಿದ್ದನು ಮಾಧವಿಯು ನೆಲದ ಮೇಲೆ ಕುಳಿತಿದ್ದಳು. ಭಕ್ಷಿಯು ಬಾಗಿಲನ್ನು ತಟ್ಟಿದನು ಪ್ರಾದಿಯು ಬಾಗಿಲನ್ನು ತೆಗೆದನು ಭಕ್ಷಿಯು ಒಳಗೆ ಬಂದು ಬಾಗಿಲನ್ನು ಮುಚ್ಚಿದನು. ಮಾಧವಿಯನ್ನು ನೋಡಿ ಮಂದಹಾಸದಿಂದ "ಏನು ಮಾಧವಿ ! ಇಲ್ಲಿ ನಿರ್ಭಯವಾಗಿರುವೆಯಾ ?" ಎಂದನು.

ಮಾಧವಿಯು ಹಸನ್ಮುಖದಿಂದ "ಭಕ್ಷಿಯವರೇ ! ಧೈರ್ಯದಿಂದ ಒಂದು ದಿನ ಕಳೆದೆ. ಈ ಪ್ರಾದಿಗಳು ಬಹಳ ಒಳ್ಳೆಯವರು. ನನ್ನನ್ನು ತಮ್ಮ ಹೊಟ್ಟೆಯಲ್ಲಿ ಹುಟ್ಟಿದ

ಮಗಳಂತೆ ನೋಡುತ್ತಾರೆ ಆದರೂ ನನ್ನ ಭಯವು ನನಗೆ ಇದ್ದೇಇದೆ ಗೋವಿ-ದನ ಸಮಾಚಾರವೇನು ತಿಳಿದಿದ್ದೀರಾ ?" ಎಂದಳು

ಭಕ್ಷಿ—ಮಾಧವಿ ! ಭಯವಿಲ್ಲ, ಗೋವಿಂದನು ಬಂಧನದಲ್ಲಿದ್ದಾನೆ ಅವನನ್ನು ಗಲ್ಲಿಗೆ ಹಾಕಿಲ್ಲ ಈ ದಿನ ಪ್ರಾತಃಕಾಲದಿಂದ ಇಲ್ಲಿ ರಾಜ್ಯಭಾರವೆಲ್ಲಾ ಬದಲಾಯಿಸಿ ಹೋಗಿದೆ ಸುಲ್ತಾನರ ಸೈನ್ಯಗಳು ಬಂದಿವೆ ನಗರದ ದಿವಾರ್ನರವರು ಬಂದಿದ್ದಾರೆ. ಫೌಜುದಾರರ ಅಧಿಕಾರವಿಲ್ಲ ವಿಚಾರಣೆ ಇಲ್ಲದೇ ಯಾರನ್ನೂ ದಿವಾರ್ನರು ಶಿಕ್ಷಿಸುವುದಿಲ್ಲ ಪ್ರತ್ಯಕ್ಷ ವಿಚಾರಣೆಯು ನಡೆದರೆ ಕುತುಬುದ್ದೀನನ ಮೇಲೆ ಸಹಸ್ರ ಸಹಸ್ರ ಆರೋಪಣೆಗಳಿವೆ, ಗೋವಿಂದನಿಗೆ ಭಯವಿಲ್ಲ !

ಮಾಧವಿ—ಭಗವಂತನೇ ರಕ್ಷಿಸಬೇಕು

ಭಕ್ಷಿ—ಮಾಧವಿ ! ನೀನು ಇಲ್ಲೇ ಇರು ನಾನು ಹೊರಡುತ್ತೇನೆ ನಾಳೆಯ ದಿನ ಪುನಃ ನೋಡುತ್ತೇನೆ

ಮಾಧವಿ—ಭಕ್ಷಿಯವರೇ ಇನ್ನು ನಾನಿಲ್ಲಿರುವುದಿಲ್ಲ ನಾನು ನಿಮ್ಮ ಜೊತೆಯಲ್ಲಿಯೇ ಬರುತ್ತೇನೆ

ಭಕ್ಷಿ—(ನಗುತ್ತಾ) ಎಲ್ಲಿಗೆ ಬರುವೆ ?

ಮಾಧವಿ—ಎಲ್ಲಿಗಾದರೂ ಬರುವೆನು ನಿಮ್ಮ ಜೊತೆಯಲ್ಲಿ ಸಮುದ್ರದಲ್ಲಿ ಮುಳುಗುವೆನು ಶೂಲದ ಮರಕ್ಕಾದರೂ ಏರುವೆನು.

ಭಕ್ಷಿ—ಸಂತೋಷ ! ಬಾ! ನನ್ನ ಜೊತೆಯಲ್ಲಿ ! ನಮ್ಮ ಜೊತೆ ಸೇರಿನ ಮೇಲೆ ಕಷ್ಟಗಳನ್ನು ಅನುಭವಿಸಬೇಕು

ಮಾಧವಿಯು "ಧೈರ್ಯವಿದೆ" ಎಂದು ನಕ್ಕಳು

ಭಕ್ಷಿಯು ಮಾಧವಿಯನ್ನು ಕರೆದುಕೊಂಡು ಹೊರಟನು

ನೂರು ಬಾರು ದೂರ ನಡೆಯುವಷ್ಟರಲ್ಲಿ ಎಡದ ಕಡೆಯಿಂದ ಕುದುರೆಗಳು ಬರುವ ಸಪ್ಪಳವು ಕೇಳಿಸಿತು.

ಮಾಧವಿ—ಭಕ್ಷಿಗಳೇ! ಇದೇನು, ಕುದುರೆಯ ಕಾಲುಸಪ್ಪಳ ?

ಭಕ್ಷಿ—ಮಾಧವಿ, ಭಯಪಡಬೇಡ ! ಅದು ಸುಲ್ತಾನರ ಸೈನಿಕರ ಕುದುರೆಗಳಿರಬಹುದು. ರಾತ್ರಿಗಸ್ತಿಗೆ ಹೊರಟಿರಬಹುದು ಅವರು ಮುಂದ ಹೊರಟು ಹೋಗುವವರೆಗೆ ದಾರಿ ಬಿಟ್ಟು ಒಂದು ಕಡೆಗೆ ನಿಂತುಕೋ ! ಅವರು ಮುಂದೆ ಹೋಗಲಿ. ನಾವು ಹಿಂದೆ ಹೋಗೋಣ (ಹಾಗೆಯೇ ಇಬ್ಬರೂ ಸರಿದುನಿಂತರು ಹತ್ತು ಕುದುರೆಗಳು ಮುಂದೆ ಹೋದವು ಇವರು ದಾರಿ ಬಿಟ್ಟು ನೋಡುತ್ತಾ ನಿಂತರು )

ಅಶ್ವಾರೋಹಿಗಳು ಕುದುರೆಗಳನ್ನು ನಿಲ್ಲಿಸಿ, "ಯಾರದು" ಎಂದರು.

ಭಕ್ಷಿ—ನಾವು ದಾರಿಗರಪ್ಪಾ !

ಅಶ್ವಾ—ಇಷ್ಟು ಹೊತ್ತು ರಾತ್ರಿಯಲ್ಲಿ ಇಲ್ಲಿ ಏಕೆ ಹೋಗುತ್ತಿದ್ದೀರಿ ?

ಭಕ್ಷಿ—ಎಲ್ಲಿಯೋ ನೆಂಟರ ಮನೆಗೆ ಹೋಗಿದ್ದೆವು ಹೊತ್ತಾಯಿತು ಮನೆಗೆ ಹೋಗುತ್ತಿದ್ದೇವೆ

ಅಶ್ವಾ—ಈ ಕಡೆ ಕಳ್ಳಕಾಕರ ಭೀತಿ ನಮ್ಮ ಜೊತೆಯಲ್ಲಿ ಬನ್ನಿ! ನಾವು ನಿಮ್ಮ ಮನೆಗೆ ಸೇರಿಸಿ ಹೋಗುತ್ತೇವೆ

ಭಕ್ಷಿ—ನಿಮ್ಮಿಷ್ಟಕ್ಕೆ ನೀವು ಹೋಗಿ ನಮಗೇನೂ ಭಯವಿಲ್ಲ. ನಾವು ಧೈರ್ಯವಾಗಿ ಮನೆ ಸೇರಿಕೊಳ್ಳುತ್ತೇವೆ

ಅಶ್ವಾ—ಎಷ್ಟು ಮಾತನಾಡುತ್ತೀಯೋ, ಲಷ್ಕರೀ ಕಾನೂನು ಗೊತ್ತಿಲ್ಲವೇನು ? ಹೇಳಿದ ಹಾಗೆ ಕೇಳಬೇಕು

ಭಕ್ಷಿ—ಹೌದು! ಗೊತ್ತಿದೆ, ಹಾಗೆಯೇ ಮಾಡುತ್ತೇವೆ ನಡಿ, ತಂಗಿ, ಅವರ ಹಿಂದೆಯೇ ಹೋಗೋಣ

"ಅಶ್ವಾರೋಹಿಯೊಬ್ಬನು "ಹಿಂದಲ್ಲ ಮುಂದೆ ನಡೆ" ಎಂದು ಗದ್ದರಿಸಿದನು.

ಭಕ್ಷಿಯೂ, ಮಾಧವಿಯೂ ಮುಂದೆ ಮುಂದೆ ಹೋದರು.

ಕುತುಬುದ್ದೀನನು ಇಬ್ಬರನ್ನೂ ದೃಷ್ಟಿಸಿ ನೋಡಿದನು. ಮಾಧವಿಯನ್ನು ಮೊದಲೇ ಗುರ್ತಿಸಿದ್ದನು ಮತ್ತೊಬ್ಬನು ಭಕ್ಷಿಯೆಂದು ಅವನಿಗೆ ದೃಢವಾಯಿತು.

ಭಕ್ಷಿಯೂ ಮಾಧವಿಯೂ ಮುಂದೆ ಮುಂದೆ ಹೋದರು

ಕುದುರೆಗಳು ಹಿಂದೆ ಮೆಲ್ಲಗೆ ನಡೆದವು

ಭಕ್ಷಿಯು ಸರಿಯಾದ ಸ್ಥಳವನ್ನು ನೋಡಿ ಕಾಡಿನಲ್ಲಿ ಬಿದ್ದು ಓಡಿಹೋಗಬೇಕೆಂದು ನಿಶ್ಚಯಿಸಿದನು ಮಾಧವಿಯ ಕೈ ಹಿಡಿದುಕೊಂಡು ನಡೆದನು

ಕುತುಬುದ್ದೀನನು ಅಷ್ಟು ಅವಕಾಶ ಕೊಡಲಿಲ್ಲ. ಅವನು ಸನ್ನೆ ಮಾಡಿದನು. ಜೊತೆಯಲ್ಲಿದ್ದ ಸವಾರರು ಹಗ್ಗವನ್ನು ಬೀಸಿ ಇಬ್ಬರನ್ನೂ ಕೆಳಗೆ ಕೆಡವಿದರು ತಟ್ಟನೆ ಕುದುರೆಗಳಿಂದ ಹಾರಿ ಅವರ ಮೇಲೆಬಿದ್ದು ಹಿಡಿದುಕೊಂಡರು ಭಕ್ಷಿಯಾಗಲೀ ಮಾಧವಿಯಾಗಲೀ ಸದ್ದು ಮಾಡಲಿಲ್ಲ ಇಬ್ಬರ ಕೈಗೂ ಕೋಳಗಳನ್ನು ತೊಡಿಸಿದರು ಮುಂದೆ ಮುಂದೆ ನಡೆದರು ಭಕ್ಷಿಯು ಸದ್ದು ಮಾಡಲಿಲ್ಲ ಯಾರಾದರೂ ವಿದ್ರೋಹಿಗಳ ಗುಂಪು ಬರಬಹುದೆಂದೂ, ಆಗ ಈ ಸೈನಿಕರ ಆಟವೆಲ್ಲಾ ಕಟ್ಟಿಹೋಗುತ್ತದೆಂದೂ ಧೈರ್ಯವಾಗಿದ್ದನು ಆದರೆ ಅದು ಹಾಗಾಗಲಿಲ್ಲ. ಅಷ್ಟು ಅವಕಾಶ ದೊರೆಯಲೇ ಇಲ್ಲ ಅಲ್ಲೇ ಆ ತೋಪಿನ ದಾರಿಯು ದಾಟುತ್ತಲೇ ಎತ್ತಿನ ಗಾಡಿಯೊಂದು ಸಿದ್ಧವಾಗಿತ್ತು

ಭಕ್ಷಿಯನ್ನೂ, ಮಾಧವಿಯನ್ನೂ, ಎತ್ತಿ ಬಲಾತ್ಕಾರದಿಂದ ಆ ಗಾಡಿಯಲ್ಲಿ ಕುಳ್ಳಿರಿಸಿದರು. ಗಾಡಿಯು ವೇಗವಾಗಿ ಹೊರಟು ಹೋಯಿತು ಕುತುಬುದ್ದೀನನ

ಗೃಹದಲ್ಲಿ ಹೋಗಿ ನಿಂತಿತು ಖೈದಿಗಳಿಬ್ಬರನ್ನೂ ಕರೆದುಕೊಂಡು ಅವರಿಬ್ಬರನ್ನೂ ಬೇರೆ ಬೇರೆ ಅಗಲಿಸುವಾಗ ಭಕ್ಷಿಯು ಗಂಭೀರ ಧ್ವನಿಯಿಂದ "ಮಾಧವಿ, ಭಯಪಡ ಬೇಡ ! ಪ್ರಾಣ ಕಳೆದುಕೊಳ್ಳಬೇಡ ನಾನು ರಕ್ಷಿಸುತ್ತೇನೆ" ಎಂದು ಹೇಳಿದನು. ಮಾಧವಿಯು ನಕ್ಕಳು ಇಬ್ಬರು ಖೈದಿಗಳೂ ಬಂಧನದಲ್ಲಿಡಲ್ಪಟ್ಟರು.

ಕುತುಬುದ್ದೀನನು ತನ್ನ ಕುದುರೆಯನ್ನೇರಿ ಲಗುಬಗೆಯಿಂದ ದಿವಾನರವರ ಭೇಟಿಮಾಡಿ "ನಾನೇ ಹೋಗಿ ಭಕ್ಷಿಯನ್ನು ಹಿಡಿದು ಬಂಧನದಲ್ಲಿಟ್ಟಿದ್ದೇನೆ ನಾಳೆ ಹುಕ್ಕುಂ ಆದರೆ ಶೂಲಕ್ಕೇರಿಸಬಹುದು' ಎಂದು ಹೇಳಿದನು.

ದಿವಾನರವರು ಈ ವರ್ತಮಾನವನ್ನು ಕೇಳಿ ಬಹಳ ಸಂತೋಷಪಟ್ಟರು ಫೌಜುದಾರರೇ ಭಕ್ಷಿಯನ್ನು ಶೂಲಕ್ಕೆ ಹಾಕಿಸುವ ಉದ್ದೇಶ ನನಗಿಲ್ಲ ಅವನನ್ನು ನೋಡಬೇಕೆಂಬ ಕುತೂಹಲ ಬಹಳವಾಗಿದೆ ನಾಳೆ ಇಲ್ಲಿ ಅವನನ್ನು ನಾವು ನೋಡಿ ಮಾತನಾಡುತ್ತೇವೆ ಶ್ರೀರಂಗ ಪಟ್ಟಣಕ್ಕೆ ಸುಲ್ತಾನರ ಸನ್ನಿಧಾನಕ್ಕೆ ಕಳುಹಿಸುತ್ತೇವೆ. ಆಮೇಲೆ ಅವರ ಚಿತ್ತ !" ಎಂದರು

ತಮ್ಮ ಹುಕ್ಕುಂನಂತೆ ನಡೆದುಕೊಳ್ಳುತ್ತೇನೆ"

ಫೌಜುದಾರನು ಹೊರಟು ಹೋದನು ತನ್ನ ಮನೆಗೆ ಹೋಗಿ ಸುಖವಾಗಿ ನಿದ್ರಿಸಲಿಲ್ಲ ! ತಾನೆ ಮಾಧವಿ ಇದ್ದ ಕೋಣೆಗೆ ಹೋದನು ಅವಳ ಕೋಳಗಳನ್ನು ತೆಗೆಸಿ, ಅಂತಃಪುರಕ್ಕೆ ಕರೆದುಕೊಂಡು ಹೋದನು "ಮಾಧವಿ, ನೀನು ಎಂತಹ ದೇವ ಕನ್ಯೆ ! 'ನನಗೆ ಜೀವ ಮಾನಗಳೆರಡನ್ನೂ ಕೊಟ್ಟೆ" ಎಂದು ಕೊಂಡಾಡಿದನು ಅವ ಳನ್ನು ಬಂಧಿಸಿ ಕಷ್ಟ ಪಡಿಸಿದ್ದಕ್ಕಾಗಿ ಕ್ಷಮೆ ಬೇಡಿದನು.

ಮಾಧವಿಯು ಕುತುಬುದ್ದೀನರೇ ! ನಾನಾಗಿ ಈ ಸಾಹಸ ಕಾರ್ಯಕ್ಕ ಕೈ ಹಾಕಿದೆ ನಿಮ್ಮನ್ನಗಲಿ ನಾಲ್ಕು ದಿನಗಳಾದುವು ನನಗೆ ಎಷ್ಟೋ ಸಮಾಚಾರ ಗಳು ತಿಳಿದಿವೆ. ಅದೆಲ್ಲಾ ಭಯವನ್ನುಂಟುಮಾಡಿವೆ" ಎಂದಳು

ಕುತುಬುದ್ದೀನ—ಮಾಧವಿ, ಅಂತಹ ಭಯಕ್ಕೆ ಕಾರಣವೇನು ? ಸಂತೋಷ ಸಮಯದಲ್ಲಿ ಭಯವೇಕೆ ?

ಮಾಧವಿ—ಕುತುಬುದ್ದೀನ, ನಿನ್ನ ಅಧಿಕಾರವು ನಿನ್ನೆಯೇ ಪೂರೈಸಿತೆನ್ನುತ್ತಾರೆ.

ಕುತುಬುದ್ದೀನ—ಮಾಧವಿ, ಅದೆಲ್ಲಾ ಸುಳ್ಳು ! ಈ ದಿನ ದಿವಾನರವರು ಬೆಳಿಗ್ಗೆ ಎಷ್ಟೋ ಧೈರ್ಯ ಹೇಳಿದರು. ಈ ಭಕ್ಷಿಯನ್ನು ಹಿಡಿದು ಕೊಟ್ಟಿದ್ದಕ್ಕಾಗಿ ಎಷ್ಟೋ ಶ್ಲಾಘಿಸಿದರು.

ಮಾಧವಿ- ನನ್ನ ಮಾತು ಕೇಳಿರಿ ! ಈ ಅಧಿಕಾರವು ನಮಗೆ ಬೇಡ ಮೋಸ ಹೋಗಬೇಡಿರಿ ನಾವಿಬ್ಬರೂ ಈ ರಾತ್ರಿಯೇ ಈ ದೇಶವನ್ನು ಬಿಟ್ಟು ಹೊರಟು ಹೋಗೋಣ.

ಕುತುಬುದ್ದೀನನು "ಇಲ್ಲ! ಮಾಧವಿ ಹಾಗೆ ಮಾಡಬಾರದು ನಮಗೆ ಎಲ್ಲವೂ ಜಯವಾಗಿದೆ. ಈ ಜಯವು ನಿನ್ನದು!" ಎಂದು ಆಲಿಂಗಿಸಿ ಚುಂಬಿಸಿದನು

ಮಾಧವಿಯು ತನ್ನ ಭುಜಗಳಿಂದ ಕುತುಬುದ್ದೀನನ ಕಂಠವನ್ನು ಬಿಗಿದಪ್ಪಿ "ನನಗೊಂದು ವಾಗ್ದಾನ ಮಾಡಿರಿ! ಆ ಭಕ್ಷಿಗೆ ಏನೂ ತೊಂದರೆಯಾಗಕೂಡದು ಅವನು ಒಂದು ಒಳ್ಳೆಯ ಮನುಷ್ಯ!" ಎಂದಳು

"ಮಾಧವಿ! ನೀನು ಚಿಂತಿಸಬೇಡ! ಭಕ್ಷಿಯನ್ನು ನಾನು ರಕ್ಷಿಸುತ್ತೇನೆ. ಅಷ್ಟೇ ಅಲ್ಲ. ಅವನನ್ನು ಗೌರವಿಸುತ್ತೇನೆ" ಎಂದು ಕುತುಬುದ್ದೀನನು ಹೇಳಿದನು

ಅನಂತರ "ನಾನು ನಗರದಲ್ಲಿ ಗಸ್ತು ತಿರುಗಲು ಹೋಗಬೇಕು ನೀನು ಬಹಳ ದಣಿದಿದ್ದಿ. ನಿದ್ದೆ ಮಾಡು" ಎಂದು ಹೇಳಿ ಹೊರಗೆ ಹೊರಟನು

ಭಕ್ಷಿಯನ್ನು ಬಂಧಿಸಿದ್ದ ಕೋಣೆಗೆ ಹೋಗಿ ಕಾವಲುಗಾರರಿಂದ ಬಾಗಿಲು ತೆಗೆಸಿದನು. ಒಳಗೆ ಹೋಗಿ ಭಕ್ಷಿಯ ಸಮೀಪದಲ್ಲಿ ನಿಂತುಕೊಂಡು ಮಾತನಾಡಿಸಿದನು.

ಕುತುಬುದ್ದೀನ—ಭಕ್ಷಿ! ನೀನು ಭಯಪಡಬೇಡ, ಚಿಂತಿಸಬೇಡ ನಾನು ನಿನ್ನನ್ನು ರಕ್ಷಿಸುತ್ತೇನೆ.

ಭಕ್ಷಿ—(ಗಹಗಹಿಸಿ ನಕ್ಕು) ಕುತುಬುದ್ದೀನನೇ! ನನಗೇನು ಭಯ? ಭಯವು ನಿನಗೆ. ನಾನು ಹೇಳುತ್ತೇನೆ ಕೇಳು ಈ ಸುಲ್ತಾನೀ ದರ್ಬಾರು ನನಗೆ ಗೊತ್ತಿರುವಷ್ಟು ನಿನಗೇನು ಗೊತ್ತಿದೆ? ನನ್ನನ್ನು ನೀನು ಏನೂ ಮಾಡಲಾರೆ! ನಾಳೆಯ ದಿನ ನೀನು ನನ್ನನ್ನು ದಿವಾನರ ಸಮ್ಮುಖದಲ್ಲಿ ಕರೆದುಕೊಂಡು ಹೋಗುವಿಯಲ್ಲವೆ?

ಕುತುಬುದ್ದೀನ—ಹೌದು!

ಭಕ್ಷಿ—ಅಲ್ಲಿಯೇ ನಿನ್ನ ವಿಚಾರಣೆ ಆಗುತ್ತದೆ.

ಕುತುಬುದ್ದೀನ—ನನ್ನ ವಿಚಾರಣೆಯೇ?

ಭಕ್ಷಿ—ನನ್ನ ವಿಚಾರಣೆಯನ್ನು ದಿವಾನರವರು ಮಾಡುವುದಿಲ್ಲ, ಕುತುಬುದ್ದೀನ ನಾನೇಕೆ ಇನ್ನೂ ಮುಚ್ಚಿಡಲಿ ನಾನು ಭಕ್ಷಿಯಲ್ಲ ದಿವಾನರವರಿಗೆ ನನ್ನ ಪರಚಯ ಇದೆ ಸುಲ್ತಾನರಿಗೆ ನನ್ನ ಪರಿಚಯವು ಚೆನ್ನಾಗಿದೆ ನನ್ನನ್ನು ವಿಚಾರಣೆ ಮಾಡಬೇಕಾದರೆ ಸುಲ್ತಾನರೇ ಇಲ್ಲಿಗೆ ಬಂದು ಮಹಾಯುದ್ಧಕ್ಕೆ ಸಿದ್ಧರಾಗಬೇಕಾಗುತ್ತೆ ಪಾಪ! ನಿನಗೆ ಮೈಸೂರಿನ ರಾಜಕೀಯವೇ ಗೊತ್ತಿಲ್ಲ.

ಕುತುಬುದ್ದೀನ—ಭಕ್ಷಿ! ನೀನು ನನ್ನನ್ನು ಭಯಪಡಿಸುತ್ತಿ ಇಷ್ಟು ಚಾಲಕ್ ಇಲ್ಲದೇ ಇಷ್ಟೊಂದು ದೊಡ್ಡ ವಿಪ್ಲವವನ್ನು ಸಿದ್ಧಮಾಡಿಸಿದ್ದೆಯಾ ನೀನು ನೀನೇ ಭಕ್ಷಿ! ಈ ದೇಶವೆಲ್ಲವೂ ಸಾಕ್ಷಿ ಹೇಳುತ್ತದೆ. ನಿನ್ನನ್ನು ಶೂಲಕ್ಕೆ ಹಾಕಬೇಕೆಂದು ಖುದ್ದು ಸುಲ್ತಾನರವರೇ ಹುಕ್ಕುಂ ಬರೆಸಿ ಕಳುಹಿಸಿದ್ದಾರೆ.

ಭಕ್ಷಿ—ಕುತುಬುದ್ದೀನ್ ! ನಾನೇಕೆ ಭಯಪಡಿಸಬೇಕು ನಿನ್ನನ್ನು ಇನ್ನು ಸ್ವಲ್ಪವೇ ರಾತ್ರಿ ಉಳಿದಿದೆ, ಹೋಗಿ ಸುಖವಾಗಿ ನಿದ್ದೆ ಮಾಡು ನಾಳೆ ದಿವಾನರವರ ಸಮ್ಮುಖದಲ್ಲಿ ನಿನ್ನ ವಿಚಾರಣೆ ಮಾಡಿಸುತ್ತೇನೆ ಸಹಸ್ರ ಸಹಸ್ರ ಅಪರಾಧಗಳವೆ ನಾನೇ ಈ ಮಂಗಳೂರಿನ ಕಡೆಯಿಂದ ದಾವಾ ಮಾಡುತ್ತೇನೆ, ನೋಡು ನಾಳೆ ನಿನ್ನ ಪರಿಣಾಮವೇನಾಗುವುದೆಂದು ?

ಕುತುಬುದ್ದೀನ್—ಕೇಳು ಭಕ್ಷಿ ! ನನ್ನ ಅಧಿಕಾರವು ಹೋಗಿಲ್ಲ ದಿವಾನರವರು ನನಗೆ ಸಂಪೂರ್ಣ ಅಧಿಕಾರವನ್ನು ಚಲಾಯಿಸುವಂತೆ ಈ ದಿನ ಬೆಳಗ್ಗೆ ಮದತ್ ಕೊಟ್ಟಿದ್ದಾರೆ ಈಗ ತಾನೇ ಸ್ವಲ್ಪಹೊತ್ತಿಗೆ ಮುಂಚೆ ನಿನ್ನನ್ನು ಹಿಡಿದದ್ದಕ್ಕಾಗಿ ನನ್ನನ್ನು ಎಷ್ಟೋ ಶ್ಲಾಘಿಸಿದಾರೆ ನೀನು ಕೇಳಿರುವ ವರ್ತಮಾನಗಳೆಲ್ಲಾ ಸುಳ್ಳು. ನಾನು ಹೇಳಿದಂತೆ ಕೇಳು ನಿನ್ನನ್ನು ರಕ್ಷಿಸುತ್ತೇನೆ ನಾನೂ ನೀನೂ ಸ್ನೇಹಮಾಡಿಕೊಳ್ಳೋಣ ! ಈ ವಿದ್ರೋಹವನ್ನೆಲ್ಲಾ ನಿಲ್ಲಿಸಿಬಿಡೋಣ ನಾನು ನಾಳೆ ದಿನ ದಿವಾನರಲ್ಲಿ ಜಾಮೀನು ಕೊಟ್ಟು ನಿನ್ನನ್ನು ಬಿಡಿಸಿಕೊಳ್ಳುತ್ತೇನೆ

ಭಕ್ಷಿ-( ಪುನಃ ನಕ್ಕು) ಕುತುಬುದ್ದೀನ್ ! ನೀನು ತುಚ್ಛನಾಗಿದ್ದಿ ನಿನಗೂ ನನಗೂ ದ್ವೇಷವೇನೂ ಇಲ್ಲ. ನೀನು ಈ ದಿವಾನರಲ್ಲಿ ಗೆದ್ದುಕೊಳ್ಳಲಾರೆ ಗೆದ್ದುಕೊಂಡರೂ ಸಂತೋಷ ನಾನೂ, ನೀನೂ ಸ್ನೇಹಿತರಾಗುವುದಾದರೆ ದಿವಾನರ ಸಮ್ಮುಖದಲ್ಲಿಯೇ ಸ್ನೇಹಿತರಾಗೋಣ ಕುತುಬುದ್ದೀನ್ ! ದಿವಾನರವರು ನಿನ್ನನ್ನು ಕ್ಷಮಿಸಿದರೆ, ಸುಲ್ತಾನರವರು ಕ್ಷಮಾಭಿಕ್ಷೆಯನ್ನು ನೀಡಿದರೆ, ನಾನೂ ಅಲ್ಪಪ್ರಾಣಿಯೆಂದು ನಿನ್ನನ್ನು ಕ್ಷಮಿಸುತ್ತೇನೆ ಆದರೆ– ಆದರೆ ದೇವರು ನಿನ್ನನ್ನು ಕ್ಷಮಿಸನು

ಭಕ್ಷಿಯ ಧೈರ್ಯವನ್ನು ನೋಡಿ ಆಶ್ಚರ್ಯಗೊಂಡು, ಅವನು ಹೊರಗೆ ಹೋಗಿ ಬಾಗಿಲುಗಳನ್ನು ಹಾಕಿಸಿದನು ಯಾರೋ ಅತ್ತಕಡೆಯಿಂದ ಹಾರಿಹೋದ ಹಾಗೆ ಆಯಿತು ಕುತುಬುದ್ದೀನನಿಗೆ ಗೊತ್ತಾಗಲಿಲ್ಲ

ಕುತುಬುದ್ದೀನನು ಗೋವಿಂದನನ್ನಿಟ್ಟಿದ್ದ ಕೋಣೆಯ ಬಾಗಿಲನ್ನು ತೆಗೆಸಿ ಆ ಕೋಣೆಗೆ ಹೋದನು ಅಲ್ಲಿ ಗೋವಿಂದನು ನಿದ್ರಿಸಿರಲಿಲ್ಲ ಹೋಗಿ ಅವನ ಮುಂದೆ ನಿಂತನು ಗೋವಿಂದನು ಮಾತನಾಡಲಿಲ್ಲ.

ಕುತುಬುದ್ದೀನ್—ಗೋವಿಂದ, ಏಕೆ ಮಾತನಾಡುವುದಿಲ್ಲ ?

ಗೋವಿಂದ—ನಿನ್ನೊಡನೆ ಮಾತನಾಡುವುದೇನಿದೆ ?

ಕುತುಬುದ್ದೀನ್—ಬಹಳವಿದೆ. ನಗರದ ದಿವಾನರವರು ಬಂದಿದಾರೆ. ಹತ್ತು ಸಾವಿರ ಸೈನ್ಯ ಬಂದಿದೆ. ಇನ್ನು ವಿದ್ರೋಹಿಗಳ ಆಟ ಮುಗಿಯಿತು.

ಗೋವಿಂದನು ಮಾತನಾಡಲಿಲ್ಲ.

ಕುತುಬುದ್ದೀನ್—ನಿಮ್ಮ ಮುಖಂಡನಾದ ಭಕ್ಷಿಯನ್ನು ಹಿಡಿದು ಬಂಧಿಸಿದ್ದೇನೆ.

ಗೋವಿಂದ—ಸುಳ್ಳು! ನನ್ನನ್ನು ಭಯಪಡಿಸಲು ಈ ಕಥೆಗಳನ್ನೆಲ್ಲಾ ಹೇಳುತ್ತಿದ್ದಿ ಭಕ್ಷಿಯನ್ನು ಹಿಡಿಯುವಷ್ಟು ಸಾಹಸವು ಯಾರಿಗೂ ಇಲ್ಲ

ಕುತುಬುದ್ದೀನ್—ಅವನನ್ನು ಹಿಡಿಯುವುದು ಅಸಾಧ್ಯವೇ ಆಗಿತ್ತು ನಿನ್ನ ಸಹೋದರಿ ಮಾಧವಿಯು ತಾನೇ ಹೋಗಿ ಹಿಡಿದು ತಂದಳು ಅವಳ ಅನುಗ್ರಹವಿಲ್ಲದಿದ್ದರೆ ನಾನು ರಸಾತಲಕ್ಕೆ ಹೋಗಬೇಕಾಗಿದ್ದಿತು.

ಗೋವಿಂದ—ಮಾಧವಿ, ಆ ಹಾಳು ಮಾಧವಿಯು ಭಕ್ಷಿಯನ್ನು ಮೋಸಮಾಡಿದಳೇ? ಇರಲಿ! ಅವಳು ನನ್ನ ಸಹೋದರಿಯೆಂದು ಕರುಣ ತೋರುವುದಿಲ್ಲ ಬೀದಿಯಲ್ಲಿ ಭಿಕ್ಷೆ ಬೇಡುವಂತೆ ಮಾಡುತ್ತೇನೆ ನೋಡು! ಕುತುಬುದ್ದೀನ್, ನಿನ್ನ ಕಡೆಯ ದಿನಗಳು ಈಗ ಬಂದಿವೆ. ನಗರದ ದಿವಾನರವರು ಬಂದು ನಿನ್ನ ವಿಚಾರಣೆ ನಡೆಸುತ್ತಾರೆ. ನಿನ್ನ ವಿಚಾರಣೆಯಲ್ಲಿ ನಾನೇ ಮೊದಲನೆಯ ಸಾಕ್ಷಿ! ಮೊದಲು ನನ್ನ ಮೊಕದ್ದಮೆ ನೀನು ಹೇಗೆ ಮಾಧವಿಯನ್ನು ಅಪಹಾರ ಮಾಡಿ ತಂದೆ? ಹೇಗೆ ಮೋಸಮಾಡಿ ಅವಳನ್ನು ಮದುವೆಯಾದೆ? ನಮ್ಮ ತಾಯಿಯ ಮರಣಕ್ಕೆ ನೀನು ಹೇಗೆ ಕಾರಣನಾದೆ? ಎಂಬುದನ್ನೆಲ್ಲಾ ದಿವಾನರ ರಾಜಸಭೆಯಲ್ಲಿ ವಾದಮಾಡುತ್ತೇನೆ ಆ ನರರಾಕ್ಷಸಿ! ಮಾಧವಿಯು ಎಷ್ಟು ಹುಚ್ಚಿ? ನೀನು ಎಷ್ಟು ಸ್ತ್ರೀಯರನ್ನು ಹಾಳುಮಾಡಿದ್ದೀಯೆಂಬುದನ್ನು ಅವಳು ಅರಿಯಳು ಅದನ್ನು ಅರಿತಿದ್ದರೆ ನಿನ್ನನ್ನು ಅವಳು ಅಂದೇ ತ್ಯಜಿಸುತ್ತಿದ್ದಳು ಅದನ್ನೆಲ್ಲಾ ರಾಜಸಭೆಯಲ್ಲಿ ಪ್ರತ್ಯಕ್ಷ ಮಾಡಿ ತೋರಿಸುತ್ತೇನೆ ಅಷ್ಟೇ ಅಲ್ಲ, ನೀಚನಾದ ಕುತುಬುದ್ದೀನನೇ, ನೀನೆಷ್ಟು ಧನ ಸಂಗ್ರಹ ಮಾಡಿದ್ದಿ ಎಂಬುದನ್ನು ಬಲ್ಲೆ ಲೆಕ್ಕ ಹಾಕಿಟ್ಟಿದ್ದೇನೆ ಆ ಧನವನ್ನು ಎಲ್ಲಿ ಇಟ್ಟಿದ್ದೀಯೆಂಬುದನ್ನು ನಾನು ಕಂಡುಹಿಡಿದಿದ್ದೇನೆ ಅದನ್ನು ನಾನೇ ಕೊಳ್ಳೆ ಹೊಡೆಯಬೇಕೆಂದು ಯೋಚಿಸಿದ್ದೆ ಈಗ ಅದನ್ನು ಹೊರಕ್ಕೆ ತೆಗಿಸಿ ಎಲ್ಲರಿಗೂ ಅವರವರ ಹಣವನ್ನು ಕೊಡಿಸುತ್ತೇನೆ ನೋಡು! ಆಮೇಲೆ ನಿನ್ನ ಗತಿ ಏನಾಗುತ್ತೆ? ಅಷ್ಟೇ ಅಲ್ಲ. ನೀನು ಇಂಗ್ಲೀಷರೊಡನೆ ಸಂಧಾನ ಮಾಡಿದ ಪತ್ರವು ನಮ್ಮಲ್ಲಿದೆ

ಕುತುಬುದ್ದೀನನಿಗೆ ಸಿಡಿಲು ಬಡಿದಂತಾಯಿತು. ಗೋವಿಂದನು ಹೇಳಿದ ಪ್ರತಿಯೊಂದು ಮಾತೂ ಅವನ ಹೃದಯವನ್ನು ಶಲ್ಯದಂತೆ ಕೀಲಿಸಿತು ಕೈಕಾಲುಗಳು ನಡುಗುತ್ತಿದ್ದವು ಎದೆಯು ಬಡಿದುಕೊಳ್ಳುತ್ತಿತ್ತು. "ಗೋವಿಂದ! ಗೋವಿಂದ! ನೀನು ನನ್ನ ಆತ್ಮಬಂಧು! ಈ ಲೋಕದಲ್ಲಿ ನೀನು, ಮಾಧವಿ, ನೀವಿಬ್ಬರೇ ನನಗೆ ಆತ್ಮೀಯರು ನಾವು ಮೂವರೂ ಒಂದಾಗಿ ಈ ಸುಖಸಂಪತ್ತನ್ನು ಅನುಭವಿಸಬೇಕು. ಇಲ್ಲದಿದ್ದರೆ ನಮ್ಮ ಮೂವರ ಬಾಳೂ ಮಣ್ಣುಪಾಲಾಗುತ್ತೆ ನೀನು ಸನ್ನವನಾಗು.

ನಾನು ಬದುಕಿರುವವರೆಗೂ ನಿನ್ನ ಶರಣಾಗತನಾಗಿರುವೆನು ಹೇಗಾದರೂ ನಾವು ಮೂವರೂ ಈ ರಾಜ್ಯದಿಂದ ಹೊರಟುಹೋಗೋಣ

ಗೋವಿಂದ—ಕುತುಬುದ್ದೀ! ನಾನು ನಿನ್ನೊಡನೆ ಸಹವಾಸ ಮಾಡುವುದೆಂತು? ನಿನ್ನನ್ನು ನೋಡಿದರೆ ಘೋರ ವಿಷಸರ್ಪದಂತೆ ತೋರುತ್ತದೆ ನನಗೆ! ಇನ್ನು ಆ ಮಾಧವಿಯ ಮುಖ ನೋಡುವೆನೇ ನಾನು! ನಾನು ನಿನ್ನನ್ನು ಕ್ಷಮಿಸುವುದಿಲ್ಲ. ನಿನ್ನನ್ನು ತುಂಡುತುಂಡಾಗಿ ಕತ್ತರಿಸಿದರೂ ನನ್ನ ಮನಸ್ಸು ಶಾಂತವಾಗುವುದಿಲ್ಲ

ಕುತುಬುದ್ದೀ—ಗೋವಿಂದ! ನೀನೇಷ್ಟು ಕಠೋರನಾಗಿದ್ದೀ ಮಾಧವಿ ಗೋಸ್ಕರವಾದರೂ ನೀನು ನನ್ನನ್ನು ಕ್ಷಮಿಸುವುದಿಲ್ಲವೇ?

ಗೋವಿಂದ—ಇಲ್ಲ, ನಿನಗೆ ಕ್ಷಮೆ ಇಲ್ಲ

ಕುತುಬುದ್ದೀನನು ಕ್ಷಣಹೊತ್ತು ಆಲೋಚನೆ ಮಾಡಿದನು ಭಯ ಕ್ರೋಧಗಳು ಏಕಕಾಲದಲ್ಲಿ ಅವನನ್ನು ಉದ್ವೇಗಿಸಿದುವು ಕಣ್ಣುರೆಪ್ಪೆ ಹೊಡೆಯುವಷ್ಟರಲ್ಲಿ ಸೊಂಟದಲ್ಲಿದ್ದ ಬಾಕನ್ನು ಹಿರಿದು ಗೋವಿಂದನ ವಕ್ಷಸ್ಥಳದಲ್ಲಿ ಪೂರ್ತಿಯಾಗಿ ಇರಿದುಬಿಟ್ಟನು ಗೋವಿಂದನು "ಹಾ ಹಾ!!" ಎಂದು ಆರ್ತನಾದ ಮಾಡಿದನು ಕುತುಬುದ್ದೀನನು ಅವನ ಬೇಡಿಗಳನ್ನೆಲ್ಲಾ ಬಿಚ್ಚಿದನು

ಅಷ್ಟರಲ್ಲಿ ಕೋಣೆಯ ಬಾಗಿಲು ಧಢಾರೆಂದು ತೆರೆಯಿತು. "ಕುತುಬುದ್ದೀ ಏನು ಮಾಡಿಬಿಟ್ಟೆ?" ಎಂದು ಮಾಧವಿಯು ಒಳಗೆ ಬಂದಳು.

ಗೋವಿಂದನ ವಕ್ಷಸ್ಥಳದಲ್ಲಿ ನೆತ್ತರು ಹರಿಯುತ್ತಿದ್ದಿತು ಕುತುಬುದ್ದೀನನ ಬಟ್ಟೆಯೆಲ್ಲ ರಕ್ತಮಯವಾಗಿದ್ದಿತು ಗೋವಿಂದನು ಕೈ ಕಾಲುಗಳನ್ನು ಬಡಿದುಕೊಳ್ಳುತ್ತಾ ಒದ್ದಾಡುತ್ತಿದ್ದನು ಈ ದೃಶ್ಯವನ್ನು ನೋಡಿ ಮಾಧವಿಯು ಚೀತ್ಕಾರ ಚೀರಿದಳು ಗೋವಿಂದನ ಹತ್ತಿರ ಹೋಗಿ ಬಗ್ಗಿದಳು ಗೋವಿಂದನು ಆ ವಿಶಾಲವಾದ ಕಣ್ಣುಗಳನ್ನು ಬಿಟ್ಟು ನೋಡಿ ಮಾಧವಿ! ಮಾಧವಿ!" ಎಂದನು ಪ್ರಾಣವು ಹಾರಿಹೋಯಿತು

ಕುತುಬುದ್ದೀನನು ಕಲ್ಲಿನ ಪ್ರತಿಮೆಯಂತೆ ನಿಂತಿದ್ದನು ಈ ಸೋದರಸೋದರಿಯ ದೈನ್ಯಾವಸ್ಥೆಯು ಅವನ ಸರ್ವೇಂದ್ರಿಯಗಳನ್ನು ನಿಸ್ಸತ್ವವಾಗಿ ಮಾಡಿದ್ದಿತು ಅವನಿಗೂ ದುಃಖದ ಆವೇಗವು ಆವರಿಸಿತ್ತು "ಮಾಧವಿ! ಕ್ಷಮಿಸು!" ಎಂದು ಬೇಡಿದನು

ಮಾಧವಿಯು ಭೈರವಿಯಂತೆ ಕುತುಬುದ್ದೀನನ ಮುಂದೆ ನಿಂತಳು "ಕುತುಬುದ್ದೀ! ನೀನು ಭಕ್ಷಿಯೊಡನೆ ಮಾತನಾಡಿದ್ದನ್ನೂ,—ಈ ಗೋವಿಂದನಿಗೂ, ನಿನಗೂ ನಡೆದ ಸಂಭಾಷಣೆಯನ್ನೂ ನಾನು ಕೇಳುತ್ತಲೇ ಇದ್ದೆ ನೀನು ಎಂಥಾ ಪಾಪಿ! ನನ್ನಿಂದ ಎಂಥಾ ಕೆಲಸವನ್ನು ಮಾಡಿಸಿದೆ? ಆ ಕಾರ್ಯಕ್ಕೆ ನೀನು

ಮಾಡಿದ ಪ್ರತ್ಯುಪಕಾರ ಇದೇ ಅಲ್ಲವೇ ? ಈ ಲೋಕದಲ್ಲಿ ನನಗಿದ್ದ ಏಕಮಾತ್ರ ಬಂಧುವಿನ ವಧೆ ! ನಾನು ಈ ರಾತ್ರಿಯೇ ಭಕ್ಷಿಯನ್ನು ಬಂಧನದಿಂದ ಬಿಡಿಸುತ್ತೇನೆ. ಇಲ್ಲದಿದ್ದರೆ ನರಕದಲ್ಲಿಯೂ ನನಗೆ ಸ್ಥಳವಿಲ್ಲ ! ನಾಳೆ ನಿನ್ನ ಗತಿ ಏನಾಗುವುದೆಂಬು ದನ್ನು ಬಲ್ಲೆಯಾ ?" ಎಂದಳು

ಕುತುಬುದ್ದೀನನು—ಮಾಧವಿ ಅದನ್ನು ಅರಿತೇ ಈ ಗೋವಿಂದನನ್ನು ವಧೆ ಮಾಡಿದೆ ಅವನಾಡಿದ ಮಾತುಗಳನ್ನು ನೀನು ಕೇಳಲಿಲ್ಲವೇ ? ಆದರಿಂದ ನನಗೆ ಎಂದಿಗಾದರೂ ಉಳಿಗಾಲಉಂಟೆ ? ಅದಕ್ಕಾಗಿಯೇ ಅವನನ್ನು ವಧೆಮಾಡಿದೆ ಆ ಭಕ್ಷಿಯನ್ನೂ ವಧೆ ಮಾಡಿಬಿಡುತ್ತೇನೆ ಎಂದು ಬಾಗಿಲ ಕಡೆ ತಿರುಗಿದನು

ಹಿಂದುಗಡೆಯಿಂದ ಮಾಧವಿಯು ಹೆಣ್ಣು ಹುಲಿಯಂತೆ ಕುತುಬುದ್ದೀನನ ಮೇಲೆ ಹಾರಿ ತನ್ನ ಸೊಂಟದಲ್ಲಿದ್ದ ಕಠಾರಿಯನ್ನು ಅವನ ಹೃದಯದಲ್ಲಿ ನೆಟ್ಟಳು ಕುತುಬುದ್ದೀನನು ಕೆಳಗೆ ಉರುಳಿದನು.

"ಮಾಧವಿ ! ಮಾಧವಿ" ಎಂದು ಆರ್ತನಾದ ಮಾಡಿದನು

ಮಾಧವಿಯು ಕಟಕಟನೆ ಹಲ್ಲು ಕಡಿದು "ಹೌದು ! ಮಾಧವಿ, ನಿನ್ನ ಮೃತ್ಯು" ಎಂದು ಕಠಾರಿಯನ್ನು ಹೊರಗೆ ಎಳೆದಳು

ಕುತುಬುದ್ದೀನನು ಪ್ರಾಣಬಿಟ್ಟನು

ಮಾಧವಿಯು ಭಕ್ಷಿ ಇದ್ದ ಕೋಣೆಗೆ ಹೋಗಿ ಬಾಗಿಲು ತೆಗೆದಳು ದೀಪವು ಉರಿಯುತ್ತಿತ್ತು !

ಮೈಯೆಲ್ಲಾ ರಕ್ತಮಯವಾಗಿದ್ದ ಈ ಭೈರವಿ ಮಾಧವಿಯನ್ನು ನೋಡಿ ಭಕ್ಷಿಯು "ಮಾಧವಿ ! ಇದೇನು ?" ಎಂದನು

ಮಾಧವಿಯು ಅವನ ಬೇಡಿಗಳನ್ನು ಬಿಚ್ಚಿದಳು ವಿಕಟಾಟ್ಟಹಾಸ ಮಾಡುತ್ತ ಮಾಡುತ್ತಾ "ಭಕ್ಷಿ ! ಭಕ್ಷಿ ! ಬಾ ನನ್ನ ಜೊತೆಯಲ್ಲಿ ಬಾ, ಎಂದು ಹೇಳುತ್ತಾ ಭಕ್ಷಿ ಯನ್ನು ದರದರನೆ ಎಳೆದುಕೊಂಡು ಹೋದಳು "ಅಲ್ಲಿನೋಡು ! ಈ ಕುತುಬು ದ್ದೀನನನ್ನು !" ಎಂದು ತೋರಿಸಿ ನಕ್ಕಳು.

ಭಕ್ಷಿಯು ಗಾಬರಿಗೊಂಡು "ಮಾಧವಿ, ಇವನನ್ನು ಯಾರು ಕೊಂದರು ?" ಎಂದನು.

ಮಾಧವಿಯು ಪುನಃ ನಕ್ಕು "ಭಕ್ಷಿ ! ನಾನು—ನಾನುಕೊಂದೆ ಈಗ ತಾನೇ ಕೊಂದೆ. ನೋಡು ಮುಟ್ಟಿನೋಡು ಬಿಸಿಬಿಸಿರಕ್ತ !" ಎಂದು ಕೇಕೆಹಾಕಿ ನಕ್ಕಳು

"ಇಲ್ಲಿ ಬಾ !" ಎಂದು ಕೈ ಹಿಡಿದು ಎಳೆದು ಗೋವಿಂದನ ಶರೀರದ ಹತ್ತಿರ ಭಕ್ಷಿಯನ್ನು ನಿಲ್ಲಿಸಿ "ಭಕ್ಷಿ ನೋಡು ! ನಿನ್ನ ಗೋವಿಂದನ ಅವಸ್ಥೆಯನ್ನು. ಇವ ನನ್ನು ಪಾಪಿಯಾದ ಕುತುಬುದ್ದೀನನು ಕೊಂದನು. ಇವನು ಆಗಲೇ ವೀರಸ್ವರ್ಗ

ದಲ್ಲಿ ನಲಿಯುತ್ತಿದಾನೆ ಇವನು ಮತ್ತಾರೂ ಅಲ್ಲ! ನನ್ನ ಖಾಸಾ ಅಣ್ಣ ಗೋವಿಂದ!" ಎಂದು ಅವನ ಶವದ ಮೇಲೆ ಬಿದ್ದು ಮೂರ್ಛಿತಳಾದಳು

ಭಕ್ಷಿಯು ಆ ದೃಶ್ಯವನ್ನು ನೋಡಿ ಕಣ್ಣೀರು ಸುರಿಸುತ್ತಾ ಮಾಧವಿಯನ್ನು ಎಷ್ಟೋ ಸಂತೈಸಿದನು ಸಾಧ್ಯವಾಗಲಿಲ್ಲ

ಮಾಧವಿಯು ಹೋಗು ಭಕ್ಷಿ! ಹೊರಟುಹೋಗು! ನಿನ್ನನ್ನು ಯಾರೂ ತಡೆಯುವುದಿಲ್ಲ ಹೋಗು! ನಾನು ಇಲ್ಲಿಯೇ ಇರುತ್ತೇನೆ ಹೋಗು! ಭಕ್ಷಿ ನೀನು ಇರಬೇಡಾ ಅಲ್ಲಿ ಬಿದ್ದಿರುವವನು ನನ್ನ ಪತಿ! ಇಲ್ಲಿ ಬಿದ್ದಿರುವವನು ನನ್ನ ಸಹೋದರ! ಇವರಿಬ್ಬರನ್ನೂ ಬಿಟ್ಟು ನಾನು ಬರಲಾರೆ! ಹೋಗು ಈ ರಾತ್ರಿ ನಿನ್ನ ಬಂಧನಕ್ಕೆ ನಾನೇ ಕಾರಣ! ಅದರ ಪ್ರಾಯಶ್ಚಿತ್ತವೇ ಈ ಭಯಂಕರ ದೃಶ್ಯ! ನಿನ್ನನ್ನು ಈಗ ನಾನು ಬಿಟ್ಟಿದ್ದೇನೆ ಹೊರಟು ಹೋಗು! ಈ ಜನ್ಮದಲ್ಲಿ ನಿನಗೆ ಇದೇ ನಮಸ್ಕಾರ! ಹೋಗು! ಹೋಗು! ಎಂದಳು

ಭಕ್ಷಿಯು ದುಃಖಿಸುತ್ತಾ ಹೊರಟು ಹೋದನು

## ಇಬ್ಬರು ರಾಣಿಯರು

ಹುಸೇಖಾನನು ರಾಣಿಯವರ ಬಿಡಾರದಿಂದ ಹೊರಟು ಹೋಗುತ್ತಲೇ ರಾಣಿಯರಿಬ್ಬರೂ ಮಾತನಾಡತೊಡಗಿದರು ರಾಧೆಯು "ದೌಲತ್ ರಾಣಿಯವರೇ, ದೊಡ್ಡ ನವಾಬರ ಕಾಲಕ್ಕೂ-ಈಗಿನ ಕಾಲಕ್ಕೂ ಎಷ್ಟೊಂದು ವ್ಯತ್ಯಾಸ! ಆಗಿನ ಕಾಲದಲ್ಲಿ ದೇಶದಲ್ಲಿ ಶಾಂತಿ ಇತ್ತು ಈಗಿನ ನವಾಬರ ಕಾಲದಲ್ಲಿ ಎಲ್ಲ ಕಡೆಯೂ ಕ್ಷೋಭ!

ದೌಲತ್- ರಾಧಾರಾಣಿಯವರೇ! ಟಿಪ್ಪೂಸುಲ್ತಾನರು ಯುದ್ಧದಲ್ಲಿ ಒಳ್ಳೇ ನಿಸ್ಸೀಮರು ಆಡಳಿತದಲ್ಲಿ ಸಮರ್ಥರಲ್ಲ ಎಂಥಾ ಅಧಿಕಾರಿಗಳಲ್ಲಿಯೂ, ಪೂರ್ಣ ನಂಬಿಕೆಯನ್ನಿಡುವುದೇ ಇಲ್ಲ ದೊಡ್ಡ ನವಾಬರ ಮರಣಾನಂತರ ಶ್ರೀರಂಗಪಟ್ಟಣದಲ್ಲಾದ ಬ್ರಾಹ್ಮಣರ ಪಿತೂರಿಯ ವಿಚಾರ ಕೇಳಿಲ್ಲವೇ ನೀವು? ಪಿತೂರಿಕಾರರು ಸುಲ್ತಾನರಿಲ್ಲದ ಸಮಯದಲ್ಲಿ ರಾಜಧಾನಿಯನ್ನು ಸ್ವಾಧೀನ ಪಡಿಸಿಕೊಂಡು ತಮ್ಮ ಬಾವುಟವನ್ನು ಏರಿಸಿಯೇ ಬಿಟ್ಟರು ಅಯ್ಯೋ! ಅದೊಂದು ದೊಡ್ಡ ಕಥೆ

ರಾಧಾ-ಹೌದು ದೌಲತ್ ರಾಣಿಯವರೇ! ನಗರದ ಪ್ರಸಂಗವೂ ಅಂತಹುದೇ! ಇಯಜ್‌ಖಾನರಾದರೂ ಎಷ್ಟು ದುಡುಕಿದರು! ಆಮೇಲೆ ಸುಲ್ತಾನರ ಮೇಲೆ ಆನುಗ್ರಹದಿಂದ ಎಷ್ಟೊಂದು ದ್ರವ್ಯವನ್ನು ಕಳುಹಿಸಿದರು. ಮೊದಲೇ ಮಹಮದಾಲಿಯವರು ನಗರಕ್ಕೆ ಬಂದಾಗ ಅದೇ ಹಣವನ್ನು ಕೊಟ್ಟಿದ್ದರೆ ಎಷ್ಟು ಚೆನ್ನಾಗಿತ್ತು. ಅದು ಎಷ್ಟು ದೊಡ್ಡ ಪ್ರಮಾದವಾಗಿ ಪರಿಣಮಿಸಿತಲ್ಲ. ಈಗ ಮಂಗಳೂರಿನ ಪ್ರಕರ

ಣವು ಬಂದಿದೆ. ಹೇಗಾಗುತ್ತೋ ನೋಡಬೇಕು ? ಇದರಲ್ಲಿ ಒಂದು ಕ್ಷೇಮವಿದೆ ಸ್ವಯಂ ಸುಲ್ತಾನರೇ ಬಂದಿದ್ದರೆ ಬಹಳ ಅನಾಹುತಗಳಾಗುತ್ತಿತ್ತು

ದೌಲತ್-ಈ ಮಂಗಳೂರಿನ ಪ್ರಸಂಗವು ಬಹು ವಿಚಿತ್ರವಾಗಿದೆ ಇದನ್ನು ವಿಪ್ಲವವೆಂದು ಹೇಳಲಾಗುವುದಿಲ್ಲ. ಈ ವಿಪ್ಲವದ ಮುಖಂಡನಾರೋ ಗೊತ್ತಿಲ್ಲ ಈ ಮುಖಂಡನಿಗೆ ರಾಜ್ಯಾಕಾಂಕ್ಷ ಇರುವಂತೆ ತೋರುವುದಿಲ್ಲ ಸುಲ್ತಾನರ ಆಡಳಿತಕ್ಕೆ ಇದೊಂದು ಕಳಂಕ ನೋಡಿ ರಾಣಿಯವರೇ, ಈ ಹುಸೇನ್‌ಖಾನನು ಆಡಿದ ಮಾತುಗಳನ್ನು ಕೇಳಿರಬಹುದು ಈ ವಿಪ್ಲವದಲ್ಲಿ ಈ ಹುಸೇನ್‌ಖಾನನ ಸಂಬಂಧವಿದೆ ಯೆಂದೇ ನನ್ನ ಸಂದೇಹ

ರಾಧಾ—ಹುಸೇನ್‌ಖಾನರಿಗೆ ಸುಲ್ತಾನರ ಮೇಲೆ ಬದ್ಧವೈರ ಸುಲ್ತಾನರ ಮಾತು ಬಂದಾಗಲೆಲ್ಲ ಅವರು ಹಾಗೆಯೇ ಮಾತನಾಡುತ್ತಾರೆ ಹೇಗೇ ಆಗಲಿ, ನಾವು ಈ ಸಮಯಕ್ಕೆ ಇಲ್ಲಿಗೆ ಬಂದಿದ್ದು, ಅಷ್ಟು ಸರಿಯಲ್ಲವೆಂದೇ ನನ್ನ ಭಾವನೆ

ದೌಲತ್—ನನಗೂ ಅದೇ ಅಭಿಪ್ರಾಯ ಗನರದಲ್ಲಿ ನಮ್ಮ ಸಂಬಂಧದಿಂದ ಸುಲ್ತಾನರಿಗೂ ಇಯಜ್‌ಖಾನರಿಗೂ ಯುದ್ಧವೇ ಆಯಿತು ನಾವು ಏನು ಮಾಡುವುದು ? ದಿವಾನರವರು ನಮ್ಮನ್ನು ಬರಬೇಕೆಂದು ಪ್ರಾರ್ಥಿಸಿದರು ನಮಗೂ ಇಯಜ್‌ಖಾನರ ದರ್ಶನವಾಗ ವುದೆಂಬ ಅಭಿನಿವೇಶವಿತ್ತು ದಿವಾನರೇಕೆ ನಮ್ಮನ್ನು ಇಲ್ಲಿಗೆ ಕರೆತಂದರು ? ಅದು ಒಂದು ಸಮಸ್ಯೆಯೇ ಆಗಿದೆ

ರಾಣಿಯವರಿಬ್ಬರೂ ಮಾತನಾಡುತ್ತಿರುವಾಗಲೇ ದಿವಾನರವರ ಸವಾರಿಯು ರಾಣಿಯವರ ಬಿಡಾರಕ್ಕೆ ದಯಮಾಡಿಸಿತು

ರಾಣಿಯರಿಬ್ಬರೂ ಬಾಗಿಲಿಗೆ ಬಂದು ದಿವಾನರವರನ್ನು ಎದುರುಗೊಂಡು ತಮ್ಮ ಬೈಠಕ್‌ಖಾನೆಗೆ ಕರೆದುಕೊಂಡುಹೋಗಿ, ಆಸನದಲ್ಲಿ ಕುಳ್ಳಿರಿಸಿದರು. ಪರಸ್ಪರ ಉಪಚಾರೋಕ್ತಿಗಳಾದನಂತರ ದಿವಾನರವರು, "ರಾಣಿಯವರೇ ! ಈ ಮಂಗಳೂರಿನ ಪ್ರಸಂಗವು ವಿಚಿತ್ರವಾಗಿದೆ ನಾನಾ ವಿಧವಾದ ಕಥೆಗಳನ್ನು ಕೇಳುತ್ತಿದ್ದೇನೆ ವಿಪ್ಲವದ ಕಾರಣಗಳು ಅಷ್ಟೇನೂ ಮಹತ್ತರವಾದವುಗಳಾಗಿ ಕಾಣುವುದಿಲ್ಲ ಆದರೆ ಅದರಲ್ಲೊಂದು ದೊಡ್ಡ ತೊಡಕಿದೆ ವಿದ್ರೋಹಿಗಳೆಂದು ತಾನೇ ಹೇಳಿಕೊಳ್ಳುವವರು ಹತ್ತು ಸಹಸ್ರ ಯುವಕರಿದ್ದಾರೆ ಅವರು ಬಹಳ ಗಟ್ಟಿಗರಾಗಿದ್ದಾರೆ ಈ ಸಮಯದಲ್ಲಿ ಉದ್ರೇಕ ಬಂದರೆ ಆ ಹತ್ತು ಸಹಸ್ರ ಜನರೂ ಪ್ರಾಣವನ್ನು ತೃಣವಾಗಿ ಎಣಿಸಿ ಹೋರಾಡುತ್ತಾರೆ ಆ ಹತ್ತು ಸಹಸ್ರ ತರುಣರನ್ನೂ ಕ್ಷಮಿಸಬೇಕು ಇಲ್ಲವೋ ಎಲ್ಲರನ್ನೂ ಆಹುತಿ ತೆಗೆದುಕೊಳ್ಳಬೇಕು ಇದು ಸಾಮಾನ್ಯದ ತೊಡಕಲ್ಲ ಇವಕ್ಕೆ ತಮ್ಮ ಸಹಾಯವು ಬೇಕೆಂದೇ ತಮ್ಮನ್ನು ಪ್ರಾರ್ಥನೆಮಾಡಿ ಕರೆತಂದಿದ್ದೇನೆ ಈ ಅಮೂಲ್ಯವಾದ ಹತ್ತು ಸಹಸ್ರ ಪ್ರಾಣಗಳು ಉಳಿಯಲೇ ಬೇಕು ಸುಲ್ತಾನರ ಸ್ವಭಾವವನ್ನು ತಾವು ಬಲ್ಲಿರಿ ಬಹಳ ಹಟಗಾರರು. ಈ ಪ್ರಸಂಗದಲ್ಲಿ ನನ್ನ ದಿವಾನಗಿರಿಯು

ಹೋಗಬಹುದು ಅದಕ್ಕೆ ನಾನು ವಿಷಾದ ಪಡುವುದಿಲ್ಲ ಈ ಸಂದರ್ಭದಲ್ಲಿ ಮಹ ಮದಾಲಿಯವರದಂಥಾ ಘಟನೆಯು ಬಾರದಿರಬೇಕು ಅದಕ್ಕೆ ತಮ್ಮ ರಕ್ಷಣೆಯು ಬೇಕು

ರಾಧಾ—ದಿವಾನರವರೇ ! ಇದಕ್ಕೆ ತಾವು ಭಯಪಡಬೇಡಿರಿ ! ಸುಲ್ತಾನರು ಎಷ್ಟು ಹಟಗಾರರೋ ಅಷ್ಟೇ ಗಾಂಭೀರ್ಯವುಳ್ಳವರು ಒಂದು ಸಾರಿ ಮಾಡಿದ ತಪ್ಪನ್ನೇ ಮತ್ತೊಮ್ಮೆ ಅವರೆಂದಿಗೂ ಮಾಡರು. ಆಗ ಅವರೆಷ್ಟು ದುಃಖಪಟ್ಟರೆಂಬು ದನ್ನು ನಾನು ಬಲ್ಲೆ !

ದೌಲತ್—ದಿವಾನರೇ ತಮ್ಮ ಯೋಜನೆಯು ಸರಿಯಾಗಿದೆ ಈ ವಿದ್ರೋಹಿ ತರುಣರನ್ನು ಉಳಿಸಲು ತಾವು ಏನು ಉಪಾಯವನ್ನು ಹುಡುಕಿದ್ದೀರಿ ?

ದಿವಾನ್—ಉಪಾಯವೇ ಇಲ್ಲ ! ರಾಣಿಯವರೇ, ಅದೇ ತೊಡಕು ಆ ಭಕ್ತಿ ಯೆಂಬುವನೊಬ್ಬ, ಆ ಫಕೀರನೊಬ್ಬ ಇವರಿಬ್ಬರನ್ನೂ ಹಿಡಿಸಿ ಅವರ ಅಂತರವನ್ನ ರಿತು ಅವರಿಗೂ ಸುಲ್ತಾನರಿಗೂ ಸಂಧಿ ಮಾಡಿಸುವುದೇ ಉಪಾಯ

ದೌಲತ್-ದಿವಾನರವರೇ ! ತಮ್ಮಂಥಾ ಅನುಭವಸ್ಥರಾದ ರಾಜನೀತಿಜ್ಞರು ಹೀಗೆ ಹೇಳಿದರೆ ನಾವೇನು ಹೇಳಲಾದೀತು ? ಸುಲ್ತಾನರವರಿಗೂ ವಿದ್ರೋಹಿ ಗಳಿಗೂ ಸಂಧಿ ಎಂದಿಗಾದರೂ ಶಕ್ಯವೇ ? ಅದನ್ನು ಸುಲ್ತಾನರು ಒಪ್ಪುತ್ತಾರೆಯೇ ? ಅದೇ ನನ್ನನ್ನು ಬಾಧಿಸುತ್ತಿದೆ ನಾನೇನುಮಾಡಲಿ ? ವಿಪ್ಲವಕಾರರನ್ನು ಶರಣಾಗತ ರನ್ನಾಗಿ ಮಾಡಿಸುವುದೊಂದೇ ಉಪಾಯ ಈ ರಾಧಾರಾಣಿಯವರು ಈ ವಿಪ್ಲವಕಾರರ ವಕಾಲತ್ತನ್ನು ವಹಿಸಿಕೊಂಡರೆ ಎಲ್ಲವೂ ಸರಿಹೋಗುತ್ತದೆ

ರಾಧಾ- ನನಗೇಕೆ ಈ ಹವ್ಯಾಸ ? ಒಂದೊಂದು ಪ್ರಸಂಗದಲ್ಲಿಯೂ, ಸುಲ್ತಾ ನರು ಹೆಂಗಸರಿಗೆ ರಾಜಕೀಯದಲ್ಲಿ ಸೋಲುತ್ತಾರೆ ಎಂಬ ಅಪಖ್ಯಾತಿ ಅವರಿಗೇಕೆ ಬರಬೇಕು ? ಈ ಸಂಧಿವಿಗ್ರಹಗಳಿಗಿಂತಲೂ ನಾನೇ ಸುಲ್ತಾನರ ಸಮ್ಮುಖಕ್ಕೆ ಹೋಗಿ ಈ ಮಂಗಳೂರನ್ನು ನನಗೆ ಕೊಡಿರಿ ನಾನು ಸುಲ್ತಾನರ ಅಧಿಕಾರಿಯಾಗಿ ರಾಜ್ಯಭಾರ ನಡೆಸುತ್ತೇನೆ ಎಂದು ಬೇಡುವುದು ಕ್ಷೇಮ ! ಅದು ಸುಲ್ತಾನರಿಗೂ ಗೌರವ ! ರಾಜ್ಯಕ್ಕೂ ಕ್ಷೇಮ

ದೌಲತ್- ರಾಣಿಯವರು ಆಗ ನಿಜವಾದ ರಾಣಿಯವರಾಗುತ್ತಾರೆ ನಮಗೂ ಸಂತೋಷ ! ಹಿಂದೂ ರಾಣಿಯ ಮೇಲೆ ಮರಾಠರು ಕೈ ಎತ್ತುವುದಿಲ್ಲ, ಇಂಗ್ಲೀಷರೂ ನಮ್ಮ ತಂಟೆಗೆ ಬರುವುದಿಲ್ಲ !

ರಾಧಾ—ಒಳ್ಳೆಯದು ದೌಲತ್‌ರಾಣಿಯವರೇ ! ಒಂದು ದಿನ ಈ ದಕ್ಷಿಣದಲ್ಲಿ ಹಿಂದೂ ರಾಣಿಯು ರಾಜ್ಯಭಾರ ಮಾಡುತ್ತಾಳೋ ಏನೋ ಹೇಳಬಲ್ಲವರಾರು? ನೀವೇಕೆ ಹಾಸ್ಯ ಮಾಡುವಿರಿ !

ಇಬ್ಬರು ರಾಣಿಯರೂ ನಕ್ಕರು.

ದಿವಾನ್—ರಾಣಿಯವರೇ ಮತ್ತೊಂದು ಅಂಶವಿದೆ ಅದನ್ನು ತಮ್ಮ ಸನ್ನಿಧಾನದಲ್ಲಿ ಅರಿಕೆ ಮಾಡಲು ಅಂಜುತ್ತೇನೆ

ದೌಲತ್—ಇಲ್ಲ! ದಿವಾನರವರೇ ಹೇಳಿರಿ

ದಿವಾನ್—ಇನ್ನೊಂದು ದೊಡ್ಡ ಪ್ರಶ್ನೆ ಇದೆ. ಈ ವಿಪ್ಲವದಲ್ಲಿ ಇಯಜ್‌ಖಾನರ ಪ್ರೇರಣೆ ಏನಾದರೂ ಇದ್ದರೆ [ಅರ್ಧೋಕ್ತಿ]

ರಾಧಾ-(ನಕ್ಕು) ದಿವಾನರವರೇ! ಅಲ್ಲಿಗೆ ಎಲ್ಲಾ ಸಮಸ್ಯೆಗಳೂ ಪರಿಹಾರವಾಗಿ ಹೋದಂತೆಯೇ! ಈ ಕರ್ನಾಟಕದ ಮಹಾಜನರೆಲ್ಲರನ್ನೂ ಕರಸಿ ದರ್ಬಾರು ಮಾಡಿರಿ! ಆ ದರ್ಬಾರಿಗೆ ಎಲ್ಲಿದ್ದರೂ ನಾನು ಇಯಜ್‌ಖಾನರನ್ನು ಕರೆತರುತ್ತೇನೆ ನಾವು ಮೂವರೂ ಇಯಜ್‌ಖಾನರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ಈ ರಾಜ್ಯವನ್ನು ಅವರಿಗೆ ಒಪ್ಪಿಸಿ ಸುಲ್ತಾನರಲ್ಲಿ ಹೋಗಿ ನಾವು ಮಾಡಿದ ಮಹತ್ಕಾರ್ಯವನ್ನು ಅವರಿಗೆ ಅರಿಕೆ ಮಾಡೋಣ! ಸುಲ್ತಾನರು ಎಷ್ಟೊ ಪ್ರಯತ್ನ ಪಟ್ಟು ಜಯಿಸಲಾರದೆ ಹೋದ ರಾಜ್ಯವನ್ನು ನಾವು ಸುಲಭವಾಗಿ ಜಯಿಸಿದಂತೆ ಆಗುತ್ತದೆ ರಾಜ್ಯತ್ಯಾಗ ಮಾಡಿದ ನವಾಬರು ರಾಜ್ಯ ಪರಿಗ್ರಹ ಮಾಡಿದರೆ ಅದರಿಂದ ಸುಲ್ತಾನರು ಎಷ್ಟೋ ಸುಖಿಗಳಾಗುತ್ತಾರೆ.

ದಿವಾನ್-ಏನಾದರೂ ಸರಿ! ರಾಣಿಯವರೇ! ಎಲ್ಲ ಭಾರವು ತಮ್ಮದು ನಾನು ತಮ್ಮ ಆಜ್ಞಾಧಾರಕನಾಗಿ ವರ್ತಿಸುತ್ತೇನೆ ನನಗೆ ಸುಲ್ತಾನರೂ ಇಯಜ್‌ಖಾನರೂ ಸರಿಸಮಾನ! ಸುಲ್ತಾನೀ ರಾಜ್ಯದ ಗಾಂಭೀರ್ಯವನ್ನು ಉಳಿಸುವುದು ನಮ್ಮೆಲ್ಲರ ಕರ್ತವ್ಯ

ಎಂದು ಹೇಳಿ ತಮ್ಮ ಮನಸ್ಸನ್ನು ಸಮಾಧಾನ ಪಡಿಸಿಕೊಂಡು ನಾನು ಇಬ್ಬರು ರಾಣಿಯರನ್ನೂ ಕರೆತಂದ ಕಾರ್ಯವು ಸಾರ್ಥಕವಾಯಿತು ಎಂದುಕೊಂಡು ದಿವಾನರು ತಮ್ಮ ಬಿಡಾರಕ್ಕೆ ತೆರಳಿದರು

ಸಂಧ್ಯಾ ಕಾಲವಾಯಿತು "ಹುಸೇನ್‌ಖಾನನೇಕೆ ಬರಲಿಲ್ಲ?" ಎಂದು ರಾಧಾರಾಣಿಯು ನಿರೀಕ್ಷಿಸುತ್ತಿದ್ದಳು ಅಷ್ಟರಲ್ಲಿ ಒಬ್ಬ ತರುಣನು ಬಂದಿರುವುದಾಗಿಯೂ ರಾಣಿಯವರ ದರ್ಶನವನ್ನು ಅಪೇಕ್ಷಿಸುವುದಾಗಿಯೂ ದ್ವಾರಪಾಲಕನು ಅರಿಕೆ ಮಾಡಿದನು ರಾಧಾರಾಣಿಯು ಆತನನ್ನು "ಒಳಗೆ ಕರೆತಾ!" ಎಂದು ಆಜ್ಞೆ ಮಾಡಿದಳು ತರುಣನು ಒಳಗೆ ಬಂದು ನೆಲಮುಟ್ಟಿ ಸಲಾಂ ಮಾಡಿದನು

"ಮಹಾರಾಣಿಯವರೇ! ಸಮುದ್ರದ ಕಡೆಯಿಂದ ಬಂದಿದೇನೆ ಬಂದರಿನಲ್ಲಿ ಅಲ್ಲೀಸೇಟರ ಕೋಠಿಯಲ್ಲಿ ದೋಣಿಯು ಸಿದ್ಧವಾಗಿದೆ"

"ತರುಣನೇ! ಹುಸೇನ್‌ಖಾನರೇಕೆ ಬರಲಿಲ್ಲ?"

"ಗೊತ್ತಿಲ್ಲ. ತಾಯಿ! ಮಹಾರಾಣಿಯವರ ಸವಾರಿಯು ದಯಮಾಡಿಸಿದರೆ

ನಾನು ಕರೆದುಕೊಂಡು ಹೋಗುತ್ತೇನೆ ”

ರಾಣಿಯವರು ವಿಶೇಷ ಮಾತನಾಡಲಿಲ್ಲ! ಇಬ್ಬರೂ ಅಲಂಕೃತರಾಗಿ ಹೊರಟರು ಬಾಗಿಲಲ್ಲಿ ದಿವ್ಯಾಶ್ವಗಳು ಸಿಲ್ಲಿಸಲ್ಪಟ್ಟಿದ್ದವು ಇಬ್ಬರೂ ಅಶ್ವಗಳನ್ನೇರಿದರು. ತರುಣನು ಮುಂದೆ ಬಂದು ನಿಂತನು ರಾಧಾರಾಣಿಯು “ತರುಣನೇ! ನಿನಗೆ ಕುದುರೆ ಇಲ್ಲವೊ ?” ಎಂದಳು

ಅವನು ವಿನಯದಿಂದ ನಕ್ಕು “ಇಲ್ಲ, ತಾಯಿ! ಕುದುರೆಯು ಬೇಕಾಗಿಲ್ಲ. ನಾಲ್ಕು ಮೈಲಿಗಳು ನಾನು ವೇಗವಾಗಿ ಮುಂದ ಓಡುತ್ತೇನೆ. ತಾವು ಹಿಂದೆ ಬನ್ನಿ. ಸ್ವಲ್ಪ ಹೆಚ್ಚು ಕಷವೆ, ನಾನು ಕುದುರೆಯು ವೇಗದಲ್ಲಿಯೇ ಓಡುತ್ತೇನೆ ” ಎಂದನು. ರಾಧೆಯು ನಕ್ಕು “ನಿನಗೆ ಕುದುರೆ ಸವಾರಿ ಬರುತ್ತದೆಯೋ ?” ಎಂದಳು.

“ಚನ್ನಾಗಿ ಬರುತ್ತದೆ ”

ತನ್ನ ಸೇವಕರಿಗೆ ಸೂಚನೆ ಮಾಡಿ, ಒಂದು ಕುದುರೆಯನ್ನು ತರಿಸಿ ಕೊಟ್ಟಳು. ತರುಣನು ಕುದುರೆಯನ್ನೇರಿ ಒಳ್ಳೆಯ ಪಳಗಿದ ಸವಾರನಂತೆ, ಮುಂದೆ ನಡೆದನು. ರಾಣಿಯರಿಬ್ಬರೂ ಹಿಂದ ಹೋದರು ಸಮುದ್ರ ತೀರದಲ್ಲಿ ಎಷ್ಟೋ ನಾವೆಗಳಿದ್ದವು. ಒಂದು ಭವ್ಯವಾದ ನಾವೆಯು ಸಿದ್ಧವಾಗಿತ್ತು ನಾವಿಕರು ಹುಟ್ಟುಗಳನ್ನಿಟ್ಟುಕೊಂಡು ಕಾದಿದ್ದರು ರಾಣಿಯವರು ಕುದುರೆಗಳಿಂದ ಇಳಿದರು. ತರುಣನು ಇಳಿದು, ಆ ಕುದುರೆಗಳನ್ನು ಹಿಡಿದುಕೊಂಡನು ಅಲ್ಲೊಂದು ಗೂಟಕ್ಕೆ ಕುದುರೆಗಳನ್ನು ಬಿಗಿದು, ರಾಣಿಯವರ ಸಮೀಪಕ್ಕೆ ಬಂದನು ಅವರನ್ನು ನಾವೆಯ ಹತ್ತಿರ ಕರೆದುಕೊಂಡು ಹೋಗಿ ನಾವೆಯ ಮೇಲೆ ಏರಿಸಿದನು.

ರಾಣಿ— ನೀನು ಬರುವುದಿಲ್ಲವೇ ?

ತರುಣ— ಇಲ್ಲ! ದೇವಿಯರೆ, ಈ ನಾವೆಯು ಆ ಜಹಜಿನ ಹತ್ತಿರ ನೇರವಾಗಿ ಹೋಗುತ್ತೆ.

ರಾಧಾ— ಹುಸೇಖಾನರೆಲ್ಲಿದ್ದಾರೆ ? ಅವರೇಕೆ ಬರಲಿಲ್ಲ ?

ತರುಣ— ಅವರಾರೋ ನನಗೆ ಗೊತ್ತಿಲ್ಲ

ರಾಧಾ— ನೀನಾರು ? ನಿನ್ನ ಹೆಸರೇನು ?

ತರುಣ— ನನ್ನ ಹೆಸರು ಇಮಾಂ, ನಾನೊಬ್ಬ ವಿದ್ರೋಹಿ

ಪೌಲತ್— ರಾಣಿಯವರೇ, ಇದೇನು ಸೋಜಿಗ! ದರಿಯಾಬಾಗಿಗೆ ಪತ್ರವನ್ನು ತಂದವನು ವಿದ್ರೋಹಿ ನಮ್ಮನ್ನು ಇಲ್ಲಿಗೆ ಕರೆತಂದವನು ವಿದ್ರೋಹಿ. ನಮ್ಮ ಸುತ್ತ ಮುತ್ತಲೂ ವಿದ್ರೋಹಿಗಳು ನಾವೇ ವಿದ್ರೋಹಿಗಳೋ ಏನೋ ?

ಇಬ್ಬರೂ ವಿಸ್ಮಯದಿಂದ ವಿಶಾಲವಾದ ಸಮುದ್ರದ ಕಡೆ ನೋಡುತ್ತಿದ್ದರು. ನಾವೆಯು ಸಮುದ್ರವನ್ನು ಸೀಳಿಕೊಂಡು ಪಶ್ಚಿಮದ ಕಡೆಗೆ ವೇಗವಾಗಿ ಹೊರಟಿತು.

ದೂರದಿಂದಲೇ ಚಿಕ್ಕ ಹಡಗು ಕಾಣಿಸಿತು ಅದರ ಮೇಲೆ ಇಂಗ್ಲಿಷರ ಬಾವುಟವು ಹಾರುತ್ತಿತ್ತು.

ರಾಧಾರಾಣಿಯು ದೌಲತ್ತಳ ಕಡೆ ತಿರುಗಿ, "ಅತ್ತ ನೋಡಬಾರದೇ ? ಆ ಹಡಗನ್ನು ! ನಾವು ಅಲ್ಲಿಗೇ ಹೋಗುತ್ತಿದ್ದೇವೆ ಅದು ಇಂಗ್ಲೀಷರ ನೌಕೆ ನಾವು ಇಂಗ್ಲಿಷರ ಹಡಗಿನಲ್ಲಿ ಹೋಗಿ ಬಂದಿಗಳಾಗುವೆವೋ ?"

ದೌಲತ್—ರಾಧೆ, ಈ ಪ್ರಸಂಗವೇನೋ ವಿಚಿತ್ರವಾಗಿದೆ ಅಲ್ಲಿ ಇಯುಜ್ ಖಾನರು ಇರುವುದಿಲ್ಲ ಇಂಗ್ಲಿಷ್ ಬಾವುಟದ ನೆರಳಿನಲ್ಲಿ ಖಾನರಿರುವುದು ಅಸಂಭವ ಇದರಲ್ಲೇನೋ ಒಂದು ತಂತ್ರವಿದೆ ಆದರೂ ನನಗೆ ಕುತೂಹಲವಿದೆ ಆ ಹಡಗಿನಲ್ಲಿ ಏನಿದೆಯೋ ನೋಡಬೇಕೆಂದು ನಮ್ಮನ್ನೇಕೆ ಇಲ್ಲಿಗೆ ಕರೆತಂದಿದಾರೋ ? ಯಾರು ಕರೆತಂದಿದಾರೋ, ನೋಡಬೇಕೆಂದು ಈ ತಂತ್ರವು ಯಾವದೇ ಇರಲಿ, ಇದರಲ್ಲಿ ಹುಸೇನಖಾನನು ಸೇರಿದಾನೆಂಬುದಕ್ಕೆ ಪ್ರತ್ಯಕ್ಷ ಪ್ರಮಾಣವಿಪ ಇದೆಲ್ಲಾ ವಿಪ್ಲವಕಾರರ ತಂತ್ರವಾಗಿದ್ದರೆ, ಇವರಿಗೆ ಇಷ್ಟೊಂದು ಸಹಾಯ ಸಂಪತ್ತುಗಳಿದ್ದನೆ, ಅವರ ವಿಜಯವು ಖಂಡಿತ !

ರಾಧಾ— ನನ್ನ ಯೋಚನೆಗಳೇ ಬೇರ ! ಈಗ ನಾವು ಇಯುಜ್‌ಖಾನರ ಸಂದರ್ಶನವನ್ನು ಮಾಡಿಯೇ ಮಾಡುತ್ತೇವೆ ಈ ಬಾವುಟವು ನಿಜವಲ್ಲ ! ಯಾವುದೋ ಕಾರಣಾಂತರದಿಂದ ಇದನ್ನು ಕಟ್ಟಿದ್ದಾರೆ ಹುಸೇನಖಾನನಂದಿಗೂ ನಮ್ಮನ್ನು ಮೋಸ ಮಾಡುವವನಲ್ಲ !

ಇಷ್ಟರಲ್ಲಿ ದೋಣಿಯು ಹೋಗಿ ಜಹಜಿನ ಪಕ್ಕದಲ್ಲಿ ನಿಂತಿತು ದೋಣಿಯಿಂದ ಜಹಜಿಗೆ ಹಗ್ಗಗಳನ್ನು ಬೀಸಿದರು ಜಹಜಿನಲ್ಲಿದ್ದ ನಾವಿಕರು ಅದನ್ನು ಎಳೆದರ ಜಹಜಿನಿಂದ ದೋಣಿಗೆ ಒಂದು ದೊಡ್ಡ ಹಲಗೆಯನ್ನು ಹಾಕಿದರು ಅದರ ಮೇಲೆ ನಡೆದು ಜಹಜಿಗೆ ಹೋಗಬೇಕೆಂದು ವಿನಯದಿಂದ ಹೇಳಿದರು

ದೌಲತ್ ಮತ್ತು ರಾಧಾರಾಣಿಯವರು ಜಹಜಿಗೆ ಹೋಗಿ ಸೇರಿದರು

ಜಹಜು ಸಮುದ್ರ ಮಧ್ಯದಲ್ಲಿ ನಿಂತಿದೆ. ಎಂಟು ದಿಕ್ಕುಗಳಲ್ಲಿಯೂ ಲಂಗರುಗಳನ್ನು ಹಾಕಿ ಜಹಜನ್ನು ನಿಲ್ಲಿಸಿದ್ದಾರೆ ಕೆಳಗಡೆ ನಾವಿಕರು ಸಿದ್ಧವಾಗಿದ್ದಾರ ಇಬ್ಬರು ಅಂಗರೇಖುಗಳನ್ನು ಧರಿಸುವ ಸೇವಕರು ಬಂದು ರಾಣಿಯುವರನ್ನು ಮೇಲಿನ ಅಂತಸ್ಥಿಗೆ ಕರೆದುಕೊಂಡು ಹೋದರು ಆ ರಾಣಿಯರಿಬ್ಬರೂ ಆ ಹಡಗಿನ ಅಚ್ಚುಗಟ್ಟನ್ನು ನೋಡಿ ಆಶ್ಚರ್ಯಚಕಿತರಾಗಿ ಮೇಲಕ್ಕೆ ಹೋದರು ಮೇಲೆ ಪ್ರಶಸ್ತವಾದ ಒಂದು ಕೋಣೆಯಲ್ಲಿ ಆ ರಾಣಿಯವರನ್ನು ಕುಳ್ಳಿರಿಸಿದರು. ಬಾಗಿಲು ಹಾಕಿಕೊಂಡು ಹೋದರು.

ದೌಲತ್—ರಾಧಾರಾಣಿಯುವರೇ ! ನಾವಿಬ್ಬರೂ ಇಲ್ಲಿ ಬಂದಿಗಳು !

ಎಂದು ಹೇಳಿ ದೀರ್ಘನಿಶ್ವಾಸವನ್ನು ಬಿಟ್ಟಳು ಅಷ್ಟರಲ್ಲಿ ಪಕ್ಕದ ಕೋಣೆಯ ಬಾಗಿಲು ತೆರೆಯಿತು ಇಬ್ಬರು ರಾಣಿಯವರೂ ತಲೆ ಎತ್ತಿ ನೋಡಿದರು. ಅಲ್ಲಿ ಸಾಕ್ಷಾತ್ ಇಯಜ್‌ಖಾನರು ನಿಂತು ಮುಗುಳುನಗೆಯಿಂದ ರಾಣಿಯರಿಬ್ಬರನ್ನೂ ಸ್ವಾಗತಿಸುತ್ತಿದ್ದಾರ

ದೌಲತ್ತಳಿಗೆ ಇದೇನು ನಿಜವೋ ! ಸ್ವಪ್ನ ಪ್ರಪಂಚವೋ ಎನ್ನಿಸಿತು ಉತ್ತರ ಕ್ಷಣದಲ್ಲಿ ದೌಲತ್ತಳು ಇಯಜ್‌ಖಾನನ ಬಾಹುಬಂಧನದಲ್ಲಿ-ಅವನ ವಿಶಾಲ ವಕ್ಷಸ್ಥಳದಲ್ಲಿದ್ದಳು ರಾಧೆಯು ಲಜ್ಜೆಯಿಂದ ತಲೆ ತಗ್ಗಿಸಿಕೊಂಡು ನಿಂತಿದ್ದಳು

ಇಯಜ್‌ಖಾನನು ದೌಲತ್ತಳನ್ನು ಆಸನದಲ್ಲಿ ಎತ್ತಿ ಕುಳ್ಳಿರಿಸಿದನು ರಾಧೆಯ ಸಮೀಪದಲ್ಲಿ ನಿಂತು "ರಾಣಿಯವರೇ ! ಕುಳಿತುಕೊಳ್ಳಬೇಕು" ಎಂದು ಆಸನದ ಕಡೆ ಎರಡು ಕೈಗಳನ್ನು ತೋರಿಸಿದನು ರಾಧೆಯು ದೌಲತ್ತಳ ಪಕ್ಕದಲ್ಲಿ ಕುಳಿತು ಮೃದುವಾಗಿ ದೌಲತ್ತಳ ಬೆನ್ನು ತಟ್ಟಿ, "ರಾಣಿಯವರೇ ! ಈಗ ನಾವು ಬಂದಿಗಳಲ್ಲ"! ಎಂದಳು

ದೌಲತ್ತಳು ಲಜ್ಜೆಯಿಂದ ನಕ್ಕಳು ಇಯಜ್‌ಖಾನನು ದರಿಯಾಬಾಗಿನ ಸಮಾಚಾರಗಳನ್ನೆಲ್ಲಾ ಮಾತನಾಡಿದನು ನಗರದ ರಾಜ್ಯಭಾರವನ್ನು ವಿಚಾರಿಸಿದನು. ರಾಧೆಯು ಯಥೋಚಿತವಾಗಿ ಉತ್ತರ ಕೊಟ್ಟಳು

ದೌಲತ್ — ನೀವು ನಮ್ಮನ್ನಗಲಿ ಹೊರಟುಹೋದಿರಿ ! ಎಷ್ಟು ದಿನಗಳಾದುವು? ತಮ್ಮ ಸಮಾಚಾರವೇ ಇಲ್ಲ ನಾವು ಎಷ್ಟು ಕಷ್ಟಪಟ್ಟು ತಮ್ಮನ್ನು ಹುಡುಕಿದೆವು.

ಇಯಜ್—ನಾನೇ ತಮ್ಮ ಸನ್ನಿಧಾನಕ್ಕೆ ಬರಬೇಕೆಂದು ಎಷ್ಟೋ ಆಸೆಯಾಗಿತ್ತು ಆದರೆ ನೀವು ನನ್ನನ್ನು ಮರೆತಿದ್ದೀರೇನೋ ಎಂಬ ಸಂಶಯ !

ದೌಲತ್ — ತಾವೇಕೆ ಬರುತ್ತೀರಿ ? ನಾವೇ ತಮ್ಮನ್ನು ಹಿಡಿದಿದ್ದೇವೆ.

ರಾಧಾ— ಖಾನರವರೇ, ತಾವು ಈಗ ಎಲ್ಲಿದ್ದೀರಿ ಯಾವ ದೇಶದ ರಾಜರೆಂದು ತಮ್ಮನ್ನು ಸಂಬೋಧಿಸಬೇಕು ?

ಇಯಜ್— ಹುಸೇನಖಾನನು ಏನೂ ತಿಳಿಸಲಿಲ್ಲವೇನು ?

ದೌಲತ್— ಹುಸೇನಖಾನನು ತಮ್ಮ ಪೂರ್ವೋತ್ತರಗಳೊಂದನ್ನೂ ಹೇಳಲಿಲ್ಲ. ಇಂದ್ರಜಾಲಕನಂತೆ ಇಲ್ಲಿ ಈ ದಿನ ತಮ್ಮ ದರುಶನ ಮಾಡಿಸುವುದಾಗಿ ತಿಳಿಸಿದನು. ನೀವೂ ಇಂದ್ರಜಾಲಕರಂತೆಯೇ ದರುಶನ ಕೊಟ್ಟಿದ್ದೀರಿ.

ಇಯಜ್ — ಹಾ ! ಒಳ್ಳೆಯದು ರಾಧಾರಾಣಿಯವರೆ ತಾವು ಈ ಕರ್ನಾಟಕಕ್ಕೆ ಬಂದ ಸಮಾಚಾರವೇನು ?

ರಾಧಾ— ಈ ದೌಲತ್‌ರಾಣಿಯವರು ತಮ್ಮ ದರ್ಶನಕ್ಕಾಗಿ ಬಂದರು. ನಾನೂ ತಮ್ಮಿಂದ ಸಹಾಯವನ್ನು ಯಾಚಿಸುವುದಕ್ಕೆ ಬಂದೆ.

ಇಯಜ್—ಸಮಾಚಾರವೇನು ?

ರಾಧಾ—ಈ ಮಂಗಳೂರು ಸೀಮೆಯಲ್ಲಿ ವಿಪ್ಲವವೆದ್ದಿದೆ

ಇಯಜ್—ಅದರ ಮೂಲಪುರುಷರಾರು ?

ರಾಧಾ—ಅದನ್ನೇ ತಾವು ಪತ್ತೆಮಾಡಿಸಿ ಕೊಡಬೇಕು. ಮತ್ತು ಈ ಹಡಗಿನ ಯಜಮಾನರಾದ ಅಲ್ಲೀಸೇಟರನ್ನು ನಮ್ಮಿಬ್ಬರಿಗೂ ಭೇಟಿ ಮಾಡಿಸಬೇಕು

ಇಯಜ್—ಸೇಟರನ್ನು ಭೇಟಿಮಾಡಿಸಲು ನನ್ನಿಂದ ಸಾಧ್ಯವಿಲ್ಲ. ಏಕೆಂದರೆ ಅವರು ಯಾರನ್ನೂ ನೋಡುವುದಿಲ್ಲ. ವಿಪ್ಲವ! ವಿಪ್ಲವದ ಮಾತು ಅದನ್ನು ತನಿಖೆ ನಡೆಸುವುದಕ್ಕಾಗಿಯೇ ದಿವಾನ್ ಜನಾಲುದ್ದೀನರವರು ಬಂದಿದ್ದಾರೆಂದು ಕೇಳಿದ್ದೇನೆ ಬಹುಶಃ ರಾಣಿಯವರ ಸವಾರಿಯೂ ಅದಕ್ಕಾಗಿಯೇ ಚಿತ್ತೈಸಿರಬಹುದು

ರಾಧಾ—ಹುಸೇನ್ ಖಾನರವರಿಗೆ ಈ ವಿಪ್ಲವದ ಮಾಹಿತಿಯೆಲ್ಲಾ ಸಂಪೂರ್ಣ ವಾಗಿ ಗೊತ್ತಿದೆ

ಇಯಜ್—ಹುಸೇನ್ ಖಾನರನ್ನು ಕೇಳೋಣ

ದೌಲತ್—ಖಾನರವರೇ, ಈ ಹಡಗು ಯಾರದು ?

ಇಯಜ್—ಇದು ಅಲ್ಲೀಸೇಟರದು

ದೌಲತ್—ಈ ಇಂಗ್ಲೀಷ್ ಬಾವುಟವೇನು ?

ಇಯಜ್—ಇಂಗ್ಲೀಷರಿಗೂ ಸುಲ್ತಾನರಿಗೂ ಕರಾರಾಗಿದೆ ಆದ್ದರಿಂದ ಈ ಪ್ರಾಂತ್ಯದಲ್ಲಿ ಇಂಗ್ಲೀಷ್ ಬಾವುಟವಿರುವ ಹಡಗಿಗೆ ಯಾವ ತೊಂದರೆಯೂ ಇಲ್ಲ

ದೌಲತ್—ತಮ್ಮ ಸಮಾಚಾರಗಳನ್ನು ತಾವು ಹೇಳಲೇ ಇಲ್ಲ

ಇಯಜ್—ಎಲ್ಲವನ್ನೂ ವಿಸ್ತಾರವಾಗಿ ಹೇಳುತ್ತೇನೆ ಅವಸರವೇನು ? ನಾನು ಈಗ ಅಜ್ಞಾತವಾಸದಲ್ಲಿದ್ದೇನೆ

ದೌಲತ್—ಈ ಅಜ್ಞಾತವಾಸವೆಷ್ಟು ದಿನಗಳು ?

ಇಯಜ್—(ನಗುತ್ತಾ) ನಿಮ್ಮಂತೆಯೇ ನಾನು ಸಂಕಲ್ಪ ಮಾಡಿದ್ದೇನೆ ಈ ಸುಲ್ತಾನೀರಾಜ್ಯವು ಸ್ಥಿರವಾಗಿರುವವರೆಗೆ ಅಜ್ಞಾತವಾಸ!

ದೌಲತ್—(ಲಜ್ಜೆಯಿಂದ ತಲೆಬಾಗಿ) ಖಾನರವರು ಸಂಪೂರ್ಣವಾಗಿ ಸುಲ್ತಾನರ ಕರ್ಮಚಾರಿಗಳೇನು ?

ಇಯಜ್—ದೌಲತ್‌ರಾಣಿಯವರ ಸಂತೋಷಕ್ಕಾಗಿ ಹಾಗೆ ಹೇಳಿದರೂ ಹೇಳ ಬಹುದು ಆದರೆ ನಾನು ಪ್ರತ್ಯಕ್ಷವಾಗಿ ಸುಲ್ತಾನರಿಗೆ ಕರ್ಮಚಾರಿಯಲ್ಲ ಸುಲ್ತಾನೀ ರಾಜ್ಯದ ಹಿತಚಿಂತಕ!

ದೌಲತ್—ತಾವು ಮೊದಲಿದ್ದಂತೆ ಸಾಚಾವಾಗಿಲ್ಲ ಇಂದ್ರಜಾಲಕರಂತೆ ಮಾತನಾಡುತ್ತೀರಿ. ನೀವು ಸುಲ್ತಾನೀರಾಜ್ಯದ ಮಿತ್ರರಂತೆ! ಇಂಗ್ಲೀಷ್ ಬಾವುಟದ

ಆಶ್ರಯ !! ಇದೆಲ್ಲಾ ತಮಗೆ ಹೇಗೆ ಸರಿಹೋಗುತ್ತದೋ ?

ಇಯಜ್—ರಾಣಿಯವರಿಬ್ಬರನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗಿ ನನ್ನ ಕಾರ್ಯಪರಿಚಯವನ್ನೆಲ್ಲಾ ಮಾಡಿಸುತ್ತೇನೆ

ದೌಲತ್ – ಯಾವಾಗ ?

ಇಯಜ್—ಈಗಲೇ ! ತಮ್ಮ ಆಜ್ಞೆಯಾದರೆ ಈ ಹಡಗು ಹೀಗೆಯೇ ಹೊರಡುತ್ತದೆ ಸಿದ್ಧವಾಗಿದೆ

ದೌಲತ್—(ನಗುತ್ತಾ) ನಾನು ಸಿದ್ಧ

ರಾಧಾ—ಖಾನರವರೇ, ದೌಲತ್‌ರಾಣಿಯವರನ್ನು ಕರೆದುಕೊಂಡು ಹೋಗಬಹುದು ತಾವು ನಮ್ಮ ರಾಣಿಯವರನ್ನು ಅಪಹರಿಸಿಕೊಂಡು ಹೋಗುವುದಕ್ಕಾಗಿಯೇ ಬಂದಿರುವಂತಿದೆ ನಾನು ನಿಮ್ಮೊಡನೆ ಬರುವುದಿಲ್ಲ

ಇಯಜ್—ದೌಲತ್‌ರಾಣಿಯವರು ಏಕಾಕಿಯಾಗಿ ನನ್ನೊಡನೆ ಬರುವುದಾದರೆ ಬಂದೇ ಬರುತ್ತಿದ್ದರು ಅವರು ನಿಮಗಾಗಿಯೇ ನಗರದಲ್ಲಿದ್ದಾರೆ. ಈಗ ನಿಮ್ಮನ್ನು ಬಿಟ್ಟು ಅವರೊಬ್ಬರೇ ಬರುವರೇ !

ರಾಧಾ—ನವಾಬರೇ, ಈ ಮಂಗಳೂರಿನ ವಿಪ್ಲವವು ಪ್ರಾಪ್ತವಾಗಿರುವಾಗ ನಾನು ಈ ಸ್ಥಳವನ್ನು ಬಿಟ್ಟು ಎಲ್ಲಿಯೂ ಹೋಗುವುದಿಲ್ಲ

ಇಯಜ್—ನಾನು ಇಂದು ಹೊರಟುಹೋಗುತ್ತೇನೆ

ದೌಲತ್—ನೀವು ಹೊರಡಿರಿ ನಾವು ಹೇಗಾದರೂ ನಿಮ್ಮನ್ನು ಹುಡುಕಿ ಬರುತ್ತೇವೆ

ರಾಧಾ—ತಾವು ಇಲ್ಲಿ ಇದ್ದರೆ ಎಷ್ಟೋ ಉಪಕಾರವಾಗುವುದು.

ಇಯಜ್—ಕ್ಷಮಿಸಿರಿ ರಾಣಿಯವರೇ, ನಾನು ಇಲ್ಲಿಗೆ ಬಂದಿರುವುದು ಯಾರಿಗದ ತಿಳಿಯಲೂಬಾರದು ಈ ವಿಪ್ಲವದಲ್ಲಿ ನನ್ನಿಂದ ತಮಗೆ ಯಾವ ವಿಧವಾದ ಪ್ರತ್ಯಕ್ಷ ಸಹಾಯವೂ ಆಗಲಾರದು

ರಾಧಾ—ನಾವು ಈ ಸಮುದ್ರದಲ್ಲಿ ಧುಮುಕಿದರೂ ನೀವು ಈ ಹಡಗಿನಿಂದ ಕೆಳಗೆ ಇಳಿಯುವುದಿಲ್ಲವೇ ?

ಇಯಜ್—ಏಕೆ ರಾಣಿಯವರೇ ! ಇಷ್ಟೊಂದು ಕ್ರೋಧದಿಂದ ಮಾತನಾಡುವಿರಿ ? ತಮ್ಮ ಆಜ್ಞೆಯಂತೆ ನಾನು ನಡೆಯಲಾರೆನೆ ! ಈ ಮಂಗಳೂರಿನ ಸಣ್ಣ ಪ್ರಕರಣಕ್ಕಾಗಿ ನನ್ನ ಅಜ್ಞಾತವಾಸವನ್ನು ಬಿಡುವುದು ನ್ಯಾಯವಲ್ಲವೆಂದು ಬಗೆದಿದ್ದೇನೆ.

ದೌಲತ್—ಖಾನರವರೇ, ನಾವು ಹೊರಡುತ್ತೇವೆ ತಾವು ಅನುಗ್ರಹಿಸಿದರೆ ನಾಳೆ ಬಂದು ಭೇಟಿ ಮಾಡುತ್ತೇವೆ.

ಇಯಜ್—ಅಪ್ಪಣೆ ಕೊಡಿರಿ. ನಾನು ಈಗಲೇ ಹೊರಡುತ್ತೇನೆ. ನಾಳೆ ಸಂಧ್ಯಾ.

ಕಾಲಕ್ಕೆ ಪುನಃ ಇಲ್ಲಿ ಬಂದು ತಮ್ಮಗಳ ದರ್ಶನಕ್ಕಾಗಿ ಕಾದಿರುತ್ತೇನೆ

ರಾಣಿಯವರು ಅಪ್ಪಣೆ ಪಡೆದು ಹಡಗಿನಿಂದ ಕಳಗಿಳಿದರು ನೌಕೆಯು ಸಿದ್ಧವಾಗಿದ್ದಿತು ಇಬ್ಬರೂ ನೌಕೆಗೆ ಇಳಿದರು ನೌಕೆಯು ದಡದ ಕಡೆಗೆ ಹೊರಟಿತು ದೌಲತ್ ಮತ್ತು ರಾಧೆಯರು ಆ ಹಡಗಿನ ಕಡೆಗೇ ನೋಡುತ್ತಿದ್ದರು ಇವರು ನೋಡುತ್ತಿರ ಂತೆಯೇ ನಾವಿಕರು ಆ ಪಟಗಳನ್ನು ಎತ್ತಿಕಟ್ಟಿದರು ಹಡಗು ಪಶ್ಚಿಮದ ಕಡೆಗೆ ದೂರದೂರ ಹೋಯಿತು

ರಾಣಿಯರು ನೌಕೆಯಿಂದ ಕೆಳಗಿಳಿಯುವ ಹೊತ್ತಿಗೆ ಇಮಾಂ ಸಿದ್ಧವಾಗಿ ಕಾದಿದ್ದನು ಕುದುರೆಗಳನ್ನು ತಂದು ನಿಲ್ಲಿಸಿದನು ರಾಣಿಯರು ಇಮಾಮನನ್ನು ನೋಡಿ ನಕ್ಕರು.

"ಓಹೋ, ನೀನು ಹಾಜರಾಗಿದ್ದಿ "

"ಸನ್ನಿಧಾನದ ಸೇವೆಗೆ ಹಾಜರಾಗಿದ್ದೇನೆ "

ಇಬ್ಬರೂ ಕುದುರೆಯನ್ನೇರಿದರು. ಇಮಾಮನು ಅವರನ್ನು ಬಿಡಾರಕ್ಕೆ ತಲಪಿಸಿದನು.

ಇಮಾಮನು ಅಪ್ಪಣೆ ಪಡೆದು ಹೊರಟುಹೋದನು

ರಾಧೆ ಮತ್ತು ದೌಲತ್ ಉಳಿದ ರಾತ್ರಿಯನ್ನು ಇಯಜ್ ಖಾನರ ಮಾತುಕಥೆಗಳನ್ನಾಡುತ್ತಾ ಕಳೆದರು

## ಪತಿಘಾತಿನಿ ಮಾಧವಿ

ಬೆಳಗಾಯಿತು ಸರ್ಕಾರದ ಅಧಿಕಾರಿಗಳೆಲ್ಲರೂ "ಭಕ್ಷಿಯು ಸಿಕ್ಕಿದ್ದಾನೆ" ಎಂದು ಮಾತನಾಡಿಕೊಳ್ಳತೊಡಗಿದರು ಭಕ್ಷಿಯ ಬಂಧನದಿಂದ ವಿಪ್ಲವದ ಬಿರುಗಾಳಿಯು ಏಳುವುದೆಂದು ದಿವಾನರವರು ಭಾವಿಸಿ ಸೈನ್ಯಗಳೆಲ್ಲಾ ಬಹಳ ಶಿಸ್ತಿನಿಂದ ಗಸ್ತು ಮಾಡಬೇಕೆಂದು ಅಪ್ಪಣೆ ಮಾಡಿದರು ಸೂರ್ಯೋದಯವಾಗುತ್ತಲೇ ಸೈನಿಕರು ಎಲ್ಲೆಲ್ಲಿಯೂ ಓಡಿಯಾಡುತ್ತಿದ್ದರು. ವಿಪ್ಲವಕಾರರ ಸುಳಿವೇ ಇಲ್ಲ. ಸೈನಿಕರು "ಭಕ್ಷಿಯು ಸಿಕ್ಕಿದ್ದಾನೆ ಈ ದಿನ ಅವನನ್ನು ಶೂಲಕ್ಕೇರಿಸುತ್ತಾರೆ" ಎಂದು ಮಾತನಾಡಿಕೊಳ್ಳುತ್ತಾರೆ ಅಲ್ಲಲ್ಲಿ ಗುಪ್ತವಾಗಿ ತಿರುಗುವ ವಿದ್ರೋಹಿಗಳ ಕಿವಿಗೆ ಈ ಮಾತು ಬೀಳುತ್ತಲೇ ವಿದ್ರೋಹಿಗಳು ಪಕ್ಕನೆ ನಗುತ್ತಾರೆ ದೂರ ಹೊರಟುಹೋಗುತ್ತಾರೆ

ಫಕೀರರನ್ನು ಹಿಡಿಯಬೇಕೆಂದು ಹಿಂದಿನ ದಿನವೇ ದಿವಾನರ ಅಪ್ಪಣೆಯಾಗಿತ್ತು ಫಕೀರರನ್ನು ಹಿಡಿದು ಬಂಧನದಲ್ಲಿಟ್ಟಿಗು ಎಷ್ಟೋ ಮಂದಿ ವಿದ್ರೋಹಿ ಮುಖಂಡರನ್ನು ಹಿಡಿದು ಬಂಧಿಸಿದ್ದಾರೆ ಇದೆಲ್ಲಾ ದಿವಾನರವರಿಗೆ ವರದಿಯಾಯಿತು ಅವರು ವಿದ್ರೋಹಿಗಳೆಲ್ಲಾ ದೊಂಬಿ ಯೇಳುತ್ತಾರೆಂದು ಖಚಿತ ಮಾಡಿಕೊಂಡಿದ್ದರು. ಎಲ್ಲಿಯೂ

ವಿದ್ರೋಹಿಗಳ ಗದ್ದಲವೇ ಇಲ್ಲ. ಇದು ಎಲ್ಲ ಅಧಿಕಾರಿಗಳಿಗೂ, ದಿವಾನರವರಿಗೂ ಆಶ್ಚರ್ಯವನ್ನುಂಟುಮಾಡಿತು.

ಸೂರ್ಯೋದಯವಾದ ಸ್ವಲ್ಪ ಹೊತ್ತಿನೊಳಗಾಗಿಯೇ ಬಂಧನದಲ್ಲಿದ್ದ ಭಕ್ಷಿಯು ಫೌಜುದಾರರನ್ನು ಖೂನಿ ಮಾಡಿ ಓಡಿಹೋಗಿದ್ದಾನೆಂಬ ಸಮಾಚಾರವು ಹರಡಿತು. ಅಧಿಕಾರಸ್ಥರ ಮುಖಗಳೆಲ್ಲಾ ಬಿಳ್ಳಗಾಯಿತು ಕಿಲ್ಲೇದಾರರು ಫೌಜುದಾರರ ಮನೆಗೆ ಹೋಗಿ ಎಲ್ಲ ವಿದ್ಯಮಾನಗಳನ್ನು ಸ್ವತಃ ನೋಡಿಕೊಂಡು ಬಂದರು. ಯಾರನ್ನೂ ಒಳಗೆ ಬಿಡಕೂಡದೆಂದೂ, ಯಾರೂ ಹೊರಗೆ ಹೋಗಕೂಡದೆಂದೂ ಕಟ್ಟಪ್ಪಣೆ ಮಾಡಿ ಬಲವಾದ ಪಹರೆಯನ್ನಿಟ್ಟರು ಅರಮನೆಗೆ ಹೋಗಿ ದಿವಾನರವರ ಭೇಟಿಯಾಗಬೇಕೆಂದು ಹೇಳಿ ಕಳಿಸಿದರು ಈ ಸಮಾಚಾರವು ದಿವಾನರವರಿಗೂ ತಿಳಿದಿತ್ತು ಅವರು ಕಿಲ್ಲೇದಾರರನ್ನು ಒಳಗೆ ಕರಸಿಕೊಂಡು ಸಮಾಚಾರವನ್ನೆಲ್ಲಾ ವಿಚಾರಿಸಿದರು.

ಕಿಲ್ಲೇದಾರರು ಬಹಳ ಭೀತಿಯಿಂದ ಎಲ್ಲ ಸಮಾಚಾರಗಳನ್ನೂ ಹೇಳಿದರು

ದಿವಾನ್—ಕಿಲ್ಲೇದಾರ್ ರಹಮಾನ್ ಸಾಹೇಬರವರೇ ! ಫೌಜುದಾರರು ಖೂನಿಯಾದದ್ದು ನಿಜವೆ ?

ಕಿಲ್ಲೇ—ಹೌದು ! ಹುಜೂರು, ಖೂನಿಯಾಗಿದೆ

ದಿವಾನ್—ನಮ್ಮ ಸರ್ಕಾರಕ್ಕೆ ಬಹಳ ಅಗೌರವವಾದಂತಾಯಿತು ! ನಮಗೆ ವಿದ್ರೋಹಿಗಳು ನಮ್ಮ ಎದುರಿನಲ್ಲಿಯೇ ಬಂದು "ಷಹಾ" ಕೊಟ್ಟಂತಾಯಿತು

ಕಿಲ್ಲೇ—ಹೌದು ! ಸರ್ಕಾರ್ !

ದಿವಾನ್—ಆ ಭಕ್ಷಿಯೇ ಖೂನಿ ಮಾಡಿರಬೇಕು ಅವನು ಓಡಿ ಹೋಗಿದ್ದಾನೆ ಅಲ್ಲವೆ ?

ಕಿಲ್ಲೇ—ಓಡಿಹೋಗಿದ್ದಾನೆ.

ದಿವಾನ್—ಆ ಭಕ್ಷಿಯು ಬಹಳ ಗಟ್ಟಿಗನೆಂಬುದರಲ್ಲಿ ಅಡ್ಡಿಯೇ ಇಲ್ಲ ಆದರೆ ಫೌಜುದಾರರ ಅರಮನೆಯಲ್ಲಿ ಯಾರೋ ಷರೀಕ್ ಆಗದೆ ಇದೆಲ್ಲಾ ನಡೆದಿಲ್ಲ

ಕಿಲ್ಲೇ—ಹುಜೂರು ! ಸನ್ನಿಧಾನದಲ್ಲಿ ಅರಿಕೆ ಮಾಡಲು ಭಯವಾಗುತ್ತದೆ

ದಿವಾನ್—ಹೇಳಿರಿ ! ನೀವು ಏನೇನು ಕೇಳಿದ್ದೀರೋ ಅದನ್ನೆಲ್ಲಾ ಸ್ಪಷ್ಟವಾಗಿ ತಿಳಿಸಿರಿ

ಕಿಲ್ಲೇ—ಖಾವಿಂದ್ ! ಒಂದು ಖೂನಿಯಲ್ಲ. ಫೌಜುದಾರರ ಮಹಲಿನಲ್ಲಿ ಎರಡು ಖೂನಿಗಳಾಗಿವೆ ಒಂದು ಕೋಣೆಯಲ್ಲಿ ಬಾಗಿಲಿನಲ್ಲಿಯೇ ಫೌಜುದಾರರು ಬಿದ್ದಿದ್ದಾರೆ ಸ್ವಲ್ಪ ದೂರದಲ್ಲಿ ಮತ್ತೊಬ್ಬ ವಿದ್ರೋಹಿಯು ಖೂನಿಯಾಗಿದ್ದಾನೆ. ಇವಕ್ಕೆ ಫೌಜುದಾರರ ಬೇಗಂಸಾಹೇಬರೇ ಮದತ್ ಮಾಡಿದ್ದಾರೆಂದು ಹೇಳುತ್ತಾರೆ. ಬೇಗಂಸಾಹೇಬರು ಆ ವಿದ್ರೋಹಿಯ ಹೆಣದ ಹತ್ತಿರಲೇ ಕುಳಿತಿದ್ದಾರೆ.

ದಿವಾನ್— ಆ ಕೊಲೆಯಾಗಿರುವ ದ್ರೋಹಿಯೇ ಭಕ್ಷಿಇರಬಹುದು ಆ ಭಕ್ಷಿಯು ಏನೋ ಮೋಸದಿಂದ ಫೌಜುದಾರರನ್ನು ಕೊಲೆ ಮಾಡಿರಬಹುದು ಆ ಭಕ್ಷಿಯನ್ನು ಬೇಗಂಸಾಹೇಬರು ಕೊಲೆ ಮಾಡಿರಬಹುದು

ಕಿಲ್ಲೇದಾರನು ತಲೆಬಾಗಿಸಿದನು

"ಬೇಗಂ ಸಾಹೇಬರನ್ನು ಮಾತನಾಡಿಸುವುವಂತಿಲ್ಲ! ಅವರು ಹುಚ್ಚರಂತಾಗಿದ್ದಾರೆ" ಎಂದನು

ದಿವಾನರು ತಾವೇ ಹೋಗಿ ಬೇಗಂಸಾಹೇಬರನ್ನು ಸಮಾಧಾನ ಪಡಿಸುವುದಾಗಿ ಹೇಳಿದರು. ರಾಜಯೋಗ್ಯವಾದ ಮ್ಯಾನಾ ಸಿದ್ಧವಾಯಿತು ದಿವಾನರು ಫೌಜುದಾರರ ಮಹಲಿಗೆ ಹೊರಟರು ಕಿಲ್ಲೇದಾರರೂ ಇತರ ಅಧಿಕಾರಿಗಳೂ ಅನುಸರಿಸಿ ಹೋದರು. ಫೌಜುದಾರರ ಮನೆಯ ಮುಂದೆ ಸೈನ್ಯದ ಬಲವಾದ ಕಾವಲಿತ್ತು ಮ್ಯಾನೆಯು ಮಹಲಿನೊಳಗೆ ಹೋಯಿತು ದಿವಾನರು ಕಣ್ಣುಸನ್ನೆ ಮಾಡಿದರು ಅಧಿಕಾರಿಗಳೂ, ಕಿಲ್ಲೇದಾರರೂ ಅಲ್ಲಿಯೆ ನಿಂತರು ದಿವಾನರು ಮ್ಯಾನಾದಿಂದ ಇಳಿದು ಮಹಲಿನೊಳಕ್ಕ ಹೋದರು ಪಹರೆಯವನೊಬ್ಬನು ದಾರಿಯನ್ನು ತೋರಿಸಿದನು ದಿವಾನರವರು ಫೌಜುದಾರನು ಸತ್ತು ಬಿದ್ದಿದ್ದ ಕೋಣೆಯ ಬಾಗಿಲಿಗೆ ಹೋದರು ಪರಿಚಾರಕನು ಮುಂದೆ ಓಡಿಹೋಗಿ ಬೇಗಂಸಾಹೇಬರಿಗೆ ಸಲಾಂ ಮಾಡಿ ದಿವಾನರವರು ಬರುತ್ತಿರುವುದನ್ನು ತಿಳಿಸಿದನು.

ದಿವಾನರವರು ಆ ಕೋಣೆಯ ಬಾಗಿಲಿನಲ್ಲಿ ನಿಂತು, ಬಿರುಗಣ್ಣಿನಿಂದ "ಬೇಗಂ ಸಾಹೇಬ್!" ಎಂದು ಸಂಬೋಧಿಸಿದರು

ಮಾಧವಿಯು ಎದುರಿಗೆ ಬಂದು ನಿಂತು ಬಿರುಗಣ್ಣಿನಿಂದ ದಿವಾನರನ್ನು ನೋಡ ತೊಡಗಿದಳು.

ದಿವಾನ್—ಬೇಗಂಸಾಹೇಬ್! ಫೌಜುದಾರರ ಮರಣದಿಂದ ನಮಗೆ ಬಹಳ ವ್ಯಥೆಯಾಗಿದೆ ನಮ್ಮ ಸರಕಾರಕ್ಕೆ ಬಹಳ ಅವಮಾನವಾಗಿದೆ.

ಮಾಧವಿಯು ಮಾತನಾಡದೇ ಕಲ್ಲಿನ ಗೊಂಬೆಯಂತೆ ನಿಂತಿದ್ದಳು

ದಿವಾನ್—ನಾವು ಈ ಅತ್ಯಾಚಾರ ಮಾಡಿದ ಅಪರಾಧಿಗಳನ್ನು ಶಿಕ್ಷಿಸದೇ ಬಿಡುವುದಿಲ್ಲ.

ಮಾಧವಿ—ಈ ವಿಚಾರಣೆಯನ್ನು ತಾವೇ ಬಹಿರಂಗವಾಗಿ ದರ್ಬಾರ್ ಮಾಡಿ ನಡೆಸಬೇಕು.

ದಿವಾನ್—ಹಾಗೆಯೇ ಮಾಡುತ್ತೇವೆ

ಮಾಧವಿ— ನನ್ನ ವಿಚಾರಣೆಯಾಗಬೇಕು.

ದಿವಾನ್—ಫೌಜುದಾರರ ಪತ್ನಿಯುವರನ್ನು ರಾಜಸಭೆಯಲ್ಲಿ ವಿಚಾರಣೆ ಮಾಡು

ವುದು ಸುಲ್ತಾನೀ ದರಬಾರಿಗೆ ಗೌರವವಲ್ಲ ತಾವು ಹೇಳುವುದೇನಾದರೂ ಇದ್ದರೆ ಈಗಲೇ ನನ್ನಲ್ಲಿ ಹೇಳಬಹುದು

ಮಾಧವಿ—ದಿವಾನರವರೇ! ತಾವು ಇಲ್ಲಿಗೆ ವಿಪ್ಲವವನ್ನು ಅಡಗಿಸಲ ಬರೋಣ ವಾಗಿದೆ ರಾಜಸಭೆಯಲ್ಲಿ ನನ್ನ ವಿಚಾರಣೆ ಆಗದಿದ್ದರೆ ಈ ವಿದ್ರೋಹದ ವಿಚಾರಣೆ ಆದಂತೆ ಆಗುವುದೇ ಇಲ್ಲ

ದಿವಾನ—ಬೇಗಂ ಸಾಹೇಬ್, ಇಲ್ಲಿರುವ ಮತ್ತೊಂದು ಶರೀರವು ಯಾರದು ? ಭಕ್ಷಿಯದೋ ?

ಬೇಗಂ—ಅಲ್ಲ, ಭಕ್ಷಿಯು ಬದುಕಿದ್ದಾನೆ ಈ ನಿರ್ಭಾಗ್ಯನು ನನ್ನಸಹೋದರ

ದಿವಾನ—ಇವನನ್ನು ಯಾರು ಕೊಲೆ ಮಾಡಿದರು ?

ಬೇಗಂ –ಫೌಜುದಾರ ಕುತುಬುದ್ದೀನ

ದಿವಾನ—(ಗಾಬರಿಯಿಂದ) ಈ ಫೌಜುದಾರರನ್ನು ಯಾರು ಖೂನಿಮಾಡಿದರು ?

ಬೇಗಂ—ನಾನು ! ನನ್ನ ಕೈಯಾರ ಖೂನಿ ಮಾಡಿದ್ದೇನೆ ನಾನೂ ಒಬ್ಬಳು ವಿದ್ರೋಹಿ

ದಿವಾನ—ಹೆಸರು ?

ಬೇಗಂ —ಮಾಧವಿ

ದಿವಾನರವರು, ಅಲ್ಲಿಂದ ಹೊರಟುಹೋದರು ಆ ರಾಜಮಹಲನ್ನು ಬಿಡುತ್ತಾ "ಬೇಗಂಸಾಹೇಬಳನ್ನು ಬಂಧಿಸಿರಿ !" ಎಂದು ಆಜ್ಞೆ ಮಾಡಿ ಹೊರಟು ಹೋದರು.

ದಿವಾನರವರ ಅಪ್ಪಣೆಯಂತೆ ರಾಜಭಟರು ಬಹುಮಂದಿ ವಿದ್ರೋಹಿಗಳನ್ನು ಹಿಡಿದು ಬಂಧಿಸಿದ್ದಾರೆ ಭಕ್ಷಿಯನ್ನು ಮಾತ್ರ ಹಿಡಿಯಲಾಗಲಿಲ್ಲ ಭಕ್ಷಿಯನ್ನು ಹಿಡಿದು ಕೊಟ್ಟವರಿಗೆ ವಿಶೇಷ ಬಹುಮಾನವನ್ನು ಕೊಡುವುದಾಗಿ ಡಂಗೂರ ಹೊಡಿಸಿ ದ್ದಾರೆ

ಮೂರು ದಿನಗಳನಂತರ, ದಿವಾನರವರು ದರಬಾರನ್ನು ಕೂಡಿಸಿದರು ಸರದಾ ರರು, ಸೇನಾನಾಯಕರು, ಖಾಜಿಗಳು ಎಲ್ಲರೂ ಬಂದು ತಮ್ಮ ತಮ್ಮ ಆಸನಗಳಲ್ಲಿ ಗಂಭೀರಭಾವದಿಂದ ಕುಳಿತಿದ್ದಾರೆ ಕರ್ನಾಟಕದ ಮಹಾಜನರು ಅನೇಕರು ದಿವಾನ ರವರ ಆಹ್ವಾನದಿಂದ ಸಭೆಗೆ ಬಂದಿದ್ದಾರೆ ಸುತ್ತಲೂ ಸೈನಿಕರು ಬಿಚ್ಚುಕತ್ತಿಯಿಂದ ಪಹರೆ ಕೊಡುತ್ತಲಿದ್ದಾರೆ ದಿವಾನರವರು ಸಭೆಗೆ ಬಂದು ಉಚ್ಚಾಸನದಲ್ಲಿ ಕುಳಿತು ಕೊಂಡರು.

ರಾಜಭಟರು ಸರಪಣಿಗಳಿಂದ ಬಂಧಿತನಾಗಿದ್ದ ಫಕೀರನನ್ನು ತಂದು ದಿವಾನ ರವರ ಸಮ್ಮುಖದಲ್ಲಿ ನಿಲ್ಲಿಸಿದರು ದಿವಾನರವರು ಫಕೀರನ ಬೇಡಿಗಳನ್ನು ಬಿಚ್ಚುವಂತೆ ಅಪ್ಪಣೆ ಮಾಡಿದರು. ಫಕೀರನು ಎದ್ದುನಿಂತನು

ದಿವಾನ್—ಫಕೀರರೇ ! ಇದು ಸರ್ಕಾರದವರ ರಾಜಸಭೆ ! ಸುಲ್ತಾನರ ರಾಜ್ಯ ದಲ್ಲಿ ತಮ್ಮಂಥಾ ಫಕೀರರಿಗೆ ಬಹಳ ಮನ್ನಣೆ ಇದೆ ಅಧಿಕಾರಿಗಳು ಈ ರಾಜ್ಯದಲ್ಲಿ ನಡೆಯುವ ಪಿತೂರಿಗೆಲ್ಲಾ ನೀವೇ ಕಾರಣಕರ್ತರೆಂದು ದೂರು ತಂದಿದ್ದಾರೆ ನಿಮ್ಮ ವಿಚಾರಣೆಯನ್ನು ನಡೆಸಬೇಕಾಗಿದೆ

ಫಕೀರ—ವಿಚಾರಣೆಯನ್ನು ನಡೆಸಬಹುದು ನನಗೆ ಶಿಕ್ಷೆಯನ್ನು ವಿಧಿಸಬಹುದು ನಾನು ಸಂತೋಷದಿಂದ ಅನುಭವಿಸುತ್ತೇನೆ

ದಿವಾನ್— ನೀವು ಅಪರಾಧವನ್ನು ಒಪ್ಪಿಕೊಂಡಂತೆಯೇ ಆಯಿತು.

ಫಕೀರ—ಅಪರಾಧಿ ನಾನಲ್ಲ ! ನಿಜವಾದ ಅಪರಾಧಿ ಕುತುಬುದ್ದೀನ್ ! ಅವನಿಗೆ ತಕ್ಕ ಶಿಕ್ಷೆಯಾಗಿಯೇ ಆಗಿದೆ

ದಿವಾನ್—ನೀವು ಈ ಪಿತೂರಿಕಾರರ ಮುಖಂಡರೆಂದೂ, ನೀವೇ ಈ ವಿಪ್ಲವ ವನ್ನೆಲ್ಲಾ ಎಬ್ಬಿಸಿದ್ದೀರೆಂದೂ ಸರ್ಕಾರದಲ್ಲಿ ಫಿರ್ಯಾದು ಬಂದಿದೆ.

ಫಕೀರ—ನಾನು ಯಾರ ಮುಖಂಡನೂ ಅಲ್ಲ ವಿಪ್ಲವವನ್ನು ನಾನು ಎಬ್ಬಿಸಿ ದವನೂ ಅಲ್ಲ ಅದು ತಾನಾಗಿ ಎದ್ದಿದೆ ! ಆದರೆ ಈ ವಿಪ್ಲವವನ್ನು ನೋಡಿ ನನಗೆ ಎಷ್ಟೋ ಆನಂದವಾಗಿದೆ

ದಿವಾನ್— ನಿಸ್ಸಂದೇಹವಾಗಿ ತಾವೂ ವಿದ್ರೋಹಿಗಳೆಂದು ನಾವುಹೇಳಬಹುದು.

ಫಕೀರ—ಜಗತ್ತೇ ಹೇಳುತ್ತದೆ, ನಾನು ವಿದ್ರೋಹಿ !

ದಿವಾನ್— ನೀವು ತಾಜಾ ಮುಸಲ್ಮಾನರಾಗಿದ್ದು ಸುಲ್ತಾನೀರಾಜ್ಯದಲ್ಲಿ ಈ ವಿದ್ರೋಹವನ್ನೇಕ ಹಚ್ಚಿದಿರಿ ?

ಫಕೀರ—(ನಗುತ್ತಾ) ದಿವಾನರವರೇ ! ಇದು ಹಿಂದೂಗಳ ರಾಜ್ಯ ಇಲ್ಲಿ ವಿದ್ರೋಹ ಮಾಡಿದವರು ಫೌಜುದಾರರು ಅವರು ಮಾಡಿದ ಸುಲಿಗೆ, ಅವರು ಮಾಡಿ ಸಿದ ಕೊಲೆ, ಅವರಿಂದ ಆಗಿರುವ ಸ್ತ್ರೀಯರ ಮಾನಭಂಗ, ಇದೆಲ್ಲವನ್ನೂ ನೋಡಿದರೆ ಹೃದಯವು ಸುಡುತ್ತದೆ.

ದಿವಾನ್—ಇಲ್ಲಿ ನಡೆದ ಕೊಳ್ಳೆ, ದರೋಡೆಗಳು, ಅಧಿಕಾರಿಗಳ ಕೊಲೆ, ರಾಜ ಭಂಡಾರದ ಲೂಟಿ ಇವೆಲ್ಲದಕ್ಕೂ ಕಾರಣಕರ್ತರಾರು ?

ಫಕೀರ—ಹೊಟ್ಟೆಗಿಲ್ಲದ ಜನ ಕೊಳ್ಳೆ ಹೊಡೆದರು. ನೊಂದ ಜನ, ಹೆಂಡಿರನ್ನು ಕಳಕೊಂಡ ಜನ ಅಧಿಕಾರಿಗಳನ್ನು ಕೊಲೆ ಮಾಡಿದರು. ಅದೆಲ್ಲಾ ಪ್ರತ್ಯಕ್ಷವಾಗಿ ಕಾಣುತ್ತಿಲ್ಲವೇ? ಫೌಜುದಾರನ ಕೊಲೆಯೇ ಪ್ರತ್ಯಕ್ಷ ನಿದರ್ಶನ

ದಿವಾನ್–ಫಕೀರರೆ ನೀವು ಮುಸಲ್ಮಾನರೆಂದು ರಾಜದಂಡದಿಂದ ತಪ್ಪಿಸಿಕೊಳ್ಳ ಲಾರಿರಿ, ನೀವು ವಿದ್ರೋಹಿಗಳು ನಿಮಗೆ ಶಿಕ್ಷೆಯಾಗುತ್ತದೆ.

ಫಕೀರ—ವಿದ್ರೋಹಿಯು ನಾನಲ್ಲ ! ಸುಲ್ತಾನರು ವಿದ್ರೋಹಿಗಳು !

ದಿವಾನ್—ಬಾಯಿ ಮುಚ್ಚು ! ಸುಲ್ತಾನರ ಹೆಸರು ಹೇಳಿದರೆ ನಾಲಿಗೆಯನ್ನು ಸೀಳಿಸುತ್ತೇನೆ !

ಫಕೀರನು ನಕ್ಕನು

ರಾಜಭಟರು ಫಕೀರನಿಗೆ ಬೇಡಿಗಳನ್ನು ತೊಡಿಸಿ ಹಿಂದಕ್ಕೆ ಸೆಳೆದರು.

ಕಿಲ್ಲೇದಾರರು ಫೌಜುದಾರರ ಬೇಗಂಸಾಹೇಬರನ್ನು ಸಭೆಗೆ ಕರೆತರುವಂತೆ ಹುಕ್ಕುಂ ಮಾಡಿದರು ರಾಜಭಟರು ಹಿಂದೆ ಮುಂದೆ ಬಿಚ್ಚು ಕತ್ತಿಯ ಪಹರೆಯಿಂದ ಮಾಧವಿಯನ್ನು ಸಭೆಗೆ ಕರೆತಂದು ದಿವಾನರ ಸಮ್ಮುಖದಲ್ಲಿ ನಿಲ್ಲಿಸಿದರು

ದಿವಾನ್—ಬೇಗಂಸಾಹೇಬ್ ! ತಮ್ಮನ್ನು ಈ ರಾಜಸಭೆಯಲ್ಲಿ ವಿಚಾರಣೆ ಮಾಡಲು ನನಗೆ ಇಷ್ಟವಿಲ್ಲ ಆದರೂ ತಮ್ಮ ಕೋರಿಕೆಯಂತೆ ಇಲ್ಲಿಗೆ ತಮ್ಮನ್ನು ಬರ ಮಾಡಿದ್ದೇನೆ ತಾವು ಏನಾದರೂ ಹೇಳತಕ್ಕದಿದ್ದರೆ ಹೇಳಬಹುದು

ಮಾಧವಿಯು ಬುರ್ಖಾವನ್ನು ತೆಗೆದಳು ಹಣೆಯಲ್ಲಿ ದೊಡ್ಡ ಕುಂಕುಮ ! "ಎಲ್ಲರೂ ಹಿಂದೂ ಹೆಂಗಸು !" ಎಂದು ಆಶ್ಚರ್ಯಪಟ್ಟರು

ಮಾಧವಿ—ದಿವಾನರವರೇ ! ನನ್ನ ವಿಚಾರಣೆಯಾಗಲೇಬೇಕು ಈ ವಿದ್ರೋಹದ ಗುಟ್ಟನ್ನು ನಾನು ಬಯಲು ಮಾಡಬೇಕೆಂದು ಸಂಕಲ್ಪಿಸಿದ್ದೇನೆ ನಾನೊಬ್ಬ ಹಿಂದೂ ಯುವತಿ ! ಒಂದು ದಿನ ಫೌಜುದಾರನ ಕಣ್ಣಿಗೆ ಬಿದ್ದೆ ಅಂದಿನ ರಾತ್ರಿಯೇ ರಾಜ ಭಟರು ನನ್ನನ್ನು ಅಪಹಾರ ಮಾಡಿದರು ಫೌಜುದಾರರ ಅರಮನೆಯಲ್ಲಿ ಬಂದಿಯಾದೆ. ಫೌಜುದಾರರ ಮಾಯಾ ಜಾಲದಿಂದ ಸ್ವಲ್ಪ ದಿನಗಳಲ್ಲಿಯೇ ಅವರ ಅಂತಃಪುರಕ್ಕೆ ಸೇರಿದೆ ನನ್ನಂಥ ಎಷ್ಟೋ ಸ್ತ್ರೀಯರು ಆ ಅಂತಃಪುರದಲ್ಲಿ ಸೇರಿಸಲ್ಪಟ್ಟಿದ್ದರು. ಕುತುಬುದ್ದೀನನು ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದನು ಅಧಿಕಾರವನ್ನು ಬಹಳ ದರ್ಪದಿಂದ ನಡೆಸುತ್ತಿದ್ದನು ಅತುಳೈಶ್ವರ್ಯವನ್ನು ಗಳಿಸಿದಾನೆ ಅದೆಲ್ಲಾ ಬೇರೆ ರಾಜ್ಯದಲ್ಲಿ ಗುಪ್ತವಾಗಿದೆ ಸುಲ್ತಾನೀ ರಾಜ್ಯವು ಈ ದಕ್ಷಿಣ ಕನ್ನಡದಲ್ಲಿ ಬಹುದಿನಗಳು ಉಳಿಯುವುದಿಲ್ಲವೆಂದು ಫೌಜುದಾರನು ಅನೇಕ ಬಾರಿ ಹೇಳುತ್ತಿದ್ದನು ಇತ್ತೀಚೆಗೆ ಇಂಗ್ಲಿಷ್ ಸರದಾರರೊಡನೆ ಅನೇಕ ಗುಪ್ತ ಪತ್ರವ್ಯವಹಾರವನ್ನು ನಡೆಸಿದ್ದನು ತೆಗೆದುಕೊಳ್ಳಿರಿ. ಅದೆಲ್ಲಾ ಇಲ್ಲಿದೆ

ಎಂದು ಒಂದು ಬೆಳ್ಳಿಯ ಪೆಟ್ಟಿಗೆಯನ್ನು ದಿವಾನರ ಮುಂದಿಟ್ಟಳು. ಕಿಲ್ಲೇದಾರರು ಆ ಪೆಟ್ಟಿಗೆಯನ್ನು ತೆರೆದು ಕಾಗದಗಳನ್ನು ಎತ್ತಿ ದಿವಾನರಿಗೆ ಒಪ್ಪಿಸಿದರು. ದಿವಾನರವರು ಆ ಕಾಗದಗಳನ್ನೆಲ್ಲಾ ಬಿಚ್ಚಿ ಓದಿದರು

ಮಾಧವಿ—(ಕೇಕೆ ಹಾಕಿ ನಗುತ್ತಾ) ದಿವಾನರವರೇ ! ವಿದ್ರೋಹಿಯು ಯಾರು?

ದಿವಾನ್— ಬೇಗಂಸಾಹೇಬ್ ! ತಾವು ಹೇಳುವುದೆಲ್ಲಾ ಮುಗಿಯಿತೋ ?

ಮಾಧವಿ— ದಿವಾನ್ ಸಾಹೇಬರವರೇ ! ಸಾವಧಾನದಿಂದ ಕೇಳಿರಿ ಇನ್ನೂ

ಬಹಳವಿದೆ. ಇದೇ ನನ್ನ ಕಡೆಯ ದಿನ. ನನ್ನ ಹೃದಯದಲ್ಲಿ ಅಡಗಿರುವುದನ್ನೆಲ್ಲಾ ಹೇಳುತ್ತೇನೆ ಈ ಪ್ರಪಂಚಕ್ಕೆ ಗೊತ್ತಾಗಲಿ, ಈ ವಿದ್ರೋಹದ ಅಂತರಂಗ ನಿಮ್ಮ ಸವಾರಿಯು ಇಲ್ಲಿಗೆ ಬಾರದಿದ್ದರೆ ಕುತುಬುದ್ದೀನನು ಸಾಯುತ್ತಿರಲಿಲ್ಲ ನಾನು ಬಂದು ಇಲ್ಲಿ ಅಪರಾಧಿಯಾಗಿ ನಿಲ್ಲುತ್ತಿರಲಿಲ್ಲ ಎಲ್ಲಿಗೋ ಅಜ್ಞಾತವಾಸಕ್ಕೆ ಹೊರಟುಹೋಗುತ್ತಿದ್ದೆವು. ತಮ್ಮ ಸವಾರಿಯು ಬಂದೇಬಿಟ್ಟಿತು ಫೌಜದಾರರು ಸುಲ್ತಾನರ ಸಮ್ಮುಖಕ್ಕೆ ಹೋಗಬೇಕು ಆಗ ಅವರು ಭಕ್ಷಿಯನ್ನು ಹಿಡಿಯದೇ ವಿಧಿಯಿಲ್ಲ ನನ್ನ ಸಹೋದರನು ಒಬ್ಬ ವಿದ್ರೋಹೀ ಮುಖಂಡ ಕುತುಬುದ್ದೀನನು ಅವನನ್ನು ಬಲ್ಲ ಅವನ ಹೆಸರು ಗೋವಿಂದ ಕಮ್ತಿ ಅವನನ್ನು ಹಿಡಿದು ತಂದು ಅರಮನೆಯಲ್ಲಿಟ್ಟರು ಭಕ್ಷಿಯನ್ನು ಹಿಡಿದು ಕೊಡುವಂತೆ ಎಷ್ಟೋ ಪ್ರಲೋಭ ಮಾಡಿ ನೋಡಿದರು ಆ ಉಪಾಯಗಳೊಂದೂ ಫಲಿಸಲಿಲ್ಲ ನಾನು ಫೌಜುದಾರರ ಮೋಹದಿಂದ, ಆ ಐಶ್ವರ್ಯದ ಲೋಭದಿಂದ ಭಕ್ಷಿಯನ್ನು ಹಿಡಿದು ಕೊಡುವುದಾಗಿ ಭರವಸೆ ಕೊಟ್ಟೆ ಅಂತಃಪುರವನ್ನು ಬಿಟ್ಟು ಹೊರಟೆ ಮೂರು ರಾತ್ರಿಗಳಲ್ಲಿ ಮೋಸದಿಂದ ಆ ಭಕ್ಷಿಯನ್ನು ಹಿಡಿದು ಕೊಟ್ಟೆ! ಭಕ್ಷಿಯನ್ನು ಹಿಡಿದು ತಂದು ಆ ಅರಮನೆಯಲ್ಲಿ ಗುಪ್ತವಾಗಿಟ್ಟರು ನನ್ನ ಸಹೋದರನಿಗೆ ಕುತುಬುದ್ದೀನನು ಗಳಿಸಿಟ್ಟಿರುವ ಐಶ್ವರ್ಯವೆಲ್ಲಾ ಗೊತ್ತಿತ್ತು ಫೌಜುದಾರನು ಇಂಗ್ಲೀಷರೊಡನೆ ನಡೆಸಿರುವ ಮಸಲತ್ತೆಲ್ಲಾ ಗೊತ್ತಿತ್ತು ಅವನು ಜೀವದಿಂದ ಇದ್ದರೆ ತನಗೆ ನಿಸ್ತಾರವಿಲ್ಲವೆಂದು ಹೆದರಿ ಆ ರಾತ್ರಿ–ಆ ಘೋರವಾದ ರಾತ್ರಿ–ಫೌಜುದಾರನು ನನ್ನ ಸಹೋದರನನ್ನು ತಿವಿದು ಕೊಂದನು ನಾನು ಆ ರಾತ್ರಿಯೆಲ್ಲಾ ಫೌಜುದಾರನನ್ನು ಹಿಂಬಾಲಿಸುತ್ತಲೇ ಇದ್ದೆ ಒಂದು ಕ್ಷಣ ಹಿಂಚು ಮುಂಚು ಆಯಿತು ಇಲ್ಲದಿದ್ದರೆ ನಾನು ನನ್ನ ಸಹೋದರನನ್ನು ಉಳಿಸುತ್ತಿದ್ದೆ ಈ ರಾಜ ಸಭೆಯಲ್ಲಿ ಇಂದು ಫೌಜುದಾರನು ನಿಂತು ತನ್ನ ಅಪರಾಧಗಳನ್ನು ಹೇಳಿ ಶಿಕ್ಷೆಯನ್ನು ಅನುಭವಿಸಬೇಕಾಗಿತ್ತು. ದೈವದ ಇಷ್ಟ ಬೇರೆ ರೀತಿಯಾಗಿತ್ತು! ನಾನು ಆ ಕೋಣೆಯೊಳಗೆ ಕಾಲಿಡುವಷ್ಟರಲ್ಲಿ ಫೌಜುದಾರನ ಕಠಾರಿಯು ನನ್ನ ಸಹೋದರನ ಹೃದಯದಲ್ಲಿ ನೆಟ್ಟುಹೋಗಿತ್ತು! ನಾನು ಒಳಗೆ ಹೋಗಿ ನನ್ನ ಅಣ್ಣನ ಮುಖವನ್ನು ಬಗ್ಗಿ ನೋಡಿದೆ. ಅವನ ಆ ಧೈನ್ಯ ಪೂರ್ಣವಾದ ಕಣ್ಣುಗಳನ್ನು ನೋಡಿದೆ ಆರ್ತ ಧ್ವನಿಯನ್ನು ಕೇಳಿದೆ. ಫೌಜುದಾರನು ಭಕ್ಷಿಯನ್ನು ಕೊಲೆಮಾಡುವುದಾಗಿ ಹೊರಟನು. ನಾನು ಕಠಾರಿಯನ್ನೆತ್ತಿ ಫೌಜುದಾರನ ಕಂಠದಲ್ಲಿ ತಿವಿದೆ. ಫೌಜುದಾರನು ಒಂದೇ ಪೆಟ್ಟಿಗೆ ಸತ್ತು ಬಿದ್ದನು. ಭಕ್ಷಿಯಿದ್ದ ಕೊಠಡಿಗೆ ಹೋಗಿ ಅವನನ್ನು ಬಂಧನದಿಂದ ಬಿಚ್ಚಿಬಿಟ್ಟೆ! ಫೌಜುದಾರನ ಅಕೃತ್ಯಗಳನ್ನೆಲ್ಲಾ ಬಲ್ಲವಳು ನಾನು, ಅವನಿಗೆ ಸಹಾಯ ಮಾಡಿದವಳು ನಾನು, ಅವನನ್ನು ಕೈಯ್ಯಾರ ಕೊಲೆ ಮಾಡಿದವಳು ನಾನು. ದಿವಾನರವರೇ!

ನನ್ನನ್ನು ಶಿಕ್ಷಿಸಿರಿ ! ಈ ಅರಮನೆಯ ಮುಂದೆ ಶೂಲದ ಮರವನ್ನು ಕಟ್ಟಿಸಿ ಅದಕ್ಕೆ ನನ್ನನ್ನು ಏರಿಸಿರಿ ನಾನು ಸಂತೋಷದಿಂದ ಶೂಲಕ್ಕೇರುವೆನು ಜ್ವಾಲಮಾಲೆಗಳಿಂದ ಉರಿಯುತ್ತಿರುವ ನನ್ನ ಮನಸ್ಸು ಶಾಂತವಾಗುವುದು ಈ ವಿಪ್ಲವವು ಶಾಂತವಾಗಿ ಹೋಗುವುದು ನನ್ನ ಹಸರು ಮಾಧವಿ

ದಿವಾನರು—ಅಪ್ರತಿಭರಾಗಿ "ಇನ್ನು ವಿಚಾರಣೆಯು ಸಾಕು ಈ ದರಬಾರು ಬರಖಾಸ್ತಾಗಲಿ" ಎಂದು ಅಪ್ಪಣೆ ಮಾಡಿದನು

ಮಾಧವಿಯು ಕೈಯೆತ್ತಿ ಉಚ್ಚ ಕಂಠದಿಂದ "ದಿವಾನರವರೇ ! ಮತ್ತೊಂದು ಮಾತಿದೆ ಅದನ್ನು ತಮ್ಮ ಸನ್ನಿಧಾನದಲ್ಲಿ ಹೇಳಲು ಮತ್ತೊಂದು ಅವಕಾಶವಿಲ್ಲ. ಇಂದು ಸೂರ್ಯಾಸ್ತಮಾನದೊಳಗಾಗಿ ನಾನು ಯಮಸದನವನ್ನು ಸೇರುವೆನು ಅಂದೇ ಸಾಯುತ್ತಿದ್ದೆ ಇದೆಲ್ಲವನ್ನೂ ಈ ದರಬಾರಿನಲ್ಲಿ ಹೇಳಲು ಜೀವಧಾರಣೆ ಮಾಡಿದ್ದೆ. ಇನ್ನೊಂದು ಮಾತು ಉಳಿದಿದೆ ಅದು ನನ್ನದೊಂದು ಪ್ರಾರ್ಥನೆ ! ಈ ಜೀವದ ಕಡೆಯ ಆಶೆ !

ದಿವಾ—(ಪುನಃ ಆಸನದಲ್ಲಿ ಕುಳಿತು) ಮಾಧವಿ ! ಕೇಳಿಕೋ ! ನಿನ್ನ ಕಡೆಯ ಆಶೆಯೇನು ?

ಮಾಧವಿ—ದಿವಾನ್‌ರವರೇ ! ಆ ಫಕೀರನು ನಿರಪರಾಧಿ ಅವನು ಬಹಳ ವಿದ್ಯಾವಂತ ! ಪಂಡಿತ ! ಅವನ ಮನಸ್ಸು ದುಃಖ ಕ್ರೋಧಗಳಿಂದ ಕ್ಷುಭಿತವಾಗಿದೆ ಹುಚ್ಚನಂತೆ ಮಾತನಾಡುತ್ತಾನೆ ಈ ವಿದ್ರೋಹಕ್ಕೂ ಅವನಿಗೂ ಯಾವ ಸಂಬಂಧವೂ ಇಲ್ಲ ಫೌಜುದಾರನಿಗೆ ಇದು ಚೆನ್ನಾಗಿ ಗೊತ್ತಿತ್ತು ಆದ್ದರಿಂದಲೇ ಆ ಫಕೀರನನ್ನು ಫೌಜುದಾರನು ಹಿಡಿಯಲಿಲ್ಲ ಅವನನ್ನು ಕ್ಷಮಿಸಿ ಬಿಟ್ಟುಬಿಡಿ

ದಿವಾ—ಮಾಧವಿ ! ನೀನು ಆ ಫಕೀರನನ್ನು ಬಲ್ಲೆಯಾ ?

ಮಾಧವಿ—ಬಲ್ಲೆ ! ಚನ್ನಾಗಿ ಬಲ್ಲೆ ! ಅವನು ನನಗೆ ಜನ್ಮವಿತ್ತ ತಂದೆ

ದರಬಾರಿನಲ್ಲೆಲ್ಲಾ ಕಲಕಲ ! ಆಶ್ಚರ್ಯ! ವಿಷಾದ ! ಎಲ್ಲರೂ ಆ ಫಕೀರನ ಕಡೆ ನೋಡುತ್ತಿದ್ದರು ದಿವಾನ್‌ರವರು, ಕಿಲ್ಲೇದಾರರ ಕಡೆಗೆ ತಿರುಗಿ "ಈ ಮಾಧವಿಯನ್ನು ಬಂಧನದಲ್ಲಿಡಿ ಇವಳನ್ನೂ ಈ ಫಕೀರನನ್ನೂ ಸುಲ್ತಾನರ ಸಮ್ಮುಖಕ್ಕೆ ಕಳುಹಿಸ ಬೇಕು" ಎಂದು ಆಜ್ಞೆ ಮಾಡಿದರು

ಮಾಧವಿಯು, ಸಭಾಮಂಟಪವೆಲ್ಲವೂ ಪ್ರತಿಧ್ವನಿಯಾಗುವಂತೆ ಕೇಕೆ ಹಾಕಿ ನಕ್ಕಳು ! ಅವಳ ಶರೀರವು ಸಭಾಮಧ್ಯದಲ್ಲಿ ಬಿದ್ದು ಒಂದೆರಡು ಕ್ಷಣ ಹೊರಳಾಡಿತು! ರಾಜಭಟರು ಬಂದು ಅವಳನ್ನು ಹಿಡಿದುಕೊಂಡರು. ಅಷ್ಟರಲ್ಲಿ ಪ್ರಾಣವು ಹಾರಿ ಹೋಗಿತ್ತು.

ದಿವಾ್ಣರವರು ಮಾಧವಿಯ ಹತ್ತಿರ ಬಂದು ಅವಳ ಮುಖವನ್ನು ಬಗ್ಗಿನೋಡಿದರು ಮಾಧವಿಯ ಮುಖದಲ್ಲಿದ್ದ ದೊಡ್ಡ ಕುಂಕುಮದ ಬೊಟ್ಟು ಇರಲಿಲ್ಲ! ಅದು ಸೌಮಂಗಲ್ಯದ ಕುಂಕುಮವಲ್ಲ. ಘೋರವಿಷ! ಮಾಧವಿಯು ಅದನ್ನು ಕಿತ್ತು ಬಾಯಲ್ಲಿ ಆಗೆದು ನುಂಗಿಬಿಟ್ಟಿದ್ದಳು.

## ಕ್ರಾಂತಿಯ ಶಾಂತಿ

ದಿವಾ್ಣರವರು ತಮ್ಮ ದಿವಾ್ಣಖಾನೆಯಲ್ಲಿ ವಿಚಾರಮಗ್ನರಾಗಿ ಕುಳಿತಿದ್ದರು ದ್ವಾರಪಾಲಕನು ಬಂದು ರಾಧಾರಾಣಿಯವರ ಸವಾರಿಯು ಬಂದಿರುವುದಾಗಿ ಅರಿಕೆ ಮಾಡಿದನು ದಿವಾ್ಣರವರು ಎದ್ದು ಬಂದು ರಾಣಿಯವರನ್ನು ಎದುರುಗೊಂಡು ತಮ್ಮ ದಿವಾ್ಣಖಾನೆಗೆ ಕರೆದುಕೊಂಡು ಹೋಗಿ ಉಚಿತಾಸನದಲ್ಲಿ ಕಳ್ಳಿರಿಸಿದರು

ರಾಧಾ—ದಿವಾ್ಣರವರೇ! ತಾವು ಇಲ್ಲಿಗೆ ದಯಮಾಡಿಸಿದ ಕಾರ್ಯವಾಯಿ ತಷ್ಟೆ! ಇನ್ನು ನಾವುಗಳು ನಗರಕ್ಕೆ ಹಿಂದಿರುಗಬಹುದಷ್ಟೆ?

ದಿವಾ್ಣ—ರಾಣಿಯವರೇ, ನಾವು ಬಂದ ಕಾರ್ಯವು ವ್ಯರ್ಥವಾದಂತೆಯೇ ನನಗೆ ಕಾಣುತ್ತದೆ ವಿದ್ರೋಹವು ಪೂರ್ತಿಯಾಗಿ ಶಮನವಾಗಲಿಲ್ಲ ಭಕ್ಷಿಯು ಸಿಕ್ಕಲೇ ಇಲ್ಲ. ಸುಲ್ತಾನರ ದರ್ಬಾರಿನಲ್ಲಿ ನನಗೆ ಎಂದೂ ಯಾವ ಪ್ರಸಂಗದಲ್ಲಿಯೂ ಇಂತಹ ಅವಮಾನವಾಗಿರಲಿಲ್ಲ!

ರಾಧೆ—ದಿವಾ್ಣರವರೇ, ಭಕ್ಷಿಯು ಸಿಕ್ಕಿದರೆ ಅವನನ್ನು ನೀವೇನು ಮಾಡುತ್ತೀರಿ?

ದಿವಾ್ಣ—ಭಕ್ಷಿಯನ್ನು ಹಿಡಿಯಬೇಕೆಂದು ಸುಲ್ತಾನರ ಆಜ್ಞೆ! ಅದನ್ನು ಪಾಲನೆ ಮಾಡುವುದು ನನ್ನ ಕರ್ತವ್ಯ.

ರಾಧೆ—ಭಕ್ಷಿಯನ್ನು ನಾನು ಹಿಡಿದು ಕೊಡುತ್ತೇನೆ ತಾವೇನು ಮಾಡುತ್ತೀರಿ?

ದಿವಾ್ಣ—ನಾನು ದರಬಾರಿನಲ್ಲಿ ವಿಚಾರಣೆ ನಡೆಸುತ್ತೇನೆ

ರಾಧೆ—ನಾನು ಆ ದರ್ಬಾರಿನಲ್ಲಿ ಭಕ್ಷಿಯು ನಿರಪರಾಧಿಯೆಂದು ಪ್ರತಿರೋಧ ಮಾಡುತ್ತೇನೆ. ನಗರದ ಪ್ರಸಂಗದಲ್ಲಿ ಖಾಸಿಂಖಾನನ್ನು ಅನ್ಯಾಯವಾಗಿ ವಧೆ ಮಾಡಿದಂತೆ ಈಗ ನೀವು ಭಕ್ಷಿಯನ್ನು ವಧೆ ಮಾಡಿಸಲು ನಾನು ಬಿಡುವುದಿಲ್ಲ!

ದಿವಾ್ಣ—ರಾಣಿಯವರೇ! ತಮ್ಮ ಮಾತು ನನಗೆ ಆಶ್ಚರ್ಯವನ್ನುಂಟುಮಾಡುತ್ತಿದೆ. ತಾವು ಭಕ್ಷಿಯನ್ನು ನೋಡಿದ್ದೀರಾ?

ರಾಧೆ—ಹೌದು! ನೋಡಿದ್ದೇನೆ. ಈ ಮಂಗಳೂರಿಗೆ ಬಂದ ದಿನವೇ ನಾನು ಭಕ್ಷಿಯನ್ನು ನೋಡಿದೆನು. ದಿವಾ್ಣರವರೇ! ಈಗ ನಾನು ಅರಿಕೆ ಮಾಡುವಂತೆ ತಾವು ಮಾಡಿದರೆ ಎಲ್ಲವೂ ಸರಿಹೋಗುತ್ತದೆ.

ದಿವಾನ್—ತಮ್ಮ ಆಜ್ಞೆಯನ್ನು ನಾನು ಯಾವಾಗಲೂ ಪಾಲಿಸತಕ್ಕವನೆಂದು ತಮಗೆ ಗೊತ್ತೇ ಇದೆ

ರಾಧೆ—ಬಂಧನದಲ್ಲಿರುವ ಫಕೀರರನ್ನು ಬಿಟ್ಟುಬಿಡಿರಿ ಅವರದೇನು ತಪ್ಪಿದೆ? ಅವನೊಬ್ಬ ಜಂಗಮ ಫೌಜುದಾರರು ಅನ್ಯಾಯವಾಗಿ ಜಂಗಮರನ್ನು ಕೊಲ್ಲಿಸಿದನು. ಆಗ ತಲೆಯುಳಿಸಿಕೊಳ್ಳುವುದಕ್ಕೆ ಇವನು ಫಕೀರನಾದನು ಮಾಧವಿಯು ಅವನ ಮಗಳು ಅವಳ ಕಥೆಯನ್ನೆಲ್ಲಾ ಅವಳ ಬಾಯಿಂದಲೇ ಕೇಳಿದ್ದೀರಿ! ಅವನ ಮನಸ್ಸು ಎಷ್ಟೊಂದು ಖತಿಗೊಂಡಿರಬೇಕು ? ನೀವೇ ನೋಡಿರಿ ಅವನು ಮೊದಲು ಫೌಜು ದಾರರ ವಿದ್ವೇಷಿಯಾದನು ಫೌಜುದಾರನ ಅನ್ಯಾಯ, ಅಕೃತ್ಯಗಳೆಲ್ಲಾ ಈಗ ತಮ್ಮ ಮುಂದೆ ಪ್ರತ್ಯಕ್ಷವಾಗಿದೆ ಅದನ್ನು ವಿಚಾರಣೆ ಮಾಡಿ ಶಿಕ್ಷೆ ಮಾಡದೆ ಇದ್ದುದು ಸುಲ್ತಾನರ ತಪ್ಪಲ್ಲವೆ ? ಆಗ ನೊಂದವರೆಲ್ಲರೂ ವಿದ್ರೋಹಿಗಳಾದರು ನೀವು ಬಂಧ ನದಲ್ಲಿರುವ ವಿದ್ರೋಹಿಗಳನ್ನೆಲ್ಲಾ ಬಿಟ್ಟುಬಿಡಿರಿ ಈ ವಿಪ್ಲವವೆಲ್ಲಾ ಫೌಜುದಾರನ ಅತ್ಯಾಚಾರಗಳಿಂದ ಆದವೆಂದು ಲೋಕದಲ್ಲಿ ಘೋಷಿಸಿರಿ ವಿದ್ರೋಹಿಗಳೆಲ್ಲಾ ವಿದ್ರೋಹವನ್ನು ಬಿಟ್ಟು ಶಾಂತರಾಗುತ್ತಾರೆ ಹಾಗೆ ಮಾಡದೇ ವಿದ್ರೋಹಿಗಳನ್ನೆಲ್ಲಾ ಹಿಡಿದು ಶಿಕ್ಷೆಗೆ ಗುರಿಮಾಡುತ್ತಾ ಬಂದರೆ ಹತ್ತು ಸಹಸ್ರಜನ ಯುವಕರನ್ನು ಕೊಲೆ ಮಾಡಬೇಕಾಗುತ್ತದೆ ಅದರ ಪರಿಣಾಮವು ಹೇಗಾಗುತ್ತೋ ನೀವೇ ನೋಡಿರಿ

ದಿವಾನ್—ರಾಧಾರಾಣಿಯವರೇ, ನೀವು ಹೇಳುವ ರಾಜನೀತಿಯು ಬಹಳ ಯುಕ್ತಿಯುಕ್ತವಾಗಿದೆ ಆದರೆ ಸುಲ್ತಾನರು ಇದನ್ನು ಒಪ್ಪುತ್ತಾರೆಯೋ ? ನಾನು ಇಲ್ಲಿಗೆ ಬಂದು ಏನು ಮಾಡಿದ ಹಾಗಾಯಿತು ?

ರಾಧೆ— ದಿವಾನರವರೇ, ನಿಮ್ಮ ಮಾತು ವಿಚಿತ್ರವಾಗಿದೆ ನೀವು ಈ ಕರ್ನಾ ಟಕವನ್ನೆಲ್ಲಾ ಶಿಕ್ಷಿಸುವುದಕ್ಕೆ ಬಂದಿರೇನು ? ಇಲ್ಲಿಯ ತರುಣರನ್ನೆಲ್ಲಾ ಬಲಿಕೊಡಲು ಬಂದಿರೇನು ? ನಿಮ್ಮ ಪರಾಕ್ರಮವನ್ನು ಪ್ರಜೆಗಳ ಮೇಲೆ ತೋರುತ್ತೀರೇನು ? ದಿವಾನರವರೇ, ಈಗ ಹೇಳಿರಿ ನೀವು ಈ ವಿಪ್ಲವವನ್ನು ಶಾಂತಗೊಳಿಸುತ್ತೀರಾ ? ಇಲ್ಲವೇ ದೇಶದಲ್ಲೆಲ್ಲಾ ಕ್ಷೋಭೆಯನ್ನುಂಟುಮಾಡಿ ಯುವಕರನ್ನು ಕೊಂದು ಅಪ ಖ್ಯಾತಿಯನ್ನು ಪಡೆಯುತ್ತೀರಾ ?

ದಿವಾನ್-ರಾಣಿಯವರೇ ತಾವು ಎಷ್ಟೇ ಹೇಳಿದರೂ ನನ್ನ ಹೃದಯವು ನಡುಗು ತ್ತದೆ. ಇದನ್ನು ಸುಲ್ತಾನರವರು ಒಪ್ಪುವುದಿಲ್ಲವೆಂದೇ ನನ್ನ ಅಂತರಾತ್ಮವು ಹೇಳು ತ್ತದೆ.

ರಾಧೆ-ಸುಲ್ತಾನರವರು ಒಪ್ಪದೆ ಏನು ? ಅವರನ್ನು ನಾನು ಒಪ್ಪಿಸುತ್ತೇನೆ.

ದಿವಾನ್-ಒಪ್ಪಿಸಬಲ್ಲಿರಿ ! ಆದರೆ ಈ ರಾಜ್ಯವನ್ನು ತಾವೇ ವಹಿಸಿಕೊಳ್ಳಬಾರ

ಬೇಕೆ ? ನಾನು ತಮಗೆ ವಹಿಸಿ, ಧೈರ್ಯದಿಂದ ಸುಲ್ತಾನರ ಸಮ್ಮುಖಕ್ಕೆ ಹೋಗುತ್ತೇನೆ

ರಾಧೆ–ದಿವಾನಸಾಹೇಬರವರೇ, ಈಕ್ಷಣ ರಾಜ್ಯವನ್ನ ಒಪ್ಪಿಕೊಳ್ಳುತ್ತಿದ್ದ್ರೆ ಸುಲ್ತಾನರು ಅದನ್ನು ಸಂತೋಷದಿಂದ ಅಂಗೀಕರಿಸುತ್ತಿದ್ದರು ಈ ವಿದ್ರೋಹಿಗಳನ್ನೆಲ್ಲಾ ಬಂಧನದಿಂದ ಬಿಟ್ಟು ಅವರೆಲ್ಲರನ್ನೂ ರಾಜಭಕ್ತರನ್ನಾಗಿ ಮಾಡುತ್ತಿದ್ದ್ದೆ ಭಕ್ಷಿಯನ್ನು ಹಿಡಿದು ತರಿಸಿ ಅವನನ್ನೇ ಇಲ್ಲಿಯ ಫೌಜುದಾರನನ್ನಾಗಿ ಮಾಡುತ್ತಿದ್ದೆ ಅದರಿಂದ ಸುಲ್ತಾನರ ರಾಜ್ಯಭಾರವು ಈ ಕರ್ನಾಟಕದಲ್ಲಿ ಆಚಂದ್ರಾರ್ಕವಾಗಿ ನೆಲಸುತ್ತಿತ್ತು ಆಗರೆ ತಾವು ನನಗೆ ತಂದೆಯ ಸಮಾನರ - ನನಗೆ ನಿಮ್ಮಲ್ಲಿ ಅಷ್ಟು ಭಕ್ತಿ ವಿಶ್ವಾಸಗಳಿವೆ ಈ ಕರ್ನಾಟಕದಲ್ಲಿ ಈ ವಿಪ್ಲವವನ್ನು ಅಡಗಿಸಿದ ಕೀರ್ತಿಯು ನಿಮಗೆ ಬರಬೇಕು ಅದರಿಂದ ನಿಮ್ಮ ಗೌರವವು ನೂರುಮಡಿ ಹೆಚ್ಚುತ್ತದೆ ಈ ನಿಮ್ಮ ರಾಜನೀತಿಯನ್ನು ನೋಡಿ ಇಂಗ್ಲೀಷರು ಆಶ್ಚರ್ಯಪಡುತ್ತಾರೆ ಅಷ್ಟೇ ಅಲ್ಲ ನೀವು ವಿದ್ರೋಹಿಗಳನ್ನು ದಂಡಿಸುತ್ತ ಹೋದರೆ ವಿದ್ರೋಹವು ನಾನಾಮುಖವಾಗಿ ಬೆಳೆಯುತ್ತ ಹೋಗುತ್ತದೆ ಇದೇ ಸಮಯವನ್ನು ಸಾಧಿಸಿ ಇಂಗ್ಲೀಷರು ಈ ವ ಂಗಳೂರನ್ನು ಆಕ್ರಮಿಸಿದರೆ ನೀವೇನು ಮಾಡಬಲ್ಲಿರಿ ? ಇಷ್ಟೊಂದು ವಿದ್ರೋಹಿ ಬಲ ಇಂಗ್ಲೀಷರಿಗೆ ದೊರೆತ ಮೇಲೆ ಸುಲ್ತಾನರೇ ಇಲ್ಲಿಗೆ ಬಂದರೂ ಈ ಕರ್ನಾಟಕವನ್ನು ಉಳಿಸಿಕೊಳ್ಳಲಾರರು.

ದಿವಾನರು ಮಾತನಾಡಲಾರದೇ ಹೋದರು.

ದಿವಾನ—ರಾಣಿಯವರೇ ! ತಾವು ಹೇಳಿದಹಾಗೆಯೇ ನಡೆಯುತ್ತೇನೆ. ಈ ವಿದ್ರೋಹವು ಬೆಳೆಯದಂತೆ ಭಕ್ಷಿಯಿಂದ ನನಗೆ ಭರವಸೆ ಕೊಡಿಸಬಲ್ಲಿರಾ ?

ರಾಧೆ– ದಿವಾನರವರೇ ! ತಾವು ಆ ಭಕ್ಷಿಯನ್ನು ಅರಿಯಿರಿ ! ಇಂದು ಅವನು ಒಪ್ಪಿಕೊಂಡರೆ ಸುಲ್ತಾನರು ಈ ಕರ್ನಾಟಕದ ಸರ್ವಾಧಿಕಾರವನ್ನು ಅವನಿಗೆ ಕೊಡುತ್ತಾರೆ, ಅದನ್ನು ನಾನು ಬಲ್ಲೆ.

ದಿವಾನ—ನನಗೆ ಕುತೂಹಲವು ಹೆಚ್ಚಾಗುತ್ತಿದೆ. ತಾವು ಆ ಭಕ್ಷಿಯನ್ನು ನನಗೆ ಭೇಟಿಮಾಡಿಸಬೇಕೆಂದು ಪ್ರಾರ್ಥಿಸುತ್ತೇನೆ

ರಾಧೆ—ಆ ಭಕ್ಷಿಯನ್ನು ತಮ್ಮ ಸಮ್ಮುಖಕ್ಕೆ ಕರತಂದು ಭೇಟಿ ಮಾಡಿಸುತ್ತೇನೆ. ಅಷ್ಟೇ ಅಲ್ಲ ಆ ವಿದ್ರೋಹಿಯಾದ ಭಕ್ಷಿಯನ್ನು ಸುಲ್ತಾನರ ಪರಮಭಕ್ತನನ್ನಾಗಿ ಮಾಡುತ್ತೇನೆ ಈ ವಿದ್ರೋಹಿಗಳನ್ನೆಲ್ಲಾ ಮೈಸೂರಿನ ವೀರ ಸೈನಿಕರನ್ನಾಗಿ ಮಾಡುತ್ತೇನೆ. ತಾವು ಎಲ್ಲರಿಗೂ ಕ್ಷಮಾಭಿಕ್ಷೆಯನ್ನು ನೀಡಿರಿ !

ದಿವಾನ—ರಾಣಿಯವರಿಗೆ ಆ ಭಕ್ಷಿಯ ಪರಿಚಯವು ಚೆನ್ನಾಗಿರುವಂತಿದೆ.

ರಾಧೆ—ಹೌದು! ಆ ಭಕ್ಷಿಯನ್ನು ನಾನು ಚೆನ್ನಾಗಿ ಬಲ್ಲೆ.

ಪ್ರಾತಃಕಾಲ ದಿವಾನರವರು ಕಛೇರಿಗೆ ದಯಮಾಡಿಸಿದರು. ಅಲ್ಲಿಗೆ ಫಕೀರನನ್ನು ಕರೆಸಿದರು ದಿವಾನರು ಫಕೀರನನ್ನು ನೋಡಿ "ನಿಮ್ಮ ಮೇಲೆ ಯಾವ ಗುರುತರವಾದ ಅಪರಾಧವೂ ಸಾಬೀತಾಗಿಲ್ಲ ನಿಮ್ಮನ್ನು ಖುಲಾಸೆ ಮಾಡಿದ್ದೇವೆ ನೀವು ಎಲ್ಲಿಗೆ ಬೇಕೋ ಅಲ್ಲಿಗೇ ಹೋಗಬಹುದು" ಎಂದು ಹೇಳಿದರು.

ಫಕೀರ— ದಿವಾನರವರ ಮುಂದೆ ಬಂದು ನಿಂತು 'ದಿವಾನರವರೇ, ಜನರೆಲ್ಲರೂ ಈ ಕರ್ನಾಟಕದಲ್ಲಿ ವಿಪ್ಲವ ನಡೆಯುತ್ತಿದೆಯೆಂದು ಹೇಳುತ್ತಾರೆ ನನಗೆ ಹಾಗೆ ಕಾಣುವುದಿಲ್ಲ- ದುಷ್ಟರಾದ ಅಧಿಕಾರಿಗಳ ಹಾವಳಿಯಿಂದಲೇ ಇಷ್ಟೊಂದು ಪ್ರಜಾಕ್ಷೋಭೆ ಎದ್ದಿದೆ ಧರ್ಮದಿಂದ ರಾಜ್ಯಭಾರ ಮಾಡಿದರೆ ಇದೆಲ್ಲಾ ತನ್ನಷ್ಟಕ್ಕೆ ತಾನೇ ಶಾಂತವಾಗುತ್ತದೆ ಎಲ್ಲಾ ತಪ್ಪೂ ಫೌಜುದಾರನದೆಂದೂ, ಅವನ ಕಡೆ ಅಧಿಕಾರಿಗಳದೆಂದೂ ತಮಗೆ ಮನದಟ್ಟಾಗಿದೆ ಆದರೂ ತಮ್ಮ ಮನವು ಶಾಂತವಾಗಿಲ್ಲ ಭಕ್ಷಿಯನ್ನು ಹುಡುಕಿಸುತ್ತಿದ್ದೀರಿ ಅವನು ಸಿಕ್ಕಿದರೆ ಅಧಿಕಾರ ದರ್ಪದಿಂದ ಅವನನ್ನು ಗಲ್ಲಿಗೇರಿಸಬೇಕೆಂದಿದ್ದೀರಿ ಅದರಿಂದ ವಿಪ್ಲವವು ಶಾಂತವಾಗದು ಕ್ಷೋಭೆಯು ಇಮ್ಮಡಿಯಾಗುತ್ತದೆ ಆ ಭಕ್ಷಿಯನ್ನು ನಾನು ಬಲ್ಲೆ ಒಂದೇ ದಿನದಲ್ಲಿ ಅವನನ್ನು ಹಿಡಿದುಕೊಡುತ್ತಿದ್ದೆ. ಅವನದೇನೂ ತಪ್ಪಿಲ್ಲವೆಂದು ನಾನು ಬಲ್ಲೆ ಆ ಭಕ್ಷಿಯು ಒಬ್ಬ ಮಹಾ ಸೇನಾನಾಯಕನಾಗಲು ಅರ್ಹನಾದವನು. ಅವನನ್ನು ಹುಡುಕಿ ಒಪ್ಪಿಸಿ, ಸೇನಾನಾಯಕನನ್ನಾಗಿ ಮಾಡಿದರೆ, ಸುಲ್ತಾನರ ರಾಜ್ಯಕ್ಕೆ ಪಶ್ಚಿಮದಿಕ್ಕಿನಲ್ಲಿ ಭಯವೇ ಇಲ್ಲ ನಾನು ಅವನನ್ನು ಮತ್ತೊಮ್ಮೆ ಕಂಡರೆ, ಈ ರಾಜ್ಯದಲ್ಲಿ ವಿದ್ರೋಹದ ಅವಶ್ಯಕತೆ ಇಲ್ಲ ದೊಡ್ಡ ಸೈನ್ಯವನ್ನು ಕಟ್ಟಿ ಸೇನಾನಾಯಕನಾಗಿ ಈ ಕರ್ನಾಟಕದ ಸ್ವಾತಂತ್ರ್ಯವನ್ನು ಕಾಪಾಡು ಎಂದು ಹೇಳುತ್ತಿದ್ದೆ ನನ್ನನ್ನು ಬಂಧನದಿಂದ ಬಿಟ್ಟರೂ ಒಂದೆ. ಗಲ್ಲಿಗೇರಿಸಿದರೂ ಒಂದೆ

ದಿವಾನ— ಫಕೀರರೇ, ನೀವು ಹೋಗಬಹುದು ಈ ರಾಜ್ಯವನ್ನು ಸುಖವಾಗಿಡುವುದು ಸುಲ್ತಾನರ ಧರ್ಮ ಅದನ್ನು ಅವರು ಯಾವಾಗಲೂ ನೆರವೇರಿಸುತ್ತಾರೆ ಮತ್ತೊಂದು ಅಂಶವನ್ನು ತಮ್ಮನ್ನು ಕೇಳಬೇಕಾಗಿದೆ. ಫೌಜುದಾರರು ಈ ಸರ್ಕಾರದಿಂದ ಬಹಳ ಐಶ್ವರ್ಯವನ್ನು ಭಪಾವಣೆ ಮಾಡಿ ಮುಚ್ಚಿಟ್ಟಿದ್ದಾರೆಂದು ಕೇಳಿದೇನೆ ಅದು ಎಲ್ಲಿದೆ ಎಂಬುದನ್ನು ಗುರುತಿಸಬಲ್ಲಿರಾ ?

ಫಕೀರ - ದಿವಾನರವರೇ, ಕುತುಬುದ್ದೀನನು ವಿಶೇಷವಾಗಿ ಧನಕನಕಗಳನ್ನು ಸಂಗ್ರಹಿಸಿ ಗುಪ್ತವಾಗಿಟ್ಟಿದ್ದನೆಂದು ಕೇಳಿದ್ದೆ ಅದು ಮಾಧವಿಗೆ ತಿಳಿದಿತ್ತು. ಅವಳು ಆ ರಾತ್ರಿ ಫೌಜುದಾರನನ್ನು ಕೊಂದು ಭಕ್ಷಿಯನ್ನು ಬಿಟ್ಟು, ಬಿಡುವಾಗ ಅದೆಲ್ಲವನ್ನೂ ಭಕ್ಷಿಗೆ ದಾನಮಾಡಿದಳೆಂದು ಹೇಳುತ್ತಾರೆ. ಭಕ್ಷಿಯವರಿಗೆ ಹೊರತಾಗಿ ಮತ್ತಾರಿಗೂ ಆ ಗುಪ್ತನಿಧಿಯು ಗೊತ್ತಿಲ್ಲ.

ದಿವಾ೯—ಒಳ್ಳೆಯದು

ದಿವಾನವರು ಬಂಧನದಲ್ಲಿರುವ ಎಲ್ಲ ವಿದ್ರೋಹಿಗಳನ್ನು ಬಿಟ್ಟುಬಿಡುವಂತೆ ಹುಕ್ಕುಂ ಮಾಡಿದರು ಭಕ್ಷಿಯವರನ್ನು ಹಿಡಿದುಕೊಟ್ಟವರಿಗೆ ಒಂದು ಸಾವಿರ ಪಗೋಡಾಗಳನ್ನು ಭಕ್ಷೀಸ್ ಕೊಡುವುದಾಗಿ ಡಂಗೂರ ಹಾಕಿಸಿದರು.

## ಭಕ್ಷಿಯ ಅಂತರ್ಧಾನ

ಕಾರ್ತಿಕ ಬಹುಳ ಅಮಾವಾಸ್ಯೆ ಭೂಮಿಯ ಮೇಲೆ ಕಾಡಿಗೆಯನ್ನು ಚಲ್ಲಿದಂಥಾ ಕಗ್ಗತ್ತಲೆ ಆಕಾಶವು ನೀಲವಾಗಿ ಸ್ವಚ್ಛವಾಗಿದೆ ನಕ್ಷತ್ರಗಳು ಮಿನುಗುತ್ತಿವೆ ಪಶ್ಚಿಮ ಸಮುದ್ರದ ಅಲೆಗಳು ಭೋರ್ಗರೆಯುತ್ತಿವೆ ಸಮುದ್ರ ತೀರದ ಮರಳು ರಾಶಿಯ ಮೇಲೆ ದೊಡ್ಡ ದೊಡ್ಡ ಮದ್ದಾನೆಗಳು ಸಮುದ್ರದಿಂದ ಎದ್ದು ಒಂದು ಹೊರಳಾಡಿದಂತೆ ಅಲೆಗಳು ಬಂದು ತೀರದ ಮೇಲೆ ಹೊರಳುತ್ತಿವೆ ಸಮುದ್ರತೀರದಲ್ಲಿ ದೊಡ್ಡದೊಂದು ದೋಣಿಯು ಸಿದ್ಧವಾಗಿದೆ ಮಂಗಳೂರಿನಿಂದ ರಾಜಯೋಗ್ಯವಾದ ಎರಡು ಮ್ಯಾನಾಗಳು ಸಮುದ್ರತೀರಕ್ಕೆ ಬರುತ್ತಿವೆ ಮುಂದುಗಡೆ ದೀವಟಿಗೆಗಳ ಪ್ರಕಾಶ ! ಆ ಸಮುದ್ರದ ಅಲೆಗಳನ್ನು ಧಿಕ್ಕರಿಸುತ್ತಿರುವ ಬೋಯಿಗಳ ಶಬ್ದ ! ಹಿಂದುಗಡೆ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯಾಗುತ್ತಿರುವ ಅಶ್ವಗಳ ಖುರಪುಟ ಶಬ್ದ ! ಆ ಮ್ಯಾನಾಗಳಲ್ಲಿ ಒಂದರಲ್ಲಿ ದೌಲತ್ ರಾಣಿಯವರೂ, ರಾಧಾರಾಣಿಯವರೂ ಕುಳಿತಿದ್ದಾರೆ ಈ ಮ್ಯಾನಾ ಮುಂದೆ ಮುಂದೆ ಬರುತ್ತಿದೆ. ಹಿಂದಿನ ಮ್ಯಾನಾದಲ್ಲಿ ದಿವಾ೯ರವರು ಕುಳಿತಿದ್ದಾರೆ. ಎರಡು ಮ್ಯಾನಾಗಳೂ ಸಮುದ್ರ ತೀರದಲ್ಲಿ ಬಂದು ಇಳಿಸಲ್ಪಟ್ಟವು ರಾಣಿಯವರೂ, ದಿವಾ೯ರವರೂ ಮ್ಯಾನಾಗಳಿಂದ ಇಳಿದು ಸಿದ್ಧವಾಗಿದ್ದ ದೋಣಿಯನ್ನು ಏರಿದರು ನಾವಿಕರು ಪಟಗಳನ್ನು ಎತ್ತಿ ಕಟ್ಟಿದರು ಲಂಗರುಗಳನ್ನು ಬಿಚ್ಚಿಬಿಟ್ಟರು ಹುಟ್ಟುಗಳ ಸದ್ದು ಕೇಳಿಸಿತು ದೋಣಿಯು ಶರವೇಗದಿಂದ ಸಮುದ್ರದ ಮೇಲೆ ಹಾರಿ ಹೋಯಿತು. ದೋಣಿಯು ಉತ್ತರಾಭಿಮುಖವಾಗಿ ಸುಮಾರು ೫-೬ ಮೈಲಿಗಳ ದೂರ ನಡೆಸಲ್ಪಟ್ಟಿತು. ದೂರದಲ್ಲಿ ಒಂದು ಹಡಗು ಕಾಣುತ್ತಿತ್ತು ಆ ಕಡು ಕತ್ತಲೆಯಲ್ಲಿಯೂ, ಹಡಗಿನ ದೀಪಗಳು ಗೋಚರವಾಗುತ್ತಿದ್ದುವು. ದೋಣಿಯು ಹಡಗಿನ ಸಮೀಪವನ್ನು ಮುಟ್ಟುತ್ತಲೇ ರಾಣಿಯವರೂ, ದಿವಾ೯ರವರೂ ಹಡಗಿನ ಮೇಲುಭಾಗಕ್ಕೆ ಹತ್ತಿದರು. ಅಲ್ಲಿ ಒಬ್ಬ ಭವ್ಯಾಕಾರನಾದ ಮನುಷ್ಯನು ವಿನಯದಿಂದ ಆ ಮೂವರು ಅತಿಥಿಗಳನ್ನೂ ಎದುರುಗೊಂಡನು. ಕೆಳಭಾಗದ ಹಂತದಿಂದ ಮೇಲುಭಾಗದ ಅಂತಕ್ಕೆ ಕಿರಿದಾದ ಮೆಟ್ಟಲುಗಳನ್ನು ಹತ್ತಿ ಹೋದರು. ಅಲ್ಲಿ ಒಂದು ವಿಶಾಲವಾದ ಹಜಾರ ಹಜಾರಕ್ಕೇ ಸೇರಿದಂತೆ ಎರಡು ಕೋಣೆಗಳು. ಆ ಎರಡು ಕೋಣೆಗಳಿಂದಲೂ

ಬರುವುದಕ್ಕೆ ಬಾಗಿಲುಗಳು ಆ ಬಾಗಿಲುಗಳಿಗೆ ಕಿಂಕಾಪಿನ ಫರದೆಗಳು ಕಟ್ಟಲ್ಪಟ್ಟು ಇಳಿಬಿಟ್ಟದೆ ಹಜಾರದಲ್ಲಿ ಪ್ರಶಸ್ತವಾದ ಹಸುರು ಬಣ್ಣದ ರತ್ನಕಂಬಳಿಯು ಹಾಸಲ್ಪಟ್ಟದೆ ಸುತ್ತಲೂ ಹಂಸತೂಲಿಕೆಯಿಂದ ರಚಿತವಾದ ಮೆತ್ತೆಗಳು ಸಜ್ಜುಗೊಳಿಸಲ್ಪಟ್ಟವೆ. ಶ್ರೇಷ್ಠವಾದ ರೇಸಿಮೆಯ ಒರಗುದಿಂಬುಗಳ ಮೇಲೆ ಕಲಾಪತ್ತಿನ ಹುವ್ವುಗಳು ಕೆತ್ತಲ್ಪಟ್ಟವೆ ಮೇಲುಗಡೆ ಚೀಣಾಂಬರದ ವಿತಾನವು ಇಳಿಬಿಟ್ಟದೆ ಸುತ್ತಲೂ ತೋರಣವನ್ನು ಕಟ್ಟದಂತೆ ಮುತ್ತಿನ ಝೂಲರಿಗಳು ಕಟ್ಟಲ್ಪಟ್ಟವೆ ನಾಲ್ಕು ಕಡೆಯೂ ಕಂದೀಲು ದೀಪಗಳು ಉರಿಯುತ್ತಿವೆ ನಾಲ್ಕು ಮೂಲೆಗಳಲ್ಲಿಯೂ ಫಳಫಳನೆ ಹೊಳೆಯುತ್ತಿರುವ ಕರೀಶಿಲೆಯ ಕಾಲುಮಣೆಗಳ ಮೇಲೆ ಬೆಳ್ಳಿಯ ಪುಷ್ಪದಾನುಗಳು ಪುಷ್ಪ ಸೌರಭವನ್ನು ಸೂಸುತ್ತ ಮೆರೆಯುತ್ತಿವೆ ಹಜಾರದ ಮಧ್ಯದಲ್ಲಿ ಅಮೃತಶಿಲೆಯ ಕಾಲುಮಣೆಯ ಮೇಲೆ ಚಿನ್ನದ ದಾಸಿನಲ್ಲಿ ಸುವಾಸನೆಯ ಊದುಬತ್ತಿಗಳು ಹಚ್ಚಿ ಇಡಲ್ಪಟ್ಟವೆ ರಾಣಿಯವರುಗಳೂ, ದಿವಾನರವರೂ ಆ ಹಜಾರವನ್ನು ಪ್ರವೇಶಿಸಿದರು. ರಾಣಿಯವರು ಉಪಚರಿಸಿ ದಿವಾನರವರನ್ನು ತಿವಾಶಿಯ ಮೇಲೆ ಕುಳ್ಳಿರಿಸಿದರು ಈ ಮೂವರು ಅತಿಥಿಗಳನ್ನು ಉಚಿತಾಸನದಲ್ಲಿ ಕುಳ್ಳಿರಿಸಿ, ಆ ಭವ್ಯಾಕೃತಿಯ ಮನುಷ್ಯನು ಹೊರಗಡೆ ಹೊರಟುಹೋದನು

ದಿವಾ—ರಾಣಿಯವರೇ, ನಾನು ಎಂದೂ ಹಡಗನ್ನು ನೋಡಿಲ್ಲ. ಈ ಭವ್ಯವಾದ ನೌಕೆಯನ್ನು ನೋಡಿ ನನಗೆ ಆಶ್ಚರ್ಯವಾಗಿದೆ. ಇದು ಯಾರ ಹಡಗು ? ನಾವು ಎಲ್ಲಿದ್ದೇವೆ ?

ದೌಲತ್—ದಿವಾನರೇ ! ತಾವು ಸಂದೇಹಪಡುವ ಕಾರಣವಿಲ್ಲ. ಇದು ಕನ್ನಾನೂರಿನ ರಾಣಿಯುವರ ಹಡಗು ಆ ರಾಣಿಯುವರು ಸುಲ್ತಾನೀ ರಾಜ್ಯದ ಹಿತಾಕಾಂಕ್ಷಿಗಳು

ದಿವಾ—ರಾಣಿಯವರೇ, ನನಗೆ ತಮ್ಮ ಸನ್ನಿಧಾನದಲ್ಲಿ ಭಯವೆಲ್ಲಿ ಬಂತು ? ಇದೆಲ್ಲಾ ಆಶ್ಚರ್ಯವಾಗಿದೆ ತಾವು ಇಲ್ಲಿ ಭಕ್ಷಿಯನ್ನು ಹಿಡಿದು ಕೊಡುವುದಾಗಿ ನನ್ನನ್ನು ಕರೆತರೋಣವಾಯಿತು

ದೌಲತ್—ನಗುತ್ತಾ ಒಂದು ಸಹಸ್ರ ಪಗೋಡಗಳನ್ನು ಇಲ್ಲಿ ತಾವು ತರೋಣಾಗಿದೆಯೇನು ? ತಾವು ಡಂಗುರವನ್ನು ಹೊಡೆಸಿರುವಂತೆ ಸಹಸ್ರ ಪಗೋಡೆಗಳನ್ನು ಇಲ್ಲಿ ಕೊಟ್ಟರೆ ಭಕ್ಷಿಯನ್ನು ಹಿಡಿದು ಕೊಡುತ್ತೇನೆ ಇಲ್ಲದಿದ್ದರೆ ನಾನೇ ಹತ್ತು ಸಹಸ ಪಗೋಡಗಳನ್ನು ದಿವಾನರವರಿಗೆ ಒಪ್ಪಿಸುತ್ತೇನೆ ತಾವು ಇಲ್ಲಿ ನಮಗೆ ಭಕ್ಷಿಯನ್ನು ಒಪ್ಪಿಸಿ ಹೋಗಬೇಕು.

ದಿವಾ—ರಾಣಿಯವರೇ ! ನಾನು ಸುಲ್ತಾನರ ಸೇವಕ. ತಮ್ಮ ಆಜ್ಞಾಧಾರಕ. ತಾವು ಹೇಗೆ ಅಪ್ಪಣೆ ಮಾಡಿದರೆ ಹಾಗೆ ನಡೆಯುತ್ತೇನೆ.

ಅಷ್ಟರಲ್ಲಿ ಎದುರಿಗಿದ್ದ ಘರದೆಯು ಮೇಲಕ್ಕೆ ಎತ್ತಲ್ಪಟ್ಟಿತು ಇಬ್ಬರು ಆಜಾನು ಬಾಹುಗಳಾದ ಮಹಾಪುರುಷರು ಗಂಭೀರವಾಗಿ ಅಡಿಯಿಡುತ್ತಾ ಹಜಾರಕ್ಕೆ ಬಂದರು ಅವರನ್ನು ನೋಡಿ ದಿವಾನರವರು ತಮ್ಮ ಆಸನದಿಂದ ಜಗ್ಗನೆದ್ದರು ತಲೆಬಾಗಿ ಮುಜರ ಮಾಡಿದರು ದಿವಾನರವರಿಗೆ ಅಲ್ಲಿ ಆ ಸಮಯದಲ್ಲಿ ಇಯಜ್‌ಖಾನರ ದರ್ಶನವಾದದ್ದು ಅತ್ಯಂತ ಆಶ್ಚರ್ಯವನ್ನುಂಟುಮಾಡಿತು. ದಿವಾನರವರ ಮನಸ್ಸಿನಲ್ಲಿ "ಈ ವಿದ್ರೋಹದ ಮೂಲಪುರುಷರು ಇಯಜ್‌ಖಾನರವರೇನು ?" ಎಂದು ಅವರ ಎದೆಯು ಒಡೆದುಕೊಳ್ಳಲಾರಂಭಿಸಿತು ಶರೀರವು ಗಡಗಡನೆ ನಡುಗುತ್ತಿತ್ತು

ಇಯಜ್‌ಖಾನರು ನಗುತ್ತಾ "ದಿವಾನರವರೇ, ಆಸನದಲ್ಲಿ ಕುಳಿತುಕೊಳ್ಳೋಣವಾಗಲಿ. ತಮ್ಮನ್ನು ನೋಡಿದ್ದು ಬಲು ಸಂತೋಷ ! ತಾವು ಇಲ್ಲಿಗೆ ದಯಮಾಡಿಸಿದ ಕಾರ್ಯವಾವುದು !" ಎಂದರು

ದಿವಾನರವರು ಪುನಃ ಸಲಾಂ ಮಾಡಿ ಕುಳಿತುಕೊಂಡರು ಇಯಜ್‌ಖಾನರವರು ಆಸನದಲ್ಲಿ ಕುಳಿತರು. ದಿವಾನರವರ ಎಡಬಲ ಪಾರ್ಶ್ವಗಳಲ್ಲಿ ದೌಲತ್ ಮತ್ತು ರಾಧಾರಾಣಿಯವರು ಕುಳಿತಿದ್ದರು ಇಯಜ್‌ಖಾನರವರ ಜೊತೆಯಲ್ಲಿ ಬಂದ ಮನುಷ್ಯ ಅವನ ಬಲಗಡೆ ಕೈ ಕಟ್ಟಿಕೊಂಡು ನಿಂತಿದ್ದನು.

ದಿವಾ—ಹುಜೂರು, ಬಹಳ ದಿವಸಗಳ ಮೇಲೆ ತಮ್ಮ ದರ್ಶನಲಾಭವು ದೊರೆಯಿತು. ಈ ಕರ್ನಾಟಕದಲ್ಲಿ ಪ್ರಬಲವಾದ ವಿದ್ರೋಹ ಎದ್ದಿತು ಅದನ್ನು ಅಡಗಿಸಿ ವಿದ್ರೋಹಿಗಳನ್ನು ಶಿಕ್ಷಿಸಲು ಸುಲ್ತಾನರವರ ಆಜ್ಞೆಯಂತೆ ಇಲ್ಲಿಗೆ ಬಂದ ರಾಣಿಯವರ ಅನುಗ್ರಹದಿಂದ ತಮ್ಮ ದರ್ಶನವಾಯಿತು

ಇಯಜ್—ಈ ವಿದ್ರೋಹದ ಸುದ್ದಿಯನ್ನು ನಾವು ಕೇಳಿದ್ದೇವೆ ವಿದ್ರೋಹ ವೇಳಲು ಕಾರಣವೇನು ? ಮೂಲಕರ್ತರಾರು?

ದಿವಾ—ನವಾಬರವರೇ, ಭಕ್ಷಿ ಎಂಬ ಸಾಮಾನ್ಯ ಮನುಷ್ಯನೊಬ್ಬನು ಈ ವಿದ್ರೋಹದ ಮೂಲಪುರುಷನೆಂದು ಜನರಾಡಿಕೊಳ್ಳುತ್ತಾರೆ ವಿದ್ರೋಹದ ಕಾರಣವು ವೇದ್ಯವಾಗಿಲ್ಲ

ಇಯಜ್—ದಿವಾನರವರೇ, ತಾವು ಇಲ್ಲಿಗೆ ದಯಮಾಡಿಸಿ ಒಂದು ತಿಂಗಳಾಗಿದೆ ಇನ್ನೂ ವಿದ್ರೋಹದ ಕಾರಣವು ಗೊತ್ತಿಲ್ಲವೆಂದರೆ ಸೋಜಿಗದ ಮಾತು ವಿದ್ರೋಹೀ ಮೂಲಪುರುಷನು ಇನ್ನೂ ಸಿಕ್ಕಿಲ್ಲವೆಂದರೆ ಸರ್ಕಾರದವರೆಲ್ಲಾ ಅವನ ಕಡೆಗೆ ಇದ್ದಾರೆಂದು ಅರ್ಥವಾಗುವುದಿಲ್ಲವೇ ?

ದಿವಾ—ನವಾಬರವರೇ, ಫೌಜುದಾರ್ ಕುತುಬುದ್ದೀನರವರ ಅತ್ಯಾಚಾರ ಕ್ರೂರವರ್ತನೆಗಳೇ ಈ ವಿದ್ರೋಹದ ಮೂಲವೆಂದು ನನ್ನ ಮನಸ್ಸಿಗೆ ತಾರ್ಕಾಣೆಯಾ

ದೆ. ಭಕ್ಷಿಯು ಸಿಕ್ಕದಿರುವುದು ಸರ್ಕಾರದ ಅವ್ಯವಸ್ಥೆಯೇ ಕಾರಣವೆಂದು ನಾನು ಹೃತ್ತೇನೆ

ಇಯಜ್—ನಿನ್ನೆಯ ದಿನ ಬಂಧನದಲ್ಲಿದ್ದ ಫಕೀರನನ್ನು ಬಿಟ್ಟುಬಿಟ್ಟರಂತೆ. ವಿದ್ರೋಹಿಗಳನ್ನೆಲ್ಲಾ ಬಿಡುಗಡೆ ಮಾಡಿದರಂತೆ ಇದನ್ನೆಲ್ಲಾ ಸುಲ್ತಾನರವರು ಒಪ್ಪುವರೆ? ಇದು ಅವರ ದರ್ಪಕ್ಕೆ ಕೊರತೆಯಲ್ಲವೇ ?

ದಿವಾ—ಸುಲ್ತಾನರವರ ಕಡೆ ನೋಡಿದರೆ ನನ್ನ ಈ ಕಾರ್ಯ ಕಲಾಪಗಳೆಲ್ಲಾ ತಪ್ಪಾದುವೆಂದೇ ತೋರುತ್ತದೆ ಇಲ್ಲಿಯ ವಿದ್ಯಮಾನಗಳನ್ನು ಪರಿಶೀಲಿಸಿದರೆ ನನ್ನ ತೀರ್ಮಾನವೇ ಸರಿಯೆಂದು ತೋರುತ್ತದೆ ಇಂಥಾ ಸಂದಿಗ್ಧತೆಯಲ್ಲಿ ನಾನು ಸಿಕ್ಕಿದೇನೆ. ಈ ಪರಿಸ್ಥಿತಿಯಲ್ಲಿ ಸುಲ್ತಾನರವರೇ ದಯಮಾಡಿಸಿದ್ದರೆ ಬಲುಚೆನ್ನಾಗಿತ್ತು ನನಗೆ ಭಯವಾಗುತ್ತಿದೆ ಮಹಮ್ಮದಾಲಿಯವರ ಗತಿಯೇ ನನಗೆಲ್ಲಿ ಬರುತ್ತದೋ ಎಂದು ಮರಣಕ್ಕೆ ನಾನು ಅಂಜುವುದಿಲ್ಲ. ಮಾನದ ಭಯ

ಇಯಜ್ - ಜನಾಲ-ದ್ದೀನರವರೇ, ತಾವು ಮಾನ್ಯರಾದ ಸರದಾರರು ತಮಗೆ ಯಾವ ಭಯಕ್ಕೂ ಕಾರಣವಿಲ್ಲ ಈಗ ರಾಧಾರಾಣಿಯವರು ತಮಗೆ ಬೆಂಬಲವಾಗಿದ್ದಾರೆ ಇದಕ್ಕೆಲ್ಲಾ ರಾಣೀಸಾಹೇಬರವರೇ ಕಾರಣರೆಂದು ಕೇಳಿದ್ದೇನೆ. ಅವರು ಅಡಿಗಡಿಗೂ ವಿದ್ರೋಹಿಗಳ ಪರ ವಕಾಲತ್ತು ವಹಿಸುತ್ತಿದ್ದಾರೆಂದು ವಿದ್ರೋಹಿಗಳೆಲ್ಲಾ ಹೇಳುತ್ತಾರೆ ಅವರು ನಿಮ್ಮ ಸುಲ್ತಾನರನ್ನು ದಾರಿಗೆ ತರಬಲ್ಲರು.

ದಿವಾ—ಹುಜೂರು ! ನ್ಯಾಯ ಧರ್ಮಗಳೊಂದು ಕಡೆ, ರಾಧಾರಾಣಿಯವರ ಅಭಯಹಸ್ತವು ಮತ್ತೊಂದು ಕಡೆ ಈ ಮಧ್ಯೆ ನನಗೆ ಭಯವಿಲ್ಲವೆಂದು ನಂಬಿದ್ದೇನೆ.

ಇಯಜ್—ರಾಣಿಯವರೇ, ದಿವಾನರವರನ್ನು ಇಲ್ಲಿಗೆ ಕರೆತಂದ ಉದ್ದೇಶವೇನು ?

ರಾಧೆ—ನವಾಬರವರೇ, ದಿವಾನರವರಿಗೆ ತಮ್ಮ ಭೇಟಿ ಮಾಡಿಸಬೇಕೆಂದು ಕರೆತಂದಿದ್ದೇನೆ. ಇಲ್ಲಿ ಭಕ್ಷಿಯನ್ನು ಹಿಡಿದು ದಿವಾನರವರಿಗೆ ಒಪ್ಪಿಸುವುದಾಗಿ ಅವರಿಗೆ ವಾಗ್ದಾನವನ್ನಿತ್ತಿದ್ದೇನೆ

ಇಯಜ್—ದಿವಾನರವರೇ, ಆ ಭಕ್ಷಿಯನ್ನು ತಮ್ಮ ಸಮುಖಕ್ಕೆ ಕರೆಸಿದರೆ ತಾವೇನು ಮಾಡುತ್ತೀರಿ ?

ದಿವಾ—ನಾನು ಈ ವಿದ್ರೋಹದ ಮುಖಂಡರು ಅವರೇ ಎಂದು ನಂಬಿದ್ದೇನೆ ಅವರನ್ನು ಮುಖಾಮುಖಿಯಾಗಿ ವಿಚಾರಿಸುತ್ತೇನೆ

ಇಯಜ್—ಭಕ್ಷಿಯವರೇ ಸ್ವತಃ ವಿದ್ರೋಹದ ಮುಖಂಡರು ತಾವೇ ಎಂದು ಒಪ್ಪಿಕೊಂಡರೆ ?

ದಿವಾ—ಅವರನ್ನು ಸುಲ್ತಾನರ ಸಮ್ಮುಖಕ್ಕೆ ಕಳುಹಿಸಬೇಕಾಗುತ್ತದೆ.

ಇಯಜ್—ಅದು ನ್ಯಾಯವಾಗಿಯೇ ಇದೆ ಸುಲ್ತಾನರ ಸಮ್ಮುಖಕ್ಕೆ ಹೋಗಲು ಅವರು ಒಪ್ಪದಿದ್ದರೆ ?

ದಿವಾನ್—ಬಲಾತ್ಕಾರದಿಂದ ಕಳುಹಿಸಬೇಕಾಗುತ್ತೆ

ಇಯಜ್—ರಾಧಾರಾಣಿಯವರು ಭಕ್ಷಿಯನ್ನು ನಿಮಗೆ ಭೇಟಿ ಮಾಡಿಸ ಬಹುದು ಆದರೆ ಸುಲ್ತಾನರ ಸಮ್ಮುಖಕ್ಕೆ ಅವರನ್ನು ಕರೆದುಕೊಂಡು ಹೋಗಲು ಬಲಾತ್ಕರಿಸಲು ರಾಣಿಯವರು ಒಪ್ಪುವರೆ ?

ದಿವಾನ್—ನವಾಬರವರೇ ! ಭಕ್ಷಿಯನ್ನು ರಾಣಿಯವರು ಹಿಡಿದು ಕೊಟ್ಟು, ರಾಣಿಯವರೇ ಸುಲ್ತಾನರಲ್ಲಿ ಶಿಫಾರಸು ಮಾಡಿದರೆ, ಸುಲ್ತಾನರು ಭಕ್ಷಿಯವರನ್ನು ಕ್ಷಮಿಸುತ್ತಾರೆ.

ಇಯಜ್—(ನಕ್ಕು) ದಿವಾನರವರೇ ! ನಗರದ ಪ್ರಕರಣದಲ್ಲಿ ಖಾಸಿಂಖಾನರ ದೇನು ತಪ್ಪು ! ಅವರಿಗಾದ ಗತಿಯನ್ನು ತಪ್ಪಿಸುವುದು ಯಾರಿಂದ ಸಾಧ್ಯವಾಯಿತು? ಈಗ ಇಷ್ಟೊಂದು ಮಹಾ ವಿದ್ರೋಹವನ್ನು ಎಬ್ಬಿಸಿರುವ ಭಕ್ಷಿಯವರು ನಿಮ್ಮ ಸುಲ್ತಾನರ ಸಮ್ಮುಖಕ್ಕೆ ಹೋದರೆ, ಅವರು ಕ್ಷಮಿಸುವರೆಂಬ ಭರವಸೆಯು ತಾನೆ ಎಲ್ಲಿದೆ ? ಭಕ್ಷಿಯು ಕ್ಷಮೆಯನ್ನು ನಿರಾಕರಿಸುವ ಪುರುಷನಾದರೆ ?

ರಾಧೆ—ಖಾನರವರೇ ! ತಮ್ಮ ಸಮ್ಮುಖದಲ್ಲಿ ನಾನು ಈ ನ್ಯಾಯವನ್ನು ಹೂಡುವುದಕ್ಕಾಗಿಯೇ ದಿವಾನರನ್ನು ಇಲ್ಲಿಗೆ ಕರೆತಂದೆ ದಿವಾನರವರೇ ! ಮಾಫ್ ಮಾಡಬೇಕು ! ತಾವು ಹತ್ತು ಸಹಸ್ರ ದಂಡಿನೊಡನೆ ಇಲ್ಲಿಗೆ ಬಂದು ಒಂದು ತಿಂಗಳಾಯಿತು ಇನ್ನೂ ಭಕ್ಷಿಯನ್ನು ಹಿಡಿಯಲಾಗಲಿಲ್ಲ. ನಾನು ನನ್ನ ಚಾತುರ್ಯದಿಂದ ಭಕ್ಷಿಯನ್ನು ಹಿಡಿದುಕೊಟ್ಟರೆ, ಅವನು ನನ್ನ ಬಂದಿ ಅವನನ್ನು ನಾನು ತಮಗೆ ಒಪ್ಪಿಸದಿದ್ದರೆ ಅವನು ತಮ್ಮ ಬಂದಿಯಾಗುವುದು ಹೇಗೆ ? ನನ್ನ ಖೈದಿಯನ್ನು ನಾನು ಒಪ್ಪಿಸದಿದ್ದರೆ, ತಾವು ನನ್ನನ್ನೂ, ಭಕ್ಷಿಯನ್ನೂ ಒಟ್ಟಿಗೆ ಬಲಾತ್ಕರಿಸಿ ಶಿಕ್ಷಿಸಬೇಕು

ದಿವಾನ್—ತಾಯಿ ! ಎಂಥಾ ಮಾತುಗಳನ್ನು ಆಡೋಣವಾಗುತ್ತದೆ ? ತಮ್ಮನ್ನು ಬಲಾತ್ಕರಿಸುವಷ್ಟು ನೀಚನೇ ನಾನು ?

ರಾಧೆ—(ನಗುತ್ತಾ) ಇಲ್ಲ ! ದಿವಾನರವರೇ ಇಲ್ಲ ! ಭಕ್ಷಿಯನ್ನು ನಾನು ಹಿಡಿದಿದ್ದೇನೆ. ಈಗ ಅವನು ನನ್ನ ಖೈದಿ ಅವನ ಮೇಲೆ ತಮಗೆ ಅಧಿಕಾರವಿಲ್ಲವೆಂದು ಹೇಳುತ್ತೇನೆ. ಅದಕ್ಕೆ ಸಾಕ್ಷಿಯು ನವಾಬರವರು

ಇಯಜ್—ದಿವಾನರವರೇ ! ಭಕ್ಷಿಯು ನಿಜವಾಗಿ ವಿದ್ರೋಹಿಯಾಗಿದ್ದರೆ, ಅವನನ್ನು ರಾಧಾರಾಣಿಯವರಿಗೊಪ್ಪಿಸುವುದು ಎಲ್ಲೀಗೂ ಕ್ಷೇಮ ವಿದ್ರೋಹಕ್ಕೆ ಸ್ವಯಂ ರಾಧಾರಾಣಿಯವರೇ ಜವಾಬ್ದಾರರಾಗುತ್ತಾರೆ.

ದಿವಾನ್—ನವಾಬರವರೇ ! ನಾನು ನಗರದ ದಿವಾನನಾದರೂ, ರಾಧಾರಾಣಿವರ ಆಜ್ಞಾಧಾರಕ.

ರಾಧೆ—(ಮೌನವಾಗಿ ನಿಂತಿದ್ದ ವ್ಯಕ್ತಿಯ ಕಡೆ ರಾಧಾರಾಣಿಯು ತಿರುಗಿ) ಭಕ್ಷಿಯವರೇ ! ನೀವು ಈಗ ನನ್ನ ಬಂದಿಗಳು ! ನಾನು ಹೇಳಿದಂತೆ ನಡೆಯಬೇಕು. ಇತ್ತ ಬನ್ನಿರಿ ದಿವಾನರವರಿಗೆ ಮುಜರೆ ಮಾಡಿರಿ !

ದಿವಾನರು ಅಪ್ರತಿಭರಾಗಿ ರೆಪ್ಪೆ ಹೊಡೆಯದೇ ಭಕ್ಷಿಯ ಮುಖವನ್ನು ನೋಡಲಾರಂಭಿಸಿದರು ಭಕ್ಷಿಯು ಮುಂದೆ ಬಂದು ದಿವಾನರವರಿಗೆ ಸಲಾಂ ಮಾಡಿ ನಿಂತನು "ದಿವಾನರವರೇ ! ನಾನೇ ಭಕ್ಷಿ! ರಾಧಾರಾಣಿಯವರು ನನ್ನನ್ನು ಹಿಡಿಯಲಿಲ್ಲ ನಾನೇ ಬಂದು ರಾಣಿಯವರುಗಳ ದರ್ಶನ ಮಾಡಿದೆ. ಆದರೆ ನಾನು ಅವರ ಬಂದಿಯೆಂಬುದು ನಿಜ "

ದಿವಾನ್—ಭಕ್ಷಿಯವರೇ ! ತಾವು ಮಹಾಪುರುಷರಂತೆ ಕಾಣುತ್ತೀರಿ. ತಾವು ಕುಳಿತುಕೊಳ್ಳಿರಿ ದಿವಾನರು ಭಕ್ಷಿಯನ್ನು ತಮ್ಮ ಪಕ್ಕದಲ್ಲಿ ಕುಳ್ಳಿರಿಸಿಕೊಂಡರು

ಭಕ್ಷಿ—ದಿವಾನರವರೇ, ತಾವು ನನ್ನನ್ನು ವಿಚಾರಣ ಮಾಡಬಹುದು.

ದಿವಾನ್—ನವಾಬರವರ ಸಮ್ಮುಖದಲ್ಲಿ ರಾಧಾರಾಣಿಯವರ ರಕ್ಷಣೆಯಲ್ಲಿರುವ ತಮ್ಮನ್ನು ವಿಚಾರಣೆ ನಡೆಸಲು ನನಗೆ ಅಧಿಕಾರವಿಲ್ಲ ಆದರೂ ಕೆಲವಂಶಗಳನ್ನು ಕೇಳಬೇಕೆಂದು ಕುತೂಹಲವಿದೆ

ಭಕ್ಷಿ—ಕೇಳಬಹುದು

ದಿವಾನ್—ತಾವು ವಿದ್ರೋಹಿಗಳೆಂಬುದು ನಿಜವೋ ?

ಭಕ್ಷಿ—ನಿಜ ನಾನು ವಿದ್ರೋಹಿ ! ನಾನು ವಿದ್ರೋಹವನ್ನೆಬ್ಬಿಸಿದೆನು. ಇಂದಿಗೂ ಈ ವಿದ್ರೋಹಿಗಳ ಮುಖಂಡನು ನಾನೇ.

ದಿವಾನ್—ತಾವೇಕೆ ವಿದ್ರೋಹವನ್ನೆಬ್ಬಿಸಿದಿರಿ ?

ಭಕ್ಷಿ—ಸುಲ್ತಾನರ ಮೇಲಿನ ಕ್ರೋಧದಿಂದ ಅವರ ಮೇಲೆ ಒಂದು ಕೈ ತೋರಿಸಬೇಕೆಂಬ ಆಶೆಯಿಂದ ದಿವಾನರವರೇ, ಕೇಳಿರಿ ! ತಾವು ವಯಸ್ಸಿನಲ್ಲಿ ದೊಡ್ಡವರು. ಸುಲ್ತಾನರವರ ರಾಜ್ಯದಲ್ಲಿ ಗಣ್ಯರಾದ ದಿವಾನರವರು ತಮ್ಮ ಎದುರಿನಲ್ಲಿ ನನ್ನ ಸ್ಪಷ್ಟೋಕ್ತಿಯನ್ನು ಕ್ಷಮಿಸಿರಿ. ತಮ್ಮೊಡನೆ ಹತ್ತು ಸಹಸ್ರ ಸೈನ್ಯವಿದೆ ತಾವು ಯುದ್ಧದಲ್ಲಿ ಪರಾಕ್ರಮಶಾಲಿಗಳು. ವಿದ್ರೋಹಿಗಳಲ್ಲಿ ಆಯುಧಗಳಿಲ್ಲ ಆದರೂ ವಿದ್ರೋಹವು ನಿಲ್ಲುತ್ತಿರಲಿಲ್ಲ. ನಾನು ತಮಗೆ ಸಿಕ್ಕುತ್ತಿರಲಿಲ್ಲ. ಸ್ವಯಂ ಸುಲ್ತಾನರವರೇ ಇಲ್ಲಿಗೆ ಬಂದಿದ್ದರೆ ಯುದ್ಧಕ್ಷೇತ್ರದಲ್ಲಿ ನಾನು ಅವರ ಮುಂದೆ ಬಂದು ನಿಲ್ಲುತ್ತಿದ್ದೆ. ಆಗ ಅವರಿಗೇ ಜಯವಾಗಿದ್ದರ ನನಗೆ ಅಜರಾಮರವಾದ ಕೀರ್ತಿ ! ಅವರು ಸೋತು ಓಡಿ

ಹೋಗಿದ್ದರೆ ನನ್ನ ಸೇಡು ತೀರುತ್ತಿತ್ತು ಅಂಥಾ ಅದೃಷ್ಟವು ನನ್ನ ಹಣೆಯಲ್ಲಿ ಬರೆದಿಲ್ಲ ನವಾಬರವರು ಇಲ್ಲಿಗೆ ಬಂದು ಈ ವಿದ್ರೋಹವನ್ನು ನುಂಗಿಬಿಟ್ಟರು ಈಗ ನಾನು ರಾಧಾರಾಣಿಯವರ "ಬಂದಿ" ಎಂಬುದು ನಿಜ ತಾವು ಮಂಗಳೂರಿಗೆ ಬಂದು ವಿಜಯವನ್ನು ಹೊಂದಿದ ಹಾಗಾಯಿತು ವಿದ್ರೋಹವು ಮುಳುಗಿಹೋಯಿತು.

ದಿವಾ್ನ—ಭಕ್ಷಿಯವರೇ, ತಾವು ವೀರಪುರುಷರೆಂಬುದನ್ನು ನಾನು ಒಪ್ಪುತ್ತೇನೆ ನವಾಬ್ ಇಯಜ್‌ಖಾನರವರ ಅನುಗ್ರಹವು ನನ್ನ ಮೇಲೆ ಅಪಾರವಾಗಿದೆ ಹಿಂದ ನಗರದ ಯುದ್ಧದಲ್ಲಿ ನಾನು ಬಂದಿಯಾದೆ. ನನ್ನನ್ನು ಬಿಟ್ಟುಕೊಟ್ಟು—ಮರ್ಯಾದೆಗೆ ಪಾತ್ರನನ್ನಾಗಿ ಮಾಡಿಸಿದರು ಇಂದು ನನಗೂ ತಮಗೂ ರಣಭೂಮಿಯಲ್ಲಿ ಯುದ್ಧವು ಸಂಭವಿಸಿದ್ದರೆ ನಾನೆಷ್ಟೋ ಸಂತೋಷಪಡುತ್ತಿದ್ದೆ ಆದರೆ ಸುಲ್ತಾನರ ರಾಜ್ಯದಲ್ಲಿ ವಿದ್ರೋಹವೇಳುವುದು, ಅದನ್ನು ಯುದ್ಧದಿಂದ ಅಣಗಿಸುವುದು ಇದೆಲ್ಲ ಮೈಸೂರು ರಾಜ್ಯಕ್ಕೆ ಕ್ಷೇಮವಲ್ಲ ಆದ್ದರಿಂದ ನವಾಬರವರು ಸ್ವತಃ ದಯಮಾಡಿಸಿ ಈ ವಿದ್ರೋಹವನ್ನು ಅಣಗಿಸಿದರು ಅಂದು ನಗರದ ರಣಕ್ಷೇತ್ರದಲ್ಲಿ ನಾನು ಅವರ ಬಂದಿಯಾದೆ. ಇಂದು ಈ ಮಂಗಳೂರಿನ ವಿದ್ರೋಹದಲ್ಲಿ ತಾವು ಅವರ ಬಂದಿಗಳಾಗಿದ್ದೀರಿ!

ಭಕ್ಷಿ—ಹೌದು. ದಿವಾನರವರೇ, ನಾನು ಆಮರಣಾಂತ ನವಾಬರ ಬಂದಿ ಅವರ ಆಜ್ಞೆಯಂತೆ ಇಂದೇ ಈ ರಾಜ್ಯವನ್ನು ಬಿಡುತ್ತೇನೆ ವಿದ್ರೋಹಿಗಳೊಬ್ಬರೂ ಈ ರಾಜ್ಯದಲ್ಲಿರುವುದಿಲ್ಲ.

ರಾಧೆ—(ನಗುತ್ತಾ) ಭಕ್ಷಿಯವರೇ, ನೀವೂ ನಿಮ್ಮ ಸ್ನೇಹಿತರಾದ ವಿದ್ರೋಹಿಗಳೂ ಎಲ್ಲಿಗೆ ಹೋಗುತ್ತೀರಿ?

ಭಕ್ಷಿ—ಮಹಾರಾಣಿಯವರೇ, ನಾವು ಹತ್ತುಸಹಸ್ರ ಜನರಿದ್ದೇವೆ. ಪರರಾಜ್ಯದಲ್ಲಿ ಮಹಾಸೈನ್ಯವನ್ನು ಕಟ್ಟುತ್ತೇನೆ.

ದೌಲತ್—ಸೇನಾನಾಯಕರೇ, ಆ ಸೈನ್ಯವನ್ನು ಕಟ್ಟಿ ನೀವೇನು ಮಾಡುತ್ತೀರಿ?

ಭಕ್ಷಿ—ಮಾತೆಯವರೇ, ರಣರಂಗದಲ್ಲಿ ಸುಲ್ತಾನರೊಡನೆ ಪ್ರತ್ಯಕ್ಷ ಯುದ್ಧ ಮಾಡುತ್ತೇನೆ

ದೌಲತ್—(ನಗುತ್ತಾ) ಭಕ್ಷಿ ನೀನು ಮೈಸೂರಿನ ಮೇಲೆ ಯುದ್ಧಮಾಡುವೆಯಾ? ಅಸಂಭವ! ಅಂದು ನವಾಬರು ನಗರದ ರಾಜ್ಯವನ್ನು ಪರಿತ್ಯಾಗ ಮಾಡಿದುದೇಕೆ? ಮೈಸೂರಿನ ಮೇಲೆ ಯುದ್ಧ ಮಾಡಬಾರದೆಂದಲ್ಲವೆ? ಅಂದಿನ ರಾತ್ರಿ ನವಾಬರಿಗೂ ಸುಲ್ತಾನರಿಗೂ ಯುದ್ಧವಾದಾಗ ಇಯಜ್‌ಖಾನರು ಹಿಂದೆಗೆದುದೇಕೆ?

ಮೈಸೂರಿನ ಮೇಲೆ ಯುದ್ಧ ಮಾಡಬಾರದೆಂದಲ್ಲವೆ? ಇಂದು ಈ ಕರ್ನಾಟಕದಲ್ಲಿ ಕಾಡುಕಿಚ್ಚಿನಂತೆ ಹರಡಿದ ವಿದ್ರೋಹವನ್ನು ಅಣಗಿಸಿದುದೇಕೆ? ಮೈಸೂರಿನ ಮೇಲೆ ಹಲ್ಲಾ ಮಾಡಬಾರದೆಂದಲ್ಲವೆ? ಮುಂದೆ ಈ ಹತ್ತು ಸಹಸ್ರ ದಂಡನ್ನು ಕಟ್ಟಿ ನೀನೇನು ಮಾಡಬಲ್ಲೆ?

ಭಕ್ಷಿ—ದೇವಿಯರೇ! ನಾನು ಸುಲ್ತಾನರ ಮೇಲೆ ಯುದ್ಧ ಮಾಡುತ್ತೇನೆ ಇಲ್ಲದಿದ್ದರೆ ನನ್ನ ಮನಶ್ಶಾಂತಿಯಾಗದು

ದೌಲತ್—ಭಕ್ಷಿ! ನೀನು ಇಂಗ್ಲೀಷರ ಕಡೆ, ಮರಾಟರ ಕಡೆ ಸೇರುವೆಯಾ? ಹಾಗಿದ್ದರೆ ಹೋಗು ನಿನಗೆ ಜೀವದಾನ ಮಾಡುವೆನು

ಭಕ್ಷಿ—ತಾಯೆ! ನಾನು ಇಂಗ್ಲೀಷರ ಕಡೆ, ಮರಾಟರ ಕಡೆ ಸೇರುವೆನೇ? ತಮಗೆ ಅಂಥಾ ಸಂದೇಹವಿದ್ದರೆ ಇಂದೇ ನನ್ನನ್ನು ಸಂಹಾರ ಮಾಡಿಬಿಡಿ

ದೌಲತ್—(ನಗುತ್ತಾ) ಭಕ್ಷಿ! ನೀನು ಶತ್ರುಗಳ ಕಡೆ ಸೇರುವುದಿಲ್ಲ ನೀನು ಮಹಾಸೇನಾನಿಯಾಗಿ ಸುಲ್ತಾನರ ಕಡೆ ಯುದ್ಧ ಮಾಡಬೇಕು

ಭಕ್ಷಿಯು ತಲೆಯಲ್ಲಾಡಿಸಿದನು

ದೌಲತ್— ಹಾಗಾದರೆ ಫಕೀರನಾಗಿ ಮಕ್ಕಾ ಯಾತ್ರೆಗೆ ಹೋಗಬೇಕು.

ಭಕ್ಷಿಯು ಮೌನವಾಗಿದ್ದನು

ದಿವಾನ್—ಭಕ್ಷಿಯವರೇ! ಮತ್ತೊಂದು ಮಾತು ಫೌಜುದಾರನು ಮುಚ್ಚಿಟ್ಟಿರುವ ನಿಧಿ ಎಲ್ಲಿದೆ ಯೆಂಬುದನ್ನು ನೀವು ಬಲ್ಲಿರಾ?

ಭಕ್ಷಿ—ಹೌದು! ಆ ಗುಪ್ತನಿಧಿಯಿರುವ ಸ್ಥಳವನ್ನು ನಾನು ಬಲ್ಲೆ

ದಿವಾನ್ - ಅದು ನಮ್ಮ ಧನ! ತಾವು ಅದನ್ನು ನಮಗೆ ಒಪ್ಪಿಸಬೇಕು.

ಭಕ್ಷಿ— ದಿವಾನರೇ! ಅದು ತಮ್ಮ ಧನವೂ ಅಲ್ಲ! ನನ್ನ ಧನವೂ ಅಲ್ಲ! ಅದು ಈ ಮಂಗಳೂರಿನ ಜನರದು ಅದು ತಮ್ಮ ರಾಜ್ಯದಲ್ಲಿಲ್ಲ! ಅದು ಪರರ ರಾಜ್ಯದಲ್ಲಿದೆ. ಪರರಾಜ್ಯಕ್ಕೆ ಸೇರಿಹೋಗಿದೆ

ಇಯಜ್—ದಿವಾನರವರೇ! ಈ ಭಕ್ಷಿಯನ್ನು ನನಗೆ ಒಪ್ಪಿಸಿರಿ! ಸುಲ್ತಾನರ ರಾಜ್ಯಕ್ಕೆ ಇವರಿಂದ ಆತಂಕವಿಲ್ಲದಂತೆ ನಾನು ನೋಡಿಕೊಳ್ಳುವೆನು ಅಲ್ಲಿಗೆ ವಿದ್ರೋಹವು ಅಸ್ತವಾದಂತಾಯಿತು ತಾವು ತಮ್ಮ ಸುಲ್ತಾನರಿಗ ಹೇಳಿರಿ ಮಂಗಳೂರಿನ ವಿದ್ರೋಹಿ ಮುಖಂಡನಾದ ಭಕ್ಷಿಯನ್ನು ನನಗೆ ಒಪ್ಪಿಸಿರುವುದಾಗಿ ತಿಳಿಸಿರಿ ಮಹಾಸೇನಾನಾಯಕನಾದ ಈ ಭಕ್ಷಿಯನ್ನು ಕಾಲಾನುಕಾಲಕ್ಕೆ ಮೈಸೂರಿಗೆ ತಂದು ಒಪ್ಪಿಸುವುದಾಗಿ ಹೇಳಿರಿ

ದಿವಾನರವರೆದ್ದು ಭಕ್ಷಿಯನ್ನು ಆಲಿಂಗಿಸಿದರು. ನವಾಬರಿಗೆ ನೆಲಮುಟ್ಟಿ ಸಲಾಂ ಮಾಡಿದರು. ಅವರ ಅಪ್ಪಣೆಯನ್ನು ಪಡೆದು ಹಡಗನ್ನು ಇಳಿದು ದೋಣಿಯನ್ನು ಹತ್ತಿ

ತಮ್ಮ ಬಿಡಾರಕ್ಕೆ ಹಿಂದಿರುಗಿದರು. ಇಯಜ್ ಖಾನರು ದೌಲತ್ತಳನ್ನು ಸಂತೈಸಿ ತಾನು ಮಲಬಾರಿಗೆ ಹಿಂದಿರುಗಲು ದೌಲತ್ ಮತ್ತು ರಾಧಾರಾಣಿಯವರ ಅನುಮತಿಯನ್ನು ಪಡೆದನು. ಹುಸೇನ್ ಖಾನನು ಅವರಿಬ್ಬರನ್ನೂ ಜೊತೆಯಲ್ಲಿ ಕರೆತಂದು ಅವರ ಬಿಡಾರ ವನ್ನು ತಲುಪಿಸಿದನು ದೌಲತ್ ರಾಣಿಯವರಿಗೆ ವಂದಿಸಿ ಅವರ ಅಪ್ಪಣೆ ಪಡೆದು ಪುನಃ ಅಲ್ಲೀಸೇಟರ ಹಡಗಿಗೆ ಬಂದು ಸೇರಿದನು ಬೆಳಕು ಹರಿಯುವುದಕ್ಕೆ ಇನ್ನು ಒಂದೇ ಝಾವ ಉಳಿದಿತ್ತು ಹಡಗು ದಕ್ಷಿಣಾಭಿಮುಖವಾಗಿ ಹೊರಟಿತು "ಭಕ್ಷಿ" ಎಂಬ ಹೆಸರು ಇಲ್ಲಿಗೆ ಅಳಿಸಿಹೋಯಿತು. ಮುಂದಿನ ಯುದ್ಧಗಳಲ್ಲಿ ಸುಪ್ರಸಿದ್ಧವಾದ ಹುಸೇನ್ ಅಲ್ಲಿಖಾನ್ ಎಂಬ ಸೇನಾನಾಯಕನೇ ಈ ಭಕ್ಷಿ ಈ ಮಹಾವೀರನ ವೀರಚರಿತ್ರೆಯು ಮಲಬಾರಿನಲ್ಲಿ ಇಂದಿಗೂ ಕೇಳಿಬರುತ್ತದೆ

## ಬೀಬೀರಾಣಿಯ ಸನ್ನಿಧಾನದಲ್ಲಿ

ಅಲ್ಲೀಸೇಟನು ಮಂಗಳೂರಿನಿಂದ ಕೋಬೇಬಂದರಿಗೆ ಬಂದು ಸೇರಿದನು ಈ ಪ್ರಯಾಣಕ್ಕೆ ಹತ್ತು ದಿನಗಳಾಯಿತು ಹುಸೇನ್ ಖಾನನನ್ನು ಜೊತೆಯಲ್ಲಿ ಕರೆತಂದಿದ್ದಾನೆ. ಸಮುದ್ರ ತೀರದಲ್ಲಿರುವ ಸೇಟರ ಆವಾಸದಲ್ಲಿಯೇ ಹುಸೇನ್ ಖಾನನೂ ಇದ್ದಾನೆ

ಅವನ ಮನಸ್ಸಿಗೆ ನೆಮ್ಮದಿಯಿಲ್ಲ ಹುಚ್ಚನಂತೆ ಆಗಿದ್ದಾನೆ ಮನಸ್ಸಿನಲ್ಲಿ ಮಹತ್ತರವಾದ ಉದ್ವೇಗ ತನ್ನ ವಿದ್ರೋಹವು ವಿಫಲವಾಯಿತಲ್ಲಾ ಎಂಬ ಪ್ರಬಲವಾದ ಚಿಂತೆ ಹುಸೇನ್ ಖಾನನ ಮನಸ್ಸಿನ ತಳಮಳವನ್ನು ವರ್ಣಿಸುವುದು ಅಸಾಧ್ಯ ಟಿಪ್ಪೂ ಸುಲ್ತಾನನು ಅವನ ಪರಮ ವಿದ್ವೇಷಿ ಆ ದ್ವೇಷವನ್ನು ತೀರಿಸಿಕೊಳ್ಳುವುದು ಹೇಗೆ? ಹುಸೇನ್ ಖಾನನಿಗೆ ಸೇಟರಲ್ಲಿ ಪರಮ ಭಕ್ತಿ ಈ ವೀರಾಗ್ರಣಿಯಾದ ತರುಣನನ್ನು ಹೇಗಾದರೂ ಸಮಾಧಾನ ಪಡಿಸಬೇಕೆಂದು ಸೇಟನು ಸಂಕಲ್ಪಿಸಿದನು ಒಂದು ದಿನ ಸಮುದ್ರತೀರದಲ್ಲಿ ಸೇಟನು ಸಂಚಾರ ಹೊರಟನು ಹುಸೇನ್ ಖಾನನನ್ನು ಜೊತೆಯಲ್ಲಿ ಕರೆದುಕೊಂಡು ಹೋದನು ಅವರಿಬ್ಬರಿಗೂ ಮಾತಿಗೆ ಮೊದಲಾಯಿತು

ಸೇಟ್—ಹುಸೇನ್ ಖಾನ್! ನೀನು ಏನು ಮಾಡಬೇಕೆಂದಿದ್ದಿ?

ಹುಸೇನ್—ನವಾಬರೇ! ನನ್ನ ಮನಸ್ಸು ಸರ್ವದಾ ಕಾದ ಕಬ್ಬಿಣದಂತಿದೆ ನನಗೆ ಏನೂ ತೋರುವುದಿಲ್ಲ ಎಷ್ಟೋ ಬಾರಿ ಪ್ರಾಣವನ್ನು ಕಳೆದುಕೊಳ್ಳಬೇಕೆಂದು ತೋರುತ್ತದೆ

ಸೇಟ್—ಅದು ವೀರಪುರುಷರ ಲಕ್ಷಣವಲ್ಲ!

ಹುಸೇನ್—ನಾನೇನು ಮಾಡಬೇಕೆಂದು ಹುಜೂರಿನ ಅಪ್ಪಣೆಯಾಗುತ್ತದೆ?

ಸೇಟ್—ನೀನು ಸೇನಾನಾಯಕನಾಗಬೇಕೆಂದು ನನ್ನ ಇಚ್ಛೆ!

ಹುಸೇ೯—ಖಾವಿಂದ್ ! ಯಾವ ಸೇನೆ ? ಯಾರಮೇಲೆ ಯುದ್ಧ ಮಾಡಬೇಕು?

ಸೇಟ್—ವೀರಪುರುಷರು ತಮ್ಮ ರಾಜ್ಯಕ್ಕಾಗಿ ಯುದ್ಧ ಮಾಡಬೇಕು

ಹುಸೇ೯—ನವಾಬರವರೇ ! ನಮಗೆ ರಾಜ್ಯವೆಲ್ಲಿದೆ ? ಯಾರಿಗಾಗಿ ಯುದ್ಧ ಮಾಡಬೇಕು ?

ಸೇಟ್—ಹುಸೇ೯ಖಾ೯, ದಕ್ಷಿಣದೇಶದಲ್ಲಿ ಸುಲ್ತಾನರ ರಾಜ್ಯ, ಮರಾಟರ ರಾಜ್ಯ ಎರಡೇ ರಾಜ್ಯಗಳಿರತಕ್ಕದ್ದು ಇಂಗ್ಲೀಷರು ರಾಜ್ಯವನ್ನು ಕಟ್ಟುತ್ತಿದ್ದಾರೆ ಕೊನೆಯಲ್ಲಿ ಈ ಮೂರರಲ್ಲಿ ಯಾವುದೋ ಒಂದು ರಾಜ್ಯವು ಸ್ಥಿರವಾಗಬೇಕು ನಾವುಗಳು ಸುಲ್ತಾನೀ ರಾಜ್ಯವನ್ನು ಸ್ಥಾಪಿಸುವುದಕ್ಕಾಗಿಯೇ ಹೋರಾಡಬೇಕು ನಮಗೆ ಪ್ರತ್ಯೇಕ ರಾಜ್ಯ ವೆಲ್ಲಿತ್ತು. ನಗರದ ರಾಜ್ಯವೂ ಸುಲ್ತಾನರವರದೇ !

ಹುಸೇ೯—ನವಾಬರವರೇ ! ತಾವು ಹೇಳುವುದು ವಿಚಿತ್ರವಾಗಿದೆ ನನ್ನ ಮನಸ್ಸಿನಲ್ಲಿ ಸುಲ್ತಾನರ ಮೇಲಿನ ದ್ವೇಷವು ಉರಿಯುತ್ತಿದೆ ತಾವು ಪ್ರಮಾಣವಾಗಿ ಹೇಳಿರಿ ! ತಮಗೆ ಸುಲ್ತಾನರ ಮೇಲೆ ದ್ವೇಷವಿಲ್ಲವೆ ?

ಸೇಟ್—(ನಗುತ್ತಾ) ಇಲ್ಲ, ಹುಸೇ೯ಖಾ೯ ! ನಿಜವಾಗಿ ನನಗೆ ಸುಲ್ತಾನರ ಮೇಲೆ ದ್ವೇಷವಿಲ್ಲ ಇದನ್ನು ನಂಬು ದೊಡ್ಡ ನವಾಬರು ನನ್ನನ್ನು ಸಾಕಿ ಸಲಹಿದ ತಂದೆ ! ಸುಲ್ತಾನೀ ರಾಜ್ಯವನ್ನು ಕಟ್ಟಿದವರು ಅವರು ಅವರ ಸಾಕ್ಷಾತ್ ಪುತ್ರರು ಸುಲ್ತಾನರು ಅವರ ಮೇಲೆ ನಾನು ದ್ವೇಷ ಮಾಡುವುದೆಂತು ?

ಹುಸೇ೯—(ಕ್ರೋಧ ದುಃಖಗಳಿಂದ) ನವಾಬರವರೇ ! ಹಾಗಾದರೆ ತಾವು ಶ್ರೀರಂಗಪಟ್ಟಣಕ್ಕೆ ಹೋಗಿ ನವಾಬಗಿರಿಗೆ ಅಂಕಿತರಾಗಿ ರಾಜ್ಯಭಾರವನ್ನೇ ನಡೆಸಬಹುದಲ್ಲ

ಸೇಟ್—ಹೌದು ಹಾಗೆಯೇ ಮಾಡುತ್ತಿದ್ದೆ ಸುಲ್ತಾನರು ಬಹಳ ಮುಂಗೋಪಿಗಳು, ದುಡುಕುಸ್ವಭಾವದವರು ಯಾರ ಯಿತೋಕ್ತಿಗಳಿಗೂ ಕಿವಿಗೊಡರು. ಆದ್ದರಿಂದ ಅವರ ಸಮೀಪದಲ್ಲಿರುವುದು ಸಾರ್ಥಕವಿಲ್ಲ ದೂರದಿಂದ ಸುಲ್ತಾನೀರಾಜ್ಯಸ್ಥಾಪನೆಗೆ ನೆರವಾಗಬೇಕೆಂದು ಸ್ಥಿರಸಂಕಲ್ಪ ಮಾಡಿದ್ದೇನೆ

ಹುಸೇ೯—ತಾವು ಮಹಾಪುರುಷರು ನನ್ನ ಮಾತು ಹಾಗಲ್ಲ ನನಗೆ ಸುಲ್ತಾನರ ಮೇಲೆ ಯುದ್ಧ ಮಾಡಬೇಕೆಂದೇ ಹಟವಿದೆ

ಸೇಟ್—ಆ ಹಠಸಾಧನೆಗಿರುವುದು ಒಂದೇ ಮಾರ್ಗ ನೀನು ಇಂಗ್ಲೀಷರೊಡನೆ ಹೋಗಿ ಸೇರಬೇಕು. ಅಥವಾ ಮರಾಟರೊಡನೆ ಸೇರಿಕೊಳ್ಳಬೇಕು.

ಹುಸೇ೯—ಅವೆರಡೂ ನನ್ನ ಮನಸ್ಸಿಗೆ ಒಪ್ಪುವುದಿಲ್ಲ ನಾನು ತಮ್ಮ ಆಜ್ಞಾಧಾರಕ. ತಮ್ಮ ಸೇನೆಯಲ್ಲಿ ಈ ನನ್ನ ಜೀವವನ್ನು ಒಪ್ಪಿಸುತ್ತೇನೆ

ಇವರಿಬ್ಬರೂ ಮಾತನಾಡಿಕೊಂಡು ಮನೆಗೆ ಬರುವ ಹೊತ್ತಿಗೆ ಬೀಬೀರಾಣಿಯವರು ಸೇಟರನ್ನು ನೋಡಲು ಬಂದಿದ್ದರು ಅವರಿಗೆ ಸೇಟರು ಎಲ್ಲಿಗೆ ಹೋಗಿದ್ದರೆಂಬುದು ತಿಳಿದಿರಲಿಲ್ಲ ಸೇಟರು ಹಿಂದಿರುಗಿದರೆಂಬ ಸಮಾಚಾರವು ತಿಳಿಯುತ್ತಲೇ ರಾಣಿಯವರು ಕೋಟೆಗೆ ಬಂದರು ಸೇಟರ ಬೈರಕ್‌ಖಾನೆಯಲ್ಲಿ ರಾಣಿಯವರು ಕುಳಿತಿದ್ದರು. ಸೇಟರು ಹುಸೇನ್‌ಖಾನನ ಜೊತೆಯಲ್ಲಿ ಆ ಬೈರಕ್‌ಖಾನೆಯನ್ನು ಪ್ರವೇಶಿಸಿದರು ರಾಣಿಯವರನ್ನು ಕಾಣುತ್ತಲೇ ಆದರದಿಂದ ಅವರನ್ನು ಮಾತನಾಡಿಸಿದರು

ರಾಣಿ—ಸೇಟರೇ, ತಮ್ಮ ಈ ದೀರ್ಘಪ್ರವಾಸವು ಎತ್ತಕಡೆ ? ಯಾವ ರಾಜಕಾರಣವು ತಮ್ಮನ್ನು ಸೆಳೆದು ಹೋಯ್ತಿತು

ಸೇಟ್—(ನಗುತ್ತಾ) ನಾನು ಮಂಗಳೂರಿಗೆ ಪ್ರಯಾಣ ಮಾಡಿದ್ದೆ ವಸ್ತುತಃ ತಾವು ಊಹಿಸಿದ್ದಂತೆ ಅದು ರಾಜಕಾರಣವೇ ಸರಿ ರಾಣಿಯವರೇ, ದಕ್ಷಿಣ ಕರ್ನಾಟಕದಲ್ಲಿ ಸುಲ್ತಾನರಿಗೆ ವಿರುದ್ಧವಾಗಿ ದೊಡ್ಡ ವಿಪ್ಲವವೆದ್ದಿತು

ರಾಣಿ—(ವಿಷಾದದಿಂದ) ಸೇಟರೇ, ದಕ್ಷಿಣ ಕನ್ನಡದಲ್ಲಿ ಮಹಾವಿಪ್ಲವ, ಉತ್ತರದಲ್ಲಿ ಮರಾಟರ ಹಾವಳಿ. ಮಲಬಾರಿನಲ್ಲಿ ಫರಂಗಿಯವರ ಪ್ರಾಬಲ್ಯ, ನಗರದಲ್ಲಿ ಅಶಾಂತಿ, ಹೀಗೆ ಸರ್ವತ್ರ ಸುಲ್ತಾನೀ ರಾಜ್ಯಕ್ಕೆ ಆಘಾತ ವಿಘಾತಗಳು ಸುಲ್ತಾನರವರ ರಾಜ್ಯದ ಅಂತ್ಯವು ಸನ್ನಿಹಿತವಾಗಿದೆಯೆಂದೇ ತೋರುತ್ತದೆ. ಮಂಗಳೂರಿನ ಸಮಾಚಾರವೇನು ? ವಿಪ್ಲವವೇನಾಯಿತು ? ತಾವೇನು ಮಾಡಿದಿರಿ ?

ಸೇಟ್—ವಿಪ್ಲವವು ಕೊನೆಗೊಂಡಿತು. ಈ ಹುಸೇನ್‌ಖಾನರೇ ವಿಪ್ಲವದ ಮೂಲಕರ್ತರು ನಾನು ಇವರನ್ನು ಹಿಡಿದು ತಂದಿದ್ದೇನೆ ಇವರನ್ನು ತಾವು ಬಲ್ಲಿರಷ್ಟೆ ?

ರಾಣಿ—(ಚಕಿತಳಾಗಿ ಹುಸೇನ್‌ಖಾನನಕಡೆ ದಿಟ್ಟಿಸಿ ನೋಡಿ) ಇವರನ್ನು ಒಮ್ಮೆ ಇಲ್ಲಿಯೇ ನೋಡಿದ್ದೇನೆ ಇವರು ನಮ್ಮ ರಾಜ್ಯದಲ್ಲಿ ಸೇವೆ ಮಾಡುವುದಾಗಿ ಒಂದು ದಿನ ನನ್ನಲ್ಲಿ ಹೇಳಿದರು ಅಂದೇ ಇವರೊಬ್ಬ ಪರಾಕ್ರಮಶಾಲಿಗಳಾದ ಮಹಾಪುರುಷರೆಂದುಕೊಂಡೆ ಇವರು ನಮ್ಮ ಸೇವೆಗೆ ಬರುತ್ತೇವೆಂದು ಹೇಳಿದ ಮಾತು ಪರಿಹಾಸ್ಯವೆಂದುಕೊಂಡೆ

ಹುಸೇನ್‌ಖಾನನು ವಿನಯದಿಂದ ರಾಣಿಯವರನ್ನು ವಂದಿಸಿದನು

ಸೇಟರು—ರಾಣಿಯವರೇ, ಅಂದು ಅವರು ತಮ್ಮಲ್ಲಿ ಹೇಳಿದ ಮಾತು, ಇಂದು ನಿಜವಾಗಿದೆ ತಮ್ಮ ಸೇವೆಗಾಗಿಯೇ ನಾನು ಅವರನ್ನು ಇಲ್ಲಿಗೆ ಕರೆತಂದಿದ್ದೇನೆ ತಾವು ಅನುಗ್ರಹಿಸಿದರೆ ಅವರು ತಮ್ಮ ಸೇನಾನಾಯಕರಾಗಿರುತ್ತಾರೆ ಸಂದರ್ಭ ಒದಗಿದರೆ ತಮಗೆ ಕೀರ್ತಿ ತರುತ್ತಾರೆ

ರಾಣಿ—ಸೇಟರೇ, ತಾವು ನನ್ನನ್ನು ಪರಿಹಾಸ್ಯ ಮಾಡುತ್ತೀರಿ ? ತಮ್ಮ ಅಪ್ಪ

ಸೆಗೆ ಪ್ರತಿಯುಂಟೆ ? ಅವರು ನಿಜವಾಗಿ ತಮ್ಮ ಸೇನಾನಾಯಕರು ನಾನು ತಮ್ಮ ಆಜ್ಞಾಧಾರಕಳು

ಸೇಟರೂ, ರಾಣಿಯವರೂ ಹುಸೇನಖಾನನಿಗೆ ಬಹಳವಾಗಿ ಹೇಳಿ ಅವರು ಕನ್ನಾನೂರಿನ ಸೇನಾನಾಯಕರಾಗಿರಲು ಒಪ್ಪಿಸಿದರು

ಮಹಡಿಯ ಮೇಲೆ ಚಂದ್ರಶಾಲೆಯಲ್ಲಿ ಬೀಬೀರಾಣಿ ಮತ್ತು ಖಾನರು ಕುಳಿತು ಮಾತನಾಡುತ್ತಿದ್ದರು ಅಂತರಿಕ್ಷದಲ್ಲಿ ಚಂದ್ರನು ಪೂರ್ಣಕಲೆಯಿಂದ ಪ್ರಕಾಶಿಸುತ್ತಿದ್ದಾನ ಭೂಮಿಯ ಮೇಲೆ ಅವ್ಯಕ್ತವನ್ನು ಚಲ್ಲಿದಂತೆ ಬೆಳದಿಂಗಳು ಬೀಳುತ್ತಿದೆ ಮುಂದ ಗಡೆ ಗಂಭೀರವಾದ ಸಮುದ್ರವು ಘೋರ್ಗರಯುತ್ತಿದ ದೂರದಲ್ಲಿ ನೌಕೆಗಳಿಗ ಕಟ್ಟಿರುವ ಪಟಗಳು ಕಾಣುತ್ತಿವೆ ಬೀಬೀರಾಣಿಗೆ ಖಾನನ ಪ್ರವಾಸದ ವೃತ್ತಾಂತವನ್ನು ವಿಶದವಾಗಿ ಕೇಳಬೇಕೆಂಬ ಆಶೆ ರಾಣಿಯು ಖಾನನ ಪಕ್ಕಕ್ಕೆ ಸರಿದು ಕುಳಿತು. "ಖಾನರವರೇ, ನೀವು ದೂರದೇಶ ಹೊರಟುಹೋದದ್ದು ಮನಸ್ಸಿಗೆ ಬೇಸರವಾಗಿತ್ತು ನನಗೆ ಈ ರಾಜ್ಯವೆಲ್ಲವೂ ಶೂನ್ಯವಾಗಿ ಭಾಸವಾಗುತ್ತಿತ್ತು ನಾನು ನಿಮ್ಮ ಜೊತೆಯಲ್ಲಿಯೇ ಬಂದಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಎಷ್ಟೋ ಬಾರಿ ಮನಸ್ಸಿಗೆ ಹೊಳೆಯುತ್ತಿತ್ತು ಈ ಸಮುದ್ರದಲ್ಲಿ ನೌಕವಿತಾನದಲ್ಲಿ ತಮ್ಮೊಡನೆ ಪ್ರಯಾಣ ಮಾಡಿದ್ದರೆ ಅದೊಂದು ವಿಹಾರದಂತ ಸುಖಮಯವಾಗುತ್ತಿತ್ತು ನೀವು ನನ್ನನ್ನೇಕೆ ಬಿಟ್ಟು ಹೋದಿರಿ?" ಎಂದಳು.

ಸೇಟ್— ಪ್ರಿಯೆ, ಬೀಬಿ, ನಾನು ಇಲ್ಲಿಂದ ಹೊರಡುವಾಗ ಬಲು ಗಾಬರಿಯಲ್ಲಿ ಹೊರಟೆ ವಂಗಳೂರಿನ ವಿಪ್ಲವವು ಅಗಾಧವಾದುದೆಂದು ನಾನು ಭಾವಿಸಿದೆ ಆ ಪ್ರಳಯಾಗ್ನಿಯಲ್ಲಿ ದೌಲತ್ ಮತ್ತು ರಾಧಾರಾಣಿಯವರು ಧುಮುಕಿ ಅಪಾಯಕ್ಕೊಳಗಾಗಬಹುದೆಂದು ಭಯವಾಯಿತು ಆದರೆ ಅದೆಲ್ಲಾ ಭ್ರಾಂತಿ !

ಬೀಬಿ – ತಾವು ದೌಲತ್ ರಾಣಿಯವರನ್ನು ಸಂಧಿಸಿದ್ದಿರೇನು ?

ಸೇಟ್— ಹೌದು ಅವರ ಭೇಟಿಗಾಗಿಯೇ ಹೋಗಿದ್ದೆನೆಂದರೂ ಸಲ್ಲುವುದು.

ಬೀಬಿ — ಖಾನರೇ, ಆ ದೌಲತ್ ರಾಣಿಯವರೇಕೆ ಈ ಯುದ್ಧ ವಿಗ್ರಹಗಳಿಗೆ ತಲೆ ಕೊಡುತ್ತಾರೆ ?

ಸೇಟ್ — ಸುಲ್ತಾನೀ ರಾಜ್ಯವನ್ನು ಉಳಿಸುವುದಕ್ಕಾಗಿ ಅವರು ಯಾವಾಗಲೂ ಸಾಹಸ ಮಾಡುತ್ತಾರೆ

ಬೀಬಿ—(ನಗುತ್ತಾ) ಅವರು ಸುಲ್ತಾನರ ಕಡೆಯವರೇನು ? ಸುಲ್ತಾನರಿಗಾಗಿ ಏಕೆ ಇಷ್ಟು ಹಾತೊರೆಯುತ್ತಾರೆ

ಸೇಟ್— ದೌಲತ್‌ರಾಣಿಯವರು ಹೈದರಲ್ಲೀಖಾನರವರ ಪ್ರೇಮಪುತ್ರಿ.

ಬೀಬಿ— ಖಾನರೇ, ನೀವು ನನ್ನನ್ನೂ ಅಲ್ಲಿಗೆ ಕರೆದುಕೊಂಡು ಹೋಗಿದ್ದರೆ

ದೌಲತ್ ರಾಣಿಯವರ ಸಾನ್ನಿಧ್ಯದಲ್ಲಿ ನಾನು ನಾಲ್ಕಾರು ದಿನಗಳನ್ನು ಆನಂದದಿಂದ ಕಳೆಯುತ್ತಿದ್ದೆ

ಸೇಟ್—ಬೀಬೀ ಅಲ್ಲಿ ದೌಲತ್ ರಾಣಿಯ ವರನ್ನೂ ರಾಧಾರಾಣಿಯವರನ್ನೂ ಭೇಟಿ ಮಾಡಿದಾಗ "ಬೀಬೀರಾಣಿಯನ್ನೂ ಇಲ್ಲಿಗೆ ಕರೆತಂದಿದ್ದರ ಎಷ್ಟು ಚೆನ್ನಾಗಿತ್ತು, ದೌಲತ್ತಳು ಎಷ್ಟು ಸಂತೋಷಪಡುತ್ತಿದ್ದಳು" ಎಂದುಕೊಂಡೆ ಮತ್ತೊಮ್ಮೆ ನಿನಗೆ ಆ ದೌಲತ್ತಳ ಭೇಟಿ ಮಾಡಿಸುತ್ತೇನೆ

ಬೀಬೀ—ದೌಲತ್‌ರಾಣಿಯವರನ್ನೇ ನೀವು ನಮ್ಮ ರಾಜ್ಯಕ್ಕೆ ಕರೆತಂದಿದ್ದರೆ ಎಷ್ಟೋ ಚೆನ್ನಾಗಿತ್ತು

ಸೇಟ್—ರಾಣಿಯವರೇ, ದೌಲತ್ತಳು ನಗರವನ್ನು ಬಿಟ್ಟುಬರಲು ಒಪ್ಪುವುದಿಲ್ಲ

ಬೀಬಿ—ಖಾನರವರೇ, ನೀವು ಆ ರಾಣಿಯವರಿಗಾಗಿಯೇ ನಗರದ ರಾಜ್ಯವನ್ನು ತೊರೆದಿರೆಂದು ಜನರಾಡಿಕೊಳ್ಳುತ್ತಾರೆ ದೌಲತ್‌ರಾಣಿಗಾಗಿಯೇ ನೀವೂ ಸುಲ್ತಾನರೂ ಹೋರಾಡುತ್ತಿದ್ದಿರೆಂದು ವದಂತಿ ಇದೆ ಆ ಕಥೆಯನ್ನು ಸ್ವಲ್ಪ ಹೇಳಬಾರದೆ ?

ಸೇಟ್—ಬೀಬೀ, ಅದು ದೊಡ್ಡ ಕಥೆ ನನ್ನ ಜೀವನಸಮರ ಆ ಕಥೆಯು ಎಂದು ಆರಂಭವಾಯಿತೋ ನಾನರಿಯೆ ಎಂದಿಗೆ ಮುಕ್ತಾಯವಾಗುತ್ತೋ ಅದು ಭಗವಂತನಿಗೇ ಗೊತ್ತು

ಬೀಬಿ—ಖಾನರೇ! ಆ ಕಥೆ ಬಲು ಸ್ವಾರಸ್ಯದ ಕಥೆ ಇರಬೇಕು ಇಬ್ಬರೂ ಮಹಾವೀರರು ಒಬ್ಬ ರಮಣಿಗೋಸ್ಕರ ಹೋರಾಡಿದಿರಿ [ ನಗುತ್ತಾ ] ಇದರಲ್ಲಿ ಸೋತವರಾರು ? ಗೆದ್ದವರಾರು ?

ಸೇಟ್—ಪ್ರಿಯೆ ಬೀಬೀ, ನಿಜವಾಗಿಯೂ ನಾನೂ, ಟಿಪ್ಪುವೂ ಇಬ್ಬರೂ ಸೋತವರೇ ಗೆದ್ದವಳು ದೌಲತ್ತಳು

ಬೀಬಿಯು ಖಾನನ ಕಂಠಾಲಿಂಗನವನ್ನು ಮಾಡಿಕೊಂಡು "ಖಾನರೇ, ಆ ದೌಲತ್‌ರಾಣಿಯವರು ಅನುಪಮ ಸೌಂದರ್ಯವತಿಯೆಂದು ಕೇಳಿದ್ದೇನೆ ನಿಜವೇ?" ಎಂದಳು

ಖಾನನು ಬೀಬಿಯ ಗಲ್ಲವನ್ನು ಹಿಡಿದು ಅಲ್ಲಾಡಿಸಿ "ಬೀಬಿ! ನೀನು ದೌಲತ್ತಳಿಗಿಂತಲೂ ಸೌಂದರ್ಯವತಿ! ವಿಲಾಸವತಿ! ಹಾಸ್ಯಪ್ರಿಯೆ. ಆದರೆ ಆ ದೌಲತ್ತಳು ತೇಜಸ್ವಿನಿ. ಚಿಕ್ಕಂದಿನಿಂದಲೂ ನನ್ನ ಮೇಲೆ ಅಧಿಕಾರ ಮಾಡಿದ ರಾಣಿಯವಳು. ಒಂದು ದಿನ ನೀವಿಬ್ಬರೂ ಸೇರುವಿರಿ ಒಂದು ಗುಲಾಬಿಯ ಗಿಡದಲ್ಲಿರುವ ಎರಡು ಪುಷ್ಪಗಳಂತೆ ಶೋಭಿಸುವಿರಿ" ಎಂದು ಬೀಬಿಯ ಮುಖವನ್ನು ಚುಂಬಿಸಿದನು

ಬೀಬಿಯು ಎದ್ದು ಅಂತರ್ಗೃಹದೊಳಗೆ ಹೋಗಿ ಮಧುಪಾತ್ರೆಯನ್ನು ತಂದಳು. ಮಾತನಾಡುತ್ತಾ ಅವರಿಬ್ಬರೂ ಮಧುವನ್ನು ಯಥೇಚ್ಛ ಸೇವಿಸಿದರು ಬೀಬಿಯು ಖಾನನ ಕಂಠಾಲಿಂಗನವನ್ನು ಮಾಡಿ "ಖಾನರೇ, ಇಂದು ಈ ರಾಜ್ಯವು ಸಣ್ಣದಾದರೂ ಸ್ವತಂತ್ರರಾಜ್ಯ ನನ್ನದು ಅಪಾರ ಐಶ್ವರ್ಯ ನನಗೆ ಇವೆರಡಕ್ಕಿಂತಲೂ ಅತಿಶಯ ವಾಗಿ ನಿಮ್ಮ ಪ್ರಣಯಸಾನ್ನಿಧ್ಯವಿದೆ ಈ ಪ್ರಪಂಚದಲ್ಲಿ ಮತ್ತಾವ ಅಪೇಕ್ಷೆಯೂ ನನಗಿಲ್ಲ" ಎಂದಳು

ಸೇಟ್— ಬೀಬೀ, ಇದೆಲ್ಲಾ ಬಹುಕಾಲ ಸ್ಥಿರವಾಗಿರಲಾರದು

ಬೀಬಿ— ಖಾನರೇ, ಬಹುಕಾಲವಿರಬೇಕೆಂದು ನನಗೂ ಆಶೆ ಇಲ್ಲ ಒಂದು ದಿನವಾದರೇನು ? ಒಂದು ವರ್ಷವಾದರೇನು ? ಭಗವಂತನು ಮಾನವರನ್ನು ಸೃಷ್ಟಿ ಮಾಡಿದ್ದಾನೆ ಅವರುಗಳಿಗೆ ಕಷ್ಟಪರಂಪರೆಗಳನ್ನೇ ಕೊಟ್ಟಿದ್ದಾನೆ ಇಂಥಾ ಮಾನ ವಲೋಕದಲ್ಲಿ ನಮಗೆ ಮಾತ್ರ ಈ ಅಖಂಡವಾದ ಸುಖಸಂಪತ್ತನ್ನು ಕರುಣಿಸಿದ್ದಾನೆ. ಇದು ದೇವರ ವರಪ್ರಸಾದ

ಸೇಟ್— ಬೀಬಿ, ನೀನು ಮುಗ್ಧಳಂತೆ ಮಾತನಾಡುವಿ ನೀನು ರಾಣಿಯಲ್ಲವೆ? ಈ ರಾಜ್ಯವನ್ನು ಕಾಪಾಡುವ ಭಾರವು ನಿನ್ನದಲ್ಲವೆ ? ಇಂದೋ ನಾಳೆಯೋ ಫರಂಗಿ ಯವರು ಇದನ್ನು ಆಕ್ರಮಿಸುತ್ತಾರೆ ಆಗ ನಮ್ಮ ಅಖಂಡ ಸುಖಸಂಪತ್ತುಗಳು ಉಳಿ ಯುವುದಿಲ್ಲ ನನಗೆ ನಮ್ಮ ಮುಂದಿನ ದಿನಗಳಲ್ಲಿ ಅಡಿಗಡಿಗೂ ಕಷ್ಟಪರಂಪರೆಗಳು ಕಾದಿರುವಂತೆ ಭಾಸವಾಗುತ್ತಿದೆ

ಬೀಬಿ— ಖಾನರೇ, ಈ ಸುಖಸಾಗರದಲ್ಲಿ ಆ ಕಷ್ಟಗಳನ್ನೇಕೆ ಕದಡುವಿರಿ ? ಅಂತಹ ಕಠಿಣಪ್ರಸಂಗವು ಬಂದರೆ ನೀವೇನು ಮಾಡುವಿರಿ ?

ಸೇಟ್— ನಾನು, ನಾನು ಯುದ್ಧ ಮಾಡುವೆನು ಯೂರೋಪಿನಲ್ಲಿ ನೆಪೋಲಿ ಯನ್ನನು ಪರಾಕ್ರಮಶಾಲಿಯೆಂದು ಫರಂಗಿಯವರು ಹೇಳುತ್ತಾರೆ ಆ ನೆಪೋಲಿಯ ನ್ನನಿಗಿಂತಲೂ ಮಹಾಪರಾಕ್ರಮಿಯು ಈ ರಾಜ್ಯದಲ್ಲಿದ್ದಾನೆಂದು ಅವರಿಗೆ ತೋರು ವೆನು

ಬೀಬಿ— ಖಾನರೇ, ನಾನು ವರಿಸಿದ್ದು ವ್ಯಾಪಾರಸ್ಥನಾದ ಸೇಟನನ್ನಲ್ಲ. ಈ ವೀರಮೂರ್ತಿಯಾದ ಖಾನರನ್ನು ನಾನು ವರಿಸಿದೆ. ನನ್ನ ಪ್ರಜೆಗಳು ಇದನ್ನರಿಯರು. ಅವರಿಗೆ ನಾನೊಬ್ಬ ವ್ಯಾಪಾರಿಯನ್ನು ವರಿಸಿದೆನೆಂದು ಅಸಮಾಧಾನವಿದೆ ರಣಕ್ಷೇತ್ರ ದಲ್ಲಿ ಈ ವೀರಾಗ್ರೇಸರನನ್ನ ಅವರು ನೋಡಿದರೆ, ತಮ್ಮ ರಕ್ತವನ್ನು ಚೆಲ್ಲಿಕೊಟ್ಟು ಯುದ್ಧಮಾಡುತ್ತಾರೆ. ನಾನು ಆ ರಣಕ್ಷೇತ್ರದಲ್ಲಿ ತಮಗೆ ಬೆಂಬಲವಾಗಿ ನಿಂತು ನನ್ನ ಕೌಶಲವನ್ನು ತೋರಿಸಬೇಕೆಂದು ಎಷ್ಟೋ ಆಶೆ ಇದೆ. ಅಂಥದೊಂದು ಸುದಿನವು

ಬಂದರೆ ಅಲ್ಲಿ ತಮ್ಮ ಸಾನ್ನಿಧ್ಯದಲ್ಲಿ ಈ ನನ್ನ ಜೀವನವು ಕೊನೆಗೊಂಡರೆ ಅದಕ್ಕಿಂತಲೂ ಸುಖದ ಕಲ್ಪನೆಯು ನನಗೆ ಬೇರೊಂದಿಲ್ಲ

ಖಾನನು ಬೀಬಿಯನ್ನು ಚುಂಬಿಸುತ್ತಾ "ಬೀಬಿ! ಬೀಬಿ-ನೀನು ನಿಜವಾಗಿಯೂ ಅರಬ್ ತರುಣಿ ನಿನ್ನ ದಮನಿಗಳಲ್ಲಿ ವೀರರಕ್ತವಿದೆ ಅಂಥದೊಂದು ಪರ್ವದಿನವನ್ನು ನಾವು ಕಾಣುವೆವು" ಎಂದು ಹೇಳಿದನು

ಅವರಿಬ್ಬರೂ ಹೀಗೆಯೇ ಮಾತನಾಡುತ್ತ ಆ ರಾತ್ರಿಯನ್ನು ಕಳೆದರು

ಪ್ರಾತಃಕಾಲದಲ್ಲಿ ರಾಣಿಯವರು ರಾಜಧಾನಿಗೆ ಪ್ರಯಾಣ ಮಾಡಿದರು ಆ ದಿನವೇ ಹುರ್ಸೇಖಾನನಿಗೆ ಸೇನಾಧಿಪತಿಯ ಪಟ್ಟವನ್ನು ಕಟ್ಟಿದರು ಹುರ್ಸೇಖಾನನು ಉತ್ಸಾಹದಿಂದ ಸೇನೆಯನ್ನು ತಯಾರುಮಾಡಲಾರಂಭಿಸಿದನು ಮಂಗಳೂರು ಕಡೆಯಿಂದ ಬಹುಮಂದಿ ವಿದ್ರೋಹಿಗಳು ಬಂದು ಈ ಸೇನೆಯಲ್ಲಿ ಸೇರಿದರು ಇಂಗ್ಲೀಷರ ಸೈನ್ಯದ ತರಬೇತಿಗೆ ಯಾವ ಅಂಶದಲ್ಲಿಯೂ ಈ ಸೇನೆಯು ಕಡಮೆಯಾಗಿರಲಿಲ್ಲ

ಈ ಸೇನಾ ಸನ್ನಾಹವು ತಲಚೇರಿಗೆ ತಿಳಿಯಿತು ಇಂಗ್ಲಿಷ್ ಸರದಾರರು ಗೂಢಚಾರರಿಂದ ಈ ಸಮಾಚಾರವನ್ನೆಲ್ಲಾ ತಿಳಿದುಕೊಂಡರು ಕನ್ನಾನೂರಿನ ಮೇಲೆ ಇಂಗ್ಲಿಷರ ದಂಡು ಬಂದೇಬಿಡುತ್ತದೆಂದು ಕೂಡ ವರ್ತಮಾನವು ಬಂದಿತು ಈ ಸುದ್ದಿಯನ್ನು ಕೇಳಿ ಹುರ್ಸೇಖಾನನು ಹರ್ಷಗೊಂಡನು!

ಒಂದು ದಿನ ಕೋಬೆಯ ಸಮೀಪದಲ್ಲಿ ಒಂದು ಘಟನೆಯು ನಡೆಯಿತು. ಕೋಬೆಯು ರಮಣೀಯವಾದ ಪ್ರದೇಶ ಇಂಗ್ಲಿಷ್ ಸೈನಿಕರು ದೋಣಿಗಳಲ್ಲಿ ಕೋಬೆಗೆ ವಿಹಾರಾರ್ಥವಾಗಿ ಬಂದರು ತಮಾಷೆಯಾಗಿ ಆಹಾರ ವಿಹಾರಗಳನ್ನು ಮುಗಿಸಿಕೊಂಡು ಮೀನು ಹಿಡಿಯುವುದಕ್ಕೆ ಆರಂಭಿಸಿದರು ಅಲ್ಲಿ ಅನೇಕರು ಸ್ಥಳೀಯ ಜಲಗಾರರು ಮೀನು ಹಿಡಿಯುತ್ತಿದ್ದರು ಇಂಗ್ಲಿಷ್ ಸೈನಿಕರಿಗೂ ಆ ಮೀನು ಹಿಡಿಯುವವರಿಗೂ ಜಗಳವಾಯಿತು ಸೈನಿಕರು ಒಂದೆರಡು ದೋಣಿಗಳನ್ನು ಮುಳುಗಿಸಿದರು ಈ ದೂರು ಸಮುದ್ರ ತೀರದಲ್ಲಿರುವ ರಾಣಿಗೆ ತಲಪಿತು ಹುರ್ಸೇಖಾನನ ಕಡೆ ಫೌಜುದಾರನು ದೋಣಿಗಳಲ್ಲಿ ತನ್ನ ಸೈನಿಕರನ್ನು ಕರೆದುಕೊಂಡು ಹೋಗಿ ಇಂಗ್ಲಿಷರ ದೋಣಿಗಳನ್ನು ಸುತ್ತು ಕಟ್ಟಿ ಅವರು ತೀರಕ್ಕೆ ಬರಬೇಕೆಂದು ಆಜ್ಞೆ ಮಾಡಿದನು ಇಂಗ್ಲಿಷ್ ಸೈನಿಕರು ಅದನ್ನು ಲಕ್ಷ್ಯ ಮಾಡಲಿಲ್ಲ ಅವರು ಘರ್ಷಣೆಗೆ ಆರಂಭಿಸಿದರು. ಕೊನೆಗೆ ಅದು ಸಣ್ಣ ಕದನದಲ್ಲಿ ಪರ್ಯವಸಾನವಾಯಿತು ದೇಶೀ ಸೈನಿಕರು ಇಂಗ್ಲೀಷರ ದೋಣಿಗಳ ಮೇಲೆ ಗುಂಡು ಹಾರಿಸಿದರು ಇಂಗ್ಲಿಷ್ ಸೈನಿಕರನೇಕರು ಸತ್ತು ಬಿದ್ದರು ಉಳಿದವರು ಸೆರೆ ಸಿಕ್ಕಿದರು ಫೌಜುಧಾರನು ಅವರನ್ನು ಹಿಡಿದು ಕನ್ನಾನೂರಿನಲ್ಲಿ ಬಂಧಿಸಿದನು ಈ ವರ್ತಮಾನವು ತಲಚೇರಿಗೆ ತಲಪಿತು ಇಂಗ್ಲೀಷ್ ಅಧಿಕಾರಿಗಳಿಗೆ ಬಹಳ ಕೋಪ ಬಂತು! ಅವರು ರಾಣಿಯವರಿಗೆ ನಿಷ್ಠುರವಾದ ಪತ್ರವನ್ನು ಬರೆದು ಕಳುಹಿಸಿ

ದರು ಆ ಪತ್ರದಲ್ಲಿ ಬಹಳ ಭಯ ಪ್ರದರ್ಶನವನ್ನು ಮಾಡಿದ್ದರು. ಇದಕ್ಕೆ ಕನ್ನಾನೂರಿನವರು ಬಗ್ಗಲಿಲ್ಲ! ಮಂತ್ರಿಗಳು ಉತ್ತರವನ್ನು ಕಳಿಸಿದರು.

"ಮೇಜರ್ ಡೇವ್ ಸಾಹೇಬರವರೇ ?"

"ನೀವು ಬರೆದು ಕಳಿಸಿದ ಪತ್ರವು ನಮ್ಮ ಕೈ ಸೇರಿತು ಆ ಪತ್ರದ ರೀತಿಯು ವಿಚಿತ್ರವಾಗಿದೆ ಕನ್ನಾನೂರಿನ ರಾಣಿಯವರು ಸ್ವತಂತ್ರರೆಂಬುದನ್ನು ನೀವು ಚೆನ್ನಾಗಿ ನೆನಪಿನಲ್ಲಿಡತಕ್ಕದ್ದು ನಮ್ಮ ಸರ್ಕಾರದ ರಹದಾರಿ ಇಲ್ಲದೇ ಇಂಗ್ಲಿಷ್ ಸೈನಿಕರು ನಮ್ಮ ರಾಜ್ಯಕ್ಕೆ ಬಂದುದೇ ಮೊದಲನೆಯ ತಪ್ಪು ಇಲ್ಲಿ ನಮ್ಮ ಜನಗಳ ಮೇಲೆ ಆಕ್ರಮಣ ಮಾಡಿ ದೋಣಿಗಳನ್ನು ಮುಳುಗಿಸಿದರು. ಅನೇಕರನ್ನು ಕೊಲೆ ಮಾಡಿದರು, ಅವರನ್ನು ಹಿಡಿದು ವಿಚಾರಣೆ ಮಾಡಿ ಶಿಕ್ಷಿಸುವ ಅಧಿಕಾರವು ನಮ್ಮದು ನೀವು ನಮ್ಮ ಮಿತ್ರರು ನಿಮ್ಮ ಕಡೆಯವರ ಈ ಅವಿನಯಕ್ಕಾಗಿ ನೀವು ಕ್ಷಮಾಪಣೆಯನ್ನು ಕೇಳುವುದು ನಿಮ್ಮ ಗಾಂಭೀರ್ಯಕ್ಕೆ ತಕ್ಕದ್ದಾಗಿತ್ತು ಅದಕ್ಕೆ ಪ್ರತಿಯಾಗಿ ನೀವು ಭಯ ಪ್ರದರ್ಶನ ಮಾಡಿದ್ದೀರಿ ಕನ್ನಾನೂರಿನ ವಿಷಯದಲ್ಲಿ ನಿಮ್ಮ ವರ್ತನೆಯು ಸರಿಯಾಗಿಲ್ಲವೆಂದು ನಾವು ವಿಷಾದದಿಂದ ಹೇಳುತ್ತೇವೆ ಈ ದೇಶದಲ್ಲಿ ನಮ್ಮ ರಾಜ್ಯಕ್ಕೆ ವಿರೋಧಿಗಳಾದ ಕೆಲವರು ರಾಜರುಗಳ ಪ್ರೇರಣೆಯಿಂದ ನೀವು ನಮ್ಮ ಮೇಲೆ ಕತ್ತಿ ಕಟ್ಟುತ್ತಿದ್ದೀರೆಂದು ನಮಗೆ ಚೆನ್ನಾಗಿ ಮನವರಿಕೆಯಾಗಿದೆ ನಾವು ಯಾವಾಗಲೂ ನಿಮ್ಮ ಸ್ನೇಹವನ್ನು ಬಯಸುತ್ತೇವೆ. ಆದರೆ ನಮ್ಮ ಸ್ವಾತಂತ್ರ್ಯವನ್ನು ಬಿಟ್ಟು ಕೊಡಲು ನಾವು ಎಂದೆಂದಿಗೂ ಒಪ್ಪುವವರಲ್ಲ!"

ಇಂಗ್ಲಿಷ್ ಸೇನಾನಾಯಕರು ಪತ್ರವ್ಯವಹಾರವನ್ನು ಬೆಳೆಸಲಿಲ್ಲ ಅಲ್ಲಿಗೇ ಬಿಟ್ಟು ಬಿಟ್ಟರು ಆದರೂ ಕನ್ನಾನೂರಿನ ಮೇಲೆ ದೃಷ್ಟಿಯನ್ನು ನೆಟ್ಟೇ ಇದ್ದರು ಹೊಸ ಸೇನಾನಾಯಕನ ವಿಚಾರದಲ್ಲಿ ಅವರು ಬಹಳ ಕುತೂಹಲಿಗಳಾಗಿದ್ದರು ಅವರನ್ನು ಒಂದು ಬಾರಿ ಸಂಧಿಸಬೇಕೆಂಬ ಆಸೆ ಬಲವಾಗಿತ್ತು. ಅವರು ಇದಕ್ಕೊಂದು ಅವಕಾಶವನ್ನು ಹುಡುಕುತ್ತಿದ್ದರು. ಇಷ್ಟರಲ್ಲಿ ತಲಚೇರಿಯ ರಾಜರ ಮಗಳ ವಿವಾಹವು ನಿಶ್ಚಯವಾಯಿತು ತಲಚೇರಿಯ ರಾಜರು ಮಲಬಾರಿನ ಎಲ್ಲ ರಾಜರಿಗೂ ಜಮೀನುದಾರರಿಗೂ ಲಗ್ನಪತ್ರಿಕೆಗಳನ್ನು ಕಳಿಸಿದರು ಹುಸೇನ್ ಖಾನರವರಿಗೂ ಆದರಪೂರ್ವಕವಾದ ಆಹ್ವಾನ ಪತ್ರಿಕೆಯೊಂದನ್ನು ಕಳಿಸಿ ಕೊಟ್ಟರು ಹುಸೇನ್ ಖಾನರು ಈ ಅಂಶವನ್ನು ಬೀಬೀರಾಣಿಯವರಿಗೆ ಅರಿಕೆಮಾಡಿದರು ಬೀಬೀರಾಣಿಯವರು ಇದರಲ್ಲೇನೋ ಒಂದು ರಹಸ್ಯವಿದೆಯೆಂದು ಚಿಂತಿಸಿದರು ಅಮೂಲ್ಯವಾದ ಉಡುಗರೆಗಳನ್ನು ಕೊಟ್ಟು ತಮ್ಮ ಪ್ರತಿನಿಧಿಯಾಗಿ ಹುಸೇನ್ ಖಾನರನ್ನೇ ಕಳಿಸಿ ಕೊಟ್ಟರು ಆ ವಿವಾಹವು ಬಹಳ ವಿಜೃಂಭಣೆಯಿಂದ ನೆರವೇರಿತು. ಕನ್ನಾನೂರಿನ ಪ್ರತಿನಿಧಿಗೆ ಬಹಳ ಗೌರವವು ದೊರೆಯಿತು!

ಮೇಜರ್ ಡೇವ್ ಸಾಹೇಬರು, ಹುಸೇನಖಾನನನ್ನು ಬಹಳ ಗೌರವದಿಂದ ಕಂಡು ಮಾತನಾಡಿದರು ನಮ್ಮ ಬಿಡಾರಕ್ಕೆ ಬಂದು ಭೇಟಿ ಕೊಡಬೇಕೆಂದು ಬಹಳ ಆದರಂದ ಆಹ್ವಾನವಿತ್ತರು ಮರುದಿವಸ ಹುಸೇನಖಾನನು ಇಂಗ್ಲಿಷ್ ಅಧಿಕಾರಿಗಳ ಭೇಟಿ ಮಾಡಿದನು ಸ್ವಲ್ಪದರಲ್ಲಿಯೇ ಇಂಗ್ಲೀಷ್ ಅಧಿಕಾರಿಗಳಿಗೂ ಕನ್ನಾನೂರಿನ ಸೇನಾನಾಯಕನಿಗೂ ಮೈತ್ರಿಯು ಬೆಳೆಯಿತು.

ಮೇಜರ್—ಸೇನಾಧಿಪತಿಗಳೇ, ತಮ್ಮ ಸೈನ್ಯದ ಶಿಸ್ತು ಬಹಳ ಚೆನ್ನಾಗಿದೆ. ನೀವು ಬಹಳ ಚನ್ನಾಗಿ ತರಬೇತು ಮಾಡಿದ್ದೀರಿ ತಾವು ಈ ಮಲಬಾರಿಗೆ ಹೊಸಬ ರಂತೆ ಕಾಣುತ್ತದೆ

ಹುಸೇ—ಹೌದು, ನಾನು ಮೈಸೂರು ರಾಜ್ಯದವನು

ಮೇಜರ್—ನೀವು ಮೈಸೂರಿನಲ್ಲಿಯೂ ಸೇನಾನಾಯಕರಾಗಿದ್ದಿರೋ ?

ಹುಸೇ—ನಾನು ಅಲ್ಲಿಯೇ ದೊಡ್ಡ ಸೇನಾನಾಯಕನಾಗಿದ್ದ.

ಮೇಜರ್—ಕನ್ನಾನೂರಿನ ಸೇನಾನಾಯಕರಾಗಿರುವುದಕ್ಕಿಂತ ಮೈಸೂರಿನ ಸೇನಾಧಿಪತ್ಯವೇ ಹೆಚ್ಚು ಗೌರವಾರ್ಹವಾದುದಲ್ಲವೆ ?

ಹುಸೇ—ಸಂದೇಹವೇನು ? ನಮ್ಮ ನವಾಬರ ಕೈಕೆಳಗೆ ಸಾಮಾನ್ಯ ಸೈನಿಕ ನಾಗಿರುವುದೂ ಕೂಡ ಎಷ್ಟೋ ಹೆಮ್ಮೆ ?

ಮೇಜರ್—ಆಶ್ಚರ್ಯದಿಂದ-ನವಾಬರು ! ತಮ್ಮ ನವಾಬರು ಯಾರು ?

ಹುಸೇ—ನಗರದ ನವಾಬರು ! ಇಯಜ್‌ಖಾನರವರ ಶಿಷ್ಯ ನಾನು

ಮೇಜರ್—ಈಗ ಆ ನವಾಬರೆಲ್ಲಿ ?

ಹುಸೇ—ಅವರು ರಾಜ್ಯ ಪರಿತ್ಯಾಗ ಮಾಡಿ ಫಕೀರರಾಗಿ ಹೋದರು

ಮೇಜರ್—ತಾವು ಮೈಸೂರಿನ ಸೇನಾನಾಯಕರಾದರೆ-ನವಾಬ್ ಇಯಜ್ ಖಾನರವರು ರಾಜ್ಯ ಪರಿತ್ಯಾಗ ಮಾಡಿದರೆ ಸುಲ್ತಾನರಲ್ಲಿ ಸೇನಾಧಿಪತಿಗಳಾಗಿರಬಹು ದಾಗಿತ್ತಲ್ಲ. ಸುಲ್ತಾನರವರು ಮಹಾ ಪರಾಕ್ರಮಶಾಲಿಗಳು !

ಹುಸೇ—ಮೇಜರ್ ಸಾಹೇಬರೇ, ಸುಲ್ತಾನರು ಪರಾಕ್ರಮಶಾಲಿಗಳು ಹೌದು ! ಆದರೆ ಸುಲ್ತಾನರ ಪರಾಕ್ರಮವೆಲ್ಲಿ ? ನಮ್ಮ ನವಾಬರ ಧೀರಪರಾಕ್ರಮ ವೆಲ್ಲಿ ?

ಮೇಜರ್—ನವಾಬರ ರಾಜ್ಯವು ಹೋದಮೇಲೆಯೂ ನೀವು ಸುಲ್ತಾನರಲ್ಲಿ ಸೇವೆ ಮಾಡಲು ಒಪ್ಪಲಿಲ್ಲವೊ ?

ಹುಸೇ—ಇಲ್ಲ ಸೇನಾಧಿಪತಿಗಳೇ ! ಈ ಜನ್ಮದಲ್ಲಿಯೇ ಅಂತಹ ಸಂಭವವಿಲ್ಲ

ಮೇಜರ್—(ಆಶ್ಚರ್ಯದಿಂದ) ಏಕೆ ?

ಹುಸೇ—ನನಗೂ ಸುಲ್ತಾನರಿಗೂ ಬದ್ಧ ದ್ವೇಷವಿದೆ

ಮೇಜರ್—ಕಾರಣವೇನು

ಹುಸೇ—ನನ್ನ ಸಹೋದರನು ಅಮಿತ ಪರಾಕ್ರಮಶಾಲಿಯಾದ ಸೇನಾ ನಾಯಕ ಅವನನ್ನು ಸುಲ್ತಾನರು ಘೋರಕೊಲೆ ಮಾಡಿಸಿದರು ನಾನು ಪ್ರತೀ ಕಾರ ಮಾಡಲು ಪಣ ತೊಟ್ಟಿದ್ದೇನೆ

ಮೇಜರ್—ಹುಸೇಖಾನರವರೇ, ನೀವು ಸುಲ್ತಾನರೊಡನೆ ಯುದ್ಧಮಾಡ ಬಲ್ಲಿರಾ ?

ಹುಸೇ—ಅಂತಹ ಪ್ರಸಂಗ ಒದಗಿದರೆ ನನಗೆ ಅದಕ್ಕಿಂತಲೂ ಆನಂದದಾಯ ಕವಾದುದು ಬೇರೊಂದಿಲ್ಲ

ಮೇಜರ್—ಹಾಗಾದರೆ ನೀವು ನಮ್ಮೊಡನೆ ಸೇರಿದರೆ ಕುಂಪಣಿಯವರು ನಿಮಗೆ ಎಷ್ಟೋ ಕೃತಜ್ಞರಾಗಿರುವರು.

ಹುಸೇ—ಇಲ್ಲ ! ನಾನು ಎಂದೆಂದಿಗೂ ನಿಮ್ಮೊಡನೆ ಸೇರುವ ಸಂಭವವಿಲ್ಲ. ತಾವು ಆ ಹಂಬಲವನ್ನಿಟ್ಟುಕೊಳ್ಳಬೇಡಿರಿ.

ಮೇಜರ್--ಸಂತೋಷ ನಿಮಗೂ ಸುಲ್ತಾನರಿಗೂ ಯುದ್ಧವಾಗುವ ಸಂಭ ವವೇ ಇಲ್ಲ.

ಹುಸೇ—ಕನ್ನಾನೂರಿನ ರಾಣಿಯವರಿಗೂ ಸುಲ್ತಾನರಿಗೂ ಯುದ್ಧವಾದರೆ ಆಗ ನನ್ನ ಮನೋರಥವು ಈಡೇರುತ್ತದೆ ಇಂದಲ್ಲ ಎಂದಾದರೊಂದುದಿನ ನನಗೂ ಸುಲ್ತಾನರವರಿಗೂ ಯುದ್ಧವು ಸಂಭವಿಸಲೇಬೇಕು ನಮ್ಮಣ್ಣನನ್ನು ಅವರು ಗಲ್ಲಿಗೇ ರಿಸಿದರು ನಾನು ಖಡಾಖಡಿ ಅವರೊಡನೆ ಯುದ್ಧಮಾಡಿ ರಣಭೂಮಿಯಲ್ಲಿ ಮಡಿಯ ಬೇಕು, ಇಲ್ಲವೇ ಯುದ್ಧದಲ್ಲಿ ಸುಲ್ತಾನರನ್ನು ಸಂಪೂರ್ಣವಾಗಿ ಸೋಲಿಸಬೇಕು.

ಮೇಜರ್—ಸಂತೋಷ ನೀವು ವೀರಪುರುಷರು. ಅದರಿಂದ ನಮಗೆ ನಿಮ್ಮಲ್ಲಿ ಬಹಳ ಗೌರವ ನಾವು ಯಾವಾಗಲೂ ನಿಮ್ಮ ಮಿತ್ರರೆಂದು ಭಾವಿಸಿ .ನೀವು ಯಾವ ಸಹಾಯವನ್ನು ಕೋರಿದರೂ ನಾವು ಕೊಡಲು ಸಿದ್ಧರಾಗಿರುವೆವು

ಹುಸೇಖಾನನು ಇಂಗ್ಲಿಷ್ ಅಧಿಕಾರಿಗಳನ್ನು ಅಭಿನಂದಿಸಿ ತನ್ನ ಬಿಡಾರಕ್ಕೆ ಹಿಂದಿರುಗಿದನು ಸೇನಾಧಿಪತಿಯು ತನ್ನ ಬಿಡಾರಕ್ಕೆ ಹಿಂದಿರುಗುತ್ತಾ "ಈ ಭೇಟಿ ಸಂಭಾಷಣೆಗಳಿಂದ ಒಳ್ಳೆಯದೇ ಆಯಿತು, ಇಂಗ್ಲೀಷರು ಕನ್ನಾನೂರಿನ ಮೇಲೆ ದಂಡೆತ್ತಿ ಬರುವುದಿಲ್ಲ ನಮ್ಮ ರಾಣಿಯವರ ಸ್ವಾತಂತ್ರ್ಯಕ್ಕೆ ಚ್ಯುತಿ ಇಲ್ಲ !" ಎಂದುಕೊಂಡನು.

# ಕನ್ನಾನೂರಿನ ಮೋತೀಮುಹಲಿನಲ್ಲಿ

ಕನ್ನಾನೂರಿನ ರಾಜ್ಯಭಾರವು ಬಹಳ ಬಿಗುವಾಗಿತ್ತು ಪ್ರಜೆಗಳಿಗೆ ರಾಣಿಯಲ್ಲಿ ತುಂಬಾ ವಿಶ್ವಾಸ ಮಂತ್ರಿಗಳು ರಾಜ್ಯಭಾರವನ್ನು ಚೆನ್ನಾಗಿ ನಡೆಸುತ್ತಿದ್ದರು ಹುಸೇನ್‌ಖಾನನು ಸೇನಾಧಿಪತಿಯಾದ ಮೇಲೆ ಕನ್ನಾನೂರಿನ ಸೈನ್ಯವೆಂದರೆ ಮಲಯಾಳದಲ್ಲೆಲ್ಲಾ ಆಶ್ಚರ್ಯತೆಯಿಂದ ಇತ್ತು ಇಂಗ್ಲೀಷರು ಕೂಡಾ ಕನ್ನಾನೂರಿನ ಸೈನ್ಯದ ಮೇಲೆ ಹೆಚ್ಚು ಗಮನವಿಟ್ಟಿದ್ದರು ಇಂಗ್ಲೀಷ್ ಅಧಿಕಾರಿಗಳಿಗೆ ಹೇಗಾದರೂ ಕನ್ನಾನೂರನ್ನು ಅಧೀನ ರಾಜ್ಯವಾಗಿ ಮಾಡಿಕೊಳ್ಳಬೇಕೆಂಬ ಹಂಬಲವಿತ್ತು ವಸ್ತುತಃ ಅದಕ್ಕೆ ಅನೇಕ ಪ್ರತಿಬಂಧಕಗಳಿದ್ದವು ಆ ರಾಜ್ಯಗಳಲ್ಲಿ ಕನ್ನಾನೂರಿನ ರಾಣಿಯ ಮೇಲೆ ಕೈಎತ್ತುವ ಧೈರ್ಯವಿರಲಿಲ್ಲ. ಕನ್ನಾನೂರನ್ನು ಜಯಿಸುವುದು ಇತರ ರಾಜರಿಗೆ ಅಸಂಭವವೇ ಆಗಿತ್ತು ಇಂಗ್ಲೀಷರು ತಾವಾಗಿ ಕನ್ನಾನೂರಿನ ಮೇಲೆ ಬೀಳುವುದಕ್ಕೆ ಕಾರಣವಿರಲಿಲ್ಲ ಒಂದೆರಡು ಬಾರಿ ಕ್ಷುಲ್ಲಕ ಕಾರಣಗಳು ಪ್ರಾಪ್ತವಾದಾಗಲೂ ಕುಂಪಣಿ ಅಧಿಕಾರಿಗಳು ರಾಣಿಯ ಮೇಲೆ ಯುದ್ಧ ಹೂಡುವ ಪ್ರಯತ್ನಕ್ಕೆ ಪ್ರೋತ್ಸಾಹವೀಯಲಿಲ್ಲ

ಬೀಬೀರಾಣಿಯು—ಖಾನನ ಪ್ರಣಯವು ದಿನದಿನಕ್ಕೆ ಪ್ರಗಾಢವಾಗುತ್ತಲೇ ಇತ್ತು ರಾಣಿಗೆ ರಾಜಕೀಯವಿಲ್ಲದೇ ಇರಲಿಲ್ಲ ಇಯಜ್‌ಖಾನನನ್ನು ರಾಜನನ್ನಾಗಿ ಮಾಡಿ ಈ ಇಡೀ ಮಲಬಾರನ್ನು ಆಳಬೇಕೆಂದು ಅವಳಿಗೆ ಅತ್ಯಾಶೆ ಇತ್ತು ಒಂದು ಪಕ್ಷ ಪ್ರತ್ಯಕ್ಷವಾಗಿ ಇಯಜ್‌ಖಾನನು ರಾಜನಾಗಿ ಪರರಾಜರೊಡನೆ ಯುದ್ಧವು ಸಂಭವಿಸಿದರೆ ಇಂಗ್ಲೀಷರಿಗೂ-ಇಯಜ್‌ಖಾನನಿಗೂ ಯುದ್ಧವು ಪ್ರಾಪ್ತವಾದರೆ ಇಯಜ್‌ಖಾನನಿಗೇ ಸಂಪೂರ್ಣ ಜಯವೆಂದು ಬೀಬೀರಾಣಿಯು ಖಚಿತಾರ್ಥಮಾಡಿಕೊಂಡಿದ್ದಳು.

ಬೀಬೀರಾಣಿಯು ಈ ಅರ್ಥವನ್ನು ಎಷ್ಟೋ ಬಾರಿ, ಎಷ್ಟೋ ವಿಧವಾಗಿ ಇಯಜ್‌ಖಾನನಿಗೆ ತಿಳಿಸಿದ್ದಳು. ಅವನನ್ನು ಒತ್ತಾಯಪಡಿಸುತ್ತಿದ್ದಳು ಮುನಿಸಿದು ಕೊಳ್ಳುತ್ತಿದ್ದಳು ಇಯಜ್‌ಖಾನನನ್ನು ಕನ್ನಾನೂರಿನ ಅರಮನೆಗೂ ಒಂದು ಬಾರಿ ಬರಬೇಕೆಂದು ರಾಣಿಯು ನಿರ್ಬಂಧಪಡಿಸುತ್ತಲೇ ಇದ್ದಳು.

ಇಂದು ಕನ್ನಾನೂರಿನಲ್ಲಿ ದೀಪಾವಳೀ ಹಬ್ಬ ! ಹಿಂದೂಜನರಿಗೆಲ್ಲಾ ಬಲುಗದ್ದಲ ಅರಮನೆಯಲ್ಲಿಯೂ ಹಿಂದುಗಳಿಗಾಗಿ ಆ ಹಬ್ಬವನು ವಿಜೃಂಭಣೆಯಿಂದ ನಡೆಸುತ್ತಾರೆ ಈ ದಿನ ಅಲ್ಲೀಸೇಟರು ಅರಮನೆಗೆ ಬರುವುವಾಗಿ ಒಪ್ಪಿದ್ದಾರೆ ರಾಣಿಯು ತನ್ನ ಮುಹಲೆಲ್ಲವನ್ನೂ ತಾನೇ ಅಲಂಕರಿಸುತ್ತಿದ್ದಾಳೆ ಅವಳು ಇಯಜ ಖಾನನ ಬಾಯಿಂದಲೇ ಸೋನಾಮುಹಲಿನ ಸೊಬಗನ್ನು ಕೇಳಿದ್ದಾಳೆ ಇಂದು ತನ್ನ

ಮೋತೀಮಹಲು ಸೋನಾಮಹಲಿಗಿಂತಲೂ ಅಲಂಕಾರವಾಗಿರಬೇಕೆಂದು ಬೀಬಿಯ ಆಶೆ ಇಂದಿನ ಸಡಗರದಲ್ಲಿ ರಾಣಿಯು ಪ್ರಾತಃಕಾಲದಿಂದಲೂ ಉಂಡಿಲ್ಲ. ಊಟ ಉಪಚಾರಗಳಿಗೆ ಅವಳಿಗೆ ಅವಕಾಶವೇ ದೊರೆತಿಲ್ಲ ಜಳಗಿಸಿಂದಲೂ ಅವಳ ಮನಸ್ಸಿನಲ್ಲಿ ಅಂದಿನ ಸಂಧ್ಯಾಕಾಲದ ನಿರೀಕ್ಷಣೆಯೇ ಆಗಿದೆ ನಿಮಿಷ ನಿಮಿಷವೂ ಎಷ್ಟು ಹೊತ್ತಿಗೆ ಈ ಸೂರ್ಯನು ಅಸ್ತಾಚಲವನ್ನು ಸೇರುತ್ತಾನೆ ಎಂಬುದೇ ಅವಳ ಮನಸ್ಸಿನ ಆವೇಗ ಆ ಸಂಧ್ಯಾಕಾಲ ಆ ರಾತ್ರಿಯ ಕಲ್ಪನೆಗಳು ರಾಣಿಯ ಮನಸ್ಸಿನ ಮೇಲೆ ಅನಂತವಾಗಿ ಏಳುತ್ತಿವೆ ಅಲ್ಲೀಸೇಟನು ಇಂದು ಅರಮನೆಗೆ ಬರುತ್ತಾನೆ. ಅವನನ್ನು ಹಿಂದಕ್ಕೆ ಹೋಗಲು ಬಿಡುವುದೇ ಇಲ್ಲ ಎಂದು ಮನಸ್ಸಿನಲ್ಲಿಯೇ ಕಟ್ಟೆ ಹಾಕುತ್ತಾಳೆ ಆ ಸುಂದರ ಕಲ್ಪನಾತರಂಗಗಳಲ್ಲಿ ಒಂದೊಂದು ಬಾರಿ ಸೋನಾಮಹಲು ಎದ್ದು ಬರುತ್ತದ ಅಲ್ಲಿ ದೌಲತ್ತಳ ಉಜ್ವಲ ಸೌಂದರ್ಯವು ಪ್ರತ್ಯಕ್ಷನಾದಂತೆ ಭಾಸವಾಗುತ್ತದೆ ಬೀಬೀರಾಣಿಯ ಹೃದಯದಲ್ಲಿ ಅಂಧಕಾರವು ಮೂಡುತ್ತದ ಇಲ್ಲ! ಇಲ್ಲ! ಆ ಸೋನಾಮಹಲು ಈ ಲೋಕದಲ್ಲಿಲ್ಲ! ಅದು ಎಲ್ಲೋ ಯಾವ ಲೋಕದಲ್ಲಿಯೋ ಇದೆ ನಾವು ಈ ಲೋಕದಲ್ಲಿದ್ದೇವೆ ಈ ಮೋತೀಮಹಲಿನಲ್ಲಿದ್ದೇವೆ ಅಲ್ಲೀಸೇಟನು ಇಲ್ಲಿದ್ದಾನೆ ನಾವಿಬ್ಬರೂ ಈ ಲೋಕದವರು ಎಂದುಕೊಳ್ಳುತ್ತಾಳೆ ಹೃದಯದಲ್ಲಿ ಪ್ರಣಯದ ಪ್ರಕಾಶವೇಳುತ್ತದೆ, ಅದರಲ್ಲಿ ಸೋನಾಮಹಲು ದೌಲತ್ ಎಲ್ಲವೂ ಅಂತರ್ಧಾನವಾಗುತ್ತವೆ

ಬೀಬೀರಾಣಿಯು ಸಡಗರದಲ್ಲಿ ಓಡಿಯಾಡುತ್ತಾ ಕಲ್ಪನಾತರಂಗಗಳಲ್ಲಿ ಮುಳುಗಿ ಏಳುತ್ತಾ ಇರುವಂತೆಯೇ ಸಂಧ್ಯಾಕಾಲವಾಯಿತು

ರಾಜಮಹಲೆಲ್ಲವೂ ದೀಪಮಾಲೆಗಳಿಂದ ಅಲಂಕೃತವಾಗಿದೆ ಆ ದೀಪಮಾಲಾಲಂಕೃತವಾದ ಅರಮನೆಯು—ನಕ್ಷತ್ರಲೋಕವು ಭೂಮಿಗೆ ಇಳಿದು ಬಂದಂತೆ ಮನೋಹರವಾಗಿ ರಾರಾಜಿಸುತ್ತಿದೆ ಆಕಾಶದಲ್ಲಿ ಕತ್ತಲು ಕವಿಯುತ್ತಿದೆ ಸ್ವಲ್ಪ ಹೊತ್ತಿನೊಳಗಾಗಿಯೇ ಅರಮನೆಯ ಮಹಾದ್ವಾರದಲ್ಲಿ ಮ್ಯಾನಾ ಬರುತ್ತಿರುವುದನ್ನು ರಾಣಿಯು ಮೇಲಿನ ಗವಾಕ್ಷದಿಂದ ಕಂಡಳು ಆ ಮ್ಯಾನಾ ಅರಮನೆಯೊಳಗೆಹೊಕ್ಕು ಮೋತೀಮಹಲಿನ ಹೊರ ಅಂಗಳದಲ್ಲಿ ಇಳಿಸಲ್ಪಟ್ಟಿತು. ಆ ಭವ್ಯವಾದ ದೀಪಾವಳಿಗಳಿಂದಲಂಕೃತವಾದ ಪತಾಕೆಗಳಿಂದ ಶೋಭಿತವಾದ ಅರಮನೆಯ ವೈಭವವನ್ನು ಆಶ್ಚರ್ಯದಿಂದ ನೋಡುತ್ತಾ ಅಲ್ಲೀಸೇಟನು ಮ್ಯಾನಾದಿಂದ ಇಳಿದನು. ಶುಭ್ರವಸನಾಲಂಕೃತೆಯರಾದ ಸುಂದರಿಯರಿಬ್ಬರು ಮಂದಹಾಸವದನೆಯರಾಗಿ ಬಂದು ಸೇಟನನ್ನು ಮೋತೀಮಹಲಿನೊಳಗೆ ಕರೆದೊಯ್ದರು ಖಾನನು ಸುತ್ತಲೂ ನೋಡುತ್ತಾ ಮೆಲ್ಲಡಿಯಿಡುತ್ತ ಅವರನ್ನು ಹಿಂಬಾಲಿಸಿ ಹೋದನು ಅಂತಃಪುರವನ್ನು ಪ್ರವೇಶಿಸುತ್ತಲೇ ಆ ಆಹ್ಲಾದಕರವಾಧ ದೀಪಗಳು, ಅಗರುಬತ್ತಿಯ ಸುವಾಸನಾ ವಾಸಿತವಾದ ಹಜಾರ

ಆ ಹಜಾರದಲ್ಲಿ ಘಮಘಮಿಸುವ ಪುಷ್ಪಾಲಂಕಾರಗಳು. ಆ ಅನರ್ಘ್ಯಾಸನಗಳನ್ನು ಅಲಂಕರಿಸಿಟ್ಟಿರುವ ರೀತಿ. ಇವೆಲ್ಲವನ್ನೂ ಕಂಡು ಅಲ್ಲೀಸೇಟನು ಮುಗ್ಧನಾದನು. ದಿವ್ಯಾಲಂಕಾರಗಳಿಂದ ಶೋಭಿಸುತ್ತಿರುವ ಬೀಬೀರಾಣಿಯು ನಗುತ್ತ ನಲಿಯುತ್ತ ಸೇಟನನ್ನು ಹಜಾರದಲ್ಲಿ ಎದುರುಗೊಂಡಳು ಖಾನನನ್ನು ಮುಗುಳುನಗೆಯಿಂದಸ್ವಾಗತಿಸಿ ಮೃದುಹಸ್ತದಿಂದ ಹಸ್ತಲಾಘವವನ್ನಿತ್ತು ಆಸನದಲ್ಲಿಕುಳ್ಳಿರಿಸಿದಳು

ಸೇಟನು ಆ ದಿವ್ಯಾಸನದಲ್ಲಿ ಕುಳಿತು ಪಕ್ಕದಲ್ಲಿ ಕುಳಿತಿರುವ ಬೀಬಿಯ ಮೃದು ಹಸ್ತಗಳನ್ನು ಸವರುತ್ತಾ 'ಬೀಬೀ ! ಇದೇನು, ಇಂದು ಈ ಮೋತೀಮಹಲಿನಲ್ಲಿ ಇಷ್ಟೊಂದು ಸಂಭ್ರಮ ? ಈ ದೀಪಾಲಂಕಾರಗಳೇನು ? ಈ ಪುಷ್ಪಸೌರಭವೇನು ? ಈ ಸುಗಂಧಪರಿಮಳವೇನು ? ಈ ನಿನ್ನ ಉಜ್ವಲಾಲಂಕಾರಗಳೇನು ?" ಎಂದನು

"ಅಲ್ಲೀಸೇಟರೇ ! ಇದೆಲ್ಲಾ ನಿಮಗಾಗಿ ! ಎಂದೂ ನಮ್ಮ ಮಹಲಿಗೆ ಬರಲು ಒಪ್ಪದಿರುವ ನೀವು ಇಂದು ಅನುಗ್ರಹ ಮಾಡಿದ್ದೀರಿ ಇಂದು ಹಿಂದೂಗಳ ಹಬ್ಬ ! ನೀವು ಅರ್ಧ ಹಿಂದುಗಳು "

"ಬೀಬಿ ! ನಾನು ಹಿಂದುವಲ್ಲ. ಹೈದರಲ್ಲೀಖಾನರ ಕುಮಾರ ! ಈ ಹಬ್ಬಗಳೆಲ್ಲಾ ನನಗೆ ನೆನಪೇ ಇಲ್ಲ ಆದರೆ ಇಂದು ಈ ನಿನ್ನ ವೈಭವದ ದರ್ಶನವೇ ಒಂದು ದೊಡ್ಡ ಹಬ್ಬ. ಬೀಬಿ ! ನಿನ್ನ ಪ್ರಣಯವು ಅಮೃತದಂತೆ ಮಧುರವಾದುದು ಪುಷ್ಪವು ಹೇಗೆ ಪರಿಮಳವನ್ನು ಬೀರುತ್ತದೋ ಹಾಗೆ ನಿನ್ನ ಪ್ರಣಯಮಾಧುರ್ಯಕ್ಕೆ ತಕ್ಕಂತೆ ಈ ಪ್ರೇಮಧಾಮವನ್ನು ನಿರ್ಮಿಸಿದ್ದಿ ನಾನು ಇಂತಹ ಸ್ವರ್ಗಮಂದಿರದಲ್ಲಿ ನಿನ್ನ ಈ ದಿವ್ಯ ಸಾನ್ನಿಧ್ಯದಲ್ಲಿ ನಿನ್ನ ಕೈಯಲ್ಲಾಡುವ ಪರಿಮಳದಂತಾಗಿದ್ದೇನೆ" ಎಂದು ಹೇಳುತ್ತಾ ಬೀಬಿಯ ಕೈಯನ್ನೆತ್ತಿ ಮುಂಗೈಯನ್ನು ಚುಂಬಿಸಿದನು

ಬೀಬಿಯು ಖಾನನ ಕಂಠದ ಮೇಲೆ ತನ್ನ ತೋಳನ್ನು ಹಾಕಿ ಬಾಹುಬಂಧನದಿಂದ ಖಾನನನ್ನು ಬಗ್ಗಿಸಿ, "ಖಾನರೇ ! ನಿಜವಾಗಿ ಹೇಳಿ ಈ ಮೋತೀಮಹಲು ಸೋನಾಮಹಲಿಗಿಂತಲೂ ಮನೋಹರವಾಗಿರುವುದೆ ?" ಎಂದಳು

ಖಾನನ ಮುಖ ಛಾಯೆಯು ಥಟ್ಟನೆ ಬದಲಾಯಿತು. ಖಾನನು ದೀರ್ಘ ನಿಶ್ವಾಸವನ್ನು ಬಿಟ್ಟು "ಬೀಬೀ, ನೀನು ಮುಗ್ಧ ತರುಣಿ. ಸೋನಾಮಹಲಿನ ವಿಚಾರವನ್ನು ನೀನರಿಯೆ. ಸೋನಾಮಹಲು ಭೋಗಮಂದಿರವಲ್ಲ. ಅದು ದಾನ-ಧರ್ಮಗಳ ಭಂಡಾರ ಅದು ದೀನರಿಗೆ, ಅನಾಥರಿಗೆ, ಆರ್ತರಿಗೆ ಸ್ವರ್ಗಧಾಮ ಅಲ್ಲಿರುವುದು ದೈವೀಪ್ರಕಾಶ, ಈ ಮೋತೀಮಹಲು ನಿನ್ನ ಪ್ರೇಮಧಾಮ. ಇದು ಪ್ರತ್ಯಕ್ಷವಾಗಿ ಸ್ವರ್ಗವನ್ನು ಅನುಭವ ಮಾಡುವ ಕ್ಷೀರಸಾಗರ, ನೋಡು, ಬೀಬೀ ! ನೀನು ನನಗಾಗಿ, ನನ್ನ ಆನಂದಕ್ಕಾಗಿ ಈ ಶೃಂಗಾರ ಸೌಧವನ್ನು ನಿರ್ಮಿಸಿರುವೆ. ನಾವು ಈ ಕ್ಷೀರಸಾಗರದಲ್ಲಿ ರಾಜ

ಹಂಸಗಳಂತೆ ವಿಹರಿಸೋಣ. ನಿನ್ನ ಒಂದು ಕ್ಷಣದ ಆನಂದಕ್ಕಾಗಿ ನಾನು ನನ್ನ ಸರ್ವ ಸ್ವವನ್ನೂ ಅರ್ಪಣ ಮಾಡಲು ಸಿದ್ಧನಾಗಿದ್ದೇನೆ" ಎಂದನು

ಬೀಬಿಯು ಅಂತಃಪುರದೊಳಗೆ ಹೋಗಿ ಚಿನ್ನದ ಮಧುಪಾತ್ರೆಯನ್ನು ತಂದಳು. ಖಾನನೂ ಬೀಬಿಯೂ ಮಧುಪಾನ ಮಾಡಿದರು. ಈ ಪ್ರಣಯಿಗಳು ಮಧುಪಾನ ಮತ್ತರಾಗಿ, ಪರಸ್ಪರಾಲಿಂಗನವನ್ನು ಮಾಡಿ ಪರಸ್ಪರ ಚುಂಬಿಸುವಷ್ಟರಲ್ಲಿ-ಚಿನ್ನದ ಪಂಜರದಲ್ಲಿದ್ದ ಗಿಣಿಯು "ಬೀಬೀ ! ಬೀಬೀ ! ಬಾ !" ಎಂದು ಕೂಗಿತು. ಬೀಬಿಯು ಚಕಿತಳಾಗಿ, ಖಾನನ ಸಮೀಪದಿಂದ ಸರಿದು, ಹಾರಿಹೋಗಿ ಪಂಜರದ ಸಮೀಪದಲ್ಲಿ ಬಾಗಿ ನಿಂತು, ಹಣ್ಣು ತೆಗೆದು ಗಿಣಿಗೆ ಕೊಟ್ಟು "ಮಜನು ಮಜನು" ಹಣ್ಣು ತಿನ್ನು ಎಂದಳು ಆ ಗಿಣಿಯು ಕೊಕ್ಕಿನಿಂದ ಹಣ್ಣನ್ನು ಕುಕ್ಕಿ, ರಸಾಸ್ವಾದ ಮಾಡತೊಡಗಿತು.

ಬೀಬಿಯು ಉಪಚಾರೋಕ್ತಿಗಳಿಂದ ಖಾನನನ್ನು ಊಟಕ್ಕೆ ಎಬ್ಬಿಸಿದಳು. ಅವರಿಬ್ಬರೂ ಒಂದೇ ಚಿನ್ನದ ತಟ್ಟೆಯಲ್ಲಿ ಭೋಜನ ಮಾಡುತ್ತಾ ಮಾತನಾಡುತ್ತ ಭೋಜನವನ್ನು ಪೂರೈಸಿದರು ಭೋಜನೋತ್ತರ ದಾಡಿಮ ಬೀಜಗಳನ್ನು ಕೈಯಲ್ಲಿ ತೆಗೆದುಕೊಂಡು ಬೀಬಿಯು ಖಾನನಿಗೆ ತಿನ್ನುವುದಕ್ಕೆ ಕೊಟ್ಟಳು ಖಾನನು "ನೀನು ಲೈಲಾ!" ಎಂದು ಹೇಳುತ್ತ ಆ ದಾಡಿಮ ಬೀಜಗಳನ್ನು ತಾನು ತೆಗೆದುಕೊಂಡು ಆ ಗಿಣಿಗೆ ತಿನ್ನಿಸುವುದಕ್ಕೆ ಹೋದನು. ಆ ಗಿಣಿಯು ತಿನ್ನಲಿಲ್ಲ

"ಈ ಗಿಣಿಯು ದಾಡಿಮ ಬೀಜಗಳನ್ನು ತಿನ್ನುವುದಿಲ್ಲವೇಕೆ ?" ಎಂದು ಕೇಳಿದನು

ಬೀಬಿಯು "ಖಾನರೇ ! ನನ್ನ ಗಿಣಿಯು ಪುರುಷರು ಕೊಟ್ಟ ಹಣ್ಣನ್ನು ತಿನ್ನುವುದಿಲ್ಲ !" ಎಂದು ನಕ್ಕಳು.

ಖಾನನು "ನಾನು ತಿನ್ನಿಸುತ್ತೇನೆ, ನೋಡು !" ಎಂದು ಹೇಳುತ್ತಾ "ಮಜನು! ಮಜನು ! ತಿನ್ನು" ಎಂದು ಹೇಳಿ, ಒಂದೊಂದಾಗಿ ದಾಡಿಮ ಬೀಜಗಳನ್ನು ಆ ಗಿಣಿಗೆ ತಿನ್ನಿಸುತ್ತಾ ಗಿಣಿಯೊಡನೆ ಮಾತನಾಡುತ್ತಾ ಇದ್ದನು

ಖಾನನು ಬೀಬಿಯನ್ನು ಮರತೇಬಿಟ್ಟನು !

ಅಂತಃಪುರದೊಳಗಿನ ಕೋಣೆಯಿಂದ ಸಿತಾರವು ಧ್ವನಿ ಮಾಡಲಾರಂಭಿಸಿತು ! ಆ ರಾಗ ಮಾಧುರ್ಯವು ಮಂದಿರವನ್ನೆಲ್ಲಾ ಆವರಿಸಿ ಝೇಂಕರಿಸ ತೊಡಗಿತು. ಆ ರಾಗೋನ್ಮತ್ತವಾದ ಶುಕವು "ಮಜನು-ಮಜನು ಹೋಗು !" ಎಂದು ಕೂಗಿತು ! ಖಾನನು ಹಿಂದಿರುಗಿ ನೋಡಿದನು. ಬೀಬಿಯು ಇರಲಿಲ್ಲ !

ಖಾನನು ಸಿತಾರಿನ ಧ್ವನಿಯಾಗುತ್ತಿರುವ ಕೋಣೆಯೊಳಗೆ ಅಡಿ ಇಟ್ಟನು.

ಆ ಸೊಗಸಾದ ಶಯನಗೃಹಲ್ಲಿ ಚಿನ್ನದ ಪರ್ಯಂಕದ ಮೇಲೆ ಹಂಸತೂಲಿಕಾ

ತಲ್ಪದಲ್ಲಿ ಕುಳಿತು ಸಿತಾರವನ್ನು ತಾರಸ್ವರದಲ್ಲಿ ಬಾರಿಸುತ್ತಿರುವ ಮೋಹಿನಿಯನ್ನು ಕಂಡನು ಬೆಳ್ಳನೆಯ ಜರತಾರಿಯ ಪತ್ತಲವನ್ನುಟ್ಟಿದ್ದಳು ಆ ಸೀರೆಯ ಕುಚ್ಚು ಮಂಚದ ಕೆಳಗೆ ಮೆಲ್ಲಮೆಲ್ಲನೆ ಹಾರುತ್ತಿತ್ತು ಆ ತಾಳಕ್ಕೆ ಸರಿಯಾಗಿ ಅಲುಗಾಡುತ್ತಿರುವ ಪಾದ ಯುಗ್ಮಗಳಲ್ಲಿ ಮುತ್ತಿನ ಸರಗಳು ಕುಣಿಯುತ್ತಿದ್ದುವು ತೊಡೆಯ ಮೇಲೆ ಸಿತಾರವು ಆಡ್ಡ[illegible]ಯಿಂದ ಮಲಗಿತ್ತು ಕಟಿಪ್ರದೇಶದಲ್ಲಿ ವಜ್ರದ ಕಟಿಬಂಧವು (ಡಾಬು) ವಿರಾಜಿಸುತ್ತಿತ್ತು ಕರೀಬಣ್ಣದ ಕಂಚುಕವು ಸ್ತನಗಳನ್ನು ಬಿಗಿದು ಕಟ್ಟಿತ್ತು ಅದರ ಮೇಲೆ ಮುಕ್ತಾಹಾರವು ನರ್ತಿಸುತ್ತಿತ್ತು ಎಳಸಾದ ಮನೋಹರವಾದ ಎರಡು ಕೈಗಳೂ ಸಿತಾರವನ್ನು ಹಿಡಿದಿದ್ದವು ಬೆರಳುಗಳ ವಜ್ರದುಂಗರವು ಕಣ್ಣು ಕುಕ್ಕುತ್ತಿತ್ತು ಮುಂಗೈಯಲ್ಲಿ ಕಟ್ಟಿದ್ದ ಮುತ್ತಿನ ಮೂರೆಳೆಯ ಸರವು ಸಿತಾರದ ಮೇಲೆ ಕ್ರೀಡಿಸುತ್ತಿತ್ತು ವಜ್ರದ ಬಾಹುಬಂದಿಗಳು ಆ ದೀರ್ಘವಾದ ತೋಳುಗಳ ಮೇಲೆ ಕಂಗೊಳಿಸುತ್ತಿದ್ದುವು ಬೆಳ್ಳನೆಯ ಕಂಠವನ್ನು ಪಚ್ಚೆಯ ಸರವು ಅಲಂಕರಿಸಿತ್ತು ಕಿವಿಗಳಲ್ಲಿ ನೇರಳೇಹಣ್ಣಿನಂತಹ ನೀಲಮಣಿಗಳು ಆಡುತ್ತಿದ್ದವು ಬಿಚ್ಚಿದ ಕೇಶದಾವವು ಆ ಪರ್ಯಂಕದ ಮೇಲೆಲ್ಲಾ ಹಾರುತ್ತಿತ್ತು ಆ ವಿಶಾಲವಾದ ಹಣೆ, ಕೆಂಪಾದ ಕಪೋಲಗಳು, ಅದುರುತ್ತಿರುವ ಅಧರಗಳು, ಮುಗುಳುನಗೆಯನ್ನು ಸೂಸುತ್ತಿರುವ ದಂತಗಳು, ಆಲಸವಾದ ಪ್ರಕಾಶಮಾನವಾದ ಉಜ್ವಲವಾದ ನೇತ್ರಯುಗ್ಮ, ಆ ನೋಗಿನ ನೋಟವು ಖಾನನನ್ನು ಕರೆಯುತ್ತಿತ್ತು ಅವನನ್ನು ಮೋಹದಲ್ಲಿ ಮುಳುಗಿಸಿ, ತೇಲಸುತ್ತಿತ್ತು.

ಖಾನನು ಮೋಹವಿಹ್ವಲನಾಗಿ "ಬೀಬಿ ಬೀಬಿ" ಎನ್ನುತ್ತಾ ಹಾರಿ ಹೋಗಿ ಮನದಣಿಯ ಆ ಕಪೋಲಗಳನ್ನು ಚುಂಬಿಸಿದನು

ಬೀಬಿಯು ಸಿತಾರನ್ನು ಬಾರಿಸುತ್ತಲೇ ಇದ್ದಳು ಖಾನನು ಈ ರೂಪಮೋಹದಿಂದ ಎಚ್ಚತ್ತು ಆ ಗಾನಮಾಧುರ್ಯದಲ್ಲಿ ಮುಳುಗಿದನು ವಿಲಾಸಿಗಳು ಹೇಗಿದ್ದರೇನು ? ಅವರ ಆಶೆಗಳು ಏನಾದರೇನು ? ಕಾಲಚಕ್ರವು ತಿರುಗುತ್ತಲೇ ಇರುತ್ತದ ಬಾಲಸೂರ್ಯನು ನಿಶಿಯನ್ನು ತಳ್ಳಿ ಅರುಣಕಾಂತಿಯಿಂದ ಮೆರೆಯತೊಡಗಿದನು

ಪ್ರಾತಃಕಾಲ ಬೀಬೀರಾಣಿಯು ಮಜ್ಜನಾಲಂಕಾರವನ್ನು ತೀರಿಸಿಕೊಂಡು ಖಾನನ ಸಾನ್ನಿಧ್ಯವನ್ನು ಸೇರಿದಳು "ಖಾನರೇ ! ನಾವಿಬ್ಬರೂ ಭಗವಂತನ ಸಾಕ್ಷಿಯಾಗಿ ಪತಿಪತ್ನಿಯರು. ನೀವು ಈ ರಾಜ್ಯದ ರಾಜತ್ವವನ್ನು ಸ್ವೀಕರಿಸಿ ನಾನು ಈ ಕರ್ಕಶವಾದ ರಾಜಕೀಯವನ್ನು ಇನ್ನುಮೇಲೆ ನೋಡಲಾರೆ" ಎಂದಳು

"ಬೀಬಿ ! ನಾನು ದೇವರನ್ನು ನಂಬುವುದಿಲ್ಲ ಅಂತರಾತ್ಮ ಸಾಕ್ಷಿಯಾಗಿ ನಾವು ದಂಪತಿಗಳು. ನಾನು ಈ ರಾಜ್ಯವನ್ನು ಪರಿಗ್ರಹಿಸುವುದಿಲ್ಲ. ಈ ರಾಜ್ಯದ ರಾಣಿಯಾದ ನಿನ್ನನ್ನು ಮನಸಾರ ಪರಿಗ್ರಹಿಸಿದ್ದೇನೆ. ಅದೇ ನನ್ನ ಸರ್ವಸ್ವ"

"ಖಾನರೇ! ನೀವು ಈ ಮೋತೀಮಹಲಿನಲ್ಲಿಯೇ ಇರಬೇಕು. ನಾನು ನಿಮ್ಮನ್ನು ಕೋಜೇಬಂದರಿಗೆ ಕಳಿಸಲೊಪ್ಪುವುದಿಲ್ಲ."

"ಪ್ರಿಯೆ' ಬೀಬಿ, ನೀನು ಮಹಾರಾಣಿಯೆಂಬುದನ್ನು ಮರೆಯಬೇಡ ನಾನು ಈ ಅಂತಃಪುರದಲ್ಲಿ ಆ ಪಂಜರದಲ್ಲಿರುವ ಶುಕರಾಜನಂತೆ ಇದ್ದರೆ ನನ್ನ ಈ ಬ್ರಹ್ಮಾಂಡ ವ್ಯಾಪಾರವು ಹೇಗೆ ನಡೆಯಬೇಕು ? ನಾನು ಮುಂದಿನ ರಣಾಂಗಣವನ್ನು ನಿರ್ಮಾಣ ಮಾಡುವುದು ಹೇಗೆ ? ನಾನು ಕೋಜೇಬಂದರಿನಲ್ಲಿದ್ದು ಮತ್ತೊಂದು ಮೈಸೂರು ಯುದ್ಧವನ್ನು ಎತ್ತಿಕಟ್ಟುತ್ತೇನೆ ರಣಕ್ಷೇತ್ರದಲ್ಲಿ ಇಂಗ್ಲೀಷರೂ ಫ್ರಂಚರೂ ಹೋರಾಡುವಂತೆ ಮಾಡುತ್ತೇನೆ ಮರಾಟರೂ ಹೈದರಾಬಾದಿನವರೂ ಬಂದು ಮೈಸೂರಿನ ರಣಕ್ಷೇತ್ರದ ಅಗ್ನಿಕುಂಡದಲ್ಲಿ ಬೀಳುವಂತೆ ವ್ಯೂಹವನ್ನು ಕಲ್ಪಿಸುತ್ತೇನೆ ಹಣವಿಲ್ಲದೇ ಕೊರಗುತ್ತಿರುವ ಸುಲ್ತಾನರ ಭಂಡಾರಕ್ಕೆ ಸ್ವರ್ಣಪ್ರವಾಹವು ಹರಿಯುವಂತೆ ಮಾಡಿ ಅವರಿಗೆ ಶಕ್ತಿಯನ್ನು ಕೊಡುತ್ತೇನೆ ನಾನು ಆ ರಣಕ್ಷೇತ್ರದಲ್ಲಿ ಮುಂದೆ ನಿಂತು ಹೋರಾಡಿ, ಈ ದಕ್ಷಿಣ ಹಿಂದೂಸ್ಥಾನದಲ್ಲಿ ಒಬ್ಬ ಅಲೆಗ್ಜಾಂಡರನು ಹುಟ್ಟಿದ್ದಾನೆ—ಎಂದು ಆಸಮುದ್ರಾಂತ ಪೃಥ್ವಿಯು ಕೊಂಡಾಡುವಂತೆ ಮಾಡುತ್ತೇನೆ. ಇಡೀ ಹಿಂದೂಸ್ಥಾನದಲ್ಲಿ ಸುಲ್ತಾನೀರಾಜ್ಯವು ಸ್ಥಾಪನೆಯಾಗುತ್ತದೆ ನೀನು ಅದಕ್ಕೆ ಶಕ್ತಿಯನ್ನು ಕೊಡು ಪಾಮರ ರಮಣಿಯಂತೆ ಈ ನಿನ್ನ ಜೀವನವನ್ನು ಕಳೆಯಬೇಡ. ನೀನು ವೀರರಮಣಿಯಾಗಿ ನನಗೆ ಉತ್ತೇಜನ ಕೊಡು" ಎಂದನು

ಬೀಬಿಯು ಅವಾಕ್ಕಾದಳು

ಅಲ್ಲೀಸೇಟನು ಬೀಬೀರಾಣಿಯನ್ನು ಕರೆದುಕೊಂಡು ಕೋಜೇಬಂದರಿನಲ್ಲಿರುವ ತನ್ನ ಆವಾಸಸ್ಥಾನಕ್ಕೆ ಹೊರಟುಹೋದನು.

## ಕಾಳೇಶ್ವರಕ್ಷೇತ್ರ

ದೌಲತ್‌ರಾಣಿಯವರೂ, ರಾಧಾರಾಣಿಯವರೂ ಮಂಗಳೂರಿನ ಪ್ರಕರಣವನ್ನು ಪೂರೈಸಿಕೊಂಡು ನಗರಕ್ಕೆ ಹಿಂದಿರುಗಿದರು ಮಂಗಳೂರಿನ ಸಮಾಚಾರವನ್ನೆಲ್ಲಾ ಕರ್ಣಾಕರ್ಣಿಕೆಯಾಗಿ, ಫಾತಿಮಾಬೇಗಂ ಕೇಳಿದಳು ಅವಳಿಗೆ ಅತ್ಯಂತ ದುಃಖವಾಯಿತು "ಈ ಜಗತ್ತಿನಲ್ಲಿ ಟಿಪ್ಪುವನ್ನು ಎದುರಿಸುವವರೇ ಇಲ್ಲವೇ? ಅಂಥಾ ವೀರನೊಬ್ಬನು ಜನ್ಮವೆತ್ತಲಿಲ್ಲವೆ?" ಎಂದು ಹಲುಬಿದಳು ಟಿಪ್ಪೂಸುಲ್ತಾನನನ್ನು ಇಯಜ್‌ಖಾನನು ಎದುರಿಸಿದನು ಹೆಸರಿಲ್ಲದೇ ಹೋದನು ಈ ಹುಸೇಖಾನನ ಮೇಲೆ ಎಷ್ಟೋ ಭರವಸೆ ಇಟ್ಟಿದ್ದೆ ಅವನು ನೀರಿನ ಗುಳ್ಳೆಯಂತೆ ಹಾರಿಹೋದನು ಮತ್ತಾವ ಪುರುಷನಿದ್ದಾನೆ ? ಇಲ್ಲ' ನಾನು ಇನ್ನುಮೇಲೆ ಪುರುಷರನ್ನು ನಂಬುವುದೇ ಇಲ್ಲ. ಟಿಪ್ಪುವಿಗೆ ನಾನೇ ಪ್ರತೀಕಾರ ಮಾಡುತ್ತೇನೆ ಎಂದುಕೊಂಡಳು. ಈ

ದೌಲತ್‌ರಾಣಿಯವರ ಆಶ್ರಯದಲ್ಲಿ ನಾನು ಇರಬಾರದು. ಇವರೆಲ್ಲರೂ ಸುಲ್ತಾನನ ಕಡೆಯವರು. ನಾನಾಗಿ ಇಲ್ಲಿಗೆ ಬರಲಿಲ್ಲ ಬಡಾಫಕೀರರು ನನ್ನನ್ನು ಇಲ್ಲಿರುವಂತೆ ಆಜ್ಞಾಪಿಸಿದರು ಆದರೇನು ? ಬಡಾಫಕೀರರು ದೇವರ ಮನುಷ್ಯರು ! ಅವರಾದರೂ ಈ ಸುಲ್ತಾನನ ಅಪರಾಧಕ್ಕೆ ತಕ್ಕ ಶಿಕ್ಷೆ ಮಾಡಿದರೇನು ? ಹೀಗೆ ನಾನಾವಿಧವಾಗಿ ಫಾತಿಮಳ ಮನಸ್ಸು ಕಳವಳಿಸುತ್ತಿತ್ತು ಫಾತಿಮಳು ದರಿಯಾಬಾಗನ್ನು ಬಿಟ್ಟು ಹೊರಡುವ ನಿಶ್ಚಯವನ್ನು ಮಾಡಿದಳು ಅಂದಿನ ದಿನವೇ ರಾಧಾರಾಣಿಯವರ ಭೇಟಿಯನ್ನು ಮಾಡಿ, ಫಾತಿಮಳು ತಾನು ದರಿಯಾಬಾಗನ್ನು ಬಿಟ್ಟು ಹೊರಡುವುದಾಗಿ ರಾಣಿಯವರಲ್ಲಿ ತಿಳಿಸಿದಳು—

ರಾಧೆ—ಫಾತಿಮಾಬೇಗಂ, ತಾವು ಈ ಸ್ಥಳದಲ್ಲಿ ನಿರ್ಭಯವಾಗಿರಬಹುದು ಈ ಸ್ಥಳವನ್ನೇಕೆ ಬಿಟ್ಟುಹೋಗುತ್ತೀರಿ ?

ಬೇಗಂ—ರಾಣಿಯವರೇ ! ತಾವು ನನಗೆ ಪ್ರಾಣದಾನ ಮಾಡಿದ್ದೀರಿ ಮಾನವನ್ನು ಸಂರಕ್ಷಿಸಿದ್ದೀರಿ ಇಷ್ಟು ದಿನಗಳು ನನ್ನನ್ನು ಕಾಪಾಡಿದ್ದೀರಿ ಇಲ್ಲಿ ಒಂದು ವರ್ಷಕಾಲವಿದ್ದರೂ ನನ್ನ ಮನಸ್ಸು ಶಾಂತವಾಗಲಿಲ್ಲ ಸುಲ್ತಾನರು ದಿವಾನರವರ ಮೇಲೆ ತೋರಿಸಿದ ಕ್ರೌರ್ಯ ! ನನ್ನ ಮೇಲೆ ನಡೆಸಿದ ಅತ್ಯಾಚಾರಗಳ ನೋವು, ನನ್ನ ಹೃದಯದಲ್ಲಿ ಅಂಟಿದೆ. ಅದಕ್ಕೆ ಪ್ರತಿಕ್ರಿಯೆಯನ್ನು ಮಾಡಬೇಕೆಂದು ಪ್ರತಿ ಕ್ಷಣವೂ ಮನವು ಉದ್ವೇಗಗೊಳ್ಳುತ್ತದೆ

ರಾಧೆ—ಹೌದು ! ಬೇಗಂಸಾಹೇಬ್ ! ಸುಲ್ತಾನರ ಅಚಾತುರ್ಯದಿಂದ ತಮ್ಮ ಬಾಳು ಮಣ್ಣುಪಾಲಾಯಿತು ! ಆದರೆ ಪ್ರತಿಕ್ರಿಯೆ ಮಾಡುವ ಉದ್ವೇಗದಿಂದ ತಾವು ಅಡಿಗಡಿಗೆ ತೊಂದರೆಯಲ್ಲಿ ಸಿಲುಕುತ್ತೀರಿ !

ಬೇಗಂ—ರಾಣಿಯವರೇ ! ನನಗೆ ತೊಂದರೆಯೆಂದರೇನು ?—ಟಿಪ್ಪೂಸುಲ್ತಾನರಿಂದ ಆದಷ್ಟು ಹಾನಿಯು ಮತ್ತೆಲ್ಲಿಯೂ ಯಾರಿಂದಲೂ ನನಗೆ ಸಂಭವಿಸದು !

ರಾಧೆ—ಫಾತಿಮಾ ! ನಿಮ್ಮ ಈ ಜಗನ್ಮೋಹಕವಾದ ರೂಪ, ಯೌವನಗಳು ನಿಮಗೆ ಶತ್ರು !

ಫಾತಿಮಳು—(ನಾಚಿಕೆಯಿಂದ) ತಲೆಬಾಗಿರಾಣಿಯವರೇ ! ತಮ್ಮ ಜಾಜ್ವಲ್ಯಮಾನವಾದ ರೂಪಸಂಪತ್ತಿಗಿಂತಲೂ, ನನ್ನ ಈ ಹಾಳುರೂಪವು ಮೋಹಕವಾದುದೆ ?

ರಾಧೆ—(ಮುಗುಳುನಗೆ ನಗುತ್ತಾ) ಫಾತಿಮಾ ! ನನ್ನರೂಪ ಯೌವನಗಳಿಗೆ ಬೆಂಕಿ ಬೀಳಲಿ ! ಅದನ್ನು ಎಂದೋ ಭಗವಂತನಲ್ಲಿ ಅರ್ಪಣೆ ಮಾಡಿದ್ದೇನೆ ಆದುದರಿಂದಲೇ ನನಗಿಷ್ಟು ಧೈರ್ಯ ! ನನಗೆ ಮೋಹವಿಲ್ಲ ! ಭೋಗೇಚ್ಛೆ ಇಲ್ಲ ! ಕ್ರೋಧ ದ್ವೇಷಗಳಿಲ್ಲ ! ನಿಮ್ಮ ಮಾತು ಹಾಗಲ್ಲ. ನೀವು ಸುಖಸಾಮ್ರಾಜ್ಯವನ್ನು ಅನುಭವಿಸಿ

ದ್ದೀರಿ ! ಆದರಿಂದಲೇ ಇಂದು ಇಷ್ಟೊಂದು ಮಹತ್ತರವಾದ ಕ್ರೋಧವು ನಿಮ್ಮನ್ನು ಆವರಿಸಿದೆ !

ಬೇಗಂ—ಇಲ್ಲ ! ರಾಣಿಯವರೇ ! ಇಂದಿನ ನನ್ನ ಸ್ಥಿತಿಯು ಹಾಗಿಲ್ಲ ! ನನಗೆ ಧೈರ್ಯವಿದೆ ತಮ್ಮ ಗುಣಗಳೆಷ್ಟೋ ನನ್ನಲ್ಲಿ ಪ್ರತಿಬಿಂಬಿಸಿವೆ ನಾನಿಂದು ವೀರರಮಣಿ ಯಾಗಿ ಜಯಿಸಬಲ್ಲೆ ! ನನಗೆ ಅಪ್ಪಣೆ ಕೊಡಿರಿ ! ನಾನು ಹೋಗುತ್ತೇನೆ.

ರಾಧಾ—ಬೇಗಂಸಾಹೇಬ್ ! ತಮ್ಮಲ್ಲಿ ಚೈತನ್ಯವಿದೆ ಉದ್ರೇಕವಿದೆ ಕ್ರೋಧ ವಿದೆ, ಅಂಥಾವರನ್ನು ಈ ಪ್ರಪಂಚ ಸಂಗ್ರಾಮದಲ್ಲಿ ಸಂನ್ಯಾಸಿಗಳಂತೆ ಇಡುವುದು ಸಾಧ್ಯವಿಲ್ಲ ಛಲವು ಸ್ತ್ರೀಯರ ಸ್ವಭಾವ ! ಎಷ್ಟೋ ಸಂದರ್ಭಗಳಲ್ಲಿ ಹೆಂಗಸರು ಸಾಹಸ ಮಾಡಿದ್ದು ನೋಡಿದ್ದೇನೆ ಮಾಡಿರಿ ! ಭಗವಂತನು ನಿಮ್ಮನ್ನು ರಕ್ಷಣೆ ಮಾಡಲಿ ! ತಮಗೆ ಯಾವಾಗ ಎಂಥಾ ಕಷ್ಟ ಬಂದರೂ ನಾನೂ ಸಹಾಯ ಮಾಡಲು ಸಿದ್ಧಳಾಗಿ ದ್ದೇನೆ

ಬೇಗಂ—ದೇವಿಯವರೇ ! ತಮ್ಮ ಉಪಕಾರಕ್ಕೆ ನಾನು ಯಾವಾಗಲೂ ಋಣಿ ಯಾಗಿದ್ದೇನೆ

ರಾಧಾ—ಬೇಗಂಸಾಹೇಬ್ ! ತಮ್ಮ ಜವಾಹಿರಿಗಳು, ಧನಕನಕಗಳು ನಮ್ಮ ಲ್ಲಿವೆ ಅದನ್ನೆಲ್ಲಾ ತಾವು ತೆಗದುಕೊಂಡು ಹೋಗಬಹುದು !

ಬೇಗಂ—ರಾಣಿಯವರೇ ! ಅದನ್ನೆಲ್ಲಾ ತಮಗೆ ಕಾಣಿಕೆಯಾಗಿ ಒಪ್ಪಿಸಿದ್ದೇನೆ. ನಾನು ಇಂದಿನಿಂದ ಭಿಕಾರಿಣಿ !

ರಾಧೆ—ಫಾತಿಮಾಬೇಗಂ ! ನಾನು ನಿಮ್ಮ ಕಾಣಿಕೆಯನ್ನು ಪರಿಗ್ರಹಿಸುವು ದಿಲ್ಲ ತಾವು ಭಿಕಾರಿಣಿಯಲ್ಲ ! ಮಹಾನುಭಾವರಾದ ದಿವಾನರವರ ಧರ್ಮಪತ್ನಿ ! ತಾವು ಆಮರಣಾಂತ ಸೌಭಾಗ್ಯದಲ್ಲಿಯೇ ಬದುಕಬೇಕು ಈ ಐಶ್ವರ್ಯಕ್ಕೆ ತಾವು ಅಧಿ ಕಾರಿಣಿ !

ಬೇಗಂ--ನಾನು ತಮ್ಮ ದಾಸಿ ! ಅಜ್ಞಾಧಾರಕಳು ! ಇಂದು ತಾವು ಈ ನನ್ನ ಕಾಣಿಕೆಯನ್ನು ಪರಿಗ್ರಹಿಸದಿದ್ದರ, ಅದು ತಮ್ಮಲ್ಲಿ ನನ್ನದಾಗಿ ಇರಲಿ ! ನಾನು ವೇಷ ಧಾರಿಣಿಯಾದ ಬಿಕ್ಷುಕಳಾಗಿ ಹೋಗುವೆನು ! ಅದೃಷ್ಟವಿದ್ದರೆ ಮತ್ತೊಂದು ದಿನ ಮತ್ತೊಮ್ಮೆ ತಮ್ಮ ದರ್ಶನ ಮಾಡುವೆನು ನಾನು ಪ್ರಾಣತ್ಯಾಗ ಮಾಡುವುದಾದರೆ, ಆ ಸಮಯದಲ್ಲಿ ತಮಗೆ ಅಭಿಜ್ಞಾನವನ್ನು ಕಳಿಸುವೆನು ! ತಮ್ಮ ಆಶೀರ್ವಾದವು ನನ್ನ ಮೇಲೆ ಇರಲಿ ! ಎಂದು ಹೇಳಿ ಕಣ್ಣೀರಿಡುತ್ತಾ ವಂದಿಸಿ ಪ್ರಯಾಣಕ್ಕೆ ಅಪ್ಪಣೆಯನ್ನು ಪಡೆದಳು ದೌಲತ್ ರಾಣಿಯವರಲ್ಲಿ ಹೋಗಿ ತನ್ನ ಸಂಕಲ್ಪವನ್ನು ಹೇಳಿದಳು. ಅವರು ಪ್ರತಿರೋಧ ಮಾಡಲು ಎಷ್ಟೋ ಪ್ರಯತ್ನ ಮಾಡಿದರು ಕೊನೆಗೆ ಬೇಗಂರವ ರನ್ನು ಭಿಕಾರಿಣಿಯಾಗಿ ಕಳುಹಿಸಿಕೊಡಲಾರದೇ ಬಿಕ್ಕಿ ಬಿಕ್ಕಿ ಅತ್ತರು. ಅವರಿಬ್ಬರೂ

ಎಷ್ಟೋ ಹೊತ್ತು ನೀರವವಾಗಿ ಅತ್ತರು. ಕೊನೆಗೆ ಬೇಗಂಸಾಹೇಬಳು ಅಪ್ಪಣೆಯನ್ನು ಪಡೆದು ಹೊರಟಳು ಮಹಮುದಾಲಿಯವರ ಗೋರಿಯ ಹತ್ತಿರ ಹೋಗಿ ವಂದಿಸಿದಳು ಧೂಪವನ್ನು ಹಾಕಿದಳು ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಿತ್ತು ! ಬೇಗಂಸಾಹೇಬಳಿಗೆ ಪ್ರಜ್ಞೆ ಇರಲಿಲ್ಲ ! ಹಾಗೆಯೇ ಅಳುತ್ತ ಅಳುತ್ತ ಹುಚ್ಚಳಂತೆ ದರಿಯಾಬಾಗನ್ನು ಬಿಟ್ಟು ಹೊರಟಳು !

ಫಾತಿಮಳಿಗೆ ಉದ್ದೇಶವಿಲ್ಲ ಎಲ್ಲಿಗೆ ಹೋಗಬೇಕೆಂಬ ಸಂಕಲ್ಪವಿಲ್ಲ ಯಾರೂ ಆತ್ಮೀಯರಿಲ್ಲ ! ಹೇಗೋ ನಡಿಗೆಯು ಮಾತ್ರ ಮಂಗಳೂರಿನ ಕಡೆಗೆ ಹೋಗುತ್ತಿತ್ತು ! ದಾರಿ ನಡೆನಡೆದು ಒಂದು ಕ್ರೋಶದೂರ ಹೋದಳು ಆಹಾರವಿಲ್ಲ, ನಡೆಯಲು ಶಕ್ತಿ ಇಲ್ಲ ! ದಾರಿಯ ಪಕ್ಕದಲ್ಲಿರುವ ಒಂದು ಕಲ್ಲಿನ ಮಂಟಪದಲ್ಲಿ ಹೋಗಿ ಕುಳಿತಳು ಹಾಗೆಯೇ ನಿದ್ರೆ ಹತ್ತಿತ್ತು ! ಆ ಕಲ್ಲಿನ ಚಪ್ಪಡಿಯ ಮೇಲೆ ಮಲಗಿದಳು. ಚೆನ್ನಾಗಿ ನಿದ್ದೆ ಬಂತು ! ಅವಳೊಂದು ಸ್ವಪ್ನವನ್ನು ಕಂಡಳು ಅದೊಂದು ವಿಚಿತ್ರ ಸ್ವಪ್ನ ! ಸುಲ್ತಾನನು ಒಂದು ಉಚ್ಚಾಸನದಲ್ಲಿ ಕುಳಿತಿರುವಂತೆ, ಸುತ್ತಲೂ ಸಹಸ್ರ ಸಹಸ್ರ ಜನ ಜಂಗುಳಿಯು ಕಿಕ್ಕಿರಿದು ಸೇರಿರುವಂತೆ ! ಸುಲ್ತಾನನು ಕ್ರೋಧದಿಂದ ಉತ್ತೇಜಿತನಾಗಿ ಮಾತುಗಳಿಂದ ಅಗ್ನಿ ಜ್ವಾಲೆಗಳನ್ನು ಉಗುಳುತ್ತಿರುವಂತೆ ! ಹುಸೇನ್‌ಖಾನನನ್ನು ಶೂಲಕ್ಕೇರಿಸಿದಂತೆ ! ಒಬ್ಬೊಬ್ಬರಾಗಿ ಸುಲ್ತಾನೀ ದರ್ಬಾರಿನ ಸರದಾರರೆಲ್ಲರನ್ನೂ .ಗಲ್ಲಿಗೆ ಏರಿಸಿದಂತೆ ! ಆ ವೀರರ ಪ್ರಾಣಗಳೆಲ್ಲಾ ಹಾರಿಹೋಗಿ ಆಕಾಶದಲ್ಲಿ ಪಕಪಕನೆ ನಗುತ್ತಿರುವಂತೆ ! ಅನೇಕ ಸ್ತ್ರೀಯರನ್ನು ಬೆತ್ತಲೆಯಾಗಿ ನಿಲ್ಲಿಸಿ, ಕಶಾಘಾತ ಮಾಡಿಸುತ್ತಿರುವಂತೆ-ದೌಲತ್ ಮತ್ತು ರಾಧೆಯರನ್ನು ವೇದಿಕೆಯ ಮೇಲೆ ತಂದು ನಿಲ್ಲಿಸಿ ಕಶಾಘಾತ ಮಾಡಿದಂತೆ ! ಆ ರಾಣಿಯರಿಬ್ಬರೂ ಚೀರಿಕೊಂಡು ರೋದಿಸುತ್ತಿರುವಂತೆ ! ಬೇಗಂಸಾಹೇಬಳು ಕೋಪಗೊಂಡು ಜನಮಧ್ಯದಿಂದ ಭೈರವಿಯಂತೆ ನುಗ್ಗಿ, ಸುಲ್ತಾನನ ಸಮ್ಮುಖದಲ್ಲಿ ಹೋಗಿ ನಿಂತು ಟಿಪ್ಪುವನ್ನು ತಿರಸ್ಕರಿಸಿ, ಕಠಾರಿಯಿಂದ ಸುಲ್ತಾನನ ವಕ್ಷಸ್ಥಳದಲ್ಲಿ ತಿವಿದಂತೆ ! ಅವನು ಜೀವರಹಿತನಾಗಿ ಭೂಮಿಯ ಮೇಲೆ ಬಿದ್ದು ಹೊರಳುತ್ತಿರುವಂತೆ ! ತಾನು ಗಹಗಹಿಸಿ ನಗುತ್ತಿರುವಂತೆ ಸ್ವಪ್ನವನ್ನು ಕಂಡಳು ! ಎಚ್ಚರವಾಯಿತು ! ತನ್ನ ಸ್ವಪ್ನವು ನಿಜವೋ ಎಂದು ಸುತ್ತಲೂ ನೋಡಿದಳು. ಮತ್ತೊಮ್ಮೆ ನೋಡಿದಳು. ಇದು ನಿಜವಲ್ಲ ! ಸ್ವಪ್ನ ! ಎಂದು ನಿಟ್ಟುಸಿರು ಬಿಟ್ಟಳು ಆದರೂ ಎದೆಯ ಗುಂಡಿಗೆಯು ಬಡಿದುಕೊಳ್ಳುತ್ತಿತ್ತು

ಅಷ್ಟರಲ್ಲಿ ಬೆಳಕು ಹರಿಯಿತು. ಆ ಮಾರ್ಗವಾಗಿ ಯುವತಿಯೊಬ್ಬಳು ಹೋಗುತ್ತಿದ್ದಳು ಅವಳು ಮಂಟಪದ ಕಡೆ ತಿರುಗಿ ನೋಡಿದಳು ಸಮೀಪಕ್ಕೆ ಬಂದು ನೋಡಿದಳು. ಫಾತಿಮಳನ್ನು ಕಂಡು ಅವಳಿಗೆ ಆಶ್ಚರ್ಯವಾಯಿತು. ಯಾರೋ ದೊಡ್ಡ ಮನುಷ್ಯಳು ! ಏಕಾಕಿನಿಯಾಗಿ ಕುಳಿತಿದ್ದಾಳೆ. ಇವಳು ಯಾರಿರಬಹುದು ?

ಎಂದುಕೊಂಡು ಬೇಗಂಸಾಹೇಬಳನ್ನು ಮಾತನಾಡಿಸಿದಳು ಬೇಗಂಸಾಹೇಬಳು ಯಾವ ಪ್ರಶ್ನೆಗಳಿಗೂ ಸರಿಯಾದ ಉತ್ತರವನ್ನು ಕೊಡಲಿಲ್ಲ ಆದರೂ ಆ ಯುವತಿಯು ಬಿಟ್ಟುಹೋಗಲಿಲ್ಲ ತನ್ನೊಡನೆ ಊರಿಗೆ ಬರಬೇಕೆಂದು ಪ್ರಾರ್ಥಿಸಿದಳು ದೇಶಭ್ರಷ್ಟಳಾಗಿ ಹೊರಟ ಫಾತಿಮಳಿಗೆ ಯಾರ ಜೊತೆಯಾದರೇನು ? ಆ ಯುವತಿಯ ಜೊತೆಯಲ್ಲಿ ಹೊರಟಳು ಅವರಿಬ್ಬರೂ ಮಾತನಾಡುತ್ತ ದಾರಿ ನಡೆದರು ಆ ಮಾತುಗಳಿಂದಲೇ ಅವಳೊಬ್ಬ ವಿದ್ರೋಹಿಯೆಂದು ಗೊತ್ತಾಯಿತು

ಅವಳ ಹೆಸರು ಮಾಲತಿ ಸ್ವಲ್ಪ ಹೊತ್ತಿನೊಳಗಾಗಿಯೇ, ಅವರಿಬ್ಬರೂ ಮಾಲತಿಯ ಮನೆಯನ್ನು ಸೇರಿದರು ಫಾತಿಮಳು ಮಾಲತಿಯ ಮನೆಯಲ್ಲಿ ಒಂದೆರಡು ದಿನಗಳನ್ನು ಕಳೆದಳು ಅವಳೆಷ್ಟೋ ವಿದ್ರೋಹದ ಕಥೆಗಳನ್ನು ಹೇಳಿದಳು ಅಷ್ಟರಲ್ಲಿ ಮಾಲತಿಯ ಕಥೆಯು ಬೇಗಂಳಿಗೆ ತಿಳಿಯಿತು ಅವಳ ಗಂಡನು ಒಬ್ಬ ವಿದ್ರೋಹಿಯೆಂದು ಅವನು ಆ ಊರಿನ ಸುಬೇದಾರರನ್ನು ಕೊಲೆಮಾಡಿದನೆಂದು, ಅದರಿಂದ ಅವನನ್ನು ಗಲ್ಲಿಗೆ ಹಾಕಿದರೆಂದು ಹೇಳಿದಳು ಭಕ್ಷಿಯು ಅವಳಿಗೆ ಜೀವನಕ್ಕೆ ಕೊಡುತ್ತಿದ್ದನೆಂದೂ, ಈಗ ಭಕ್ಷಿಯ ವರ್ತಮಾನವೇ ಇಲ್ಲವೆಂದು ದುಃಖದಿಂದ ಹೇಳಿದಳು. ಬೇಗಂಸಾಹೇಬಳು ತನ್ನ ಕಥೆಯನ್ನು ಹೇಳದೇ ತಾನೂ ಭಕ್ಷಿಯನ್ನೇ ಅರಸುತ್ತ ಬಂದಿರುವುದಾಗಿ ತಿಳಿಸಿದಳು ಅವರಿಬ್ಬರೂ ಭಕ್ಷಿಯನ್ನು ಹುಡುಕಬೇಕೆಂದು ಸಂಕಲ್ಪ ಮಾಡಿದರು

ಮಾರನೆಯದಿನವೇ ಅಲ್ಲಿಂದ ಹೊರಟರು ಹದಿನೈದು ದಿನಗಳಲ್ಲಿ ಮಂಗಳೂರನ್ನು ತಲಪಿದರು ದಾರಿಯುದ್ದಕ್ಕೂ ಅಲ್ಲಲ್ಲಿ ಅನೇಕ ವಿದ್ರೋಹಿಗಳನ್ನು ಕಂಡರು. ಭಕ್ಷಿಯ ಕಥೆಯನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳುತ್ತಿದ್ದರು ಭಕ್ಷಿಯ ವಾಸಸ್ಥಾನವು ಮೂಡಬಿದರೆ ಎಂಬುದು ಫಾತಿಮಳಿಗೆ ತಿಳಿದಿತ್ತು ಬಹುಕಷ್ಟದಿಂದ ಬೇಗಂಸಾಹೇಬಳೂ, ಮಾಲತಿಯೂ ಮೂಡುಬಿದರೆಯನ್ನು ಸೇರಿದರು. ಅಲ್ಲಿ ಒಬ್ಬಿಬ್ಬರು ವಿದ್ರೋಹಿಗಳನ್ನು ಕಂಡು ಅವರ ಸಹಾಯದಿಂದ ಬಸ್ತಿಯ ಪಕ್ಕದಲ್ಲಿದ್ದ ಭಕ್ಷಿಯ ಮನೆಯನ್ನು ಕಂಡುಹಿಡಿದರು ಆ ಮನೆಗೆ ರಕ್ಷಕರಾರೂ ಇರಲಿಲ್ಲ!

ಅಲ್ಲಿ ಒಬ್ಬ ಹುಡುಗನು ಕಾವಲಿರುತ್ತಿದ್ದನು ಬೇಗಂ ಸಾಹೇಬಳು ಅವನನ್ನು ಕಂಡು ಮಾತನಾಡಿಸಿದಳು ಅಲ್ಲಿ ನಾಲ್ಕಾರು ದಿನಗಳು ವಾಸಮಾಡಲು ಅವನನ್ನೊಪ್ಪಿಸಿದಳು

ಒಂದು ದಿನ ರಾತ್ರಿ ಇಮಾಮನು ಅಲ್ಲಿಗೆ ಬಂದಿಳಿದನು ಯಾರೋ ಇಬ್ಬರು ಹೆಂಗಸರು ಎರಡು ಮೂರು ದಿನಗಳಿಂದ ಅಲ್ಲಿಗೆ ಬಂದಿದಾರೆಂದು ತಿಳಿಯಿತು. ಅವನು ಆ ಹೆಂಗಸರನ್ನು ಭೇಟಿ ಮಾಡಿದನು. ಉತ್ತರಕ್ಷಣದಲ್ಲಿಯೇ ಅವರು ಬೇಗಂಸಾಹೇಬರೆಂದು ಅವನಿಗೆ ಗೊತ್ತಾಯಿತು. ಅವನು ಬೇಗಂಸಾಹೇಬರಿಗೆ ಪ್ರಣಾಮಮಾಡಿದನು.

ಭಕ್ಷಿಯ ಪೂರ್ವೋತ್ತರಗಳನ್ನು ಕುರಿತು ಬೇಗಂಸಾಹೇಬಳು ಇಮಾಂನನ್ನು ವಿಚಾರಿಸಿದಳು ಭಕ್ಷಿಯು ಮಲಬಾರಿನಲ್ಲಿದ್ದಾನೆಂದೂ, ತನಗೆ ಆಗಾಗ ಸಮಾಚಾರವು ಬರುತ್ತಿದೆಯೆಂದೂ, ಇಲ್ಲಿಂದ ಅನೇಕರು ಹೋಗಿ ಅಲ್ಲಿಗೆ ಸೇರಿಕೊಳ್ಳುತ್ತಿದ್ದಾರೆಂದೂ, ಅವರಿಗೆಲ್ಲಾ ಭಕ್ಷಿಯು ಸೈನ್ಯದ ತರಬೇತು ಕೊಡುತ್ತಿದಾನೆಂದೂ ಹೇಳಿದನು ಬೇಗಂಸಾಹೇಬರಿಗೆ ಬೇಕಾದ ಏರ್ಪಾಡುಗಳನ್ನೆಲ್ಲಾ ಇಮಾಂನು ಮಾಡಿದನು ಅಂದಿನಿಂದ ಆ ಸ್ಥಳಕ್ಕೆ ಬೇಂಗಂಸಾಹೇಬಳೇ ಅಧಿಕಾರಿಣಿಯಾದಳು ಹೇಗಾದರೂ ಮಾಡಿ ಕಾರ್ಕಳದ ಫಕೀರರನ್ನು ತಾನು ಕಾಣಬೇಕೆಂದು ಬೇಗಂಸಾಹೇಬಳು ಇಮಾಂನಿಗೆ ಹೇಳಿದಳು ಇಮಾಂನು ಎಲ್ಲೆಲ್ಲಿಯೋ ಅಲೆದು ಫಕೀರರನ್ನು ಅಲ್ಲಿಗೆ ಕರತಂದನು ಬೇಗಂಸಾಹೇಬಳಿಗೂ, ಫಕೀರರಿಗೂ ಭೇಟಿಯಾಯಿತು ಬಹಳ ಹೊತ್ತು ಮಾತು ಕಥೆಗಳು ನಡೆದವು. ಪ್ರಸ್ತಾಪತ್ವೇನ ಫಕೀರನು ತನ್ನ ಚರಿತ್ರೆಯನ್ನೆಲ್ಲಾ ಬೇಗಂಸಾಹೇಬಳಿಗೆ ವಿವರವಾಗಿ ತಿಳಿಸಿದನು ಬೇಗಂಸಾಹೇಬರ ಕರುಣಾಜನಕವಾದ ಕಥೆಯನ್ನು ಅವನು ಕೇಳಿ ತಿಳಿದುಕೊಂಡನು ಇದರಿಂದ ಅವನಿಗೆ ಬೇಗಂಸಾಹೇಬಳಲ್ಲಿ ಬಹಳ ಗೌರವವೇರ್ಪಟ್ಟಿತು ಆಗಾಗ ಫಕೀರನು ಇವರ ದರ್ಶನಕ್ಕೆ ಬಂದು ಹೋಗುತ್ತಿದ್ದನು ಇಮಾಮನು ಅಲ್ಲಿಯೇ ಇದ್ದನು ಕ್ರಮಕ್ರಮವಾಗಿ ಅವನು ಬೇಗಂಸಾಹೇಬಳ ಭಕ್ತನಾದನು

ಬೇಗಂಸಾಹೇಬಳ ಸವಾರಿಯು ಅಲ್ಲಿಗೆ ಬಂದಿದೆಯೆಂದು, ವಿದ್ರೋಹಿಗಳಿಗೆ ಒಬ್ಬರಿಂದ ಒಬ್ಬರಿಗೆ ತಿಳಿಯುತ್ತಾ ಬಂತು ! ಅಧಿಕಾರಿಗಳಿಗೂ ಈ ಸಮಾಚಾರವು ಸ್ವಲ್ಪ ಸ್ವಲ್ಪ ತಿಳಿಯಿತು ಪುನಃ ವಿದ್ರೋಹವು ತಲೆ ಎತ್ತುವುದೋ ಎಂಬ ಭೀತಿಯು ಅಧಿಕಾರಿಗಳಿಗೆ ಹುಟ್ಟಿತು. ಈ ಸಮಾಚಾರವು ಫೌಜುದಾರರಿಗೂ ಗೊತ್ತಾಯಿತು ಆದರೆ ಬೇಗಂಸಾಹೇಬಳು ಯಾರೆಂಬುದು ಮಾತ್ರ ಅವರಿಗೆ ತಿಳಿಯಲಿಲ್ಲ ಒಂದು ದಿನ ಫೌಜುದಾರರೇ ಬಂದು ಬೇಗಂಸಾಹೇಬಳನ್ನು ಭೇಟಿ ಮಾಡಿದರು ಅವರಿಗೆ ಬೇಗಂಸಾಹೇಬರು ದಿವಾನ್ ಮಹಮ್ಮದಾಲಿಯವರ ಧರ್ಮಪತ್ನಿಯೆಂಬುದು ಗೊತ್ತಾಯಿತು ಅವರೊಡನೆ ಹೆಚ್ಚು ಮಾತನಾಡಲು ಫೌಜುದಾರರಿಗೆ ಧೈರ್ಯ ಬರಲಿಲ್ಲ ಬಹಳ ಭಯ ಭಕ್ತಿಗಳಿಂದ ಬೇಗಂಸಾಹೇಬರನ್ನು ವಂದಿಸಿ ಹೊರಟುಹೋದರು

ಮಾರನೆಯ ದಿನವೇ ಬೇಗಂಸಾಹೇಬರು ಆ ಸ್ಥಳವನ್ನು ಬಿಡಬೇಕೆಂದು ನಿಶ್ಚಯಿಸಿದರು. ಈ ವಿಷಯವನ್ನು ಫಕೀರರೊಡನೆ ಮಾತನಾಡಿದರು. ಇಮಾಮನೂ ಆ ಆಲೋಚನೆಗೆ ಸೇರಿದನು. ಕೊನೆಗೆ ಮೂವರೂ ಅಲ್ಲಿಂದ ಆ ದಿನವೇ ಪ್ರಯಾಣ ಮಾಡುವುದನ್ನು ನಿಶ್ಚಯಿಸಿದರು. ಮಾಲತಿಯೂ ಜೊತೆಯಲ್ಲೇ ಹೊರಟಳು ಬೇಗಂಸಾಹೇಬರು ಈ ಸಣ್ಣ ಪರಿವಾರದೊಡನೆ ಆ ದಿನವೇ ಅಲ್ಲಿಂದ ಹೊರಟರು ಅವರೆಲ್ಲರೂ ಪ್ರಯಾಣದ ಮೇಲೆ ಪ್ರಯಾಣ ಮಾಡಿ, ಕೊಡಗುರಾಜ್ಯಕ್ಕೆ ಹೋಗಿಸೇರಿದರು.

ವೀರರಾಜಪೇಟೆಗೆ ಒಂದು ಕ್ರೋಶದೂರದಲ್ಲಿ ಕಾಳೇಶ್ವರ ಎಂಬುದೊಂದು ಸ್ಥಳ. ಅಲ್ಲಿಗೆ ರಸ್ತೆ ಇಲ್ಲ ಬೆಟ್ಟಗುಡ್ಡಗಳನ್ನು ಹಾದುಹೋಗಬೇಕು ದಟ್ಟವಾದ ಕಾಡು ದಾರಿ ಕಾವೇರಿನದಿಯು ಜಲಜಲ ಹರಿಯುತ್ತದೆ ನದಿಯ ದಂಡೆಯಮೇಲೆ ಪ್ರಶಸ್ತವಾದ ಈಶ್ವರದೇವಾಲಯ ಅದಕ್ಕೆ ಎದುರಾಗಿ ಮಹಾಕಾಳಿಯ ಆಲಯ! ಎರಡೂ ಎದುರು ಬದರಾಗಿವೆ ಪಕ್ಕದಲ್ಲಿ ದೊಡ್ಡ ಜಂಗಮವಾಡಿ ಛತ್ರಗಳು ಮಹದೇವ ಸ್ವಾಮಿ ಎಂಬುವನು ಅದೆಲ್ಲದಕ್ಕೂ ದೊಡ್ಡ ಗುರು ಇದೆಲ್ಲವೂ ನವನಿರ್ಮಾಣ! ಆದರೂ ಆ ಸ್ಥಳದ ಮಾಹಾತ್ಮ್ಯವು ಬಹಳ ಹರಡಿದೆ ಆ ಗುರುವಿಗೆ ಬಂಗಾರವನ್ನು ಮಾಡುವುದಕ್ಕೆ ಬರುತ್ತದಂತೆ ಆ ಗುರುವು ಮುಟ್ಟಿದರೆ ರೋಗಗಳು ಗುಣವಾಗುತ್ತವಂತೆ ಆ ಮಹಾಕಾಳಿಗೆ ವರ್ಷ ವರ್ಷ ಶರನ್ನವರಾತ್ರಿಯಲ್ಲಿ ನರಬಲಿ ಕೊಡುತ್ತಾರಂತೆ ಕೊಡಗಿನ ರಾಜರಿಗೂ ಇದೆಲ್ಲಾ ವೇದ್ಯವಾಯಿತು ಅವರು ಅನೇಕ ವೇಳೆ ಬಂದು, ಇಲ್ಲಿ ಗುರುಗಳ ದರ್ಶನ ಮಾಡಿ ಅನುಗ್ರಹವನ್ನು ಪಡೆದುಕೊಂಡಿದ್ದಾರ

ಫಕೀರನು ಫಾತಿಮಾ ಬೇಗಂರವರನ್ನು ಈ ಸ್ಥಳಕ್ಕೆ ಕರದುಕೊಂಡು ಬಂದನು. ಅಲ್ಲಿ ಆ ಗುರುವಿನ ಭೇಟಿ ಮಾಡಿಸಿದನು. ಆ ಮಹದೇವಸ್ವಾಮಿಯು ಬೇಗಂರವರನ್ನು ಬಹಳ ಆದರದಿಂದ ಕಂಡನು ಅವರಿಗೆ ಅಲ್ಲಿ ವಾಸಕ್ಕೆ ಬೇಕಾದ ಸಿದ್ಧತೆಗಳನ್ನೆಲ್ಲಾ ಮಾಡಿಸಿಕೊಟ್ಟನು ಮಹದೇವಸ್ವಾಮಿಯೂ, ಫಕೀರನೂ ಅಲ್ಲಿ ಬೇಗಂ ಸಾಹೇಬರು ನಿರ್ಭಯವಾಗಿ ಇರಬಹುದೆಂದು ಭರವಸೆ ಕೊಟ್ಟರು ಆ ಸ್ಥಳದಲ್ಲಿರುವ ಸಂಪತ್ತೆಲ್ಲವೂ ಭಕ್ತಿಯವರದೆಂದೂ, ಬೇಗಂರವರು ಅದರ ಅಧಿಷ್ಠಾತ್ರಿಯಂತೆ ಅವರಿಗೆ ಬೇಕಾದ ಕಾರುಬಾರುಗಳನ್ನು ನಡೆಸಬಹುದೆಂದೂ ತಿಳಿಸಿದರು ಬೇಗಂ ಸಾಹೇಬಳಿಗೆ ಈ ಸ್ಥಳವು ಬಹಳವಾಗಿ ಒಪ್ಪಿತು ಅಲ್ಲಿ ಬೇಗಂಸಾಹೇಬಳು ವಸತಿ ಮಾಡಲು ಆರಂಭಿಸಿದಳು ಇಮಾಮನೂ, ಮಾಲತಿಯೂ, ಬೇಗಂರವರ ಜೊತೆಯಲ್ಲಿಯೇ ಇರುತ್ತಿದ್ದರು ಫಕೀರನೂ ಬಹುಮಟ್ಟಿಗೆ ಕಾಳೇಶ್ವರದಲ್ಲಿಯೇ ವಾಸ ಮಾಡುತ್ತಿದ್ದನು

ಕೊಡಗಿನ ರಾಜ್ಯದಲ್ಲಿ ಕಾಳೇಶ್ವರವು ಬಹಳ ಪ್ರಸಿದ್ಧಿಗೆ ಬಂದಿತು ಐಶ್ವರ್ಯವಂತರು, ದರಿದ್ರರು, ಎಲ್ಲರೂ ದೇವರ ಸಂದರ್ಶನಕ್ಕೆ ಬರುತ್ತಾರೆ ಎಷ್ಟೋ ಕುಟುಂಬಗಳು ಹರಕೆಗಳನ್ನು ಸಲ್ಲಿಸಲು ಬರುತ್ತಾರೆ ಜಂಗಮರಿಗೆ ಭೋಜನಗಳು ನಡೆಯುತ್ತವೆ ಹೊಟ್ಟೆಗಿಲ್ಲದ ದಟ್ಟ ದರಿದ್ರರಿಗೆ ಅನ್ನ ಸಿಕ್ಕುತ್ತದೆ ಅನಾಥಸ್ತ್ರೀಯರಿಗೆ ರಕ್ಷಣೆಯು ದೊರೆಯುತ್ತದೆ ಕೊಡಗಿನ ರಾಜರೂ ರಾಣೀವಾಸದವರೂ ರಾಜಕುಟುಂಬದವರೂ ಆಗಾಗ ಈ ಕ್ಷೇತ್ರಕ್ಕೆ ಬಂದು ಹೋಗುತ್ತಾರೆ

ಈ ಕಾಳೇಶ್ವರಕ್ಕೆ ಸುಮಾರು ಅರ್ಧ ಮೈಲು ದೂರದಲ್ಲಿ ಬೇಗಂಸಾಹೇಬಳು

ವಾಸಮಾಡುವ ಮನೆ ! ಈ ಭಕ್ತರಿಗೆಲ್ಲಾ ಬೇಗಂಸಾಹೇಬಳ ಹೆಸರು ಪ್ರಸಿದ್ಧವಾಗಿದೆ ಅನೇಕರು ಬೇಗಂಸಾಹೇಬಳ ಭೇಟಿ ಮಾಡುತ್ತಾರೆ ಭಾಗ್ಯವಂತರ ಮನೆಯ ಹೆಂಗಸರು ಆಸಕ್ತಿಯಿಂದ ಬೇಗಂಸಾಹೇಬಳ ಭೇಟಿ ಮಾಡುತ್ತಾರೆ. ಇದೆಲ್ಲಾ ರಾಜರ ಕಿವಿಗೂ ಮುಟ್ಟಿತು ರಾಜರಿಗೂ ಒಮ್ಮೆ ಬೇಗಂಸಾಹೇಬಳ ಭೇಟಿ ಮಾಡಬೇಕೆಂದು ಆಶೆ ! ಆದರೆ ದೊಡ್ಡ ಅಂತಸ್ಥಿನ ಮುಸಲ್ಮಾನ್ ಹೆಂಗಸರನ್ನು ಭೇಟಿ ಮಾಡುವುದು ಸುಲಭ ಸಾಧ್ಯವಿಲ್ಲವೆಂದು ಆ ರಾಜರಿಗೂ ಶಂಕ ! ಆ ಬೇಗಂಸಾಹೇಬಳ ವಿಚಾರವಾಗಿ ಏನೇನೋ ಕಥೆಗಳು ಹುಟ್ಟಿ ಹಬ್ಬಿವೆ ಯಾರಿಗೂ ನಿಜವಾದ ಸಮಾಚಾರವು ಗೊತ್ತಿಲ್ಲ ಬೇಗಂಸಾಹೇಬಳ ವಿಚಾರದಲ್ಲಿ ಜನರಾಡಿಕೊಳ್ಳುವ ಮಾತುಗಳೆಲ್ಲಾ ಅತಿಶಯೋಕ್ತಿಯ ಶಿಖರವನ್ನು ಮುಟ್ಟಿವೆ ಅಂತೂ ಕೊಡಗಿನಲ್ಲಿ ಮನೆ ಮನೆಯಲ್ಲಿಯೂ ಬೇಗಂ ಸಾಹೇಬಳ ಹೆಸರು ಪ್ರಸಿದ್ಧವಾಗಿದೆ

ಈ ಕಾಳೇಶ್ವರದಲ್ಲಿ ರಾಜಕೀಯವಿಲ್ಲದೇ ಇಲ್ಲ ! ಪುಂಖಾನು ಪುಂಖವಾಗಿ ರಾಜಕೀಯವು ನಡೆಯುತ್ತಿತ್ತು ಆ ಸಮಯದಲ್ಲಿ ಕೊಡಗಿನ ರಾಜರು ಟಿಪ್ಪೂ ಸುಲ್ತಾನರ ಸ್ನೇಹ ಮಾಡಬೇಕೆ ? ಕುಂಪಣಿಯವರ ಸಹಾಯವನ್ನು ಹೊಂದಬೇಕೆ ಎಂಬ ಪ್ರಶ್ನೆಯು ಅಲ್ಲಲ್ಲಿ ಚರ್ಚೆಯಾಗುತ್ತಿದ್ದಿತು ಕೊಡಗಿನ ರಾಜನು ಶೂರನೇನೋ ನಿಜ ! ಆದರೆ ಭೋಗಪರಾಯಣ ! ಕೊಡಗಿನ ಮುಖ್ಯ ಮುಖ್ಯ ಜನರಿಗೆ ರಾಜನನ್ನು ಕಂಡರ ಸರಿಬೀಳುತ್ತಿರಲಿಲ್ಲ ! ಅದಕ್ಕೆ ಅನೇಕ ಕಾರಣಗಳಿದ್ದುವು ಮುಖ್ಯವಾಗಿ ರಾಜನ ನೀತಿ ಬಾಹಿರವಾದ ಹುಚ್ಚು ಹುಚ್ಚು ನಡವಳಿಕೆಗಳೇ ಅಸಮಾಧಾನಕ್ಕೆ ಕಾರಣ ! ರಾಜನು ಜನಪ್ರಿಯನಲ್ಲದಿದ್ದರೂ, ಯುದ್ಧಪ್ರಿಯ ! ಸೈನ್ಯದವರಿಗೆ ಬಹಳ ಉತ್ತೇಜನವನ್ನು ಕೊಡುತ್ತಿದ್ದನು ಧನಕನಕಗಳನ್ನು ಕೊಡುತ್ತಿದ್ದನು ರಾಜನು ಸ್ವಯಂ ವೀರ! ಕೊಡಗಿನ ಜನರೂ ವೀರರು ! ಆದರೂ ಸಣ್ಣ ಜನಾಂಗ ! ಒಂದು ದೊಡ್ಡ ಯುದ್ಧ ಸಂಭವಿಸಿದರೆ ಕೊಡಗು ಧೂಳೀಪಟವಾಗಿ ಹೋಗುವುದೆಂದು ರಾಜನು ಭಾವಿಸಿದ್ದನು ಪ್ರತಿಯೊಂದು ರಾಜಕೀಯದಲ್ಲಿಯೂ ತಂತ್ರಗಳನ್ನು ಮಾಡುತ್ತಿದ್ದನು ಆ ತಂತ್ರಗಳೆಲ್ಲಾ ಫಲಿಸುತ್ತಿದ್ದವು ಇದರಿಂದ ಕೊಡಗಿನ ರಾಜನು ಸುಖಲೋಲುಪನಾಗಿದ್ದನು

ಕೊಡಗಿನಲ್ಲಿ ಪ್ರತಿಯೊಂದು ಮನೆತನದವರೂ ಕುಲದ ಯಜಮಾನರು ! ಅವರೆಲ್ಲರೂ ವೀರರು ! ಶ್ರೀರಂಗಪಟ್ಟಣದ ಸುಲ್ತಾನರ ಅಧಿಕಾರದ ನೆರಳು ಕೊಡಗಿನ ಮೇಲೆ ಬೀಳಕೂಡದೆಂದು ಅವರುಗಳ ಹಟ ! ಕೊಡಗಿನ ರಾಜರು ಸುಲ್ತಾನರಿಗೆ ಅಂಕಿತರಾಗಿದ್ದಾರೆಂದು ಅವರೆಲ್ಲರಿಗೂ ಅಸಮಾಧಾನ ! ಹೀಗೆ ಕೊಡಗು ರಾಜ್ಯವು ಶಾಂತವಾಗಿರಲಿಲ್ಲ ! ಕೊಡಗಿನ ಮನೆತನದ ಹೆಂಗಸರು ಕಾಳೇಶ್ವರಕ್ಕೆ ಬಂದಾಗಲೆಲ್ಲಾ ಕುತೂಹಲದಿಂದ ಬೇಗಂಸಾಹೇಬಳನ್ನು ಭೇಟಿ ಮಾಡುತ್ತಿದ್ದರು ಲೋಕಾಭಿರಾಮವಾಗಿ ಮಾತನಾಡುತ್ತ, ಅವಳುಗಳು ಕೊಡಗಿನ ಪರಿಸ್ಥಿತಿಯನ್ನೆಲ್ಲಾ ಬೇಗಂಸಾಹೇಬ

ಳಿಗೆ ತಿಳಿಸುತ್ತಿದ್ದರು ತಮ್ಮ ಮನೆಗಳಿಗೆ ಬರಬೇಕೆಂದು ಬೇಗಂಸಾಹೇಬಳಿಗೆ ಆಹ್ವಾನ ಕೊಡುತ್ತಿದ್ದರು ಬೇಗಂಸಾಹೇಬಳು ಆಗಾಗ ಕೊಡಗು ಶೀಮೆಯಲ್ಲಿ ಕೆಲವು ದೊಡ್ಡ ಮನುಷ್ಯರ ಮನೆಗಳಿಗೂ ಹೋಗಿ ಬರುತ್ತಿದ್ದಳು

ಕಾರ್ತಿಕ ಮಾಸದಲ್ಲಿ ಮುತ್ತಣ್ಣನವರೂ ಅವರ ಪತ್ನಿ ಗೌರಮ್ಮನವರೂ, ಪರಿವಾರ ಸಮೇತವಾಗಿ ಕಾಳೇಶ್ವರಕ್ಕೆ ಬಂದರು ಅವರು ಅಲ್ಲಿಯೇ ಆ ಕಾರ್ತೀಕಮಾಸ ಪೂರ್ತಿಯಾಗಿ ವಸತಿ ಮಾಡುತ್ತಾರೆಂದು ಜನರು ಆಡಿಕೊಳ್ಳುತ್ತಿದ್ದರು ಮುತ್ತಣ್ಣನವರು ಕೊಡಗಿನಲ್ಲಿ ಬಲು ದೊಡ್ಡ ಮನುಷ್ಯರು ದೊಡ್ಡ ಸೇನಾನಾಯಕರಾಗಿದ್ದವರು ಹಿಂದೆ ಎಷ್ಟೋ ಯುದ್ಧಗಳಲ್ಲಿ ಪರಾಕ್ರಮವನ್ನು ತೋರಿದವರು ಈಗ ಅವರಿಗೆ ಎಪ್ಪತ್ತು ವರ್ಷ ವಯಸ್ಸು! ಆದರೂ ಬಹಳ ತೇಜಸ್ವಿಗಳಾಗಿದ್ದರು ಅವರು ಕುಟುಂಬ ಸಮೇತ ಕಾಳೇಶ್ವರದಲ್ಲಿ ದೇವರ ಸೇವೆ ಸಲ್ಲಿಸುತ್ತಿದ್ದರು

ಗೌರಮ್ಮನವರು ಒಮ್ಮೆ ಬೇಗಂಸಾಹೇಬರ ಭೇಟಿ ಮಾಡಿ ಬಂದರು ಅವರ ಒತ್ತಾಯದ ಮೇಲೆ ಮುತ್ತಣ್ಣನವರು ಒಂದು ದಿನ ಬೇಗಂಸಾಹೇಬಳ ಭೇಟಿಗೆ ಹೋದರು ಬೇಗಂಸಾಹೇಬಳು ಮುತ್ತಣ್ಣನವರನ್ನು ಬಹಳವಾಗಿ ಆದರಿಸಿದಳು ಬೇಗಂ ಸಾಹೇಬಳನ್ನು ಕಾಣುತ್ತಲೇ ಮುತ್ತಣ್ಣನವರಿಗೆ ಬಹಳ ಗೌರವಬುದ್ಧಿಯು ಹುಟ್ಟಿತು! ಮುತ್ತಣ್ಣನವರು ಬಹಳ ಆದರ ವಿಶ್ವಾಸಗಳಿಂದ ಬೇಗಂಸಾಹೇಬರ ಪೂರ್ವೋತ್ತರಗಳನ್ನು ವಿಚಾರಿಸಿದರು.

ಬೇಗಂಸಾಹೇಬಳನ್ನು ತನ್ನ ದುಃಖಮಯವಾದ ಕಥೆಯನ್ನು ಯಥೋಚಿತವಾಗಿ ತಿಳಿಸಿದಳು

ಮುತ್ತಣ್ಣ—ಬೇಗಂ ಸಾಹೇಬರೇ, ತಾವು ದಿವಾನ್ ಮಹಮ್ಮದಾಲಿಯವರ ಧರ್ಮಪತ್ನಿಯವರೆಂದರೆ ನಮಗೆಲ್ಲರಿಗೂ ಪೂಜ್ಯರು ಯುದ್ಧದೇವತೆಯ ಆರಾಧಕರೆಲ್ಲರಿಗೂ ಮಹಮ್ಮದಾಲಿಯವರು ಮಹದಾಚಾರ್ಯರು! ಮಿತ್ರರಿಗೂ ಶತ್ರುಗಳಿಗೂ ಅವರಲ್ಲಿ ಸಮಾನಗೌರವ! ದಿವಾನರವರು ರಣಕ್ಷೇತ್ರದಲ್ಲಿ ತಂತ್ರವೆಂಬುದನ್ನೇ ಅರಿಯರು! ರಣಧರ್ಮವನ್ನು ಚಾಚೂ ತಪ್ಪದಂತೆ ಪಾಲಿಸಬೇಕೆಂಬುದೇ ದಿವಾನರ ವೀರಧರ್ಮ! ಅವರು ಸೇನಾಧಿಪತಿಗಳಾಗಿ ಕೊಡಗಿನ ಮೇಲೆ ಯುದ್ಧ ಮಾಡಿದರು ಒಬ್ಬ ಸ್ತ್ರೀಯಳ ಮೇಲೆಯೂ ಮಾನಭಂಗವಾಗಿಲ್ಲ! ಒಂದು ಕಡೆಯೂ ಲೂಟಿ ನಡೆಯಲಿಲ್ಲ ರಾಜರಿಗೆ ಯತ್ಕಿಂಚಿತ್ ಅಪಮಾನವಾಗಲಿಲ್ಲ ಕೊಡಗಿನ ಯುದ್ಧದಲ್ಲಿ ಗೆದ್ದ ಮೇಲೆ ದಿವಾನರವರು ಸ್ವತಃ ಅರಮನೆಗೆ ಬಂದರು ರಾಜರನ್ನು ಸೆರೆಹಿಡಿದು ಶಿಬಿರಕ್ಕೆ ಸೆಳೆದೊಯ್ಯಬಹುದಿತ್ತು! ಅವರು ಮರ್ಯಾದೆಯಿಂದ ರಾಜರ ಭೇಟಿ ಮಾಡಿದರು ರಾಜರು ಸೋಲನ್ನು ಒಪ್ಪಿಕೊಳ್ಳಬೇಕೆಂದೂ, ಹೈದರಾಲಿಯವರಿಗೆ ಅಂಕಿತರಾದ ಮಿತ್ರರಾಗಿರಬೇಕೆಂದೂ, ವಿನಯದಿಂದ ಕೇಳಿದರು. ರಾಜರು ಆಸನದಿಂದ ಎದ್ದು ಬಂದು, ಆ ಸೇನಾಧಿಪತಿ

ಗಳನ್ನು ಆಲಿಂಗಿಸಿ–"ಸೇನಾಧಿಪತಿಗಳೇ! ನೀವು ನಿಜವಾದ ಪರಾಕ್ರಮಶಾಲಿಗಳು ನಿಮ್ಮ ಧೀರತೆಯ ಮುಂದೆ ನಾವು ಎಂದೆದಿಗೂ ಸೋತಿದ್ದೇವೆ ನಾವು ಹೈದರಾಲಿ ಯವರ ಮಿತ್ರರಾಗಿರಲು ತ್ರಿಕರಣಪೂರ್ವಕವಾಗಿ ಒಪ್ಪಿಕೊಂಡಿದ್ದೇವೆ" ಎಂದು ಹೇಳಿ, ಮುಹಮುದಾಲಿಯವರನ್ನು ಆಸನದ ಮೇಲೆ ಕುಳ್ಳಿರಿಸಿ, ಖಿಲ್ಲತ್ತುಗಳನ್ನು ಒಪ್ಪಿಸಿ, ವೀರ ಪೂಜೆಯನ್ನು ಮಾಡಿದರು

ಹಳೆಯ ಕಥೆಯನ್ನು ಮುತ್ತಣ್ಣನವರು ಕಣ್ಣೀರು ಸುರಿಸುತ್ತಾ, ಗದ್ಗದ ಕಂಠ ದಿಂದ ಹೇಳಿದರು ಮುಂದುವರಿಯುತ್ತಾ, "ತಾಯಿ! ತಾವು ಶ್ರೀರಂಗಪಟ್ಟಣದಲ್ಲಿರಲು ಅಭ್ಯಂತರವೇನಿದೆ?"

ಬೇಗಂ—ಮಹಾಶಯ! ಶ್ರೀರಂಗಪಟ್ಟಣದ ಭರದ[illegible]ರಿನಲ್ಲಿ ನನಗೆ ಅಗೌರವ ವಾಗಿದೆ ಸುಲ್ತಾನರು ಪ್ರಾರ್ಥಿಸಿದರೂ ನಾನು ಶ್ರೀರಂಗಪಟ್ಟ[illegible] ಹೋಗಲೊಪ್ಪು ವುದಿಲ್ಲ

ಮುತ್ತಣ್ಣ—ತಾವು ಕೊಡಗಿನಲ್ಲಿ ವಸತಿಮಾಡುವುದು ನಮಗೆಷ್ಟೋ ಸಂತೋಷ ಆದರೆ ತಮ್ಮ ಸವಾರಿಯು ಇಲ್ಲಿಗೆ ಬರಲು ಕಾರಣವೇನು?

ಬೇಗಂ—ಕೊಡಗು ರಮಣೀಯವಾದ ವನಪ್ರದೇಶ! ಮತ್ತು ವೀರಭೂಮಿ! ಇಲ್ಲಿ ನಿರ್ಭಯವಾಗಿರಬಹುದೆಂದು ಬಂದೆ ಇಲ್ಲಿ ಒಬ್ಬ ಫಕೀರರ ಆಶ್ರಯದಲ್ಲಿ ದ್ದೇನೆ ತಮ್ಮಂಥಾ ಮಹಾನುಭಾವರ ರಕ್ಷಣೆಯನ್ನು ಬೇಡುತ್ತೇನೆ

ಮುತ್ತಣ್ಣ—ದೇವಿಯವರೇ, ತಮ್ಮ ರಕ್ಷಣೆಯೇ! ನಾನು ಮುದುಕ! ಆದರೂ ಈ ತೋಳುಗಳಲ್ಲಿ ಬಲವಿದೆ ತಮ್ಮ ರಕ್ಷಣೆಗಾಗಿ ನನ್ನ ಸರ್ವಸ್ವವನ್ನು ಪಣವಾಗಿಟ್ಟು ಭರವಸೆ ಕೊಡುತ್ತೇನೆ

ಬೇಗಂ—ಮುತ್ತಣ್ಣನವರೇ, ತಾವು ನನಗೆ ತಂದೆಗೆ ಸಮಾನರು ಒಂದುಪಕ್ಷ ಟಿಪ್ಪೂಸುಲ್ತಾನರು ನನ್ನ ಮೇಲಿನ ಆಗ್ರಹದಿಂದ ನನ್ನನ್ನು ಹಿಡಿದು ಒಪ್ಪಿಸಬೇಕೆಂದು ಅಜ್ಞೆ ಮಾಡಿದರೆ?

ಮುತ್ತಣ್ಣ—ತಾಯಿ! ಸುಲ್ತಾನರು ಅಂಥಾ ಸಾಹಸ ಮಾಡಲಾರರು ನಮ್ಮ ರಾಜರು ಸರ್ವಥಾ ಆ ಆಜ್ಞೆಗೆ ತಲೆಬಾಗುವ ಹೇಡಿಗಳಲ್ಲ. ಈ ವೀರಭೂಮಿ ಕೊಡಗು ರಾಜ್ಯ, ತಮ್ಮನ್ನು ಅನ್ಯಾಯವಾಗಿ ಬಿಟ್ಟುಕೊಡುವಷ್ಟು ನಿರ್ವೀರ್ಯವಾಗಿಲ್ಲ ಸುಲ್ತಾ ನರು ತಮ್ಮ ಕೂದಲು ಸೋಕಬೇಕಾದರೆ, ಲಕ್ಷಮಂದಿ ಕೊಡಗಿನ ವೀರಾಗ್ರಣಿಗಳ ಶವಗಳನ್ನು ಹಾದು ಬರಬೇಕು ಇಲ್ಲ ತಾಯಿ! ತಮ್ಮ ಭಯವು ಕಲ್ಪನೆಯ ಭಯ! ಅದು ಎಂದಿಗೂ ನಿಜವಾಗಲಾರದು

ಬೇಗಂ ಸಾಹೇಬಳು ಮುಂದೆ ಬಂದು ಮುತ್ತಣ್ಣನವರನ್ನು ವಂದಿಸಿದಳು ಗೌರಮ್ಮನವರು ಫಾತಿಮಳನ್ನು ಹಿಡಿದೆತ್ತಿ, ಆಲಿಂಗಿಸಿ, "ನೀನು ಎಂಥಾ ವೀರಪುರು

ಷನ ಪತ್ನಿಯೆ ! ತಾಯಿ ! ನಿನ್ನಂಥಾ ವೀರರಮಣಿಗೆ ಭಯವೇಕೆ ?" ಎಂದು ಸಂತೈಸಿದರು

ಆ ವೃದ್ಧದಂಪತಿಗಳು ಬೇಗಂಸಾಹೇಬಳ ಅಪ್ಪಣೆ ಪಡೆದು ತಮ್ಮ ಬಿಡಾರಕ್ಕೆ ತೆರಳಿದರು

ಅದೇ ಕಾರ್ತೀಕಮಾಸದಲ್ಲಿ ಕಾಳೇಶ್ವರದಲ್ಲಿ ದೀಪೋತ್ಸವ ! ಆ ಉತ್ಸವಕ್ಕೆ ಮಹಾರಾಜರು ದಯಮಾಡಿಸಿದರು

ಆ ಉತ್ಸವವೆಲ್ಲವೂ ಪೂರೈಸಿದ ಮೇಲೆ ಮರುದಿನ ಪ್ರಾತಃಕಾಲ ಮುತ್ತಣ್ಣನವರು ರಾಜರ ಭೇಟಿ ಮಾಡಿದರು ಫಾತಿಮಾಬೇಗಂರವರ ವೃತ್ತಾಂತವೆಲ್ಲವನ್ನೂ ವಿವರಿಸಿ, ತಮಗೂ ಅವರಿಗೂ ನಡೆದ ಮಾತುಕಥೆಗಳನ್ನೆಲ್ಲಾ ನಿವೇದಿಸಿದರು ಆ ದಿನ ಸಂಧ್ಯಾಕಾಲವೇ ರಾಜರು ಬೇಗಂ ಸಾಹೇಬಳ ವಾಸಸ್ಥಾನಕ್ಕೆಹೋಗಿ ಅವರಿಗೆ ಭೇಟಿ ಕೊಡುವುದಾಗಿ ತಿಳಿಸಿದರು ಈ ಭೇಟಿಯು ಬಹಳ ಗುಪ್ತವಾಗಿರಬೇಕೆಂದೂ, ರಾಜರೂ ಮುತ್ತಣ್ಣನವರೂ ಮಾತನಾಡಿಕೊಂಡರು ರಾಜರು ಬೇಗಂಸಾಹೇಬಳ ಭೇಟಿಗೆ ಬರಲು ಅಪ್ಪಣೆಯನ್ನು ಕೋರಿದರು ಬೇಗಂಸಾಹೇಬಳು ಸಂತೋಷದಿಂದ ಒಪ್ಪಿಕೊಂಡಳು

ಬೇಗಂಸಾಹೇಬಳು ಸ್ವಭಾವತಃ ಅಲಂಕಾರಪ್ರಿಯೆ ! ಈ ದಿನ ಕೊಡಗು ರಾಜರು ಬರುವರೆಂದು ಮನೆಯ ಒಳಗೆಲ್ಲಾ ಬಹಳ ಅಚ್ಚರಿಯಿಂದ ಸಿಂಗರಿಸಿದ್ದಳು. ಅಸ್ತಮಾನವಾಗಿ ಕತ್ತಲೆಯು ಕವಿಯುತ್ತಲೇ ವೀರರಾಜರು ಮ್ಯಾನಾದಲ್ಲಿ ಕುಳಿತು ಬೇಗಂಸಾಹೇಬರ ಆವಾಸಕ್ಕೆ ಬಂದರು ಆಪಾದಮಸ್ತಕವಾಗಿ ಬಿಳಿಯ ದಿರಸನ್ನು ಧರಿಸಿದ್ದನು ಮನೆಯ ಹೆಬ್ಬಾಗಿಲಿನಲ್ಲಿ ಇಮಾಮನು ಮರ್ಯಾದೆಯಿಂದ ಮುಜರೆ ಮಾಡಿ, ರಾಜರನ್ನು ಎದುರುಗೊಂಡು ಮನೆಯೊಳಗೆ ಕರೆದೊಯ್ದನು ಮನೆಯೆಲ್ಲಾ ಉಜ್ವಲ ದೀಪಗಳಿಂದ ಪ್ರಕಾಶಮಾನವಾಗಿತ್ತು ಇಮಾಮನು ಮುಂದೆ ಮುಂದೆ ದಾರಿ ತೋರಿಸುತ್ತಾ ನಡೆದನು ರಾಜನು ಗಂಭೀರವಾಗಿ ಅಡಿ ಇಡುತ್ತಾ, ಆ ಮನೆಯ ಭವ್ಯತೆಯನ್ನು ನೋಡಿ ಆಹ್ಲಾದಿಸುತ್ತಾ, ವಿಶಾಲವಾದ ಮೆಟ್ಟಲುಗಳನ್ನು ಹತ್ತಿ, ಮಹಡಿಯ ಮೇಲಿನ ಹಜಾರವನ್ನು ಪ್ರವೇಶಿಸಿದನು ಆ ಹಜಾರದ ಅಲಂಕಾರವನ್ನು ನೋಡಿ ಅಚ್ಚರಿಗೊಂಡನು ಹಜಾರದಲ್ಲಿ ಹಸುರುಬಣ್ಣದ ರತ್ನಗಂಬಳಿಯು ಹಾಸಿದ್ದಿತು ಅದು ಮೃದುವಾದ ಶಾದ್ವಲದಂತೆ ಶೋಭಿಸುತ್ತಿದ್ದಿತು ರೇಶಿಮೆಯ ಲೋಡುದಿಂಬುಗಳು ಅಲಂಕೃತವಾಗಿದ್ದುವು ಹಜಾರದ ನಾಲ್ಕು ಕಡೆಗಳಲ್ಲಿಯೂ ಕಂದೀಲು ದೀಪಗಳು ಉರಿಯುತ್ತಿದ್ದುವು ಗೋಡೆಗಳಲ್ಲಿ ಚಿನ್ನದ ವರಕಿನಿಂದ ಕೆತ್ತನೆಯ ಕೆಲಸ ಮಾಡಲ್ಪಟ್ಟ ಚಿತ್ರಗಳು ರಂಜಿಸುತ್ತಿದ್ದುವು. ನಾಲ್ಕು ಕಡೆಯೂ ನಕಾಶಿ ಕೆಲಸ ಮಾಡಿದ ಬೆಳ್ಳಿಯ ಚೌಕಟ್ಟುಗಳಿಂದ ಅಲಂಕೃತವಾದ ನಿಲುಗನ್ನಡಿ

ಗಳು ಕಟ್ಟಲ್ಪಟ್ಟಿದ್ದುವು. ಹಜಾರದ ಮಧ್ಯದಲ್ಲಿ ರಜತಪೀಠದ ಮೇಲೆ ಎರಡು ಸ್ವರ್ಣ ಪುತ್ಥಳಿಗಳು ಕೈಯಲ್ಲಿ ಊದುದಾನಿಗಳನ್ನು ಹಿಡಿದು, ಘಮಘಮಿಸುವ ಸುವಾಸನೆಯನ್ನು ಬೀರುತ್ತಿದ್ದುವು. ಇಮಾಮನು ರಾಜನನ್ನು ಆಸನದಲ್ಲಿ ಕುಳ್ಳಿರಿಸಿದನು ಬೇಗಂಸಾಹೇಬಳು ಪಕ್ಕದ ಕೋಣೆಯಿಂದ ಬಂದಳು

ಫಾತಿಮಳು ಊದುಬಣ್ಣದ ರೇಶಿಮೆಯ ಸೀರೆಯನ್ನುಟ್ಟಿದ್ದಳು ಹಳದಿಯ ಬಣ್ಣದ ಜರಿಗೆಯ ಕಂಚುಕವನ್ನು ತೊಟ್ಟಿದ್ದಳು. ಮೇಲೆ ತೆಳುವಾದ ಬಿಳಿಯ ಬಣ್ಣದ ಜರಿಯ ಮೇಲುದುವನ್ನು ಹೊದ್ದಿದ್ದಳು ಕೊರಳಲ್ಲಿ ಮೂರೆಳೆಯ ಮುಕ್ತಾಹಾರವನ್ನು ಧರಿಸಿದ್ದಳು. ಆ ಹಾರವು ಎದೆಯ ಮೇಲೆ ಕ್ರೀಡಿಸುತ್ತಿತ್ತು ನಡೆದು ಬರುವಾಗ ಕಾಲ ನಲ್ಲಿ ಚಿನ್ನದ ಕಾಲುಸರವು ಸಣ್ಣ ದನಿ ಮಾಡುತ್ತಿದ್ದಿತು ಒಂದು ಕಟ್ಟಲ್ಪಟ್ಟ ಕಬರಿಯಲ್ಲಿ ಮುತ್ತಿನ ಕುಚ್ಚುಗಳು ನೇತಾಡುತ್ತಿದ್ದುವು ಆ ವಿಶಾಲವಾದ ... ಜ್ವಲ್ಯಮಾನವಾದ ಕಣ್ಣುಗಳು ಒಂದೇ ಕ್ಷಣದಲ್ಲಿ ರಾಜನನ್ನು ಮೈಮರೆಯುವಂತೆ ಮಾಡಿದುವು ರಾಜನು ತನ್ನ ಮನಸ್ಸಿನ ಚಾಂಚಲ್ಯವನ್ನು ತೋರ್ಪಡಿಸಿಕೊಳ್ಳದೇ ಬಿಗಿಹಿಡಿದು ತಲಬಾಗಿ, ಬೇಗಂಸಾಹೇಬಳನ್ನು ವಂದಿಸಿ ಕ್ಷೇಮ ಸಮಾಚಾರವನ್ನು ವಿಚಾರಿಸಿದನು

ಬೇಗಂಸಾಹೇಬಳು ಗಾಂಭೀರ್ಯದಿಂದ ರಾಜನಿಗೆ ಪ್ರತ್ಯಭಿವಾದನ ಮಾಡಿ, ಕುಳಿತುಕೊಳ್ಳುವಂತೆ ಪ್ರಾರ್ಥಿಸಿದಳು

ರಾಜನು ಕುಳಿತುಕೊಂಡು, "ಬೇಗಂಸಾಹೇಬರವರೇ! ತಮ್ಮ ಸಮಾಚಾರವನ್ನು ಕೆಲವು ದಿನಗಳ ಹಿಂದೆಯೇ ನಾನು ಕೇಳಿದ್ದೆ ಮುತ್ತಣ್ಣನವರಿಂದ ಎಲ್ಲವೂ ವಿಶದವಾಗಿ ತಿಳಿಯಿತು ತಾವು ನಮ್ಮ ರಾಜ್ಯಕ್ಕೆ ಬಂದುದು ನಮ್ಮ ಭಾಗ್ಯ!" ಎಂದ ಮಾತಿಗೆ ಮೊದಲು ಮಾಡಿದನು

ಬೇಗಂ—ಮಹಾರಾಜರೇ! ನಾನು ವಿಧಿವಿಲಾಸದಿಂದ ಈ ದೇಶಕ್ಕೆ ಬಂದೆ ಆದರೆ, ನಾನು ಇಲ್ಲಿಗೆ ಬಂದಾಗಿನಿಂದಲೂ, ಈ ಕೊಡಗಿನ ಜನರು ತೋರುತ್ತಿರುವ ಆದರ ವಿಶ್ವಾಸಗಳು ನನ್ನ ಮನಸ್ಸನ್ನು ಸಂಪೂರ್ಣವಾಗಿ ಆಕರ್ಷಿಸಿರುವುವು. ಇಂದು ಮಹಾರಾಜರ ದರ್ಶನವಾದುದು ನನ್ನ ಪುಣ್ಯವೆಂದು ಹೇಳಬಹುದು!

ರಾಜ—ದೇವಿಯರೇ! ನಾನು ತಮಗೆ ಏನು ಸಹಾಯ ಬೇಕಾಗಿದ್ದರೂ ಒದಗಿಸಬಲ್ಲೆ, ತಾವು ಇಲ್ಲಿ ಸುಖವಾಗಿರಬಹುದು

ಫಾತಿಮಾ—ತಮ್ಮ ಔದಾರ್ಯವನ್ನು ನಾನು ಬಹಳವಾಗಿ ಕೇಳಿದ್ದೇನೆ ನನಗೆ ತಮ್ಮ ರಕ್ಷಣೆಯು ಬೇಕು, ಅಷ್ಟೇ ನನ್ನ ಯಾಚನೆ.

ರಾಜ—ತಾಯಿ, ತಮಗೆ ಯಾರ ರಕ್ಷಣೆಯು ಅಗತ್ಯವೂ ಇಲ್ಲ. ನಮ್ಮ ರಾಜ್ಯದಲ್ಲಿರುವವರನ್ನು ರಕ್ಷಿಸುವುದಂತೂ ನಮ್ಮ ರಾಜಧರ್ಮವೇ ಆಗಿದೆ,

ಫಾತಿಮಾ—ನನಗೆ ಪ್ರಬಲ ಶತ್ರುಗಳಿದ್ದಾರೆ ನನ್ನಿಂದ ಈ ರಾಜ್ಯಕ್ಕೆ ಅಪಾಯ ಸಂಭವಿಸಬಹುದೆಂದು ಭಯಪಡುತ್ತೇನೆ

ರಾಜ—ಕೊಡಗಿಗೆ ಎಂದಿಗೂ ಅಂತಹ ಭಯವಿಲ್ಲ ದೇವಿಯವರೆ, ಸುಲ್ತಾನರವರಿಗೆ ತಮ್ಮ ಮೇಲಿನ ಆಕ್ರೋಶಕ್ಕೆ ಕಾರಣವೇನು ?

ಫಾತಿಮಾ—ಸುಲ್ತಾನರು ದಿವಾನರವರ ಮೇಲೆ ಮಾಡಿದ ಅತ್ಯಾಚಾರದಿಂದ ಕ್ರುದ್ಧಳಾಗಿ ಹಠ ತೊಟ್ಟಿದ್ದೇನೆ

ರಾಜ—ತಮ್ಮ ಹಠವೆಂತಹದು ?

ಫಾತಿಮಾ—ಸುಲ್ತಾನರಿಗೆ ಪ್ರತೀಕಾರ ಮಾಡಬೇಕೆಂದು

ರಾಜ—ತಾವು ಎಂತಹ ಪ್ರತೀಕಾರ ಮಾಡಬಲ್ಲಿರಿ ?

ಫಾತಿಮಾ—ಅದು ಇನ್ನೂ ಮನಸ್ಸಿಗೆ ಹೊಳೆದಿಲ್ಲ ಹಗಲಿರುಳೂ ಅದನ್ನೇ ನಾನು ಚಿಂತಿಸುತ್ತಿದ್ದೇನೆ ಸುಲ್ತಾನರಿಗೆ ಏನಾದರೊಂದು ಪ್ರತೀಕಾರ ಮಾಡಬೇಕು. ಇಲ್ಲವೇ, ಪ್ರತೀಕಾರ ಪ್ರಯತ್ನದಲ್ಲಿಯೇ ನಾನು ಮಡಿಯಬೇಕು

ರಾಜ—(ನಗುತ್ತಾ) ಅದಕ್ಕೆ ನಾನೇನು ಸಹಾಯ ಮಾಡಬಲ್ಲೆ ?

ಫಾತಿಮಾ—ಇಲ್ಲ ಸುಲ್ತಾನರ ಮೇಲೆ ಸೇಡು ತೀರಿಸಿಕೊಳ್ಳಲು ತಮ್ಮ ಸಹಾಯವನ್ನು ಕೋರುತ್ತಿಲ್ಲ ಈ ರಾಜ್ಯದಲ್ಲಿ ರಕ್ಷಣೆಯನ್ನು ಮಾತ್ರ ಪ್ರಾರ್ಥಿಸುತ್ತೇನೆ

ರಾಜ—ಈ ಕೊಡಗು ರಾಜ್ಯದಲ್ಲಿ ತಾವು ಇರುವವರೆಗೆ ತಮ್ಮ ರಕ್ಷಣೆಯ ಭಾರವು ನಮ್ಮದು ಆದರೆ, ಸುಲ್ತಾನರಂಥಾ ಮಹಾಪ್ರಭಾವಶಾಲಿಗಳ ಮೇಲೆ ತಾವು ಹಠ ತೊಟ್ಟಿದ್ದೀರಿ. ಅದಕ್ಕೆ ಸಹಾಯಸಂಪತ್ತು ಏನಿದೆ ?

ಫಾತಿಮಾ—ನನಗೆ ಸಹಾಯಸಂಪತ್ತೆಲ್ಲಿದೆ ? ಟಿಪ್ಪೂಸುಲ್ತಾನರಿಗೆ ಸರಿಸಮ ಪರಾಕ್ರಮಶಾಲಿಗಳಾದ ಇಯಜ್‌ಖಾನರು ಸುಲ್ತಾನರಿಗೆ ವಿರೋಧವಾಗಿದ್ದಾರೆ. ವೀರಾಗ್ರಣಿಯಾದ ಹುಸೇನ್‌ಖಾನನು ಸುಲ್ತಾನರ ಮೇಲೆ ಕತ್ತಿಕಟ್ಟಿದ್ದಾನೆ ನನಗೆ ಯಾರ ಸಹಾಯವೂ ಇಲ್ಲ ! ದೇವರ ಸಹಾಯ ಒಂದೇ !

ರಾಜ—ಅದೆಲ್ಲವೂ ಹೇಗೇ ಇರಲಿ ನಾನು ತಮಗೆ ಸರ್ವವಿಧದಲ್ಲಿಯೂ ಸಹಾಯ ನೀಡುತ್ತೇನೆ

ಫಾತಿಮಳಿಗೆ ಏನೋ ಒಂದು ವಿಧವಾದ ಸಂತೋಷವಾಯಿತು ರಾಜರ ಸಂದರ್ಶನ, ಪ್ರಥಮ ಸಂಭಾಷಣೆಗಳು, ಫಲದಾಯಕವಾದುವು ಎಂದುಕೊಂಡಳು. ರಾಜನು ಹೊರಟುಹೋಗುತ್ತಾ—ಬೇಗಂಳು ಎಂತಹ ಸೌಂದರ್ಯದ ಖನಿ ಇಂತಹ ಅನುಪಮ ರೂಪವನ್ನು ಎಲ್ಲೂ ಕಂಡಿಲ್ಲ ಈ ಒಯ್ಯಾರ, ವೈಭವಗಳು, ಯಾವ ರಮಣಿಯಲ್ಲಿವೆ ! ಫಾತಿಮಳ ಕಪೋಲಗಳು ಹೇಗೆ ಥಳಥಳಿಸುತ್ತವೆ ಆ ಕಣ್ಣುಗಳು ಎಷ್ಟು ತೇಜೋವಿರಾಜಮಾನವಾಗಿವೆ ಬೇಗಂಳು ನಕ್ಕರೆ ಅದೆಂಥಾ ರಮ್ಯವಾದ ಪ್ರಕಾಶ. ಆ ದಂತಚ್ಛವಿಯು ಎಷ್ಟು ಮನೋಹರ! ಆ ಹುಬ್ಬುಗಳಲ್ಲಿ ಎಂತಹ ಆಕ

ರ್ಣಿಣಿ ಇದೆ ಎಂದುಕೊಳ್ಳುತ್ತ, ಆ ಸೌಂದರ್ಯವನ್ನು ನೆನೆನೆನೆದು ಆನಂದಿಸುತ್ತ ತನ್ನ ವಾಸಸ್ಥಾನಕ್ಕೆ ತಲಪಿದನು ಇರಲಿ! ಆ ಫಾತಿಮಳು ನನ್ನ ಅಂತಃಪುರದಲ್ಲಿಲ್ಲದಿದ್ದರೂ, ಈ ಕೊಡಗುರಾಜ್ಯದಲ್ಲಿದ್ದಾಳೆ! ಎತ್ತಕಡೆಯಿಂದಲಾದರೂ, ಒಂದು ಬಿರುಗಾಳಿಯು ಬೀಸಿದರೆ ಈ ಸ್ವರ್ಣಲತೆಯು ನನ್ನ ಅಂತಃಪುರವನ್ನು ಅಲಂಕರಿಸುತ್ತದೆ ಅಷ್ಟೇ ಅಲ್ಲ ಈ ಫಾತಿಮಾಬೇಗಂ ಮುಸಲ್ಮಾನ್ ರಮಣಿ ಪ್ರಭಾವಶಾಲಿಗಳಾದ ದೊಡ್ಡ ...ರ್ದಾರರವರ ಪತ್ನಿ ಇಂದಲ್ಲ. ಎಂದಾದರೊಂದು ದಿನ ನಮಗೂ ಸುಲ್ತಾನರವರಿಗೂ ಯುದ್ಧಪ್ರಸಂಗವು ಬಂದೇ ಬರುತ್ತದೆ ಆ ಸಮಯದಲ್ಲಿ ಯಾವ ವಿಧದಲ್ಲಾದರೂ ಈ ಬೇಗಂ ಸಾಹೇಬಳನ್ನು ಉಪಯೋಗಿಸಬಹುದು ಎಂದು ಚಿಂತಿಸುತ್ತ, ಎಷ್ಟೋ ಆಶಾಕಲ್ಪನೆಗಳನ್ನು ಮಾಡುತ್ತಾ ಹಿಂದಿರುಗಿದನು

## ಮಹದೇವಸ್ವಾಮಿ

ಈ ವರ್ಷ ಶರನ್ನವರಾತ್ರಿಯಲ್ಲಿ ಕಾಳೇಶ್ವರದಲ್ಲಿ ಉತ್ಸವಗಳೆಲ್ಲಾ ಬಹಳ ವಿಜೃಂಭಣೆಯಿಂದ ನಡೆದವು. ಆದರೆ ಮಹಾಕಾಳಿಗೆ ನರಬಲಿ ಕೂಡಲಿಲ್ಲ ಬಹು ಮಂದಿ ಭಕ್ತಾದಿಗಳಿಗೆ ಇದರಿಂದ ಬಹಳ ಅಸಮಾಧಾನ! ಕೆಲವು ದಿನಗಳ ಹಿಂದೆ ತ್ರಿಯಂಭಕ ಭಟ್ಟನೆಂಬ ಬ್ರಾಹ್ಮಣನು ಆಂಧ್ರದೇಶದಿಂದ ಲೋಕಸಂಚಾರ ಮಾಡುತ್ತಾ, ಕಾಳೇಶ್ವರಕ್ಕೆ ಬಂದು ಸೇರಿದನು ಅವನು ಬಹಳ ತೇಜಸ್ವಿಯಾದ ಬ್ರಾಹ್ಮಣ ಯೋಗಾಭ್ಯಾಸದಲ್ಲಿ ನಿಷ್ಣಾತನಾಗಿದ್ದನು ಜ್ಯೋತಿಷ್ಯದಲ್ಲಿ ಎತ್ತಿದ ಕೈ ಇವನು ಕಾಳೇಶ್ವರಕ್ಕೆ ಬಂದು ದೇವರ ದರ್ಶನ ಮಾಡಿದನು ಅವನನ್ನು ಕಾಣುತ್ತಲೇ ಮಹದೇವಸ್ವಾಮಿಗ ಅವನಲ್ಲಿ ಗೌರವವುಂಟಾಯಿತು ತ್ರಿಯಂಬಕಭಟ್ಟನು ಕಲವು ದಿನಗಳು ಕಾಳೇಶ್ವರದಲ್ಲಿಯೇ ವಸತಿ ಮಾಡುವ ಅಭಿಪ್ರಾಯವನ್ನು ಸೂಚಿಸಿದನು ಮಹದೇವಸ್ವಾಮಿಯು ಸಂತೋಷದಿಂದ ಒಪ್ಪಿ, ಜಂಗಮವಾಡಿಯಲ್ಲೇ ವಸತಿಗ ಬೇಕಾದ ಅನುಕೂಲಗಳನ್ನೆಲ್ಲಾ ಒದಗಿಸಿ ಕೊಡುವುದಾಗಿ ಹೇಳಿದನು ಭಟ್ಟನು ಅದಕ್ಕೊಪ್ಪಲಿಲ್ಲ ಅವನು ಸಮೀಪದಲ್ಲಿಯೇ ಕಲ್ಲಿನ ಮಂಟಪದಲ್ಲಿ ವಾಸಿಸತೊಡಗಿದನು ಕಾಳೇಶ್ವರದಲ್ಲಿ ಜಾತ್ರೆಗೆ ಬಂದ ಬ್ರಾಹ್ಮಣರು ಅವನಿಗೆ ಭಿಕ್ಷ ಮಾಡಿಸುತ್ತಿದ್ದರು ಅನೇಕರು ಬಂದು ಅವನಲ್ಲಿ ಜ್ಯೋತಿಷ್ಯವನ್ನು ಕೇಳುತ್ತಿದ್ದರು. ಒಂದು ದಿನ ಕೊಡಗು ರಾಜರೂ ಬಂದು ಭಟ್ಟನನ್ನು ಭೇಟಿಮಾಡಿದರು ಅವರು ಭಟ್ಟನು ಹೇಳಿದ ಜ್ಯೋತಿಷ್ಯವನ್ನು ಹದಿನಾರಾಣೆ ನಂಬಿದರು ರಾಜರು ಆ ಭಟ್ಟನನ್ನು ತಮ್ಮ ರಾಜಧಾನಿಯಲ್ಲೇ ಬಂದಿರಬೇಕೆಂದು ಪ್ರಾರ್ಥಿಸಿದರು ಭಟ್ಟರು ಒಪ್ಪಲಿಲ್ಲ!

ಒಂದು ದಿನ ಮಹದೇವಸ್ವಾಮಿಯು ಬಂದು ಭಟ್ಟನನ್ನು ಭೇಟಿಮಾ... ಜ್ಯೋತಿಷ್ಯವನ್ನು ಕೇಳಿದನು. ಭಟ್ಟನು ಸ್ವಲ್ಪ ಹೊತ್ತು ಧ್ಯಾನಮಗ್ನನಾಗಿದ್ದು, ಕಣ್ಣು

ಶಿರೆದು ಮಹದೇವಸ್ವಾಮಿಯನ್ನು ನೋಡಿ ನಕ್ಕನು ಆ ನಗುವನ್ನು ನೋಡಿ ಜಂಗಮನು ಚಕಿತನಾದನು

"ಏನು ಭಟ್ಟರೆ? ಏನು ಹೇಳುತ್ತೀರಿ?"

"ಸ್ವಾಮಿಗಳೇ! ತಮಗೇಕ ಜ್ಯೋತಿಷ್ಯ? ತಾವು ಸನ್ಯಾಸಿಗಳು! ಈ ಕಾಳೀಶ್ವರ ಕ್ಷೇತ್ರದ ಮಹಂತರು ಇಂಥಾ ಮಹಾಪುರುಷರು ಜ್ಯೋತಿಷ್ಯವನ್ನು ಕೇಳಬಾರದು"

ಜಂಗಮನು ಬಹಳ ಬಲಾತ್ಕಾರ ಮಾಡಿದನು. ಹಠ ಮಾಡಿದನು ಆಗ ಭಟ್ಟನು ಜಂಗಮನನ್ನು ಕುರಿತು—ಸ್ವಾಮಿಗಳೇ! ನಾನು ಜ್ಯೋತಿಷ್ಯವನ್ನು ಹೇಳುತ್ತೇನೆ ಅದು ನಿಮ್ಮ ಮನಸ್ಸಿಗೆ ಎಷ್ಟೇ ಅಹಿತವಾಗಿದ್ದರೂ ನನ್ನಮೇಲೆ ಕೋಪ ಮಾಡಬಾರದು ಮತ್ತು ಈ ಪ್ರಕರಣವನ್ನು ಪೂರ್ತಿಯಾಗಿ ಮರೆತು ಬಿಡಬೇಕು. ಹಾಗೆ ಪ್ರಮಾಣಮಾಡಿ ಕೊಟ್ಟರೆ, ನಾನು ಜ್ಯೋತಿಷ್ಯವನ್ನು ಹೇಳುತ್ತೇನೆ

"ನೋಡಿ, ಭಟ್ಟರೆ, ನಾನು ಪರಮೇಶ್ವರನಲ್ಲಿ ಸರ್ವಸ್ವವನ್ನೂ ಅರ್ಪಣ ಮಾಡಿರುವ ಭಗವದ್ಭಕ್ತ ಜಂಗಮ ದೀಕ್ಷೆಯನ್ನು ಹೊತ್ತಿದ್ದೇನ ಈ ಲೋಕದಲ್ಲಿ ನನಗೆ ಏನಾಗಬೇಕಾಗಿದೆ ನಿಮ್ಮ ಜ್ಯೋತಿಷ್ಯವನ್ನು ನೋಡಿ ಬಹುಮಂದಿ ಆಶ್ಚರ್ಯ ಪಡುತ್ತಾರೆ ನಾನು ಅದನ್ನು ಪರೀಕ್ಷಿಸಬೇಕೆಂದು ಶಿವಪ್ರೇರಣೆಯಾಯಿತು ಆದರಿಂದ ಕೇಳುತ್ತೇನೆ"

ಭಟ್ಟನು ಪುನಃ ಗಂಭೀರವಾಗಿ ನಕ್ಕನು

ಸ್ವಾಮಿಗಳೇ! ನನ್ನ ಜ್ಯೋತಿಷವು ನಿಜವಾದರೇನು? ಸುಳ್ಳಾದರೇನು? ತಮ್ಮ ಭವಿಷ್ಯವನ್ನು ತಾವೇಕೆ ಕೇಳಬೇಕು, ನಾನೇಕೆ ಹೇಳಬೇಕು? ತಮ್ಮ ಭವಿಷ್ಯವು ಗೊತ್ತೇ ಇದೆ, ಶಿವಸಾಯುಜ್ಯ

ಭಟ್ಟರೇ! ಏನೋ ಒಂದು ಚಪಲದಿಂದ ಕೇಳಿಬಿಟ್ಟೆ ಹೇಳಿಬಿಡಿರಿ

ಭಟ್ಟರು ಜಂಗಮನ ಹಸ್ತದ ರೇಖೆಗಳನ್ನು ಪರೀಕ್ಷಿಸಿ ನೋಡಿದರು ಸ್ವಾಮಿಯ ತಲೆಯಮೇಲೆ ಕೈಯ್ಯಿಟ್ಟು. ಹಣೆಯ ಮೇಲೆ ಬೆರಳಿಟ್ಟು, ರೇಖೆಗಳನ್ನು ನೋಡಿದರು ಭಟ್ಟರು ತಲೆಯಮೇಲೆ ಕೈಯಿಡುತ್ತಲೇ, ಜಂಗಮನ ಮೈ ಎಲ್ಲಾ ಜುಂ ಎಂದಿತು. ಆಪಾದಮಸ್ತಕವಾಗಿ ವಿದ್ಯುತ್ಪ್ರವಾಹವು ಹರಿದಂತಾಯಿತು.

ಭಟ್ಟರು—ಸ್ವಾಮಿಗಳೇ ಕೇಳಿರಿ ನೀವು ಪೂರ್ವ ಜನ್ಮದಲ್ಲಿ ನಿಜವಾದ ಸನ್ಯಾಸಿಗಳು ಯೋಗಾಭ್ಯಾಸ ಮಾಡುತ್ತಿದ್ದಿರಿ ಯೋಗಭ್ರಷ್ಟರಾಗಿ ಮೃತರಾದಿರಿ. ಈ ಜನ್ಮದಲ್ಲಿ ಸತ್ಕುಲದಲ್ಲಿ ಜನ್ಮವೆತ್ತಿದಿರಿ.

ಜಂಗಮನಿಗೆ ಅತಿ ಸಂತೋಷವಾಯಿತು ಹೌದು! ಹೌದು!! ಎಂದನು

ಈ ಜನ್ಮದಲ್ಲಿ ನಿಮಗೆ ಸರಿಯಾದ ಗುರುವಿನಿಂದ ಜಂಗಮದೀಕ್ಷೆಯಾಗಲಿಲ್ಲ ನೀವೇ ಜಂಗಮ ವೇಷವನ್ನು ಧರಿಸಿದಿರಿ ನಿಮಗ ವೈರಾಗ್ಯವಿಲ್ಲ, ದೇವರ ಭಕ್ತಿ ಇಲ್ಲ ಇದೆಲ್ಲಾ ವೇಷ! ನೀವು ಯಾವುದೋ ಗ್ರಹಚಾರದಿಂದ ರಾಜಕೀಯದಲ್ಲಿ ಧುಮುಕಿದಿರಿ! ಜಯವಾಗಲಿಲ್ಲ, ಪ್ರಾಣಕ್ಕೆ ವಿಪತ್ತು ಬಂತು ಪೂರ್ವ ಪುಣ್ಯ ದಿಂದ ಉಳಿದುಕೊಂಡಿರಿ! ನಿಮ್ಮಲ್ಲಿರುವ ಸಂಪತ್ತೆಲ್ಲಾ ಧರ್ಮದ ನಿಧಿಯಲ್ಲ ಚೌ..ರ ಸಂಪತ್ತು ಪೂರ್ವ ಜನ್ಮ ಸುಕೃತದಿಂದ ಈ ಸ್ಥಾನವು ದೊರೆತಿದೆ ನೀವು ಒಬ್ಬ ಸ್ತ್ರೀಯಳಲ್ಲಿ ಅನುರಕ್ತರಾಗಿದ್ದೀರಿ ಅದು ಸಿದ್ಧಿಸಬಹುದು ಅದರಿಂದಲೇ ನಿಮ್ಮ ಸರ್ವನಾಶವಾದರೂ ಆಗಬಹುದು

ಸ್ವಾಮಿ, ಭಟ್ಟರೆ! ಸಾಕು ನಾನು ನಿಮ್ಮಲ್ಲಿ ವಂಚನೆ ಮಾಡುವುದಿಲ್ಲ ನೀವು ಹೇಳಿದ್ದೆಲ್ಲಾ ಅಕ್ಷರಶಃ ಸತ್ಯ ಆ ಭಕ್ತಳ ಸಮಾಗಮವು ಸಿದ್ಧಿಸುವುದೆಂದು ಹೇಳು ವಿರಾ?

ಸಿದ್ಧಿಸಿದರೂ ಸಿದ್ಧಿಸಬಹುದು

ಉಂಟು ನೀವು ಈ ದೇವಿಗೆ ನರಬಲಿ ಕೊಡಲು ದೀಕ್ಷ ಮಾಡಿ ಇಟ್ಟಿರುವ ಮನುಷ್ಯನಿಗೆ ಪ್ರಾಣದಾನ ಮಾಡಿ ಬಿಟ್ಟುಬಿಟ್ಟರೆ ನಿಮ್ಮ ಆಪತ್ತು ನಿವಾರಣೆಯಾಗು ತ್ತದೆ

ಒಳ್ಳೆಯದು ಭಟ್ಟರ, ನಾನು ನರಬಲಿಯನ್ನು ಕೊಡುವುದಿಲ್ಲ ಆದರೆ, ರಾಜರನ್ನು ನೀವು ಸಮಾಧಾನ ಹೇಳಿ ಒಪ್ಪಿಸಬೇಕು

ಸ್ವಾಮಿಗಳೇ, ಮತ್ತೊಂದು ರಹಸ್ಯವಿದೆ ಇಷ್ಟು ಹೇಳಿ ಅದನ್ನು ಹೇಳದಿದ್ದರ ನನಗೆ ಪಾಪ ಸಂಘಟನೆಯಾಗುತ್ತದೆ

ಹೇಳಿ ಭಟ್ಟರೆ, ನಿಜವಾಗಿ ನೀವು ಗುರುವಿನಂತೆ, ದೇವರಂತೆ

ಸ್ವಾಮಿಗಳೇ, ನಿಮ್ಮ ಪೂರ್ವ ಪುಣ್ಯವು ಒಳ್ಳೆಯದು ನೀವು ಆ ಭಕ್ತಳ ಹಂಬಲವನ್ನು ಮರೆತುಬಿಟ್ಟರೆ, ನಿಜವಾಗಿಯೂ, ಸ್ತ್ರೀಯರನ್ನೆಲ್ಲಾ ಪರದೇವತಾ ಸ್ವರೂಪದಂತೆ ಕಾಣುವ ಯೋಗವನ್ನು ಅಭ್ಯಾಸಮಾಡಿದರೆ, ನಿಮಗೆ ಈಶ್ವರನ ಪ್ರತ್ಯಕ್ಷ ವಾಗುತ್ತದೆ ಈ ಜನ್ಮದಲ್ಲಿಯೇ ಮುಕ್ತಿಯು ಲಭಿಸುತ್ತದೆ.

ತಮ್ಮ ಉಪದೇಶವು ಒಳ್ಳೆಯದು — ಭಗವದಿಚ್ಛೆ ಇದ್ದಂತಾಗುತ್ತದೆ.

ಕಾಳೇಶ್ವರದಲ್ಲಿ ನರಬಲಿಯು ನಿಂತಕಾರಣವು ಇದೆ ಜಂಗಮನು ಒಂದು ದಿನ ಬೇಗಂಸಾಹೇಬಳ ಭೇಟಿಮಾಡಬೇಕೆಂದು ಗುಪ್ತವಾಗಿ ಹೇಳಿ ಕಳಿಸಿದನು ಬೇಗಂಸಾಹೇಬಳು ಜಂಗಮನಬಳಿಗೆ ಬಂದು ಮಹದೇವಸ್ವಾಮಿಯನ್ನು ಭೇಟಿ ಮಾಡಿದಳು. ಮಹದೇವಸ್ವಾಮಿಯು ತನ್ನ ವೃತ್ತಾಂತವನ್ನೆಲ್ಲಾ ಸಂಕ್ಷೇಪವಾಗಿ ತಿಳಿಸಿದನು. ಭಕ್ತೆಯು ತನ್ನನ್ನು ಇಲ್ಲಿಗೆ ಕಳುಹಿಸಿದನೆಂದೂ, ಈ ದೇವಾಲಯ

ದಲ್ಲಿರುವ ಐಶ್ವರ್ಯವೆಲ್ಲಾ ವಿದ್ರೋಹಿಗಳದೆಂದು ಹೇಳಿದನು ಘಾತಿವಾಬೇಗಂರವರ ವಿಷಯದಲ್ಲಿ ಭಕ್ಷಿಯವರಿಗೆ ವಿಶೇಷ ಗೌರವವಿರುವುದು ತನಗೆ ಚೆನ್ನಾಗಿ ತಿಳಿದಿದೆ ಯೆಂದೂ, ಸುಲ್ತಾನರವರಿಗೆ ಪ್ರತೀಕಾರ ಮಾಡುವುದರಲ್ಲಿ ತಾನು ವಿಶೇಷ ಸಹಾಯ ಮಾಡುವುದಾಗಿಯೂ ಹೇಳಿದನು

ಇದನ್ನೆಲ್ಲಾ ಕೇಳಿ ಬೇಗಂಸಾಹೇಬಳಿಗೆ ಅತ್ಯಂತ ಸಂತೋಷವಾಯಿತು ಈ ಜಂಗಮನು ತನ್ನ ಪರಮಾಪ್ತ ಬಂಧುವೆಂದು ಭಾವಿಸಿದಳು. ಈ ಕೊಡಗಿನಲ್ಲಿ ಈ ಜಂಗಮನೊಬ್ಬ, ಬೇಗಂಸಾಹೇಬಳೊಬ್ಬಳು, ಇವರಿಬ್ಬರೇ ಸುಲ್ತಾನರ ಶತೃಗಳು!

ಕಾಳೇಶ್ವರಕ್ಕೆ ಬಂದಮೇಲೆ ಮಾಲತಿಗೆ ದಿನದಿನವೂ ದೈವಭಕ್ತಿಯು ಹೆಚ್ಚುತ್ತಾ ಬಂದಿತು ಅವಳು ಸರ್ವದಾ ದೇವಾಲಯದಲ್ಲಿಯೇ ಇರುತ್ತಿದ್ದಳು ಬೇಗಂಸಾಹೇಬಳ ವಾಸಸ್ಥಾನಕ್ಕೆ ವಿಶೇಷವಾಗಿ ಹೋಗುತ್ತಲೇ ಇರಲಿಲ್ಲ ಮಹಂತರು ಮಾಲತಿಯನ್ನು ವಿಶೇಷವಾಗಿ ಆದರಿಸಿದರು ಜಂಗಮರೆಂದರೆ ಮಾಲತಿಗೆ ಸಾಕ್ಷಾತ್ ಸದಾಶಿವನೆಂದೇ ಭಾವನೆ ಬರುಬರುತ್ತಾ ಅವಳು ಬೇಗಂಸಾಹೇಬಳ ಹವ್ಯಾಸವನ್ನೇ ಬಿಟ್ಟುಬಿಟ್ಟಳು. ಬೇಗಂಸಾಹೇಬಳಿಗೆ ಮಾತ್ರ ಮಾಲತಿಯ ಮೇಲೆ ಒಲು ವಿಶ್ವಾಸ ಆಗಾಗ ಬೇಗಂ ಸಾಹೇಬಳು ಕಾಳೇಶ್ವರಕ್ಕೆ ಬಂದು ಮಾಲತಿಯನ್ನು ವಿಶ್ವಾಸದಿಂದ ಮಾತನಾಡಿಸು ತ್ತಿದ್ದಳು ಅವಳನ್ನು ಬಲಾತ್ಕರಿಸಿ ತಮ್ಮ ವಾಸಸ್ಥಾನಕ್ಕ ಕರೆದೊಯ್ದು ಆದರಿಸು ತ್ತಿದ್ದಳು ಮಾಲತಿಯ ದೈವ ಭಕ್ತಿಯು ಹೆಚ್ಚಿದಂತೆಲ್ಲಾ, ಅವಳ ವೇಷದಲ್ಲಿಯೂ ಬದಲಾವಣೆಯಾಗುತ್ತಾ ಬಂದಿತು ಅವಳು ಗೈರಿಕವಸನವನ್ನು ಧರಿಸಲಾರಂಭಿಸಿ ದಳು ಹಣೆಯಲ್ಲಿ ವಿಭೂತಿಯನ್ನು ಹಚ್ಚಿದಳು ಕೊರಳಲ್ಲಿ ರುದ್ರಾಕ್ಷಮಾಲೆಯನ್ನು ಧರಿಸಿದಳು. ಬರಬರುತ್ತಾ ಅವಳೊಬ್ಬ ಸನ್ಯಾಸಿನಿಯಾದಳು ಗುರುದೇವನು ಆ ಭಕ್ತಳ ರೂಪುಲಾವಣ್ಯಗಳನ್ನು ನೋಡಿ ದಿನದಿನವೂ ಭ್ರಾಂತನಾಗುತ್ತಿದ್ದನು ಅವನ ಮನಸ್ಸು ಮೊದಮೊದಲು ಚಂಚಲವಾಯಿತು ಬರಬರುತ್ತ ಮಾಲತಿಯಲ್ಲಿ ನೆಟ್ಟು ಹೋಯಿತು ಮಾಲತಿಯು ಸರ್ವದಾ ತನ್ನ ಸಾನ್ನಿಧ್ಯದಲ್ಲಿಯೇ ಇರಬಾರದೇಕೆ ಎನ್ನಿ ಸುತ್ತಿತ್ತು ಅವಳ ಮಾತುಗಳು ಕಿವಿಗೆ ಅಮೃತವನ್ನು ಕರೆದಂತೆ ಭಾಸವಾಗುತ್ತಿತ್ತು ಬಹು ಕಷ್ಟದಿಂದ ನಿತ್ಯಕರ್ಮಗಳನ್ನು ನಡೆಸುತ್ತಿದ್ದನು ಬೇಸರದಿಂದ ಭಕ್ತರ ಆರಾ ಧನೆಯನ್ನು ಸ್ವೀಕರಿಸುತ್ತಿದ್ದನು ಆ ಭಕ್ತ ವೃಂದದಲ್ಲಿ ಮಾಲತಿಯನ್ನು ಕಂಡರೆ ಆಕಾಶದಲ್ಲಿ ನಕ್ಷತ್ರ ಮಧ್ಯದಲ್ಲಿ ಚಂದ್ರಬಿಂಬವನ್ನು ನೋಡಿದಂತೆ ಆಹ್ಲಾದವಾಗುತ್ತಿತ್ತು. ಈ ತನ್ನ ಮನಸ್ಸಿನ ಸ್ಥಿತಿಯು ಅವನಿಗೆ ಆಗಾಗ್ಗ ಗೋಚರವಾಗುತ್ತಿತ್ತು ಇದೆಲ್ಲಾ ಭಗವಂತನ ಲೀಲೆ! ಎಂದುಕೊಳ್ಳುತ್ತಿದ್ದನು

ಒಂದುದಿನ ಭಕ್ತವೃಂದವು ಭಜನ ಮಂದಿರದಲ್ಲಿ ಸೇರಿತ್ತು ಅಂದು ಭಕ್ತ

ರೆಲ್ಲರೂ ಮಾಲತಿಯನ್ನು ಗಾನಮಾಡಬೇಕೆಂದೂ, ನರ್ತನ ಮಾಡಬೇಕೆಂದೂ ಪ್ರಚೋದಿಸಿದರು. ಮಾಲತಿಯು ಭಜನ ಮಂದಿರಕ್ಕೆ ಬಂದಳು ಗೈರಿಕಾವಸನವನ್ನು ಧರಿಸಿದ್ದಳು ನೊಸಲಲ್ಲಿ ವಿಭೂತಿ, ಕೊರಳಲ್ಲಿ ಪುಷ್ಪಮಾಲೆ, ಕೈಯ್ಯಲ್ಲಿ ಖಂಜರಿಯನ್ನು ಹಿಡಿದಿದ್ದಳು ಕಾಲಲ್ಲಿ ಕಿಂಕಿಣಿಯನ್ನು ಕಟ್ಟಿದ್ದಳು ಬಿಚ್ಚಿದ ಕೇಶಧಾಮವನ್ನು ಮಲ್ಲಿಗೆಯ ಮೊಗ್ಗಿನ ಪುಷ್ಪಮಾಲೆಯಿಂದ ಕಟ್ಟಿದ್ದಳು. ತೆಳ್ಳನೆಯ ಬಳುಕುವ ಶರೀರ! ಮೈ ಬಣ್ಣವು ಗಜದಂತದಂತಹ ಪ್ರಶಾಂತ ಶ್ವೇತವರ್ಣ! ಗುಂಡಾದ ಮನೋಹರವಾದ ಮುಖಪದ್ಮ ಕೆಂಪಾದ ತೆಳುವಾದ ತುಟಿಗಳು ಯೌವನವನ್ನು ಚೆಲ್ಲುತ್ತಿರುವ ಕಪೋಲಗಳು ವಿಶಾಲವಾದ ಸೌಮ್ಯವಾದ ಕಣ್ಣುಗಳು ಬಾಗಿ ದೀರ್ಘವಾದ ಹುಬ್ಬುಗಳು ಹಣೆಯಮೇಲೆ ಕ್ರೀಡಿಸುತ್ತಿರುವ ಮುಂಗೂದಲು ಬೆನ್ನನ್ನು ಮುಚ್ಚಿ ಭುಜಗಳ ಮೇಲೆ ಹಾರಾಡುತ್ತಿರುವ ಗುಂಗುರು ಗುಂಗುರಾದ ಕೇಶಧಾಮ, ಗುಂಡಾದ, ಮೃದುವಾದ ಹಸ್ತಪಾದಗಳು ಮಾಲತಿಯು ಹಾಡುತ್ತ ಕುಣಿಯುತ್ತ ಈಶ್ವರನಿಗೆ ಆರಾಧನೆಯನ್ನು ಸಮರ್ಪಿಸಿದಳು ಮಾಲತಿಯ ಕೋಮಲ ಕಂಠದಿಂದ ಹೊರಡುತ್ತಿದ್ದ ಗಾನಮಾಧುರ್ಯವು ಆ ದೇವಮಂದಿರದಲ್ಲೆಲ್ಲಾ ಅಮೃತವರ್ಷವನ್ನು ಕರೆದಂತೆ ಇತ್ತು ಮಾಲತಿಯು ಹಾಡುತ್ತ ಹಾಡುತ್ತ ನರ್ತನ ಮಾಡಲಾರಂಭಿಸಿದಳು ಮಹದೇವನ ಸಾನ್ನಿಧ್ಯದಲ್ಲಿ ದಾಕ್ಷಾಯಿಣಿಯು ಲಾಸ್ಯನರ್ತನ ಮಾಡುವಂತೆ ಭಾಸವಾಗುತ್ತಿತ್ತು- ಭಕ್ತರೆಲ್ಲರೂ ಈ ಆನಂದದಲ್ಲಿ ಮೈ ಮರೆತಿದ್ದರು. ಮಹದೇವಸ್ವಾಮಿಯು ಮಾಲತಿಯ ಈ ಮನೋಹರ ರೂಪ, ಈ ದಿವ್ಯಗಾನ, ನರ್ತನಗಳನ್ನು ನೋಡಿ ನೋಡಿ ಮನದಲ್ಲಿ ತನ್ಮಯನಾಗಿ ಹೋದನು ಭಜನೆಯಾಗಿ ದೀಪಾರಾಧನೆಯಾದನಂತರ ಭಕ್ತವೃಂದವು ಹೊರಟು ಹೋಯಿತು. ಮಾಲತಿಯು ಅವರೊಡನೆ ತೆರಳಿದಳು

ಸ್ವಾಮಿಯು ತನ್ನ ವಿಶ್ರಾಂತಿಗೃಹದಲ್ಲಿ ಹೋಗಿ ಕುಳಿತನು ಅವನ ಮನವು ಅಲ್ಲೋಲ ಕಲ್ಲೋಲವಾಯಿತು ದೇವಾಲಯದಲ್ಲಿ ಭಕ್ತರ ಗದ್ದಲವೆಲ್ಲವೂ ಅಡಗಿ ಶಾಂತವಾಗಿದ್ದಿತು ಜಂಗಮವಾಡಿಯೆಲ್ಲವೂ ಕತ್ತಲಾಗಿದ್ದಿತು ಜಂಗಮನು ಮಾಲತಿಯ ಕೋಣೆಯ ಬಾಗಿಲಿಗೆ ಹೋಗಿ ನೋಡಿದನು ಮೆತ್ತಗೆ ಕದವನ್ನು ತಟ್ಟಿದನು ಮಾಲತಿಯು ಅರ್ಧ ನಿದ್ರಾವಸ್ಥೆಯಲ್ಲಿ ಬಾಗಿಲು ತೆಗೆದಳು ತನ್ನ ಮುಂದೆ ಗುರುದೇವನು ಸಾಕ್ಷಾತ್ತಾಗಿ ನಿಂತಿರುವುದನ್ನು ನೋಡಿದಳು. ಭಯಭಕ್ತಿಗಳಿಂದ ಜಂಗಮದೇವನ ಪಾದಗಳಿಗೆ ಅಭಿವಾದನ ಮಾಡಿದಳು ಮಹದೇವಸ್ವಾಮಿಯು ಎರಡು ಕೈಗಳನ್ನು ಹಿಡಿದೆತ್ತಿ ಮಾಲತಿಯನ್ನು ಎಬ್ಬಿಸಿದನು.

"ಮಾಲತಿ! ನಿನ್ನ ನರ್ತನವು ಅಮೋಘವಾಗಿದ್ದಿತು. ಮಹಾದೇವನು ನಿನ್ನ ಸೇವೆಯಿಂದ ಸಂತುಷ್ಟನಾಗಿದ್ದಾನೆ." ಎಂದನು.

ಮಾಲತಿಯು ತಲೆಬಾಗಿಸಿ ಮುಗುಳು ನಗುವನ್ನು ನಕ್ಕಳು

"ಮಾಲತಿ! ಇಂದು ಜಗದೀಶನು ನಿನ್ನ ಭಕ್ತಿಯನ್ನು ಪರೀಕ್ಷೆ ಮಾಡುತ್ತಾನೆ. ಭಗವಂತನ ಸಾನ್ನಿಧ್ಯದಲ್ಲಿ ನಿನ್ನ ಆತ್ಮಾರ್ಪಣೆ ಮಾಡುವಿಯಾ?"ಎಂದು ಕೇಳಿದನು.

"ಗುರುದೇವ! ಈ ಜನ್ಮವನ್ನೇ ಭಗವಂತನ ಪಾದದಲ್ಲಿ ಸಮರ್ಪಣೆಮಾಡಿದ್ದೇನೆ. ಪರೀಕ್ಷೆಯೇಕೆ?" ಎಂದಳು

ಗುರುದೇವನು ಮಾಲತಿಯನ್ನು ಆಲಿಂಗಿಸಿ, ಮಾಲತಿಯ ಅಧರಾಮೃತಪಾನ ಮಾಡಿದನು ಮಾಲತಿಯು ಆತ್ಮಾರ್ಪಣ ಮಾಡಿದಳು

ಮಾರನೆಯ ಪ್ರಾತಃಕಾಲ ಮಾಲತಿಯು ಸ್ನಾನಮಾಡಿಕೊಂಡು, ವಲ್ಕಲವನ್ನು ಧರಿಸಿ, ಲಲಾಟದಲ್ಲಿ ತ್ರಿಪುಂಡ್ರಭಸ್ಮವನ್ನು ಹಚ್ಚಿಕೊಂಡು, ಎಂದಿನಂತೆ ಭಕ್ತವೃಂದ ದೊಡನೆ ದೇವಾಲಯಕ್ಕೆ ಬಂದಳು ಜಂಗಮದೇವನು ಸಾಕ್ಷಾತ್ ಸದಾಶಿವನಂತೆ ಭದ್ರಪೀಠದಲ್ಲಿ ಮಂಡಿಸಿ ಭಕ್ತರಿಗೆ ದರ್ಶನ ಕೊಡುತ್ತಿದ್ದನು ಎತ್ತರವಾದ ಮನುಷ್ಯ, ಪ್ರಶಸ್ತವಾದ ಮೈಕಟ್ಟು, ಸುಂದರವಾದ ಗೌರಾಂಗ, ವಿಶಾಲವಾದ ಲಲಾಟ, ಉಜ್ವಲ ವಾದ ಕಣ್ಣುಗಳು, ಉದ್ದವಾದ ನಾಸಿಕ, ಉಬ್ಬಿದ ಎದೆ ಭುಜಗಳು, ಆ ಸೌಂದರ್ಯ ವನ್ನು ಎತ್ತಿತೋರುವ ಕಾಷಾಯವಸನ, ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿ ಗಳು, ತಲೆಯಲ್ಲಿ ಜಟಾಜೂಟ, ಮೂವತ್ತುವರ್ಷ ವಯಸ್ಸಿನ ತೇಜಸ್ವಿಯಾದ ಮಹಾ ಪುರುಷ. ಜಂಗಮದೇವನು ಭದ್ರಾಸನದ ಮೇಲೆ ಪದ್ಮಾಸನಾಸೀನನಾಗಿ ಭಕ್ತರಿಂದ ಸೇವೆಗೊಳ್ಳುತ್ತಾ, ಹಸನ್ಮುಖನಾಗಿ ಪ್ರಸಾದವನ್ನು ಕೊಡುತ್ತಿದ್ದಾನೆ ಮಾಲತಿಯು ಒಂದು ಕಡೆ ನಿಂತು, ಈ ದಿವ್ಯಮೂರ್ತಿಯನ್ನು ನೋಡುತ್ತಿದ್ದಳು ಈ ದೃಶ್ಯವನ್ನು ನೋಡುತ್ತ ನೋಡುತ್ತ ಮಾಲತಿಗೆ ಹಿಂದಿನ ರಾತ್ರಿಯ ಘಟನೆಯು ಮನಸ್ಸಿನ ಮೇಲೆ ನರ್ತನ ಮಾಡುತ್ತಿದ್ದಿತು ಪ್ರಶಾಂತವಾದ ನಿಶಿರಾತ್ರಿಯಲ್ಲಿ ತಾನು ಆತ್ಮಾರ್ಪಣ ಮಾಡಿದ್ದು ಈ ಮಹಾಪುರುಷನಲ್ಲಿಯೇ ಅಲ್ಲವೇನು? ಎಂದುಕೊಂಡಳು ಮುಖವು ಕೆಂಪಾಯಿತು, ಶರೀರವು ಬೆವರಿತು, ಆ ಶರೀರದಲ್ಲಿ ಒಂದು ವಿಧವಾದ ಕಂಪನವುಂ ಟಾಯಿತು ಧೈರ್ಯದಿಂದ ಆ ಅವಸ್ಥೆಯನ್ನು ಜಯಿಸಿ, ಭಕ್ತರೊಡನೆ ಭಜನೆಮಾಡಲು ತನ್ನ ದಿವ್ಯ ಕಂಠವನ್ನು ಸೇರಿಸಿದಳು ಮಾಲತಿಯ ಕಂಠಧ್ವನಿಯು ಮಂದಿರದಲ್ಲೆಲ್ಲಾ ಝೇಂಕರಿಸತೊಡಗಿತು ಗುರುದೇವನು ಮಾಲತಿಯು ಆ ಮಂದಿರದಲ್ಲಿ ಅಡಿಯಿಡು ತ್ತಲೇ ಆವಳ ಕಡೆ ಒಮ್ಮೆ ನೋಡಿದನು ಪ್ರಯತ್ನಪುರಸ್ಸರವಾಗಿ ತನ್ನ ದೃಷ್ಟಿಯನ್ನು ಆ ಮನಮೋಹಿನಿಯ ಕಡೆಯಿಂದ ಕಿತ್ತು ಬೇರೆ ಕಡೆ ನಿಲ್ಲಿಸಿ ತನ್ನ ವೈರಾಗ್ಯಮುದ್ರೆ ಯನ್ನು ಪ್ರದರ್ಶಿಸಿದನು. ಮಾಲತಿಯ ಕಂಠಸ್ವರವನ್ನು ಕೇಳುತ್ತಲೇ ಗುರುದೇವನ ಹೃದಯವೆಲ್ಲಾ ತನ್ಮಯವಾಯಿತು ಗುರುದೇವನು ಆ ಗಾನದಲ್ಲಿ ತಲ್ಲೀನನಾದನು. ಭಕ್ತರೆಲ್ಲರೂ ಗುರುದೇವನು ಭಗವಂತನಲ್ಲಿ ತಲ್ಲೀನನಾಗಿದ್ದಾನೆಂದೂ, ಧ್ಯಾನಸಮಾ

ಥಿಯು ಬಂದಿದೆಯೆಂದೂ ಭಾವಿಸಿದರು ಭಜನೆಯು ಪೂರೈಸುತ್ತಲೇ ಭಕ್ತರು ಒಬ್ಬೊಬ್ಬರಾಗಿ ಮುಂದೆ ಬಂದು ಭದ್ರಪೀಠದೆದುರಿಗೆ ಮಣಿದು, ಗುರುದೇವನ ಪಾದವನ್ನು ಮುಟ್ಟಿ ಕಣ್ಣಿಗೊತ್ತಿಕೊಂಡು ಹೋಗುತ್ತಿದ್ದರು. ಮಾಲತಿಯು ಕೊನೆಯುವರೆಗೆ ದಿಟ್ಟತನದಿಂದ ನಿಂತಿದ್ದಳು ಕೊನೆಯಲ್ಲಿ ಹೋಗಿ ಗುರುದೇವನನ್ನು ವಂದಿಸುವಾಗ ಲಜ್ಜೆಯಿಂದ ತಲೆಬಾಗಿ ಓರೆಗಣ್ಣಿನಿಂದ ಗುರುದೇವನ ಮುಖವನ್ನು ನೋಡಿ, ಮುಗುಳು ನಗೆಯನ್ನು ನಕ್ಕಳು ಮಹದೇವಸ್ವಾಮಿಯು ಮಂದಹಾಸವನ್ನು ಬೀರಿದನು

ಮಾಲತೀ—ಮಹದೇವಸ್ವಾಮಿಗಳ ಪ್ರಣಯವು ದಿನದಿನಕ್ಕೆ ಪ್ರಗಾಢವಾಗುತ್ತ ಬಂದಿತು ಇವರಿಬ್ಬರೇ ತಮ್ಮ ಪ್ರಣಯವನ್ನು ಬಹುದಿನಗಳು ಅಂತರಂಗವಾಗಿ ಬಚ್ಚಿಟ್ಟುಕೊಳ್ಳಲು ಶಕ್ತರಾಗಲಿಲ್ಲ ಆ ಕ್ಷೇತ್ರವಾಸಿಗಳಿಗೆ ಈ ಛಾಯೆಯು ಕಾಣುತ್ತ ಬಂದಿತು ಮಾಲತಿಗೆ ಈ ಭಕ್ತವೃಂದದ ಮಧ್ಯೆ ವಾಸಮಾಡುವುದು ಅಸಹನೀಯ ವಾಗುತ್ತ ಬಂದಿತು ಅವಳಲ್ಲಿ ಆಲಸ್ಯಭಾವವು ಹೆಚ್ಚುತ್ತ ಬಂದಿತು ಮಾಲತಿಯು ಜಂಗಮವಾಡಿಯನ್ನು ಬಿಟ್ಟು ಹೊರಡಬೇಕೆಂದು ನಿಶ್ಚಯಿಸಿದಳು ಅವಳಿಲ್ಲಿಗೆ ಹೋಗಬೇಕು ಬೇಗಂಸಾಹೇಬಳ ಆವಾಸಕ್ಕೆ ಹೋಗಿ ಭೇಟಿ ಮಾಡಿದಳು ಬೇಗಂಸಾಹೇಬಳ ಆದರ ಔದಾರ್ಯಗಳು ಒಂದೇ ವಿಧವಾಗಿದ್ದವು ಮಾಲತಿಯು ತನಗೆ ಜಂಗಮವಾಡಿಯ ವಾಸವು ಹಿತಕರವಾಗಿಲ್ಲವೆಂದೂ, ಬೇಗಂಸಾಹೇಬರೊಡನೆಯೇ ಇರುವುದಾಗಿ ಕೇಳಿಕೊಂಡಳು ಬೇಗಂಸಾಹೇಬಳು ಏಕಾಕಿನಿ ಅವಳಿಗೊಬ್ಬ ಜೊತೆಗಾತಿ ಇದ್ದರೆ ಮನಸ್ಸಿಗೆ ಎಷ್ಟೋ ಹಿತ ! ಮಾಲತಿಯು ಘಾತಿಮಳಿಗೆ ಮನ ಒಪ್ಪಿದ ಗೆಳತಿ

ಮಾಲತಿಯೇನೋ ಜಂಗಮವಾಡಿಯನ್ನು ಬಿಟ್ಟುಹೋದಳು ಮಹದೇವಸ್ವಾಮಿಯು ಹೋಗುವುದೆಲ್ಲಿಗೆ ? ಅವನಿಗೆ ಮಾಲತಿಯ ವಿರಹವು ಸಹನಾತೀತವಾಗಿತ್ತು ಮಾಲತಿಯು ಆಗಾಗ ಕಾಳೇಶ್ವರಕ್ಕೆ ದೇವರ ದರ್ಶನಕ್ಕೆ ಬರುತ್ತಿದ್ದಳು ಗುರುದೇವನ ದರ್ಶನ ಮಾಡುತ್ತಿದ್ದಳು. ಮಾಲತಿಯ ದರ್ಶನದಿಂದ ಮಹದೇವಸ್ವಾಮಿಯ ಮನಸ್ಸು ವಾತಾಹತ ಕಂಪಿತ ಮೃಣಾಳದಂತೆ ಸೊಕ್ಕಿ ಸೊರಗುತ್ತಿತ್ತು. ಮಾಲತಿಯೂ, ಸ್ವಾಮಿಯೂ ಏಕಾಂತ ದೊರೆತಾಗ ಪರಸ್ಪರ ಒಂದೆರಡು ಮಾತುಗಳನ್ನು ಆಡುತ್ತಿದ್ದರು ಆ ಮಾತುಗಳಲ್ಲಿ ಎಷ್ಟೋ ಅರ್ಥವಿದ್ದ, ವಿಲಾಸವಿದೆ, ಆಕರ್ಷಣೆಯಿದೆ, ಪ್ರಣಯಸ್ನಿಗ್ಧತೆ ಇದೆ. ಆದರೇನು ? ಮಾಲತಿಯು ದೂರವಾದಳು

ಮಹದೇವಸ್ವಾಮಿಯು ಒಂದು ದಿನ ಸಂಧ್ಯಾಕಾಲ ಬೇಗಂಸಾಹೇಬಳ ಮನೆಗೆ ಹೋದನು ಬೇಗಂಸಾಹೇಬಳಿಗೆ ಆಶ್ಚರ್ಯವಾಯಿತು. ಎಂದೂ ತನ್ನ ಮನೆಗ ಬಾರದ ಜಂಗಮದೇವನು ಇಂದು ಬಂದಿದ್ದಾನೆ ಅತ್ಯಂತ ಗೌರವದಿಂದ ಬೈಠಕ್ ಖಾನೆಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿದಳು ಮಾಲತಿಯು ಬಂದು ನಮಸ್ಕಾರ ಮಾಡಿದಳು. ಬೇಗಂಸಾಹೇಬಳು ಅಭಿವಾದನ ಮಾಡಿದಳು. ಜಂಗಮದೇವನು

ಬೇಗಂಸಾಹೇಬಳನ್ನು ಕುರಿತು, "ಬೇಗಂಸಾಹೇಬರವರೇ, ನಾನು ತಮ್ಮಲ್ಲಿ ಬಲು ಮುಖ್ಯವಾದ ರಾಜಕೀಯವನ್ನು ಅಂತರಂಗವಾಗಿ ಮಾತನಾಡಲು ಬಂದಿದ್ದೇನೆ" ಎಂದು ಹೇಳಿದನು ಬೇಗಂಸಾಹೇಬಳು ಜಂಗಮನನ್ನು ಮಹಡಿಯ ಮೇಲಿನ ಹಜಾರಕ್ಕೆ ಕರೆದೊಯ್ದಳು ಮಾಲತಿಯು "ಸ್ವಾಮಿಗಳು ಮಾತನಾಡುವ ಅಂತರಂಗ ವೇನಿರಬಹುದು ಬಹುಶಃ ಅದು ತನ್ನ ವಿಚಾರದ ಮಾತೇ ಆಗಿರಬಹುದು" ಎಂದು ಶಂಕಿಸಿದಳು "ನನ್ನ ವಿಚಾರದಲ್ಲಿ ಅಭೇದ್ಯವಾದ ಅಂತರಂಗವೇನಿದೆ ? ಬೇಗಂ ಸಾಹೇಬಳಿಗೆ ತಿಳಿದರ ದೋಷವೇನು ? ನಾನು ಪ್ರತ್ಯಕ್ಷನಾಗಿ ಜಂಗಮದೇವನ ಪ್ರಣ ಯಿನಿಯೆಂದು ಒಪ್ಪಿಕೊಳ್ಳುತ್ತೇನೆ" ಎಂದುಕೊಂಡಳು "ಅಥವಾ ಜಂಗಮದೇವನು ಈ ಕೊಡಗುರಾಜ್ಯವನ್ನು ಬಿಟ್ಟು ಎಲ್ಲಿಯಾದರೂ ಹೊರಟುಹೋಗಬಹುದೆ, ದೇವ ಹಾಗಾಗದಂತೆ ಅನುಗ್ರಹಿಸು" ಎಂದು ದೇವರನ್ನು ಪ್ರಾರ್ಥಿಸಿದಳು ಮಹಡಿಯ ಮೇಲೆ ಹಜಾರಕ್ಕೆ ಹೋಗಿ, ಜಂಗಮನೂ, ಬೇಗಂಸಾಹೇಬಳೂ ಆಸನಗಳಲ್ಲಿ ಕುಳಿತರು ಜಂಗಮದೇವನು ಬೇಗಂಸಾಹೇಬರೇ, ನಾನು ಹಿಂದೆ ಒಂದು ಬಾರಿ ತಮ್ಮಲ್ಲಿ ಸೂಚಿಸಿದ್ದೇನೆ ನಾನು ವಿದ್ರೋಹಿ, ಈ ಕ್ಷೇತ್ರದಲ್ಲಿ ಅತುಲೈಶ್ವರ್ಯವನ್ನು ತಂದಿಟ್ಟಿದ್ದೇನೆ ಇನ್ನುಮೇಲೆ ನಾನು ಈ ಕಾಳೇಶ್ವರದ ಮಹಂತನಾಗಿರುವ ಮನಸ್ಸಿಲ್ಲ ಈ ಧನಕನಕವೆಲ್ಲಾ ತಮ್ಮದು ಅದನ್ನು ಗುಪ್ತವಾಗಿ ತಂದು ಇಲ್ಲಿ ಸೇರಿಸುತ್ತೇನೆ. ಈ ಕ್ಷೇತ್ರವನ್ನೆಲ್ಲಾ ತ್ರಿಯಂಬಕಭಟ್ಟರಿಗೆ ಒಪ್ಪಿಸುತ್ತೇನೆ ನನ್ನಿಂದ ಈ ಗುರುಪೀಠವನ್ನು ಅಲಂಕರಿಸಲು ಸಾಧ್ಯವಿಲ್ಲ

ಜಂಗಮರೇ ! ತಾವು ಮಹಂತ ಪದವಿಯನ್ನೇಕೆ ತ್ಯಜಿಸುತ್ತೀರಿ ?

ನಾನು ನಿಜವಾದ ಸನ್ಯಾಸಿಯಲ್ಲ. ಸನ್ಯಾಸಧರ್ಮವನ್ನು ಪಾಲಿಸುವುದು ನನ್ನಿಂದ ಶಕ್ಯವಿಲ್ಲ.

ಬೇಗಂಸಾಹೇಬಳು ನಗುತ್ತಾ, ನೀವು ಗೃಹಸ್ಥರಾಗುತ್ತೀರೇನು ?

ಹೌದು ! ತಾವು ಅಪ್ಪಣೆ ಇತ್ತರೆ, ನಾನು ಗೃಹಸ್ಥ ಧರ್ಮವನ್ನು ಸ್ವೀಕರಿಸುತ್ತೇನೆ

ಸ್ವಾಮಿಗಳೇ ! ನೀವು ಇಷ್ಟೊಂದು ಐಶ್ವರ್ಯ, ಪದವಿ, ಗುರುಪೀಠ, ಭಕ್ತರ ಪೂಜೆ, ಎಲ್ಲವನ್ನೂ ತೊರೆದು ಗೃಹಸ್ಥರಾಗುವುದೆಂದರೆ, ನನಗೆ ಆಶ್ಚರ್ಯವಾಗುತ್ತದೆ ನಿಮ್ಮ ಗೃಹಸ್ಥಾಶ್ರಮದ ಸಹಧರ್ಮಿಣಿ ಯಾರು ?

ಜಂಗಮನು ಮಾತನಾಡಲಿಲ್ಲ

ಸ್ವಾಮಿಗಳೇ ! ಹೇಳಿರಿ ! ನಿಮ್ಮಂಥಾ ಧೀರರು ನಾಚಿಕೊಳ್ಳುವುದೇಕೆ ? ನನಗೆ ಎಷ್ಟೋ ಸಂತೋಷ.

ಜಂಗಮನು ತಗ್ಗಿದ ಕಂಠದಿಂದ "ಮಾಲತಿ"

ಬೇಗಂಸಾಹೇಬಳು ನಕ್ಕು, ಆಹಾ ! ಮಾಲತಿಯು ನಿಮ್ಮ ಪ್ರಣಯಿನಿಯೇ ! ನಾನು—ಮಾಲತಿಯು ಜಂಗಮವಾಡಿಯಿಂದ ನಮ್ಮ ಮನೆಗೆ ಬಂದಾಗಲೇ ಅವಳಲ್ಲಿ ವ್ಯತ್ಯಾಸವನ್ನು ಕಂಡೆ ಯಾರಲ್ಲಿಯೋ ಅನುರಕ್ತಳಾಗಿದ್ದಾಳೆಂದುಕೊಂಡೆ. ಅಂಥಾ ಲಾವಣ್ಯವತಿಯಾದ ತರುಣಿಯ ಹೃದಯದಲ್ಲಿ ಅನುರಾಗವು ಹುಟ್ಟುವುದೇನೂ ಆಶ್ಚರ್ಯವಲ್ಲ. ಮಹದೇವಸ್ವಾಮಿಗಳೇ ! ನಿಮ್ಮ ನಿಶ್ಚಯವು ನನಗೆಷ್ಟೋ ಸಂತೋಷವನ್ನುಂಟುಮಾಡಿದೆ. ಈ ಹಾಳು ಜೀವನವನ್ನು ಸುಳ್ಳು ವೈರಾಗ್ಯದ ಸೋಗಿನಲ್ಲಿ ನಾವೇಕೆ ಕಳೆಯಬೇಕು

ಇಲ್ಲ ! ಬೇಗಂಸಾಹೇಬರೇ, ಆ ಸನ್ಯಾಸಿ ಜೀವನವು ಸುಖಕರವಾದುದು. ಅದರಿಂದ ಕ್ರೋಧದ್ವೇಷಗಳಿಲ್ಲ ಎಷ್ಟೋ ಮಂದಿ ಆರ್ತರಿಗೆ, ಅನಾಥರಿಗೆ ಸಹಾಯ ಮಾಡಬಹುದು. ಭಕ್ತಿಯು ಆನಂದದಾಯಕವಾದುದು. ಭಗವಂತನ ಅನುಗ್ರಹವು ಅಮೋಘವಾದುದು. ಆದರೆ ಅದನ್ನು ಸಾಧಿಸಲು ನನ್ನಿಂದ ಆಗಲಿಲ್ಲ

ಫಾತಿಮಾ—ಸ್ವಾಮಿಗಳೇ ! ನಾನು ನಿಮ್ಮಲ್ಲಿ ಸನ್ಯಾಸಧರ್ಮ-ಗೃಹಸ್ಥ ಧರ್ಮಗಳಲ್ಲಿ ವಾದ ಮಾಡುವುದಿಲ್ಲ ನನಗೆ ಅದರಲ್ಲಿ ಆಸಕ್ತಿ ಇಲ್ಲ

ಸ್ವಾಮಿ—ಬೇಗಂಸಾಹೇಬರವರೇ ! ಬೇಅದಬ್, ಮಾಫ್ ಮಾಡಬೇಕು ತಮ್ಮಲ್ಲಿ ಹೆಚ್ಚು ಮಾತನಾಡುವುದಕ್ಕೇ ನನಗೆ ಭಯ ಇವತ್ತು ಮಾತಿಗೆ ಮಾತು ಬಂದಿದೆ. ತಮ್ಮನ್ನೊಂದು ಮಾತು ಕೇಳಬೇಕೆನ್ನಿಸುತ್ತದೆ

ಫಾತಿಮಾ—ಕೇಳಿರಿ ! ಮಹಂತರೇ ! ಹೇಳುತ್ತೇನೆ

ಸ್ವಾಮಿ— ಸ್ತ್ರೀ ಜಾತಿಯಲ್ಲಿ ತಮ್ಮಂತಹ ಸೌಂದರ್ಯವತಿಯರು ಅಪರೂಪ ತುಂಬಿದ ತಾರುಣ್ಯ ! ತಾವು ಮದುವೆ ಮಾಡಿಕೊಂಡು ಸುಖವಾಗಿರಬಾರದೇಕೆ ? ಈ ರಾಜಕೀಯವು ತಮಗೇಕೆ ?

ಫಾತಿಮಾ— ಸ್ವಾಮಿಗಳೇ, ನನ್ನ ರೂಪವೇ, ಅದನ್ನು ಸುಡಬೇಕು ಆ ಮಾತು ಬಿಡಿರಿ. ನಾನು ಮಹಾಮಹಿಮರಾದ ದಿವಾನರವರ ಧರ್ಮಪತ್ನಿ ಆ ಮಹಾಪುರುಷನ ಘೋರ ಕೊಲೆ, ನನ್ನ ಮೇಲಿನ ಜಘನ್ಯ ಅತ್ಯಾಚಾರಗಳಿಂದ ನನ್ನ ಮನಸ್ಸು ಕಾದ ಕಬ್ಬಿಣದ ರಸದಂತೆ ಕುದಿಯುತ್ತಿದೆ. ಸುಲ್ತಾನರ ಮೇಲೆ ಆ ದ್ವೇಷವನ್ನು ತೀರಿಸಿಕೊಳ್ಳಬೇಕೆಂದು ಹಠ ತೊಟ್ಟಿದ್ದೇನೆ ಆ ಹಠಸಾಧನೆಯಲ್ಲಿಯೇ ನನ್ನ ಪ್ರಾಣ ಹೋದರೆ ಬಲು ಸಂತೋಷ ! ಬದುಕಿದ್ದು ಹಠಸಾಧನೆಯಲ್ಲಿ ಗೆದ್ದರೆ, ಆ ದಿವಾನರವರ ಸಮಾಧಿಯ ಮುಂದೆ ಪ್ರಾಣತ್ಯಾಗ ಮಾಡಿಕೊಳ್ಳುತ್ತೇನೆ.

ಸ್ವಾಮಿ—ತಾಯೆ ! ನಾನು ನನ್ನ ಪ್ರಾಣವನ್ನು ಪಣವಾಗಿಟ್ಟು ತಮ್ಮ ಸೇವೆ ಮಾಡುತ್ತೇನೆ

ಸ್ವಾಮಿಯು ಅಪ್ಪಣೆ ಪಡೆದು ಹೊರಟನು ಬೇಗಂಸಾಹೇಬಳು ಜಂಗಮನ ಜೊತೆಯಲ್ಲಿ ಮಹಡಿಯಿಂದ ಕೆಳಗಿಳಿದು ಬಂದು ಅವನನ್ನು ಕಳುಹಿಸಿದಳು

ಮಹದೇವಸ್ವಾಮಿಯು ಕ್ರಮಕ್ರಮವಾಗಿ ಕಾಳೇಶ್ವರದಲ್ಲಿದ್ದ ಗುಪ್ತ ನಿಧಿಯನ್ನೆಲ್ಲಾ ಬೇಗಂಸಾಹೇಬಳ ಮನೆಗೆ ಸಾಗಿಸಿದನು ಯಾರಿಗೂ ಇದು ಯಾವ ವಿಧನಾಗಿಯೂ ಗೋಚರವಾಗಲಿಲ್ಲ ಒಂದು ತಿಂಗಳಕಾಲ ಕಳೆಯುತ್ತಲೇ ಕೊಡಗಿನ ರಾಜನು ಒಂದು ದಿನ ಪರಿವಾರ ಸಮೇತವಾಗಿ ಕಾಳೇಶ್ವರಕ್ಕೆ ದೇವರ ದರ್ಶನಕ್ಕೆ ಬಂದರು ಮಹದೇವಸ್ವಾಮಿಯು ಕಾಳೇಶ್ವರದ ದೇವಾಲಯವನ್ನೆಲ್ಲಾ ತ್ರಿಯಂಬಕ ಭಟ್ಟರಿಗೆ ವಹಿಸುವಂತೆ ದೇವಿಯ ಆಜ್ಞೆಯಾಗಿದೆಯೆಂದು ರಾಜರಲ್ಲಿ ಅರುಹಿದನು. ಅವರಿಗೆ ಈ ಮಾತನ್ನು ಕೇಳಿ ಆಶ್ಚರ್ಯವಾಯಿತು ಜಂಗಮದೇವನು ಎಷ್ಟುನಿರೀಹ ಸತ್ಪುರುಷನೆಂದು ಕೊಂಡಾಡಿದರು ತ್ರಿಯಂಬಕಭಟ್ಟನಿಗೆ ಎಷ್ಟೋ ಹೇಳಿ, ಆ ಮಹಂತ ಪದವಿಯನ್ನು ಜಂಗಮನು ಭಟ್ಟರಿಗೆ ವಹಿಸಿದನು ಕಾಳೇಶ್ವರವನ್ನು ಬಿಟ್ಟು ಹೊರಟುಹೋದನು ಭಕ್ತರೆಲ್ಲರೂ ಜಂಗಮದೇವನು ಸರ್ವಸಂಗ ಪರಿತ್ಯಾಗ ಮಾಡಿ, ಅರಣ್ಯಕ್ಕೆ ತಪಸ್ಸಿಗೆ ಹೊರಟುಹೋದನೆಂದು ಹೇಳತೊಡಗಿದರು ಜಂಗಮದೇವನು ಕಾಳೇಶ್ವರವನ್ನು ಪರಿತ್ಯಜಿಸಿ, ಬೇಗಂಸಾಹೇಬಳ ಆಶ್ರಯದಲ್ಲಿ ಮಾಲತಿಯ ಸಾನ್ನಿಧ್ಯವನ್ನು ಸೇರಿದನು ಅಂದಿನಿಂದ ಅವನನ್ನು ಯಾರೂ ಕಾಣಲಿಲ್ಲ ಕಾಳೇಶ್ವರದಲ್ಲಿ ಜನರು ಜಂಗಮದೇವನ ಪವಾಡಗಳನ್ನು ಸ್ತೋತ್ರಗಯ್ಯುತ್ತಿದ್ದರು ದೇವಾಲಯದ ಅಧಿಕಾರವನ್ನೆಲ್ಲಾ ತ್ರಿಯಂಬಕಭಟ್ಟನು ನೆರವೇರಿಸುತ್ತಿದ್ದನು

## ಕಾರ್ಕಳದ ಫಕೀರ

ಫಕೀರನು ಕೊಡಗಿಗೆ ಬಂದಾಗಿನಿಂದ ಎಲ್ಲೆಲ್ಲಿಯೋ ಅಲೆಯುತ್ತಿದ್ದನು ಒಂದಾವೃತ್ತಿ ಶ್ರೀರಂಗಪಟ್ಟಣಕ್ಕೆ ಹೋಗಿ ಬಂದನು ಅವನ ಮನಸ್ಸಿಗೆ ಯಾವುದೂ ಸಮಾಧಾನವಿಲ್ಲ. ಎಲ್ಲಿಯಾದರೂ ದೂರದೇಶಕ್ಕೆ ಹೊರಟುಹೋಗಬೇಕೆಂದು ಚಿಂತಿಸುತ್ತಿದನು ಒಂದು ದಿನ ತನ್ನ ಮನಸ್ಸಿನ ಸ್ಥಿತಿಯನ್ನೆಲ್ಲಾ ವರ್ಣಿಸಿ ಬೇಗಂಸಾಹೇಬರಲ್ಲಿ ಅರುಹಿದನು ಬೇಗಂಸಾಹೇಬಳ ವೇದಾಂತವೇ ಬೇರೆ! ಫಕೀರರೇ, ದೇವರಿದ್ದಾನೆಯೋ ಇಲ್ಲವೋ ಬಲ್ಲವರಾರು ? ತಮ್ಮಂತಹ ಜ್ಞಾನಿಗಳು ಆ ದೇವರನ್ನು ಕಟ್ಟಿಕೊಂಡು ಏಕೆ ಹಂಬಲಿಸುತ್ತಾರೋ ನನಗೆ ಗೋಚರವಾಗಿಲ್ಲ ಈ ಮೂಢ ಜನರು ಆ ದೇವರನ್ನು ನಂಬಿ, ಏಕೆ ಇಷ್ಟು ಹುಚ್ಚರಾಗಿದ್ದಾರೋ ನನಗೆ ಅರ್ಥವಾಗುವುದಿಲ್ಲ. ನೀವು ಈ ಜನರ ಸೇವೆಯನ್ನಾದರೂ ಮಾಡಬಾರದೇ ?

ಫಕೀರನು "ಬೇಗಂಸಾಹೇಬ್, ನೀವು ದೇವರನ್ನು ದೂರುವುದೇನೂ ತಪ್ಪಲ್ಲ. ದೇವರ ಅನುಗ್ರಹದಿಂದ ವಂಚಿತರಾದವರಿಗ ಇದು ಸಹಜವಾಗಿಯೇ ಇದೆ. ನಾವೂ ಈ

ಬಡಜನರ ಸೇವೆಯೇ ದೇವರಸೇವೆಯೆಂದು ನಂಬಿದ್ದೇವೆ ಆದರೆ ಎಲ್ಲವೂ ದೇವರ ಹೆಸರಿನಲ್ಲಿಯೇ ನಡೆಯಬೇಕು. ಇಲ್ಲಿ ನಾನೊಂದು ಮಶೀದಿಯನ್ನು ನಿರ್ಮಾಣ ಮಾಡಬೇಕೆಂದಿದ್ದೇನೆ ಒಂದು ಲಂಗರಖಾನೆಯನ್ನಿಡಬೇಕೆಂದಿದ್ದೇನೆ"

ಫಾತಿಮಾ—ಇದಕ್ಕೆಲ್ಲಾ ಹಣವೆಲ್ಲಿ ಬರುತ್ತದೆ ?

ಫಕೀರ—ಹಣವು ತನ್ನಷ್ಟಕ್ಕೆ ತಾನೇ ಬರುತ್ತದೆ ನನ್ನಂತಹ ಕಾಸಿಲ್ಲದ ಫಕೀರರೇ ಮಶೀದಿಯನ್ನು ಕಟ್ಟಿದವರು ಮಹಾಧರ್ಮಗಳನ್ನು ಮಾಡಿದವರು

ಫಾತಿಮಾ—ಫಕೀರಜಿ. ನಾನು ದೇವರನ್ನು ನಂಬದಿದ್ದರೂ, ನಿಮ್ಮನ್ನು ನಂಬುತ್ತೇನೆ ನೀವು ನನ್ನ ತಂದೆಗೆ ಸಮಾನರು ನಾನು ಬೇಕಾದಷ್ಟು ಹಣ ಕೊಡುತ್ತೇನೆ ನೀವು ಬೇಕಾದ ಧರ್ಮ ಮಾಡಿರಿ.

ಫಕೀರ—ಮಗಳೇ, ನೀನು ದೇವರನ್ನು ನಂಬುವುದಿಲ್ಲವೆನ್ನುತ್ತಿ, ದೇವರ ಮನುಷ್ಯರನ್ನು ನಂಬುತ್ತಿ ಅಷ್ಟೇ ವ್ಯತ್ಯಾಸ

ಮರುದಿವಸದಿಂದಲೇ ಮಶೀದಿಯ ಕೆಲಸಕ್ಕೆ ಆರಂಭವಾಯಿತು ಅವರ ಜೊತೆಯಲ್ಲಿಯೇ ಲಂಗರುಖಾನೆಯೂ ಆರಂಭವಾಯಿತು ಕಾಳೇಶ್ವರದ ಸಮೀಪದಲ್ಲಿಯೇ ಆರುತಿಂಗಳಲ್ಲಿ ಮಶೀದಿಯು ತಯಾರಾಯಿತು ಲಂಗರಖಾನೆಯ ಕಟ್ಟಡವೂ ಸಿದ್ಧವಾಯಿತು. ಬಡಬಗ್ಗರಿಗೆ ಅನ್ನದಾನ ಮಾಡಲು ಆರಂಭಿಸಿದರು ಈ ಮಶೀದಿಗೆ ಭಕ್ತಾದಿಗಳು ಹೆಚ್ಚಾಗಿ ಬಾರದಿದ್ದರೂ, ಬಡಜನರು ಹೆಚ್ಚು ಹೆಚ್ಚಾಗಿ ಬರುತ್ತಿದ್ದರು ಅನ್ನವಸ್ತ್ರಗಳನ್ನು ಪಡೆಯುತ್ತಿದ್ದರು ಈ ಸಮಾಚಾರವು ಗೂಢಚಾರರ ಮೂಲಕ ಕೊಡಗಿನ ರಾಜರ ಕಿವಿಗೆ ಬಿತ್ತು ಅವರಿಗೆ ಇದೊಂದೂ ಸರಿಬೀಳಲಿಲ್ಲ ರಾಜರು ಕಾಳೇಶ್ವರಕ್ಕೆ ಬಂದು ತ್ರಿಯಂಬಕಭಟ್ಟರನ್ನು ಭೇಟಿ ಮಾಡಿದರು ಪ್ರಸ್ತಾಪತ್ವೇನ ಈ ಮಶೀದಿಯ ವಿಚಾರವನ್ನು ಎತ್ತಿದರು ತ್ರಿಯಂಬಕಭಟ್ಟರು "ರಾಜರೇ, ನೀವು ಆ ಮಶೀದಿಗೆ ಆತಂಕಪಡಿಸಿದರೆ, ನಾನು ಈ ದೇಶವನ್ನು ಪರಿತ್ಯಾಗ ಮಾಡಿ ಹೋಗುತ್ತೇನೆ ದೇವರು ಒಬ್ಬನೇ, ಮಾನವ ವರ್ಗವೆಲ್ಲವೂ ಆ ದೇವರ ಮಕ್ಕಳು. ಒಬ್ಬನೇ ದೇವರೆಂದು ನಂಬಿದವರಿಗೆ, ಕಾಳೇಶ್ವರವಾದರೂ ಒಂದೇ, ಆ ಮಶೀದಿಯಾದರೂ ಒಂದೇ. ನಾನಾದೇವರುಗಳಾದರೆ ಯಾವ ದೇವರೂ ನಿಜವಲ್ಲ."

ರಾಜ—ಭಟ್ಟರೇ, ತಾವು ಪ್ರಪಂಚವನ್ನು ನೋಡುತ್ತಿಲ್ಲವೆ ? ಮುಸಲ್ಮಾನರು ಬೇರೆ, ನಾವು ಬೇರೆ ಅವರು ನಮ್ಮ ಶತ್ರುಗಳಾಗಿದ್ದಾರೆ ನಮ್ಮ ದೇಶದಲ್ಲಿ ಒಂದಾದರೂ ಮಶೀದಿಯಿಲ್ಲ. ಈಗ ಇಲ್ಲಿ ಒಂದು ಮಶೀದಿಯಾದರೆ, ಈ ಕೊಡಗು ರಾಜ್ಯವೆಲ್ಲವೂ ಮುಸಲ್ಮಾನಮಯವಾಗುತ್ತದೆ.

ಭಟ್ಟ—ಆ ಮುಸಲ್ಮಾನರನ್ನು ಸೃಷ್ಟಿಸಿರುವವನು ನಿಮ್ಮ ದೇವರಲ್ಲವೇನು ?

ರಾಜನು ಉತ್ತರ ಕೊಡಲಿಲ್ಲ. ನೋಡಿ ! ಭಟ್ಟರೆ, ಟಿಪ್ಪೂಸುಲ್ತಾನರು ಮುಸ

ಲ್ಮಾನರಾದ್ದರಿಂದರಿಂದಲೇ, ನಮ್ಮ ದೇಶಕ್ಕೆ ಎಷ್ಟೋ ತೊಂದರೆಗಳನ್ನು ಕೊಡುತ್ತಿದ್ದಾರೆ

ಭಟ್ಟ—ಹೌದು ! ಆ ಟಿಪ್ಪೂಸುಲ್ತಾನರೂ, ನೀವೂ ಸಹೋದರರಂತೆ ಬದುಕಬೇಕೆಂಬುದೇ ದೇವರ ಇಚ್ಛೆ ಅದಕ್ಕೆ ವಿರುದ್ಧವಾಗಿರುವುದರಿಂದಲೇ ನಿಮ್ಮಿಬ್ಬರಿಗೂ ವಿರೋಧ ನೀವಿಬ್ಬರೂ ದೈವದ್ವೇಷಿಗಳು ಇಬ್ಬರೂ ಕಷ್ಟಪಡುತ್ತೀರಿ ಒಬ್ಬರನ್ನೊಬ್ಬರು ದ್ವೇಷಿಸುತ್ತೀರಿ

ಒಟ್ಟಿನಲ್ಲಿ ಭಟ್ಟರ ಅನುಗ್ರಹದಿಂದ ರಾಜರು ವ ಶೀದಿಯ ಮೇಲೆ ಕೈಮಾಡದೇ ಹೊರಟುಹೋದರು

ದಕ್ಷಿಣ ಕನ್ನಡದಿಂದಲೂ. ಮಲಬಾರು ಕಡೆಯಿಂದಲೂ ಬಹುಮಂದಿ ಮುಸಲ್ಮಾನರು ಕೊಡಗಿನಲ್ಲಿ ಜೀವನೋಪಾಯಗಳಿಗಾಗಿ ಬಂದು ನೆಲಸತೊಡಗಿದರು ಬೇಗಂಸಾಹೇಬಳು ಬಡಬಗ್ಗರಿಗೆಲ್ಲಾ ನಾನಾವಿಧವಾಗಿ ಸಹಾಯ ಮಾಡುತ್ತಿದ್ದಳು. ಮಾಲತಿಯನ್ನೂ, ಮಹದೇವಸ್ವಾಮಿಯನ್ನೂ ಬಹಳ ಆದರದಿಂದ ಕಾಣುತ್ತಿದ್ದಳು ಬೇಗಂಸಾಹೇಬಳು ಸುಖವಾಗಿರಲಿಲ್ಲ ಅವಳು ಯಾವಾಗಲೂ ಸುಲ್ತಾನರ ಯೋಚನೆಯಲ್ಲಿಯೇ ಇದ್ದಳು ಸುಲ್ತಾನರ ಮೇಲೆ ಯುದ್ಧ ಮಾಡಬಲ್ಲವರಾರು ? ಇಯಜ್‌ಖಾನರು ಸರ್ವಥಾ ಸುಲ್ತಾನರ ಮೇಲೆ ಯುದ್ಧ ಮಾಡುವುದಿಲ್ಲ ಹುಸೇನ್‌ಖಾನನ ಗತಿಯೇನಾಯಿತೋ ಗೊತ್ತೇ ಇಲ್ಲ ಈ ಕೊಡಗಿನ ರಾಜನು ಯುದ್ಧ ಮಾಡುವವನಲ್ಲ ಆದರೂ, ಈ ಕೊಡಗಿನವರು ಬಹಳ ವೀರರು ಈಗ ಯುದ್ಧವು ಬಂದರೆ ಒಂದು ಲಕ್ಷ ಮಂದಿ ಕೊಡಗರು ಯುದ್ಧಕ್ಕೆ ಹೊರಡುತ್ತಾರೆ ಯಾರಾದರೂ ಬಲಶಾಲಿಗಳು ಶ್ರೀರಂಗಪಟ್ಟಣದ ಮೇಲೆ ಯುದ್ಧವನ್ನು ಹೂಡಿದರೆ ಇತ್ತಕಡೆಯಿಂದ ಈ ಕೊಡಗರನ್ನು ಎತ್ತಿ ಕಟ್ಟಿ ನುಗ್ಗಿಸಿಬಿಡಬಹುದು ಈ ಕೊಡಗಿನ ರಾಜರಿಗೂ, ಟಿಪ್ಪೂಸುಲ್ತಾರಿಗೂ ಏನಾದರೂ ವಿರೋಧವು ಬೆಳೆಯುತ್ತಲೇ ಇರುವಂತೆ ಮಾಡಬೇಕು ಎಂದು ಆಲೋಚಿಸುತ್ತಿದ್ದಳು ಈ ಮಂತ್ರಾಲೋಚನೆಗಳಲ್ಲೆಲ್ಲಾ ಫಕೀರನಿಂದ ಏನೂ ಪ್ರಯೋಜನವಿಲ್ಲ ಮಹದೇವಸ್ವಾಮಿಯಿಂದ ವಿಶೇಷ ಪ್ರಯೋಜನವಾಗುತ್ತಿತ್ತು ಮಾಲತಿಯು ತಾನು ಬೇಗಂಸಾಹೇಬಳಿಗಾಗಿ ಎಂತಹ ದುರ್ಘಟ ಕಾರ್ಯವನ್ನಾದರೂ ಮಾಡುವುದಾಗಿ ನಿಶ್ಚಯ ಮಾಡಿದ್ದಳು

ಬೇಗಂಸಾಹೇಬಳು ಊರು ಊರಿಗೂ, ಮನೆಮನೆಗೂ, ಸಂಚಾರವಾಲಾರಂಭಿಸಿದಳು ಪ್ರತಿಯೊಬ್ಬ ಮನೆ ಯಜಮಾನನನ್ನು ಹುರಿದುಂಬಿಸಲು ಪ್ರಯತ್ನ ಮಾಡಿದಳು ಕೊಡಗು ಶೀಮೆಯಲ್ಲಿ ಸ್ತ್ರೀ ಪುರುಷರೆಲ್ಲಾ ಸುಲ್ತಾನನಮೇಲೆ ವಿದ್ವೇಷವನ್ನು ಕಾರುವಂತೆ ಎತ್ತಿ ಕಟ್ಟಿದಳು.

ವೀರರಾಜನಿಗೆ ಗುಪ್ತಚರರು ಈ ಬೇಗ ಸಾಹೇಬಳ ವೃತ್ತಾಂತವನ್ನು ಆಗಾಗ್ಗೆ

ತಂದು ಹೇಳುತ್ತಿದ್ದರು ರಾಜನು ಬಹು ಮಂದಿ ಸ್ತ್ರೀ ಗೂಢಚಾರಿಣಿಯರನ್ನು ಇಟ್ಟಿದ್ದನು. ಅವರು ಆಗಾಗ ಕಾಳೇಶ್ವರಕ್ಕೆ ಹೋಗಿಬರುತ್ತಿದ್ದರು ಆ ಸಂಧರ್ಭ ಗಳಲ್ಲೆಲ್ಲಾ ಬೇಗಂಸಾಬೇಬರನ್ನು ಬಂದು ಭೇಟಿ ಮಾಡುತ್ತಿದ್ದರು ಅವರುಗಳು ಬೇಗಂಸಾಹೇಬರೊಡನೆ ಅನೇಕ ರಾಜಕೀಯಗಳನ್ನು ಮಾತನಾಡುತ್ತಿದ್ದರು ಸುಲ್ತಾನರನ್ನು ನಾನಾ ವಿಧವಾಗಿ ದೂಷಿಸುತ್ತಿದ್ದರು. ಅದರಿಂದ ಎಷ್ಟೋ ಸಮಾ ಚಾರಗಳು ಅವರಿಗೆ ತಿಳಿಯುತ್ತಿತ್ತು ಆ ಸ್ತ್ರೀಯರು ಬಂದು ರಾಜನಲ್ಲಿ ಅದನ್ನೆಲ್ಲಾ ವಿವರವಾಗಿ ಹೇಳುತ್ತಿದ್ದರು ಬೇಗಂಸಾಹೇಬಳ ರೂಪಲಾವಣ್ಯಗಳನ್ನು ವಿಧವಿಧ ವಾಗಿ ವರ್ಣಿಸುತ್ತಿದ್ದರು ಕಾಮುಕನಾದ ರಾಜನಿಗೆ ಈ ಮಾತುಗಳು ಅತ್ಯಂತ ಉತ್ತೇಜಕವಾಗಿದ್ದುವು

ರಾಜನು ಫಾತಿಮಳಿಗೆ ಏನಾದರೂ ಪ್ರಲೋಭವಮಾಡಿ, ಒಲಿಸಿ ಕೊಳ್ಳಬೇ ಕೆಂದು ಚಿಂತಿಸಿದನು ಯಾವುದಾದರೊಂದು ನೆಪ ಮಾಡಿ, ಬೇಗಂಸಾಹೇಬಳನ್ನು ಅರಮನೆಗೆ ಕರೆಸುವ ಯೋಚನೆ ಮಾಡಿದನು ಅರಮನೆಯಲ್ಲಿ ರಾಜರ ವರ್ಧಂತಿ ಉತ್ಸವವು ಬಂದಿತು ಆ ಉತ್ಸವಕ್ಕೆ ಆಹ್ವಾನಕೊಟ್ಟು ಫಾತಿಮಾಬೇಗಂರನ್ನು ಕರೆಸುವಂತೆ ಮ್ಯಾನಾವನ್ನು ಕಳಿಸಿ, ಪರಿಜನರನ್ನು ಕಳಿಸಿಕೊಟ್ಟನು ಬೇಗಂರವರು ಸಂತೋಷದಿಂದ ಆಹ್ವಾನವನ್ನು ಒಪ್ಪಿಕೊಂಡರು ವೀರರಾಜಪೇಟೆಯಲ್ಲಿಯೇ ಒಂದು ಅರಮನೆಯಲ್ಲಿಯೇ ಬೇಗಂಸಾಹೇಬಳಿಗೆ ಬಿಡಾರದ ಏರ್ಪಾಡನ್ನು ಮಾಡಿದ್ದರು ರಾಜರು ತಾವೇ ಸ್ವತಃ ನಿಂತು, ಬಿಡಾರದ ಅಲಂಕಾರಗಳನ್ನೆಲ್ಲಾ ಮಾಡಿಸಿದರು ಫಾಲ್ಗುಣ ಶುದ್ಧ ಹುಣ್ಣಿಮೆಯ ದಿನ ರಾಜರ ವರ್ಧಂತಿ. ಆ ದಿನಕ್ಕೆ ಸರಿಯಾಗಿ ಬೇಗಂರವರು ಅಲ್ಲಿಗೆ ಬಂದು ಸೇರಿದರು ಅವರು ಜೊತೆಯಲ್ಲಿ ಮಾಲತಿಯನ್ನು ಕರೆದುಕೊಂಡು ಹೋದರು

ಬೇಗಂಸಾಹೇಬಳು ವೀರರಾಜಪೇಟೆಗೆ ಬಂದು ತಲಪಿದ ಸಮಾಚಾರವು ತಿಳಿ ಯುತ್ತಲೇ ರಾಜರು ತಾವೇ ಬಂದು ಬೇಗಂಸಾಹೇಬರನ್ನು ಎದುರುಗೊಂಡರು ಭೇಟಿ ಮರುಭೇಟಿಗಳೆಲ್ಲಾ ಬಹಳ ಗೌರವದಿಂದ ನಡೆದುವು ಬೇಗಂಸಾಹೇಬಳಿಗೆ ರಾಜಯೋಗ್ಯವಾದ ಉಪಚಾರಗಳಿಗೆ ಏರ್ಪಾಡಾಗಿತ್ತು ಇದನ್ನೆಲ್ಲಾ ನೋಡಿ, ಬೇಗಂಸಾಹೇಬಳು ಅತ್ಯಂತ ಸಂತೋಷಪಟ್ಟುಕೊಂಡಳು. ವರ್ಧಂತಿಯ ಉತ್ಸವ ಗಳು ಪೂರೈಸಿದ ಮಾರನೆಯ ದಿನ ರಾಜರು ಅರಮನೆಯಲ್ಲಿ ಬೇಗಂಸಾಹೇಬಳ ಭೇಟಿಗೆ ಬಂದರು ಅವರ ಮನೆಯಲ್ಲಿದ್ದ ಅಂತಃಪುರದಲ್ಲಿಯೇ ರಾಜರ ಭೇಟಿಗೆ ಬೇಗಂಸಾಹೇಬಳು ಸಿದ್ಧಮಾಡಿದ್ದಳು ರಾಜರು ಅರಮನೆಗೆ ಬರುತ್ತಲೇ ಬೇಗಂ ಸಾಹೇಬರು ಸ್ವತಃ ರಾಜರನ್ನು ಎದುರುಗೊಂಡು ಉಪಚಾರೋಕ್ತಿಗಳಿಂದ ಆದರಿಸಿ,

ಅವರನ್ನು ಅಂತಃಪುರದೊಳಗೆ ಕರೆದೊಯ್ದು ಉಚಿತಾಸನದಲ್ಲಿ ಕುಳ್ಳಿರಿಸಿದರು ಅವರವರ ಮಾತುಕಥೆಗಳಿಗೆ ಆರಂಭವಾಯಿತು

ರಾಜರು—ರಾಣೀಸಾಹೇಬರೇ ! ತಾವು ಇಲ್ಲಿಗೆ ಬಂದಿದ್ದು ನಮಗೆ ಬಹಳ ಸಂತೋಷವಾಯಿತು ತಮಗೆ ಈ ಸ್ಥಳವು ಪ್ರಶಸ್ತವಾಗಿರಬಹುದೆಂದು ಇಲ್ಲಿ ಬಿಡಾರಕ್ಕೆ ಏರ್ಪಾಡು ಮಾಡಿದೆ

ಬೇಗಂ- ಈ ಸ್ಥಳವು ಬಹಳ ಪ್ರಶಸ್ತವಾಗಿದೆ ಇದು ರಾಜಯೋಗ್ಯವಾದ ಸ್ಥಳ ತಾವು ನನ್ನನ್ನು ಬಹಳ ಗೌರವಪಡಿಸಿದ್ದೀರಿ ಇದಕ್ಕಾಗಿ ನಾನು ಚಿರಋಣಿಯಾಗಿದ್ದೇನೆ ಇಲ್ಲಿಯ ಉತ್ಸವಗಳೆಲ್ಲಾ ಪೂರೈಸಿವೆ ಅಪ್ಪಣೆಯಾದರೆ ನಾವು ಕಾಳೇಶ್ವರಕ್ಕೆ ಹಿಂದಿರುಗುತ್ತೇವೆ

ರಾಜ—ರಾಣಿಯವರೇ ! ನನ್ನದೊಂದು ಪ್ರಾರ್ಥನೆ ಇದೆ. ಇಲ್ಲಿಯ ರಾಜಕಾರಣಗಳನ್ನು ತಾವು ಅರಿಯಿರಿ ತಾವು ಇಲ್ಲಿಯೇ ಇದ್ದರೆ ಒಳ್ಳೆಯದು ಕಾಳೇಸ್ವರದಲ್ಲಿ ತಾವು ಅಡಿಗಡಿಗೆ ಅಪಾಯಕ್ಕೊಳಗಾಗುವ ಸಂಭವ ಉಂಟು

ಫಾತಿಮಾ—ಈ ಕೊಡಗು ರ‍್ಯಾದಲ್ಲಿಯೇ ನನಗೆ ದ್ವೇಷಿಗಳಿಲ್ಲ ಎಲ್ಲರೂ ನನ್ನಲ್ಲಿ ವಿಶ್ವಾಸವುಳ್ಳವರಾಗಿದ್ದಾರೆ ತಮ್ಮ ಅಭಿಮಾನ ರಕ್ಷಣೆಗಳಿವೆ

ರಾಜ—ಬೇಗಂರವರೇ ! ಕೇಳಿರಿ ನೀವು ಇಲ್ಲಿರುವುದು ಸುಲ್ತಾನರಿಗೆ ಗೊತ್ತಾಗಿ ಹೋಗಿದೆ ನೀವು ಇಲ್ಲಿ ಕೊಡಗರನ್ನು ಸುಲ್ತಾನರ ಮೇಲೆ ಎತ್ತಿ ಕಟ್ಟುತ್ತಿದ್ದೀರೆಂದು ಶ್ರೀರಂಗಪಟ್ಟಣಕ್ಕೆ ವರ್ತಮಾನವು ಹೋಗಿದೆ ಇನ್ನೂ ಏನೇನೋ ವರ್ತಮಾನಗಳು ಹಬ್ಬಿವೆ ಸುಲ್ತಾನರವರು ತೀಕ್ಷ್ಣವಾದ ಪ್ರತಿಕ್ರಿಯೆಯನ್ನು ಕೈಗೊಳ್ಳುವರೆಂದು ಗೂಢಚಾರರು ಸಮಾಚಾರ ತಂದಿದ್ದಾರೆ

ಬೇಗಂ—ರಾಜರವರೇ ! ಇದೆಲ್ಲಾ ನನಗೆ ಸಂತೋಷದ ಸುದ್ದಿಗಳೇ ಆಗಿವೆ. ಸುಲ್ತಾನರು ನನ್ನ ಮೇಲೆ ಕೈ ಮಾಡಲು, ಅವರ ಕಡೆ ಜನರನ್ನು ಗುಪ್ತವಾಗಿ ಕಳಿಸಿದರೆ ನನ್ನನ್ನು ಹಿಡಿಯುವುದು ದುಸ್ತರ ! ನನ್ನನ್ನು ಹಿಡಿಯುವುದಕ್ಕಾಗಿ ಸ್ವತಃ ಸುಲ್ತಾನರೇ ಇಲ್ಲಿಗೆ ಬಂದರೆ, ನನ್ನ ಇಷ್ಟಾರ್ಥವು ಈಡೇರಿದಂತೆಯೇ ಸರಿ

ರಾಜ—ಈಗಿನ ಪ್ರಸಂಗವು ನೀವು ತಿಳಿದಿರುವಷ್ಟು ಸುಲಭವಾದುದಲ್ಲ ಸ್ವಯಂ ಸುಲ್ತಾನರೇ ನಿಮ್ಮನ್ನು ಹಿಡಿಯಲು ಸೈನ್ಯ ಸಮೇತವಾಗಿ ಹೊರಟಿದ್ದಾರೆ

ಬೇಗಂ—(ಗಹಗಹಿಸಿ ನಕ್ಕು) ರಾಜರೇ ! ಅದು ಸುಲ್ತಾನರ ಅವಿವೇಕದ ಪರಮಾವಧಿ. ದಿವಾನ್ ಮಹಮದಾಲಿಯವರನ್ನು ಕೊಲೆ ಮಾಡಿಸಿದರೆಂದು ಶ್ರೀರಂಗಪಟ್ಟಣದ ದರಬಾರೆಲ್ಲವೂ ಹೊಗೆಯಾಡುತ್ತಿದೆ ಆ ದಿವಾನರವರ ಪತ್ನಿಯನ್ನು ಹಿಡಿಯಲು ಸ್ವಯಂ ಸುಲ್ತಾನರು ಸೈನ್ಯವೆತ್ತಿ ಬಂದರೆ ಶ್ರೀರಂಗಪಟ್ಟಣದ ಆಸ್ಥಾನವೆಲ್ಲವೂ ಬೆಂಕಿ ಹತ್ತಿ ಉರಿಯುತ್ತದೆ.

ರಾಜ—ಬೇಗಂಸಾಹೇಬ್ ! ಶ್ರೀರಂಗಪಟ್ಟಣದಲ್ಲಿ ಈಗ ತಮಗೆ ಆ ಅಂತಸ್ತಿಲ್ಲ ನೀವು ಈಗ ಕೊಡಗಿನಲ್ಲಿದ್ದೀರೆಂದೂ, ಯಾರೋ ಕೊಡಗಿನವರೊಬ್ಬರನ್ನು ವಿವಾಹ ಮಾಡಿಕೊಂಡು ಗೃಹಸ್ಥ ಧರ್ಮದಿಂದ ಇಲ್ಲಿ ವಾಸಮಾಡುತ್ತಿದ್ದೀರೆಂದೂ, ಇಲ್ಲಿ ಸುಲ್ತಾನರ ವಿರುದ್ಧ ಪಿತೂರಿ ಎಬ್ಬಿಸುತ್ತಿದ್ದೀರೆಂದೂ ಶ್ರೀರಂಗಪಟ್ಟಣದಲ್ಲಿ ಪುಂಖಾನುಪುಂಖವಾಗಿ ಮಾತುಗಳು ಹಬ್ಬಿವೆ

ಬೇಗಂ—(ನಗುತ್ತಾ) ಸಂತೋಷ ! ನಾನು ಮದುವೆಯಾಗಬಾರದೆಂದು ಯಾರ ಅಡ್ಡಿಯೂ ಇಲ್ಲ ನಾನು ಇಷ್ಟಪಟ್ಟರ ಯಾರನ್ನು ಬೇಕಾದರೂ ಮದುವೆಯಾಗಬಹುದು ಅದರಲ್ಲಿ ರಾಜದ್ರೋಹವೇನಿದೆ ? ಪಿತೂರಿ ಎಲ್ಲಿದೆ ?

ರಾಜ—ಬೇಗಂಸಾಹೇಬ್ ! ಕೊಡಗಿಗೂ ಮೈಸೂರಿಗೂ ಯುದ್ಧವೇನೋ ಸನ್ನಿಹಿತವಾದಂತೆಯೇ ! ಅದಕ್ಕೆ ನೀವೇ ಕಾರಣ ! ನೀವು ಅನುಗ್ರಹಿಸಿದರೆ ನಾವು ನಮ್ಮ ಸರ್ವಸ್ವವನ್ನೂ ಪಣವಾಗಿಟ್ಟು ಯುದ್ಧ ಮಾಡುತ್ತೇವೆ ಈ ಯುದ್ಧದಲ್ಲಿ ನಮಗೆ ಜಯವಾಗುವುದು ಖಂಡಿತ !

ಬೇಗಂ—ನನಗೆ ಬಹಳ ಸಂತೋಷ ! ನಾನು ಈ ಶಪಥಸಾಧನೆಗಾಗಿ ನನ್ನ ಸರ್ವಸ್ವವನ್ನೂ ಅರ್ಪಿಸುತ್ತೇನೆ ತಮ್ಮ ಜೊತೆಯಲ್ಲಿ ಯುದ್ಧ ಮಾಡಿ ರಣಕ್ಷೇತ್ರದಲ್ಲಿ ಈ ಶರೀರವನ್ನು ಅರ್ಪಣೆ ಮಾಡುತ್ತೇನೆ

ರಾಜ—ಕೊಡಗಿನ ರಾಜರು ಯುದ್ಧದಲ್ಲಿ ಹೆಂಗಸರ ಸಹಾಯವನ್ನು ಕೋರುವ ಹೇಡಿಗಳಲ್ಲ ತಾವು ಅಂತಃಪುರದಲ್ಲಿಯೇ ಇರಬೇಕು ತಮ್ಮ ರೂಪ ಲಾವಣ್ಯ ಈ ವೀರತ್ವಗಳು ತಾವು ರಾಣಿಯಾಗುವುದಕ್ಕೆ ಅರ್ಹವಾದವುಗಳು ತಾವು ಈ ಕೊಡಗಿನ ರಾಜ್ಯದ ಮಹಾರಾಣಿಯಾದರೆ, ಈ ಜನ್ಮದಲ್ಲಿ ನನಗೆ ಅದಕ್ಕಿಂತಲೂ ಭಾಗ್ಯವು ಬೇರೊಂದಿಲ್ಲ. ನಾನು ಸುಲ್ತಾನರೊಡನೆ ರಣಾರಣಿ ಯುದ್ಧಮಾಡುತ್ತೇನೆ ರಣದಲ್ಲಿ ಸುಲ್ತಾನರಿಗೊಬ್ಬ ಪ್ರತಿದ್ವಂದ್ವಿ ಇದ್ದಾನೆಂಬುದು ಜಗತ್ಪ್ರಸಿದ್ಧವಾಗಲಿ ! ಯುದ್ಧದಲ್ಲಿ ಜಯಾಪಜಯಗಳು ಸ್ಥಿರವಲ್ಲ ನಾವು ಗೆದ್ದರೆ ಈ ಲೋಕದಲ್ಲಿ ಸುಖಸಾಮ್ರಾಜ್ಯವು ನಮ್ಮದು ಯುದ್ಧದಲ್ಲಿ ಮಡಿದರೆ ಇಬ್ಬರೂ ರಣಕ್ಷೇತ್ರದಲ್ಲಿ ಮಡಿಯೋಣ ಇಂದೇ ಗಾಂಧರ್ವವಿವಾಹವಾಗಲಿ

ಬೇಗಂ—(ವಿಷಾದದಿಂದ ನಕ್ಕು) ರಾಜರೆ ! ನನಗೆ ಗೊತ್ತು ಅನೇಕ ದಿನಗಳಿಂದ ನಿಮ್ಮ ಬುದ್ಧಿಯು ಪಲ್ಲಟವಾಗಿದೆಯೆಂದು ನಾನು ಸಂದೇಹಪಟ್ಟಿದ್ದೆ ಅದು ಇಂದು ನಿಶ್ಚಯವಾಯಿತು ದೌಲತ್‌ರಾಣಿಯವರಿಗಾಗಿ ಸುಲ್ತಾನರೂ, ಇರುಜ್‌ಖಾನರೂ ನಗರದ ರಣಕ್ಷೇತ್ರದಲ್ಲಿ ಯುದ್ಧಮಾಡಿದರು. ಆ ಪ್ರಕರಣದಲ್ಲಿಯೇ ನನ್ನ ಪತಿದೇವನ ಬಲಿಯಾಯಿತು ಆ ಹುಣ್ಣು ನನ್ನ ಹೃದಯದಿಂದ ಮಾಗಿಲ್ಲ ನೀವು ಅದರ ಮೇಲೆ ಮತ್ತೊಂದು ಘಾಯವನ್ನು ಮಾಡುತ್ತಿದ್ದೀರಿ !

ರಾಜ—ಫಾತಿಮಾ ! ನಾನು ನಿನ್ನ ರೂಪಲಾವಣ್ಯಗಳಲ್ಲಿ ಮುಗ್ಧನಾಗಿದ್ದೇನೆ. ನೀನು ಈ ಕೊಡಗಿಗೆ ಬಂದಾಗಿನಿಂದಲೂ ನಾನು ನಿನ್ನದರ್ಶನ ಮಾಡಿದಾಗಿನಿಂದಲೂ ನಾನು ನಿನ್ನಲ್ಲಿ ಆಸಕ್ತನಾಗಿದ್ದೇನೆ ಪರೋಕ್ಷವಾಗಿ ನಿನ್ನ ರೂಪಲಾವಣ್ಯಗಳನ್ನು ಕೇಳಿ ಆ ಮೋಹನರೂಪವನ್ನು ಪ್ರತ್ಯಕ್ಷದರ್ಶನ ಮಾಡಲೋಸುಗವೇ ನಾನು ನಿನ್ನ ಭೇಟಿಯನ್ನು ಮಾಡಿದೆ ನೀನು ಹೇಳುವ ಕಥಗಳೆಲ್ಲಾ ಕಲ್ಪಿತವಾದವುಗಳು ಸುಲ್ತಾನರು ದಿವಾನರನ್ನು ಕೊಲ್ಲಿಸಿದ್ದು ನಿನ್ನ ಮೇಲಿನ ಪ್ರೇಮದಿಂದಲೇ ! ದೌಲತ್‌ರಾಣಿಯವರ ಕಥಯೆಲ್ಲಾ ಸುಳ್ಳು ನೀನು ದೌಲತ್‌ರಾಣಿಗಿಂತಲೂ ಪರಮರೂಪವತಿ ! ನೀನು ನನ್ನವಳಾಗು ನಾನು ನಿನ್ನ ಹರವನ್ನು ಗೆದ್ದುಕೊಡುತ್ತೇನೆ ಎಂದು ಹೇಳುತ್ತ ಫಾತಿಮಳ ಕೈಹಿಡಿದುಕೊಂಡನು

ಫಾತಿಮಾ—ರಾಜರೇ ! ನಾನು ನಿಮ್ಮ ಪ್ರೇಯಸಿಯಾಗುವೆನೆಂದು ಸ್ವಪ್ನದಲ್ಲಿಯೂ ಎಣಿಸಬೇಡಿರಿ. ನನ್ನನ್ನು ಬಿಡಿರಿ ! ನಾನು ಇಂದೇ ಈ ಕೊಡಗುರಾಜ್ಯವನ್ನು ಬಿಟ್ಟುಹೋಗುತ್ತೇನೆ ನೀವು ಫಾತಿಮಳು ಕೊಡಗಿನಲ್ಲಿಲ್ಲ ಎಂದು ಡಂಗೂರವನ್ನು ಹಾಕಿಸಿರಿ ! ಸುಲ್ತಾನರೊಡನೆ ಯುದ್ಧವು ತಪ್ಪುತ್ತದೆ ನೀವು ವಿಲಾಸಪ್ರಿಯರೆಂದು ನಾನು ಕೇಳಿಬಲ್ಲೆ ! ನಿಮ್ಮ ಅಂತಃಪುರ ರಮಣಿಯರೊಡನೆ ನೀವು ಸುಖವಾಗಿರಿ ! ಈ ಯುದ್ಧವಿಗ್ರಹಗಳು ನಿಮಗೇಕೆ? ನನ್ನಸಹವಾಸವನ್ನುಬಯಸಬೇಡಿರಿ ನನ್ನ ಮೋಹವು ಹಾಲಾಹಲ ವಿಷಕ್ಕಿಂತಲೂ ಘೋರವಾದುದು ದಾವಾನಲಕ್ಕಿಂತಲೂ ದಾರುಣವಾದುದು

ರಾಜ—(ನಗುತ್ತಾ) ಫಾತಿಮ! ನೀನೆಲ್ಲಿ ಹೋಗುವೆ! ಹೇಗೆ ತಪ್ಪಿಸಿಕೊಳ್ಳುವೆ? ನಾನು ನಿನ್ನಮೇಲೆ ಬಲವಾದ ಬಲೆ ಬೀಸಿದ್ದೇನೆ ನೀನು ಪ್ರೇಮದಿಂದ ವಶವಾಗದಿದ್ದರೆ ಬಲಾತ್ಕಾರದಿಂದ ಸ್ವಾಧೀನಪಡಿಸಿಕೊಳ್ಳುವುದನ್ನು ಸಂಕಲ್ಪಿಸಿದ್ದೇನೆ

ಫಾತಿಮಾ—(ಹಲ್ಲು ಕಡಿಯುತ್ತಾ) ನೀನು ನನ್ನನ್ನು ಬಲಾತ್ಕರಿಸಿದರೆ ಈ ಕೊಡಗು ಶ್ಮಶಾನವಾಗುವುದು ನೀನು ಪತಂಗದ ಹುಳುವಿನಂತೆ ಸಾಯುವೆ ಈ ಅಂತಃಪುರದಲ್ಲಿಯೇ ನಿನ್ನ ಪ್ರಾಣಾಪಹಾರ ಮಾಡುತ್ತಿದ್ದೆ ಇಷ್ಟು ದಿನಗಳು ನಿನ್ನ ರಕ್ಷಣೆಯಲ್ಲಿದ್ದು ನಿನ್ನ ಪ್ರಾಣವನ್ನು ತೆಗೆಯುವುದು ನನ್ನಂಥಾ ವೀರರಮಣಿಗೆ ತಕ್ಕುದಲ್ಲವೆಂದು ನಿನ್ನನ್ನು ಬಿಟ್ಟಿದ್ದೇನೆ ಹೊರಟುಹೋಗು ಎಂದು ತಳ್ಳಿ ಕಟಬಂಧದಿಂದ ಕಠಾರಿಯನ್ನು ಹಿರಿದೆತ್ತಿದಳು

ರಾಜನು ಫಾತಿಮಳ ಎರಡು ಕೈಗಳನ್ನು ಗಟ್ಟಿಯಾಗಿ ಹಿಡಿದ , ಅವಳ ಕೈಯ್ಯಲ್ಲಿದ್ದ ಕಠಾರಿಯನ್ನು ಕಿತ್ತುಕೊಂಡು, ಫಾತಿಮಳನ್ನು ಎದೆಗಪ್ಪಿಕೊಂಡು, ಫಾತಿಮಾ ! ಇಂದು ನೀನು ನನ್ನ ಕೈಯಿಂದ ತಪ್ಪಿಸಿಕೊಳ್ಳಲಾರ ಎಂದೆಂದಿಗೂ ನಿನಗೆ ವಿಮುಕ್ತಿ ಇಲ್ಲ. ನಿನಗಾಗಿ ಮಹಾಯದ್ಧವನ್ನು ತಂದುಕೊಂಡೆ. ಈ ಆಪತ್ಸಮಯದಲ್ಲಿಯಾದರೂ

ನನ್ನ ಇಷ್ಟಾರ್ಥವನ್ನು ಪೂರೈಸಿಕೊಳ್ಳದೆ ಬಿಡುವೆನೇ ! ಎಂದು ಘಾತಿಮಳನ್ನು ಬಲವಾಗಿ ಹಿಡಿದುಕೊಂಡನು. ಘಾತಿಮಳು ಅಸಹಾಯಳಾಗಿ ಚೀರಿಕೊಳ್ಳಲಾರಂಭಿಸಿದಳ ಅವಳ ಕಣ್ಣು ಕತ್ತಲು ಕಟ್ಟಿ ಜ್ಞಾನಶೂನ್ಯಳಾಗುತ್ತ ಬಂದಳು ಅರಣ್ಯದಲ್ಲಿ ವ್ಯಾಘ್ರರಾಜನು ಹರಿಣಿಯನ್ನು ಹಿಡಿದಂತ, ಘಾತಿಮಳು ರಾಜನ ಬಾಹುಬಂಧನದಲ್ಲಿ ಸಿಕ್ಕಿಬಿದ್ದಿದ್ದಾಳೆ ರಾಜನು ಆ ಮೋಹದಲ್ಲಿ ಪ್ರಜ್ಞಾಶೂನ್ಯನಾಗಿದ್ದಾನೆ ಅವನಿಗೆ ಆ ಅರಮನೆ ಆ ಸನ್ನಿವೇಶ, ತಾನು ರಾಜನೆಂಬ ಅರಿವು ಒಂದೂ ಬೋಧೆಯಾಗುತ್ತಿಲ್ಲ ಕ್ಷಣಕ್ಷಣಕ್ಕೂ ಪ್ರಚೋದಕವಾದ ಘಾತಿಮಳರೂಪ ! ಘಾತಿಮಳ ಸ್ಪರ್ಶ, ಇವುಗಳಿಂದ ಮದೋನ್ಮತ್ತನಾಗಿದ್ದಾನೆ ಆ ಹುಚ್ಚು ಮನಸ್ಸನ್ನು ದಣಿಸಿಕೊಳ್ಳಲು, ಘಾತಿಮಳ ಮೇಲೆ ಅತ್ಯಾಚಾರ ಮಾಡಲು, ಹಸಿದ ಹುಲಿಯಂತೆ ಆಕ್ರಮಣ ಮಾಡುತ್ತಾನೆ ಅಷ್ಟರಲ್ಲಿ ಹಿಂದಿನಿಂದ ಯಾರೋ ಬಂದು ರಾಜನ ಕೊರಳನ್ನು ಹಿಡಿದು ಬಲವಾಗಿ ಸೆಳೆದು ನೆಲದಮೇಲೆ ಕೆಡವಿದರು ಘಾತಿಮಳು ರಾಜನ ಬಾಹುಗಳಿಂದ ಬಿಡುಗಡೆಯಾಗುತ್ತಲೇ ಬುಡ ಕಡಿದ ಬಾಳೆಯ ಕಂಬದಂತೆ ನಡುಗುತ್ತಾ ಜ್ಞಾನಶೂನ್ಯಳಾಗಿ ಭೂಮಿಯ ಮೇಲೆ ಬಿದ್ದಳು ರಾಜನು ಜ್ಞಾನಶೂನ್ಯನಾಗಿ ಬಿದ್ದಿದ್ದಾನೆಂದು ಬಗೆದ ಘಾತಿಮಳ ಗತಿಯೇನಾಯಿತೋ ಎಂದು ಒಂದು ಕ್ಷಣ ಬಗ್ಗಿ ನೋಡಿದನು ರಾಜನು ಕ್ಷಣದಲ್ಲಿ ಚೇತರಿಸಿಕೊಂಡನು ಎದ್ದು ನೆಲದ ಮೇಲೆ ಬಿದ್ದಿದ್ದ ಘಾತಿಮಳ ಕಠಾರಿಯನ್ನು ಕೈಗೆ ತೆಗೆದುಕೊಂಡು ಆ ವ್ಯಕ್ತಿಯ ಕಂಠದಲ್ಲಿ ಬಲವಾಗಿ ತಿವಿದನು ಆ ವ್ಯಕ್ತಿಯು ಆರ್ತಧ್ವನಿ ಮಾಡುತ್ತ ನೆಲದಮೇಲೆ ಬಿದ್ದು ಹೊರಳಿದನು. ಅಷ್ಟು ಹೊತ್ತಿಗೆ ಆ ಸ್ಥಳಕ್ಕೆ ಬಂದಿದ್ದ ಮಾಲತಿಯು ಚಿಟ್ಟನೆ ಚೀರಿದಳು ರಾಜನು ಕ್ರೂರ ದೃಷ್ಟಿಯಿಂದ ಹಿಂದಿರುಗಿ ನೋಡಿದನು.

ನೀನು ಯಾರೇ ಬಾಂದಿ ! ಈ ಘಾತುಕನು ಯಾರೇ ? ಎಂದು ಗದ್ದರಿಸಿದನು

ಮಾಲತಿಯು ರೋದನ ಮಾಡುತ್ತಾ—ಅವನು ಜಂಗಮದೇವ ! ಮಹದೇವಸ್ವಾಮಿ. ನೀನು ಘಾತುಕ ! ಅವನನ್ನು ಕೊಲೆ ಮಾಡಿದ್ದೀಯೇ ! ಎಂದು ಹೇಳುತ್ತಾ ಜಂಗಮದೇವನ ಸಮೀಪಕ್ಕೆ ಹೋಗಿ ನಿಂತಳು

ಮಹದೇವಸ್ವಾಮಿಯು ಮರ್ಮಾಹತನಾಗಿ ನರಳುತ್ತಿದ್ದನು ಮಾಲತಿಯು ಕಂಪಿತಧ್ವನಿಯಿಂದ "ಗುರುದೇವ! ಗುರುದೇವ !" ಎಂದು ಕೂಗುತ್ತ ಅವನ ಮುಖದಲ್ಲಿ ಮುಖವಿಟ್ಟು, ನೋಡಿದಳು ಮಹದೇವಸ್ವಾಮಿಯು ಆ ಯಾತನೆಯಲ್ಲಿಯೂ ಮುಗುಳು ನಗುವನ್ನು ನಗುತ್ತಾ ಸಣ್ಣ ದನಿಯಲ್ಲಿ "ಮಾಲತಿ ! ಮಾಲತಿ !" ಎಂದನು ಮಾಲತಿಯು ಕಣ್ಣೀರು ಸುರಿಸುತ್ತ ಮಹದೇವಸ್ವಾಮಿಯ ಮುಖದ ಮೇಲೆ ಮುಖವಿಟ್ಟು ಚುಂಬಿಸಿದಳು. ಸ್ವಾಮಿಯ ಪ್ರಾಣವು ಹಾರಿಹೋಯಿತು ಮಾಲತಿಯ ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು. ಶರೀರವು ಕಂಪಿಸುತ್ತಿತ್ತು

ರಾಜನು ಗಾಬರಿಯಿಂದ ಸಮೀಪಕ್ಕೆ ಬಂದು, ಅವಳ ಕೈ ಹಿಡಿದುಕೊಂಡು, 'ರಮಣಿ, ನೀನಾರು ? ಇವನಾರು ?" ಎಂದು ಕೇಳಿದನು

ಮಾಲತಿಯು ನಡುಗುತ್ತಾ—ಇವನು ಕಾಳೇಶ್ವರದ ಜಂಗಮದೇವ ಮಹದೇವ ಸ್ವಾಮಿ ! ನಾನು ಅವನ ಪತ್ನಿ ! ನನ್ನ ಹಸರು ಮಾಲತಿ ಎಂದಳು

ರಾಜನು ಅವಳ ಕೈ ಬಿಟ್ಟನು.

ಮಾಲತಿಯು ಜ್ಞಾನಶೂನ್ಯಳಾಗಿ ನೆಲದಮೇಲೆ ದೊಪ್ಪನೆ ಬಿದ್ದಳು ! ರಾಜನು ಬಗ್ಗಿ ಆ ವ್ಯಕ್ತಿಯ ಮುಖವನ್ನು ನೋಡಿದನು ಆಶ್ಚರ್ಯವಿಷಾದಗಳಿಂದ, ಹೌದು! ಮಹದೇವಸ್ವಾಮಿ ! ಸನ್ಯಾಸಿಯಾದ ಇವನಿಗ ಮಾಲತಿಯು ಹೆಂಡತಿ ಎಂದರೇನು ? ಈ ಫಾತಿಮಳಿಗೂ ಇವನಿಗೂ ಏನು ಸಂಬಂಧ ? ಇವನು ಇಲ್ಲಿಗೆ ಎಲ್ಲಿಂದ ಬಂದನು! ಹೇಗೆ ಬಂದನು! ಆಹಾ ! ಎಂತಹ ಸತ್ಪುರುಷನಿಗೆ ಏನು ಗತಿ ನನ್ನ ಕೈಯಿಂದಲೇ ಮೃತ್ಯು ' ಎಂದು ನಿಟ್ಟುಸಿರು ಬಿಟ್ಟನು. ರಾಜನು ನಿರ್ವಿಣ್ಣನಾಗಿ ಆ ಅಂತಃಪುರ ವನ್ನು ಬಿಟ್ಟು ಹೋದನು ಆಪ್ತರಾದ ಸೇವಕರನ್ನು ಅಂತಃಪುರಕ್ಕೆ ಕಾವಲಿಟ್ಟು, ಫಾತಿಮಳನ್ನೂ, ಮಾಲತಿಯನ್ನೂ ಬಂಧನದಲ್ಲಿಡುವಂತೆ ಆಜ್ಞೆ ಮಾಡಿದನು. ಇವರ ಸಮಾಚಾರನೇ ಹೊರಕ್ಕೆ ತಿಳಿಯದಂತೆ ಕಟ್ಟಪ್ಪಣೆ ಮಾಡಿದನು ರಾಜನ ಅಪ್ಪಣೆ ಯಂತ, ರಾಜಭಟರು ಮಹದೇವಸ್ವಾಮಿಯ ಕಳೇಬರವನ್ನುವ್ಯಾನಾದಲ್ಲಿಟ್ಟು ಕಾಳೇ ಶ್ವರಕ್ಕೆ ಸಾಗಿಸಿದರು. ಅವರು ಕಾಳೇಶ್ವರದ ಸಮೀಪಕ್ಕ ಹೋಗುವುದರೊಳಗೆ ಬೆಳಕು ಹರಿಯಿತು ರಾಜಭಟರು ಆ ಕಳೇಬರವನ್ನು ಒಂದು ಮರದ ಕೆಳಗೆ ಮಲಗಿಸಿ ಪಲಾಯನ ಮಾಡಿದರು

ಬೆಳಕು ಹರಿಯುತ್ತಲೇ ಮುಸಲ್ಮಾನ ಭಿಕ್ಷುಕನೊಬ್ಬನು ಆ ಮಾರ್ಗವಾಗಿ ಮಶೀತಿಯ ಕಡೆ ಹೋಗುತ್ತಿದ್ದನು ದಾರಿಯಲ್ಲಿ ಮರದ ಕಳಗೆ ವಸ್ತ್ರಾಚ್ಛಾದಿತವಾ ಗಿದ್ದ ಸನ್ಯಾಸಿಯ ಕಳೇಬರವನ್ನು ನೋಡಿದನು. ಹಿಂದೂ ಸನ್ಯಾಸಿಯ ಶವ ! ನಮ ಗೇಕೆ ಈ ತಂಟೆ ! ಎಲ್ಲಿಯಾದರೂ ನನ್ನ ಮೇಲೆ ಬಂದೀತು ಎಂದುಕೊಂಡು ಮಶೀದಿಗೆ ಹೋದನು ಲಂಗರ್‌ಖಾನಯಲ್ಲಿ ಫಕೀರನು ಭಿಕ್ಷುಕರಿಗೆ ಸದಾವರ್ತೆ ಕೊಡುತ್ತಿ ದ್ದನು ಆ ಭಿಕ್ಷುಕನು ತಾನು ಕಂಡ ವಿಷಯವನ್ನುಗುಟ್ಟಾಗಿ ಫಕೀರನಿಗೆ ಹೇಳಿದನು. ಫಕೀರನು ತಕ್ಷಣ ಆ ಸ್ಥಳಕ್ಕೆ ಬಂದನು. ಅವನ ಹಿಂದೆ ಸಾಧುಗಳೂ, ಭಿಕ್ಷುಕರೂ ಎಲ್ಲರೂ ಓಡಿಬಂದರು ಫಕೀರನು ಮರದ ಹತ್ತಿರ ಹೋಗಿ ಬಟ್ಟೆಯ ಮುಸುಕನ್ನು ತೆಗೆದು ನೋಡಿದನು ಅದು ಮಹದೇವಸ್ವಾಮಿಯ ಶವ ! ಫಕೀರನ ಮುಖವು ವಿವ ರ್ಣವಾಯಿತು ಅವನ ಕಣ್ಣುಗಳಲ್ಲಿ ನೀರು ಬಂತು ಅವನು ಆ ಕಳೇಬರವನ್ನು ಎತ್ತಿಕೊಂಡನು. ನಾಲ್ಕಾರು ಸಾಧುಗಳು ಓಡಿಬಂದು ಆ ಮೃತ ಕಳೇಬರವನ್ನು ಹಿಡಿದುಕೊಳ್ಳಲು ಬಂದರು. ಫಕೀರನು ಕಠೋರ ಧ್ವನಿಯಿಂದ "ಮುಟ್ಟಬೇಡಿ" ಎಂದು

ಗದ್ದರಿಸಿದನು ಎಲ್ಲರೂ ದೂರ ಸರಿದರು ಫಕೀರನು ಉನ್ಮತ್ತನಂತೆ ಆ ಕಳೇಬರ ವನ್ನು ಹೊತ್ತುಕೊಂಡು ಮಶೀದಿಗೆ ಹೋದನು ಮಶೀದಿಯ ಬಾಗಿಲಿನಲ್ಲಿ ಬಿಳಿಯ ಬಟ್ಟೆಯನ್ನು ಹಾಸಿ, ಮಹದೇವಸ್ವಾಮಿಯ ಶವವನ್ನು ಅದರ ಮೇಲೆ ಮಲಗಿಸಿದನು ಕಂಠದಲ್ಲಿ ನೆಟ್ಟಿದ್ದ ಕಠಾರಿಯನ್ನು ಕಿತ್ತು ಕೈಗೆ ತೆಗೆದುಗೂಂಡನು ಆ ಕಠಾರಿಗೆ ಚಿನ್ನ - ್ರಪಿಡಿ ಇತ್ತು ಅದರ ಮೇಲೆ ಅರಬ್ಬೀ ಅಕ್ಷರಗಳಲ್ಲಿ ದಿವಾನ ಮಹಮ್ಮದಾಲಿ ಯ.ನಾ ಹೆಸರು ಕೆತ್ತಿತ್ತು ಅದನ್ನು ನೋಡಿ ಆಶ್ಚರ್ಯದಿಂದ ಸೀತ್ಕಾರ ಮಾಡಿದನು ಎಲ್ಲರನ್ನೂ ದೂರ ಸರಿಸಿ, ಆ ಶವದ ಮುಂದ ಪ್ರಾರ್ಥನೆ ಮಾಡುತ್ತಾ ಕುಳಿತನು ಭಿಕ್ಷುಕರು ಸಾಧುಗಳು ಎಲ್ಲರೂ ದೂರದಿಂದ ನೋಡುತ್ತಿದ್ದರು ಅವರೆಲ್ಲರೂ ಫಕೀರ ನಿಗೆ ಸತ್ತವರನ್ನು ಬದುಕಿಸುವ ಶಕ್ತಿ ಇದೆ, ಅವನು ಆ ಸ್ವಾಮಿಯನ್ನು ಬದುಕಿಸು ತ್ತಾನೆ ಎಂದು ಮಾತನಾಡಿಕೊಳ್ಳುತ್ತಿದ್ದರು ಈ ಸಮಾಚಾರವು ಕಾಳೇಶ್ವರಕ್ಕ ಮುಟ್ಟಿತು ಜಂಗಮರೆಲ್ಲರೂ ಉದ್ವಿಗ್ನರಾದರು. ಕಾಡಿನಲ್ಲಿ ತಪಸ್ಸುಮಾಡುತ್ತಿದ್ದ ಜಂಗಮದೇವನನ್ನು ಫಕೀರನು ಕೊಲೆಮಾಡಿದ್ದಾನೆಂದು ಮಾತನಾಡಿಕೊಂಡು ಮಶೀ ದಿಯ ಹತ್ತಿರ ಬಂದರು ಮಹದೇವಸ್ವಾಮಿಯ ಶವವನ್ನು ನೋಡಿದರು ಪಕ್ಕದಲ್ಲಿ ಅಳುತ್ತ ಕುಳಿತಿದ್ದ ಫಕೀರನನ್ನು ನೋಡಿದರು ಜಂಗಮರು ಗುರುದೇವನ ಶವವನ್ನು ಮುಟ್ಟುವುದಕ್ಕೆ ಹೋದರು ಫಕೀರನು ಗದ್ಗದ ಕಂಠದಿಂದ ಅದನ್ನು ಮುಟ್ಟಬೇಡಿರಿ! ಎಂದು ಹೇಳಿದನು ಎಲ್ಲರೂ ಹಿಂದೆಗೆದರು ಫಕೀರನು ಜಂಗಮನನ್ನು ಬದುಕಿಸು ತ್ತಾನೆ ಎಂದು ಅವರುಗಳು ನಂಬಿದರು ಮಧ್ಯಾಹ್ನವಾಯಿತು ಫಕೀರನು ಅಲು ಗಾಡಲಿಲ್ಲ ಪ್ರಾರ್ಥನೆ ಮಾಡುತ್ತ ಕುಳಿತಿದ್ದನು. ಜಂಗಮರಾಗಲೀ, ಸಾಧುಗಳಾಗಲಿ ಭಿಕ್ಷುಕರಾಗಲೀ ಯಾರೂ ಆ ಸ್ಥಳವನ್ನು ಬಿಟ್ಟು ಅಲುಗಲಿಲ್ಲ ಈ ವರ್ತಮಾನವು ಮಹಂತರಾದ ತ್ರಿಯಂಬಕಭಟ್ಟರಿಗೆ ತಿಳಿಯಿತು ಅವರು ಆಶ್ಚರ್ಯದಿಂದ ಆ ಸ್ಥಳಕ್ಕೆ ಬಂದರು ಶವದ ಸಮೀಪದಲ್ಲಿ ಬಂದು ನಿಂತರು ! ಫಕೀರನನ್ನು ವಿನಯದಿಂದ ಮಾತ ನಾಡಿಸಿದರು ಈ ಮಹದೇವಸ್ವಾಮಿಯ ಮರಣವು ಹೇಗಾಯಿತೆಂದು ಪ್ರಶ್ನಿಸಿದರು ಫಕೀರನು ಆರ್ತಧ್ವನಿಯಿಂದ ದೈನ್ಯಭಾವದಿಂದ ಎಲ್ಲರೂ ದೂರ ಹೋಗಬೇಕೆಂದು ಪ್ರಾರ್ಥಿಸಿದನು ತ್ರಿಯಂಬಕಭಟ್ಟನು ಸಂಜ್ಞೆ ಮಾಡಿದನು ಎಲ್ಲರೂ ದೂರ ಹೊರಟು ಹೋದರು.

ಭಟ್ಟ—ಫಕೀರರೇ ! ಈ ಜಂಗಮದೇವನ ಮರಣವು ಹೇಗಾಯಿತು ?

ಫಕೀರ—(ಗಂಭೀರವಾಗಿ) "ಖೂನಿ !"

ಭಟ್ಟ—ಜಂಗಮನನ್ನು ಖೂನಿ ಮಾಡಿದವರಾರು ?

ಫಕೀರ—ಇವನು ವಿರಕ್ತನಾದ ಜಂಗಮನಲ್ಲ ! ವೇಷಧಾರಿಯಾದ ಜಂಗಮ ದೇವ ! ರಾಜಕಾರಣದಲ್ಲಿ ತೊಳಗುತ್ತಿದ್ದ ! ಆ ರಾಜಕಾರಣದಿಂದಲೇ ಕೊಲೆಯಾಗಿದೆ.

ಭಟ್ಟ— ಇದೆಲ್ಲವನ್ನೂ ನೀವು ಹೇಗೆ ಬಲ್ಲಿರಿ? ನೀವೇಕೆ ಇಷ್ಟು ದುಃಖಿಸುತ್ತೀರಿ?

ಫಕೀರ—(ಕೈಮುಗಿದು) ಭಟ್ಟರೆ, ಇದನ್ನು ತಾವೊಬ್ಬರು ಹೆ ರತಾಗಿ ಮತ್ತಾರಿಗೂ ತಿಳಿಯಬಾರದು ' ಇವನು ನನ್ನ ಸಹೋದರ !

ಭಟ್ಟರಿಗೆ ಆಶ್ಚರ್ಯವಾಯಿತು ! ಮುಖದ ಹೋಲಿಕೆಯನ್ನು ನೋಡಿದರು. ವಿಷಾದದಿಂದ-ಹೌದು ' ನಿಶ್ಚಯ ' ಎಂದರು

ನೀವು ಮುಸಲ್ಮಾನರೇನು ?

ಫಕೀರ— ನಾನು, ಹೌದು ! ಈ ಸ್ವಾಮಿಯು ಹಿಂದು! ನಾವಿಬ್ಬರೂ ಜಂಗಮರಾದೆವು ಸುಲ್ತಾನೀರಾಜ್ಯದಲ್ಲಿ ವಿದ್ರೋಹಿಗಳೆನಿಸಿಕೊಂಡೆವು ತಲೆ ತಪ್ಪಿಸಿಕೊಳ್ಳಲು ಇವನು ದೇಶಾಂತರ ಹೋದ ' ನಾನು ಫಕೀರನಾದೆ ? ಇಲ್ಲಿ ನಮ್ಮಿಬ್ಬರ ಸಮಾಗಮವಾಯಿತು ಈಗ ನನಗೆ ರಾಜಕಾರಣವಿಲ್ಲ ' ಅಲ್ಲಾನ ಸಾನ್ನಿಧ್ಯದಲ್ಲಿ ಶುದ್ಧ ಫಕೀರ !

ಭಟ್ಟ— ನಿಮ್ಮ ಜೀವನ ಕಥೆಯು ದಾರುಣವಾಗಿದೆ ಇರಲಿ ! ಅದು ಕರ್ಮಫಲ! ಈ ಜಂಗಮದೇವನ ಪ್ರಾಣ ಹೋಗಿಬಿಟ್ಟಿದೆ ನೀವು ಈ ಕಳೇಬರವನ್ನಿಟ್ಟುಕೊಂಡು ಏನು ಮಾಡುವಿರಿ ? ನಾವೆಲ್ಲರೂ ಸೇರಿ ಅಂತ್ಯಕ್ರಿಯೆಗಳನ್ನು ಮಾಡಿ ಸಮಾಧಿ ಮಾಡಿಬಿಡೋಣ

ಫಕೀರ— ಹೌದು ! ಭಟ್ಟರೇ ! ನೀವು ಈ ಕಾಳೇಶ್ವರದ ಮಹಂತರು. ನಿಮ್ಮ ಸರ್ವಾಧಿಕಾರವು ಇಲ್ಲಿ ನಡೆಯುತ್ತದೆ, ನಾಳೆಯ ಪ್ರಾಃಕಾಲದವರೆಗೆ ನನಗೆ ಅವಕಾಶ ಕೊಡಿರಿ ' ಈ ಜನರೆಲ್ಲರನ್ನೂ ದೂರ ಕಳಿಸಿ, ಈ ಸ್ಥಳವನ್ನು ನಿರ್ಮಾನುಷ್ಯ ಮಾಡಿಸಿಕೊಡಿರಿ ' ನಾನು ಎದ್ದು ನಿಂತು ಘಟ್ಟಿಯಾಗಿ ಕೂಗಿದರೆ ಆ ಶಬ್ದವು ಮನುಷ್ಯರ ಕಿವಿಗೆ ಬೀಳದಷ್ಟು ದೂರ, ಈ ಪ್ರದೇಶವು ನಿರ್ಮಾನುಷ್ಯವಾಗಬೇಕು. ಹಾಗಾದರೆ, ನನಗೊಬ್ಬ ಮಹಾಪುರುಷರು ಉಪದೇಶ ಕೊಟ್ಟಿದ್ದಾರೆ ಅದು ಸತ್ತವರನ್ನು ಬದುಕಿಸುವ ಮಂತ್ರ ' ಅದರಿಂದ ಒಬ್ಬನನ್ನು ಒಂದುಸಾರಿ ಬದುಕಿಸಬಹುದು ನಾನು ನಾಳೆ ಪ್ರಾತಃಕಾಲದೊಳಗಾಗಿ ಈ ಮಹದೇವಸ್ವಾಮಿಯನ್ನು ಬದುಕಿಸುತ್ತೇನೆ ನಾಳೆ ಪ್ರಾತಃಕಾಲ ದಯವಿಟ್ಟು ತಾವು ಇಲ್ಲಿಗೆ ಬನ್ನಿರಿ ! ನಾವಿಬ್ಬರೂ ತಮ್ಮ ಅಪ್ಪಣೆ ಪಡೆದು ಹೊರಟು ಹೋಗುತ್ತೇವೆ ಇಲ್ಲದಿದ್ದರೆ ನಾಳೆ ಸಂತೋಷವಾಗಿ ಸಮಾಧಿ ಮಾಡಿಸಬಹುದು !

ಭಟ್ಟರಿಗೆ ಆಶ್ಚರ್ಯವಾಯಿತು ! ಫಕೀರರೇ ! ನಿಮಗೆ ಹುಚ್ಚು, ಈ ಸೋದರ ದುಃಖದಿಂದ ಬುದ್ಧಿ ಭ್ರಮಣೆಯಾಗಿದೆ. ಈ ಕಲಿಗಾಲದಲ್ಲಿ ಸತ್ತವರನ್ನು ಬುದುಗಿಸುವುದೆಂದರೇನು ?

ಭಟ್ಟರೆ ! ನಿಮಗೆ ನಮಸ್ಕಾರ, ಚರ್ಚೆ ಮಾಡಬೇಡಿರ್ರಿ, ನಾನು ಹುಚ್ಚನಾದರೆ

ನಿಮಗೇನು ? ನಾನು ದೇವರನ್ನು ನಂಬದಿದ್ದರೆ ನಿಜವಾದ ಹುಚ್ಚನೇ ಸರಿ ! ಇದೊಂದು ದಿನ ನನಗೆ ಅವಕಾಶ ಕೊಡಿರಿ, ಎಂದು ಕೈಮುಗಿದು ಪ್ರಾರ್ಥಿಸಿದನು.

ಭಟ್ಟರು ದೇವರ ಮಹಿಮೆಯು ಹೇಗಿದೆಯೋ ? ಎಂದುಕೊಂಡು ಹೊರಟು ಹೋದರು. ಅವರ ಪ್ರಾರ್ಥನೆಯಂತೆ ಜನರೆಲ್ಲರೂ ಹೋದರು.

ಫಕೀರನು ಪ್ರಾರ್ಥನೆ ಮಾಡುತ್ತಾ ತನ್ನ ಸಹೋದರನ ಪಕ್ಕದಲ್ಲಿ ಮಲಗಿದನು ಗಟ್ಟಿಯಾಗಿ ಅಲ್ಲಾವಿನಲ್ಲಿ ಪ್ರಾರ್ಥನೆ ಮಾಡುತ್ತಿದ್ದನು. ಬೆಳಕು ಹರಿಯಿತು. ತ್ರಿಯಂಬಕಭಟ್ಟರು ಸ್ನಾನಾಹ್ನೀಕಗಳನ್ನು ತೀರಿಸಿಕೊಂಡು, ಮಶೀದಿಯ ಹತ್ತಿರಕ್ಕೆ ಹೊರಟರು ಜಂಗಮರು, ಗೋಸಾಯಿಗಳು, ಸಾಧುಗಳು, ಭಿಕ್ಷುಕರು, ಭಕ್ತವೃಂದದವರು ಎಲ್ಲರೂ ಅವರ ಹಿಂದೆ ಹೋದರು ಅಲ್ಲಿ ಸಮೀಪಕ್ಕೆ ಹೋಗಿ ನೋಡಿದರು ಫಕೀರನು ಮಹ ದೇವಸ್ವಾಮಿಯ ಪಕ್ಕದಲ್ಲಿ ಮಲಗಿದ್ದನು ಫಕೀರನ ಪ್ರಾಣವಾಯುವು ಆ ಶರೀರದಿಂದ ಶಾಂತವಾಗಿ ಹಾರಿಹೋಗಿತ್ತು. ಫಕೀರನು ನೆಲದ ಮೇಲೆ ಇಲ್ಲಿಯೇ ಹೀಗೆಯೇ ನಮ್ಮಿಬ್ಬರನ್ನು ಸಮಾಧಿ ಮಾಡಿರಿ ! ಎಂದು ಬರೆದಿದ್ದನು ಆ ಕರಾರಿಯು ಆ ಎರಡು ಶರೀರಗಳ ಮಧ್ಯದಲ್ಲಿ ಇಡಲ್ಪಟ್ಟಿತ್ತು ! ಭಟ್ಟರು ಪರೀಕ್ಷಿಸಿ ನೋಡಿದರು ಫಕೀರನ ಶರೀರದಲ್ಲಿ ಎಲ್ಲಿಯೂ ಘಾಯವಿರಲಿಲ್ಲ ಮುಖವು ಪ್ರಕಾಶಮಾನವಾಗಿತ್ತು ಈ ಮರಣವು ಶಸ್ತ್ರದಿಂದ ಆದುದಲ್ಲ, ವಿಷದಿಂದ ಸಂಭವಿಸಿದುದಲ್ಲ, ಪ್ರಾಯೋಪವೇಶ ಮಾಡಿ ಯೋಗಶಕ್ತಿಯಿಂದ ಫಕೀರನು ಪ್ರಾಣ ಬಿಟ್ಟಿದ್ದಾನೆ ಎಂದು ಹೇಳಿದರು ಇವನು ಮಹಾಪುರುಷ ಎಂದು ಕೊಂಡಾಡಿದರು ಅವರ ಇಷ್ಟದಂತೆ ಅವರಿಬ್ಬರನ್ನೂ ಹಾಗೆಯೇ ಸಮಾಧಿ ಮಾಡಿಸಿದರು.

ತ್ರಿಯಂಬಕಭಟ್ಟರು ಆ ಸಮಾಧಿಯಮೇಲೆ ತಮ್ಮ ಸ್ವಹಸ್ತಾಕ್ಷರಗಳಿಂದ—

ನೈನಂ ಛಿಂದಂತಿ ಶಸ್ತ್ರಾಣಿ । ನೈನಂ ದಹತಿ ಪಾವಕಃ ॥
ನ ಚೈನಂ ಕ್ಲೇದಯಂತ್ಯಾಪೋ । ನ ಶೋಷಯತಿ ಮಾರುತಃ ॥

ಎಂದು ಬರೆದು, ಪುಷ್ಪಗಳನ್ನು ತರಿಸಿ ಪೂಜಿಸಿ ಹೊರಟುಹೋದರು

ಇಂದಿಗೂ ಆ ಸಮಾಧಿ ಇದೆ ಹಿಂದೂಗಳೂ, ಮುಸಲ್ಮಾನರೂ ಎಲ್ಲರೂ ಆ ಸಮಾಧಿಯನ್ನು ಪೂಜಿಸುತ್ತಾರೆ. ಅದು ಫಕೀರನ ಸಜೀವ ಸಮಾಧಿಯೆನ್ನುತ್ತಾರೆ ಆ ಸಮಾಧಿಯ ಆರಾಧನೆಯಿಂದ ಎಷ್ಟೋ ಜನರ ಇಷ್ಟಾರ್ಥಗಳೂ ಸಿದ್ಧಿಯಾಗುತ್ತವೆ

## ಕೊಡಗಿನಮೇಲೆ ಸುಲ್ತಾನರ ಕ್ರೋಧ

ಸುಲ್ತಾನರಿಗೆ ಕೊಡಗಿನ ಸಮಾಚಾರಗಳು ನಾನಾವಿಧವಾಗಿ ಬರುತ್ತಿದ್ದುವು ವರ್ತಮಾನಗಳು ಒಂದಕ್ಕೊಂದು ವಿರೋಧವಾಗಿದ್ದುವು. ಕೊಡಗಿನ ರಾಜರು ಕಾಣಿಕೆ

ಯನ್ನು ಮೂರು ವರ್ಷಗಳಿಂದಲೂ ಕಳಿಸಿಲ್ಲ. ಕೊಡಗಿನರಾಜರು ಗುಪ್ತವಾಗಿ ಕುಂಪ ಣಿಯವರೊಡನೆ ಸಂಧಿಮಾಡಿಕೊಂಡಿದಾರೆಂದು ಸಮಾಚಾರವು ಬಂದಿತು. ಇದನ್ನೆಲ್ಲಾ ಸರಿಯಾಗಿ ಶೋಧನೆಮಾಡಿ ತಿಳಿದುಕೊಂಡು ಬರುವಂತೆ ಇಬ್ಬರು ಗುಪ್ತಚಾರರನ್ನು ನೇಮಿಸಿ ಕೊಡಗಿಗೆ ಕಳುಹಿಸಿಕೊಟ್ಟನು

ರಾಮಣ್ಣ-ತಿರುಮಲಯ್ಯ ಎಂಬ ಗುಪ್ತಚಾರರು ನಗರದ ಕಡೆಯಿಂದ ಮಂಗ ಳೂರಿಗೆ ಬಂದರು ಅಲ್ಲಿನ ವಿದ್ಯಮಾನಗಳನ್ನು ಅರಿತುಕೊಂಡು ಕೊಡಗಿಗೆ ಪ್ರವೇಶ ಮಾಡಿದರು. ಅಲ್ಲಿ ಕಾಳೇಶ್ವರದ ಮಹಿಮೆಯನ್ನು ಕೇಳಿ ಇಬ್ಬರೂ ಆ ಕ್ಷೇತ್ರಕ್ಕೆ ಹೋದರು ಅಲ್ಲಿ ತ್ರಿಯಂಬಕಭಟ್ಟರ ದರ್ಶನ ಮಾಡಿದರು ಅಲ್ಲೇ ಕೆಲವು ದಿನ ಗಳು ವಾಸಮಾಡಲು ಅಪ್ಪಣೆ ಪಡೆದರು ಅವರಿಬ್ಬರೂ ನಿಷ್ಣಾತರಾದ ಗಾಯಕರು. ಹರಿಕಥೆಗಳನ್ನು ಮಾಡುವುದರಲ್ಲಿ ನಿಸ್ಸೀಮರು. ತ್ರಿಯಂಬಕಭಟ್ಟರು ದೇವಾಲಯ ದಲ್ಲಿ ಅವರ ಕಥೆಗಳನ್ನು ಮಾಡಿಸಿದರು ಅವರ ಪಾಂಡಿತ್ಯ, ಕಂಠಧ್ವನಿ, ಮಾತಿನ ಚಮತ್ಕಾರಗಳನ್ನು ನೋಡಿ, ಭಟ್ಟರು ಸಂತೋಷಪರವಶರಾದರು ಇವರಿಬ್ಬರನ್ನು ಭಟ್ಟರು ಬಹಳವಾಗಿ ಪ್ರಶಂಸಿಸಿ ರಾಜಾಸ್ಥಾನಕ್ಕೆ ಕಳುಹಿಸಿಕೊಟ್ಟರು ರಾಜರ ಸಮ್ಮು ಖದಲ್ಲಿ ಈ ವಿದ್ವಾಂಸರು ಹರಿಕಥೆಗಳನ್ನು ಮಾಡಿದರು ರಾಜರು ಆ ಕಥೆಗಳನ್ನು ಕೇಳಿ ಸಂತೋಷಪಟ್ಟು, ಅವರ ಪಾಂಡಿತ್ಯಕ್ಕೆ ಮೆಚ್ಚಿ, ಅವರಿಗೆ ಖಿಲ್ಲತ್ತುಗಳನ್ನೂ ಯಥೇಚ್ಛವಾದ ಹಣವನ್ನೂ ಕೊಡಿಸಿದರು ಕೊಡಗುಶೀಮೆಯಲ್ಲಿ ಅನೇಕ ಶ್ರೀಮಂ ತರ ಮನೆಗಳಲ್ಲಿಯೂ ಇವರ ಕಥೆಗಳಾದುವು ಎಷ್ಟೋ ಜನ ಇವರಿಗೆ ಬಹುಮಾನ ಗಳನ್ನು ಕೊಟ್ಟರು. ಔತಣಗಳನ್ನು ಮಾಡಿಸಿದರು ಇವರು ಕಾಳೇಶ್ವರದಲ್ಲಿರುವಾಗ ಜಂಗಮದೇವನ ಕೊಲೆಯನ್ನೂ ಫಕೀರನ ಜೀವಸಮಾಧಿಯನ್ನೂ ಕೇಳಿದರು. ಹರಿ ಕಥೆಯ ನೆಪದಿಂದ ಅಲ್ಲಲ್ಲಿ ಸಂಚರಿಸಿ, ರಾಜಕೀಯವನ್ನೆಲ್ಲಾ ಗ್ರಹಿಸಿಕೊಂಡರು. ಬಹು ಗೋಪ್ಯವಾಗಿ ಫಾತಿಮಾಬೇಗಂರವರ ಕಥೆಗಳನ್ನು ಕಂಡುಹಿಡಿದರು ಹೀಗೆ ಕೊಡ ಗಿನ ಸಮಾಚಾರಗಳೆಲ್ಲವನ್ನೂ ಸಂಗ್ರಹಿಸಿಕೊಂಡು ಅಜ್ಞಾತವಾಗಿ ಕೊಡಗನ್ನು ಬಿಟ್ಟು ಹೊರಟುಹೋದರು. ಕೊಡಗಿನ ಕಡೆಯಿಂದ ಮೈಸೂರಿಗೆ ಹೋಗುವ ದಾರಿಯಲ್ಲಿ ಕೊಡಗಿನ ಗಡಿಯಲ್ಲಿ ಠಾಣದವರು ಇವರನ್ನು ತಡೆದರು ಇವರಿಗೆ ರಾಜರು ಕೊಟ್ಟಿದ್ದ ಖಿಲ್ಲತ್ತುಗಳನ್ನೂ, ಪ್ರಶಸ್ತಿಗಳನ್ನೂ ನೋಡಿ ಗೌರವದಿಂದ ಬಿಟ್ಟುಬಿಟ್ಟರು

ಇವರಿಬ್ಬರೂ ಶ್ರೀರಂಗಪಟ್ಟಣಕ್ಕೆ ಹೋಗಿ ತಲಪಿದರು ಹೀಗೆ ಸುಲ್ತಾನರ ಆಜ್ಞೆಯಂತೆ ಹೊರಟು ಮೂರು ತಿಂಗಳಕಾಲ ಸಂಚಾರಮಾಡಿಕೊಂಡು ರಾಜಧಾನಿಗೆ ತಲಪಿದರು. ಈ ಇಬ್ಬರು ಗೂಢಚಾರರೂ ಅಂತರಂಗದಲ್ಲಿ ಸುಲ್ತಾನರವರ ಭೇಟಿ ಮಾಡಿದರು. ತಮ್ಮ ಪ್ರವಾಸದ ಕಥೆಯನ್ನೆಲ್ಲಾ ಹೇಳಿದರು ತಾವು ತಂದಿದ್ದ ಉಡು ಗರೆ, ಖಿಲ್ಲತ್ತುಗಳನ್ನೆಲ್ಲಾ ಸನ್ನಿಧಾನದಲ್ಲಿ ತೋರಿಸಿದರು.

ಸುಲ್ತಾನರವರು ಸಂತಸಗೊಂಡು ಮುಗುಳು ನಗುವನ್ನು ನಕ್ಕು, ರಾಮಣ್ಣನವರೇ! ಕೊಡಗಿನ ರಾಜಕೀಯವೇನು ಹೇಳಿರಿ ? ಎಂದರು

"ಹುಜೂರು, ಕೊಡಗಿನ ರಾಜ್ಯವು ವಿಚಿತ್ರವಾಗಿದೆ ನಾವು ದೊಡ್ಡ ನವಾಬರ ಕಾಲದಲ್ಲಿ ಹಿಂದೆ ಒಂದಾವರ್ತಿ ಕೊಡಗಿಗೆ ಹೋಗಿದ್ದೆವು ಆಗಿನ ಕಥೆಯೇ ಬೇರೆ ! ಈಗಿನ ಕಥೆಯೇ ಬೇರೆ !

ಸುಲ್ತಾ—ಈಗಿನ ಕಥೆಯೇನು ? ಅಲ್ಲಿನ ರಾಜಕೀಯವೇನು ? ಆ ರಾಜ್ಯವು ಹೇಗಿದೆ ?

ಖಾವಂದರವರೇ ! ಅಲ್ಲಿ ಕಾಳೇಶ್ವರವೆಂಬುದೊಂದು ಕ್ಷೇತ್ರವಿದೆ ಅಲ್ಲಿ ಬಹಳ ದಾನ ಧರ್ಮಗಳೂ, ದೇವರ ಸೇವೆಗಳೂ ನಡೆಯುತ್ತವೆ

ರಾಮಣ್ಣ—ದೇವರ ಮಾತು ಏಕೆ ?

ಹುಜೂರು, ಕಾರಣವುಂಟು ! ಮಾಫ್ ಮಾಡಬೇಕು ಅಲ್ಲಿ ಮೊದಲು ಅತುಲೈಶ್ವರ್ಯವಿತ್ತು ಈಗ ಅದಿಲ್ಲ. ಎಲ್ಲಿ ಹೋಯಿತೋ ಗೊತ್ತಿಲ್ಲ ಸಮೀಪದಲ್ಲಿ ಒಂದು ಮಶೀದಿ ಇದೆ ಅದನ್ನು ಫಾತಿಮಾಬೇಗಂರವರೇ ಕಟ್ಟಿಸಿದರೆಂದು ಕಾಣುತ್ತದೆ ಅಲ್ಲಿ ಒಬ್ಬ ಫಕೀರನ ಸಮಾಧಿ ಇದೆ. ಆ ಫಕೀರನೇ ಫಾತಿಮಾಬೇಗಂರವರನ್ನು ಕೊಡಗಿಗೆ ಕರೆದುಕೊಂಡು ಹೋದವನೆಂದು ಕಂಡುಹಿಡಿದಿದ್ದೇವೆ ಸಮೀಪದಲ್ಲಿಯೇ ಫಾತಿಮಾಬೇಗಂರವರ ಮನೆ ಇದೆ ಆ ಮನೆಯಲ್ಲಿ ಈಗ ಯಾರೂ ಇಲ್ಲ ! ರಾಜಭಟರು ಕಾವಲಿದ್ದಾರೆ.

ಸುಲ್ತಾ—ಓಹೋ ! ಫಾತಿಮಾಬೇಗಂರವರು ಅಲ್ಲಿದಾರೆಯೋ ? ನಗರದ ದಿವಾನರವರು ನಮಗೆ ಫಾತಿಮಾಬೇಗಂರವರ ವಿಷಯ ತಿಳಿಸದೆ ಇರುವುದು ಆಶ್ಚರ್ಯ ! ಇರಲಿ ಫಾತಿಮಾಬೇಗಂರವರು ಕೊಡಗಿನಲ್ಲಿ ಏನು ಮಾಡುತ್ತಾರೆ ?

'ಜಹಾಪನಾ ! ಅವರಲ್ಲಿ ಬಹಳ ಐಶ್ವರ್ಯವಿದೆ ಅವರು ಅಲ್ಲಿ ವಿದ್ರೋಹ ಮಾಡುತ್ತಾರೆ. ಕೊಡಗಿನಲ್ಲಿ ಪ್ರತಿಯೊಬ್ಬ ಯುವಕನನ್ನು ಕೆರಳಿಸಿದ್ದಾರೆ. ಜಾತಿಯ ಯಜಮಾನರೆಲ್ಲರನ್ನೂ ರೇಗಿಸಿದ್ದಾರೆ ಸ್ತ್ರೀಯರೆಲ್ಲರನ್ನೂ ಉತ್ತೇಜನಗೊಳಿಸಿದ್ದಾರೆ. ಮನೆ ಮನೆಯಲ್ಲಿಯೂ ಸುಲ್ತಾನರವರ ವಿದ್ರೋಹವನ್ನು ಬಿತ್ತಿ ಬೆಳೆಸಿದ್ದಾರೆ

ಸುಲ್ತಾನರು ನಕ್ಕು, ಸಂತೋಷ, ನೀವು ಬೇಗಂಸಾಹೇಬರನ್ನು ಭೇಟಿ ಮಾಡಿದ್ದಿರೋ ? ಅವರ ಸಹಾಯಕರಾರು ?

ರಾ—ಇಲ್ಲ ! ಹುಜೂರು, ನಾವು ಬೇಗಂ ಸಾಹೇಬರನ್ನು ಭೇಟಿ ಮಾಡಲಾಗಲಿಲ್ಲ. ಆ ಸಮಾಧಿಯಲ್ಲಿರುವ ಫಕೀರನೇ ಅವರ ಮುಖ್ಯ ಸಹಾಯಕ ಅಲ್ಲಿ ಜನರು ಆ ಫಕೀರನ ವಿಚಾರವಾಗಿ ಏನೇನೋ ಕಥೆಗಳನ್ನು ಹೇಳುತ್ತಾರೆ. ಅವನು ಸಾಕ್ಷಾತ್ ದೇವರ ಅವತಾರವೆನ್ನುತ್ತಾರೆ. ನಾವು ಅದನ್ನೆಲ್ಲಾ ನಂಬುವುದಿಲ್ಲ.

ಸುಲ್ತಾನ್—ನೀವು ಏನು ಹೇಳುತ್ತೀರಿ ? ಆ ಫಕೀರನ ಮರಣಕ್ಕೆ ಕಾರಣ ವೇನು ?

ರಾ—ಅದು ವಿಚಿತ್ರವಾಗಿದೆ ನಾವು ಅವನು ರಾಜಕಾರಿಣಿ ಎಂದು ನಿಶ್ಚಯ ಮಾಡಿದ್ದೇವೆ

ಸುಲ್ತಾನ್—ರಾಜರ ಸಮಾಚಾರಂವೇನು ?

ರಾ—ಹುಜೂರು, ಮಾಫ್ ಮಾಡಬೇಕು ಈ ರಾಜಕಾರಣವೆಲ್ಲಾ ಆ ರಾಜ ರಿಗೇ ಗಂಟುಬಿದ್ದಿದೆ ಫಾಲ್ಗುಣ ಮಾಸದಲ್ಲಿ ರಾಜರ ವರ್ಧಂತಿ ಆಯಿತು. ಅಲ್ಲಿಗೆ ಫಾತಿಮಾಬೇಗಂರವರು ರಾಜಮರ್ಯಾದೆಯಿಂದ ತೆರಳಿದರು ಅದೇ ಸಂದರ್ಭದಲ್ಲಿ ಅರಮನೆಯಲ್ಲಿಯೇ ರಾಜರಿಗೂ ಬೇಗಂಸಾಹೇಬರಿಗೂ ವಿವಾಹವಾಗಿದೆ. ಬೇಗಂ ಸಾಹೇಬರವರು ಈಗ ಕೊಡಗಿನ ರಾಣಿಯವರಾಗಿದಾರೆ ಜನರ ಅಸಮಾಧಾನಕ್ಕೆ ಅಂಜಿ ಗುಪ್ತವಾಗಿದಾರೆ ರಾಜರ ರಾಣಿವಾಸವೆಲ್ಲವೂ ಅಸಮಾಧಾನದಿಂದ ತುಂಬಿದೆ ಈಗ ಆ ರಾಜರ ಅಂತಃಪುರದಲ್ಲಿ ಬೇಗಂಸಾಹೇಬರೇ ಮಹಾರಾಜ್ಞಿ ಈ ವಿವಾಹ ವಾದ ತರುಣದಲ್ಲಿಯೇ ಕಾಳೇಶ್ವರದಲ್ಲಿ ಫಕೀರರ ಸಮಾಧಿಯಾಗಿದೆ ಅದೇ ದಿನವೇ ಮತ್ತೊಬ್ಬ ಜಂಗಮಸ್ವಾಮಿಯ ನಿರ್ಯಾಣವೂ ಆಗಿದೆ

ಸುಲ್ತಾನ್—ಇದರಲ್ಲೇನೋ ಅಭೇದ್ಯ ರಹಸ್ಯವಿರಲೇಬೇಕು ಅವರಿಬ್ಬರೂ ಈ ವಿವಾಹಕ್ಕೆ ಪ್ರತಿಕೂಲರಾಗಿದ್ದಿರಬಹುದು ಒಳ್ಳೆಯದು, ನೀವು ಹೊರಡಿರಿ. ಈ ವಿಚಾರಗಳನ್ನೆಲ್ಲಿಯೂ ಬಾಯಿಬಿಡಬೇಡಿ !

ರಾಮಣ್ಣನವರೇ ! ತಿರುಮಲಯ್ಯನವರೂ ನೀವೂ ಬಹಳ ಗಟ್ಟಿಗರು ನಿಮ್ಮ ಗಳಿಗೆ ಹೇರಳವಾದ ಪುರಸ್ಕಾರವನ್ನು ಕೊಡಿಸುತ್ತೇವೆ ಪುನಃ ಅಗತ್ಯವಿದ್ದರೆ ನೀವು ಕೊಡಗಿಗೆ ಹೋಗಬೇಕಾಗುತ್ತದೆ.

ಹುಜೂರು ! ಸನ್ನಿಧಾನದ ಆಜ್ಞೆಗೆ ನಾವು ಸಿದ್ಧರಾಗಿದ್ದೇವೆ

ಸುಲ್ತಾನನು ಏಕಾಂತದಲ್ಲಿ ಆಲೋಚಿಸತೊಡಗಿದನು ಆ ಫಾತಿಮಾಬೇಗಂ ಎಂತಹ ಹುಚ್ಚಳು ಎಲ್ಲೆಲ್ಲಿಯೂ ವಿಪ್ಲವಗಳನ್ನು ಎಬ್ಬಿಸುತ್ತಾಳೆ ಮಂಗಳೂರಿನ ವಿಪ್ಲವಕ್ಕೂ ಇವಳೇ ಪ್ರೇರೇಪಕಳೆಂದು ಕೇಳಿದ್ದೆನು ಪುನಃ ಕೊಡಗಿನಲ್ಲಿ ಹೋಗಿ ಪಿತೂರಿಯನ್ನು ಆರಂಭಿಸಿದ್ದಾಳೆ ಕೊಡಗು ರಾಜನನ್ನು ಮದುವೆಯಾಗಿದ್ದಾಳಂತೆ ! ಅವಳು ಎಷ್ಟು ಸುಲಭವಾಗಿ ಗಂಡಸರನ್ನು ಮರುಳುಮಾಡುತ್ತಾಳೆ ತಾನೆಷ್ಟು ಸುಲಭ ವಾಗಿ ಮೋಸಹೋಗುತ್ತಾಳೆ ! ನಾವು ಸ್ವತಃ ಕೊಡಗಿನ ಮೇಲೆ ದಂಡೆತ್ತಿ ಹೋಗಬೇ ಕೆಂದೇ ನಿಶ್ಚಯಿಸಿದ್ದೆವು. ಈಗ ಒಂದು ಬಲವಾದ ಕಾರಣವು ಸಿಕ್ಕಿದಂತಾಯಿತು ಈ ಬಾರಿ ಫಾತಿಮಾಬೇಗಂಳನ್ನು ಹಿಡಿದು ತರಿಸಿ ಶ್ರೀರಂಗಪಟ್ಟಣದ ಕೋಟೆಯಲ್ಲಿಯೇ ಬಂಧನದಲ್ಲಿಡುತ್ತೇನೆ. ಇವಳಿಂದ ವೈಸೂರಿಂಗೆಷ್ಟು ಅಪಮಾನ. ಮುಸಲ್ಮಾನತರುಣಿ!

ದೊಡ್ಡ ದಿವಾನರವರ ಹೆಂಡತಿ. ಇವಳು ಅಡಿಗಡಿಗೂ ಸುಲ್ತಾನೀರಾಜ್ಯಕ್ಕೆ ವಿದ್ರೋಹ ಮಾಡುವುದೆಂದರೆ ಎಂತಹ ವಿಷಾದ ಪ್ರಸಂಗ! ಈ ಬೇಗಂಸಾಹೇಬಳ ಜಾತಕದಲ್ಲಿಯೆ ಏನೋ ದೊಡ್ಡ ದೋಷವಿದೆ ಇವಳು ಎಲ್ಲಿದ್ದರೆ ಅಲ್ಲಿ ಅನಾಹುತ ಪರಂಪರೆಗಳಾಗುತ್ತವೆ ಸುಲ್ತಾನರು ಹೀಗೆ ಚಿಂತಿಸುತ್ತಾ ದರಿಯಾದೌಲತ್ತಿನ ಮಹಡಿಯಲ್ಲಿ ಕುಳಿತಿದ್ದರು.

ಹೊರಗೆ ಅಂಗಳದಲ್ಲಿ ದೊಡ್ಡ ಗಲಾಟೆ ಎದ್ದಿತು. ಸುಲ್ತಾನರವರು ಮೇಲುಗಡೆಯಿಂದಲೇ ಏನು ನಡೆಯುತ್ತಿದೆಯೆಂದು ಬಗ್ಗಿ ನೋಡಿದರು ಹುಚ್ಚಿ ಸಾವಿತ್ರಿಯು ತಂಬೂರಿಯನ್ನು ಹಿಡಿದುಕೊಂಡು ಹಾಡುತ್ತಾ ಬರುತ್ತಿದ್ದಳು ಕಾವಲುಗಾರರು ಅವಳನ್ನು ದರಿಯಾದೌಲತ್ತಿನ ಬಾಗಿಲಿನಲ್ಲಿ ತಡೆಗಟ್ಟಿದರು ಅವಳು ತಾನು ಸುಲ್ತಾನರ ಭೇಟಿ ಮಾಡಬೇಕೆಂದೂ, ತನ್ನನ್ನು ತಡೆದರೆ ಬರತರ್ಫು ಮಾಡಿಸುತ್ತೇನೆಂದೂ ಗದರಿಸುತ್ತಿದ್ದಳು ಕಾವಲುಗಾರರಿಗೂ, ಸಾವಿತ್ರಿಗೂ ಜಗಳವಾಗುತ್ತಿದ್ದಿತು ಸುಲ್ತಾನರು ಬಗ್ಗಿನೋಡಿ ಸಂಜ್ಞೆ ಮಾಡಿದರು ಕಾವಲುಗಾರರು ಸಾವಿತ್ರಿಯನ್ನು ಒಳಗೆ ಬಿಟ್ಟುಬಿಟ್ಟರು. ಸಾವಿತ್ರಿಯು ಕುಣಿಯುತ್ತಾ, ಹಾಡುತ್ತಾ ದರಿಯಾದೌಲತ್ತಿನೊಳಗೆ ಹೋದಳು. ಸುಲ್ತಾನರ ಸಮ್ಮುಖಕ್ಕೆ ಹೋಗಿ ಮುಜರೆ ಮಾಡಿ, ತಾನೇ ಒಂದು ಆಸನದ ಮೇಲೆ ಕುಳಿತುಕೊಂಡಳು

ಸುಲ್ತಾನರು--ಏನು ಸಾವಿತ್ರಿ! ಎತ್ತ ಕಡೆ ಹೊರಟೆ? ನಿನ್ನ ರಾಜಕೀಯವು ಹೇಗಿದೆ?

ಸಾವಿತ್ರಿ—ಸುಲ್ತಾನರವರೇ! ನನ್ನ ರಾಜಕೀಯವೆಲ್ಲವೂ ತಲೆಕೆಳಗಾಗಿದೆ ನಾನು ಕೊಡಗಿಗೆ ಪ್ರಯಾಣ ಮಾಡುತ್ತೇನೆ.

ಸು—ನೀನೇಕೆ ಕೊಡಗಿಗೆ ಹೋಗಬೇಕು? ಅಲ್ಲಿ ನಿನಗೇನು ಕೆಲಸ! ಅಲ್ಲಿ ನಿನಗಾರಿದ್ದಾರೆ?

ಸಾ—ನವಾಬರೇ! ನಿಮ್ಮ ರಾಜಧಾನಿಯು ನನಗೆ ಬಹಳ ಬೇಜಾರಾಗಿದೆ ಕೊಡಗಿನಲ್ಲಿ ಫಾತಿಮಾ ಬೇಗಂರವರಿದ್ದಾರಂತೆ! ಅವರು ಅಲ್ಲಿಯ ಮಹಾರಾಣಿಯವರಾಗಿದ್ದಾರೆ ಅವರ ಮಹಾರಾಣಿಗಿರಿಯು ಹೇಗಿದೆಯೋ, ಅವರ ಈ ಹೊಸ ಸಂಸಾರವು ಹೇಗೆ ನಡೆಯುತ್ತಿದೆಯೋ ನೋಡಿ ಬರೋಣವೆಂದು ಹೋಗುತ್ತೇನೆ

ಹೋಗಿ ಬಾ! ಹುಚ್ಚಿ! ಅಲ್ಲಿಯ ಸಮಾಚಾರಗಳನ್ನು ತಿಳಿದುಕೊಂಡು ಬಾ!

ಸಾ—ಮಹರಾಜರೇ! ನಾನು ಕೊಡಗಿಗೆ ಹೋಗುವ ಮಾತು ಹಾಗಿರಲಿ! ನಿಮ್ಮ ದೌಲತ್‌ರಾಣಿಯವರೆಲ್ಲಿ ಹೋದರು. ಆ ರಾಧಾರಾಣಿಯವರೇನಾದರು? ಆ ದೌಲತ್‌ರಾಣಿಯು ನಿಮ್ಮನ್ನು ಮದುವೆಯಾಗುತ್ತಾಳೆಂದು ಜನರಾಡಿಕೊಳ್ಳುತ್ತಿದ್ದರು. ಏಕೆ ಆ ಹೆಣ್ಣನ್ನು ನೀವು ಒಪ್ಪಲಿಲ್ಲವೇನು?

ಸು—ಸಾವಿತ್ರಿ! ಆ ದೌಲತ್‌ರಾಣಿಗೆ ನಿನ್ನಂತೆಯೇ ಹುಚ್ಚು ಹಿಡಿದಿದೆ. ಅವಳು ನಗರವನ್ನು ಬಿಟ್ಟು ಬರುವುದಿಲ್ಲವಂತೆ!

ಸಾ—ಅಯ್ಯೋ! ಒಳ್ಳೆಯಜೋಡಿ ಆ ದೌಲತ್ ರಾಣಿಯು ನಗರವನ್ನು ಬಿಟ್ಟು ಬರುವುದಿಲ್ಲ ನೀವು ಯುದ್ಧವನ್ನು ಬಿಟ್ಟು ಇರುವುದಿಲ್ಲ ಇಂದು ಇಂಗ್ಲೀಷರ ಮೇಲೆ ಯುದ್ಧ, ನಾಳೆ ಮಲಬಾರಿನವರ ಮೇಲೆ ಯುದ್ಧ, ಇನ್ನೊಂದು ದಿನ ಕೊಡಗಿನ ಮೇಲೆ ಯುದ್ಧ ನಿಮಗೆ ಯುದ್ಧದ ಹುಚ್ಚು ಬಿಟ್ಟಲ್ಲದೇ ದೌಲತ್ ರಾಣಿಯವರ ಮದುವೆಯಾಗುವುದೇ ಇಲ್ಲ

ಸು—ನನಗೆ ಯುದ್ಧವೂ ಬೇಡ, ಮದುವೆಯೂ ಬೇಡ ನೀನು ಇಲ್ಲಿಂದ ಹೊರಡು

ಸಾ—ಸುಲ್ತಾನರೇ, ಅದೇ ಮಾತು ಖಂಡಿತ ಮಾಡಿಕೊಂಡು ಹೋಗುವುದಕ್ಕೆ ಬಂದಿದ್ದೇನೆ ನಾನು ಕೊಡಗಿಗೆ ಹೋಗುತ್ತೇನೆ ಆ ಫಾತಿಮಳನ್ನು ನೋಡಿ ಬರುತ್ತೇನೆ ನೀವು ಅಲ್ಲಿಗೆ ಯುದ್ಧವನ್ನು ಕಟ್ಟಿಕೊಂಡು ಬರಕೂಡದು.

ಸು—ಇಲ್ಲ ಹುಚ್ಚಿ, ನಾನು ಬರುವುದಿಲ್ಲ. ನೀನು ನಡೆ

ಸಾ—ನೀವು ಕೊಡಗಿನ ಮೇಲೆ ದಂಡೆತ್ತಿ ಬಂದರೆ, ನಾನು ಆ ಕೊಡಗಿನ ರಾಜರೊಡನೆ ಸೇರಿಬಿಡುತ್ತೇನೆ ನೀವು ನನ್ನೊಡನೆ ಯುದ್ಧ ಮಾಡಬೇಕಾಗುತ್ತೆ ನೋಡಿಕೊಳ್ಳಿ

ಎಂದು ಹೇಳಿ ಹುಚ್ಚಿಯು ನಗುತ್ತಾ, ಹಾಡುತ್ತಾ, ಹೊರಟು ಹೋದಳು. ಸುಲ್ತಾನನು ಸೇನಾಧಿಪತಿಗಳನ್ನು ಕರೆಸಿದನು ಕೊಡಗಿನ ಮೇಲೆ ಯುದ್ಧವನ್ನು ಹೂಡಲೇಬೇಕೆಂದು ತೀರ್ಮಾನಿಸಿದನು. ಹಮಿಾರ್ ನೂರುಲ್ಲಾಖಾ ಎಂಬುವರು ಕೊಡಗಿನ ಯುದ್ಧಕ್ಕೆ ಹೊರಡುವ ಸೇನಾಪತಿಗಳೆಂದು ಗೊತ್ತಾಯಿತು

ಸುಲ್ತಾನನು ರಾಯಸದವರನ್ನು ಕರೆಸಿ ಕೊಡಗಿನ ರಾಜರಿಗೊಂದು ಪತ್ರವನ್ನು ಬರೆಸಿದನು. ಆ ಪತ್ರವನ್ನು ಹಮಿಾರ್ ಅಬ್ದುಲ್ಲಾಖಾನರು ತೆಗೆದುಕೊಂಡು ಹೋಗಿ ತಲುಪಿಸುವುದೆಂದು ಆಜ್ಞೆಯಾಯಿತು

ಹಮಿಾರ್ ಖಾನರು ಮಿತಪರಿವಾರದೊಂದಿಗೆ ಕೊಡಗಿಗೆ ಪ್ರಯಾಣ ಬೆಳಸಿದರು ಈ ರಾಯಭಾರದವರು ಮಡಕೇರಿಗೆ ಬಂದಿಳಿದರು ಅವರ ಗುಂಪಿನಲ್ಲಿಯೇ ಹುಚ್ಚಿ ಸಾವಿತ್ರಿಯು ಕೊಡಗಿಗೆ ಬಂದಳು

ಕೊಡಗಿನ ರಾಜರು ಶ್ರೀರಂಗಪಟ್ಟಣದ ರಾಯಭಾರಿಗಳಿಗೆ ಬಿಡಾರವನ್ನು ಏರ್ಪಡಿಸಿದ್ದರು. ಸಂಪ್ರದಾಯದಂತೆ ಹಮಿಾರ್‌ಖಾನನು ರಾಜರ ಭೇಟಿಯನ್ನು ಮಾಡಿದನು ಸುಲ್ತಾನರ ಪತ್ರವನ್ನು ರಾಜರಿಗೆ ಒಪ್ಪಿಸಿದನು ರಾಜನು ಅದನ್ನು ಪರಿಗ್ರಹಿಸಿ ಮೂರುದಿನಗಳೊಳಗಾಗಿ ಸದುತ್ತರವನ್ನು ಕೊಡುವುದಾಗಿ ಹೇಳಿದರು. ಮತ್ತು

ರಾಯಭಾರಿಗಳಿಗೆ ರಾಜಯೋಗ್ಯವಾದ ಊಟ ಉಪಚಾರಗಳಿಗೆ ಏರ್ಪಾಡು ಮಾಡಿದರು.

ರಾಜರು ಏಕಾಂತದಲ್ಲಿ ಸುಲ್ತಾನರ ಪತ್ರವನ್ನು ಓದಿಕೊಂಡರು. ಪತ್ರವು ಈಪರಿಯಾಗಿದ್ದಿತು

"ಕೊಡಗಿನ ರಾಜರೇ!

ದೊಡ್ಡ ನವಾಬರೊಡನೆ ನೀವು ಗೌರವಾಸ್ಪದವಾದ ಕರಾರನ್ನು ಮಾಡಿಕೊಂಡಿರಿ ಆ ಕರಾರಿನ ಎಲ್ಲಾ ಅಂಶಗಳು ಮುರಿಯಲ್ಪಟ್ಟಿವೆ ಕೊಡಗಿನ ರಾಜ್ಯದಿಂದ ಮೂರು ವರ್ಷದಿಂದಲೂ ಕಪ್ಪ ಕಾಣಿಕೆಯನ್ನು ಸಲ್ಲಿಸಲಿಲ್ಲ !

ಕೊಡಗಿನ ಸೀಮೆಯಿಂದ ಕೆಲವರು ದುಷ್ಟಜನರು ಗಡಿ ಪ್ರದೇಶದ ತಾಲ್ಲೋಕುಗಳಿಗೆ ಬಂದು, ಕೊಳ್ಳೆ, ದರೋಡೆಗಳನ್ನು ಮಾಡಿದ್ದಾರೆಂದು ನಮ್ಮ ಮಾಮಲೇದಾರರುಗಳು ಎಷ್ಟು ಬರೆಸಿದಾಗ್ಯೂ, ನೀವು ಬಂದೋಬಸ್ತು ಮಾಡಿಲ್ಲ! ಇದಕ್ಕಿಂತ ಮುಖ್ಯವಾಗಿ ನೀವು ಕಂಪನಿಯವರೊಡನೆ ಸಂಧಿ ಮಾಡಿಕೊಂಡಿದ್ದೀರೆಂಬು ನಮಗೆ ತಿಳಿದು ಬಂದಿದೆ. ಕಂಪನಿಯವರ ಸಹಾಯವು ನಿಮಗೆ ಸಾರ್ಥಕವಾಗಲಾರದು. ಒಂದು ಪಕ್ಷ ನೀವು ಕಾರಣಾಂತರಗಳಿಂದ ಅವರೊಡನೆ ಯಾವುದಾದರೂ ಕರಾರು ಮಾಡಿಕೊಂಡಿದ್ದರೆ ಅದನ್ನು ಮುರಿದು ಮೈಸೂರಿನ ಸ್ನೇಹದಲ್ಲಿರುವುದು ನಿಮಗೆ ಕ್ಷೇಮ!

ಪ್ರಕೃತ, ಮೈಸೂರಿನ ಬೇಗಂಸಾಹೇಬರೊಬ್ಬರು ಕೊಡಗಿಗೆ ಬಂದು, ನಿಮ್ಮ ಆಶ್ರಯವನ್ನು ಹೊಂದಿದ್ದಾರೆಂದು ಸಮಾಚಾರವು ಬಂದಿತೆ ಆ ಬೇಗಂಸಾಹೇಬರವರು ಮಂಗಳೂರಿನ ವಿಪ್ಲವಕ್ಕೆ ಮದತ್ ಕೊಟ್ಟಿದ್ದಾರೆ ಈಗಲೂ ಕೊಡಗಿನಲ್ಲಿ ನಮ್ಮ ಸರ್ಕಾರಕ್ಕೆ ವಿರೋಧವಾಗಿ ವಿದ್ರೋಹವನ್ನು ಉಬ್ಬಿಸುತ್ತಿದ್ದಾರೆಂದು ಖಚಿತವಾಗಿ ತಿಳಿದು ಬಂದಿದೆ. ಅವರು ಶ್ರೀರಂಗಪಟ್ಟಣದ ದೊಡ್ಡ ಕುಟುಂಬದವರು ಅವರ ಹೆಸರು ಫಾತಿಮಾಬೇಗಂ ಅವರನ್ನು ಬಂಧಿಸಿ ಮರ್ಯಾದೆಯಿಂದ ರಾಜಧಾನಿಗೆ ಕಳಿಸಿಕೊಡಬೇಕು ತಮ್ಮ ಶ್ರೆಯಸ್ಸನ್ನು ಕೋರುವ,

ಟಿಪ್ಪೂ ಸುಲ್ತಾನ್

ರಾಜರು ಈ ಪತ್ರವನ್ನು ಓದಿಕೊಂಡರು ವಾಕ್ಯ ವಾಕ್ಯವನ್ನೂ, ಅಕ್ಷರ ಅಕ್ಷರವನ್ನೂ, ಅರ್ಥಮಾಡಿಕೊಂಡರು ಯೋಚನೆ ಮಾಡತೊಡಗಿದರು. ನಾವು ಈ ಶ್ರೀರಂಗಪಟ್ಟಣದವರನ್ನು ಯುದ್ಧಕ್ಕೆ ಕರೆಯಬಹುದು ನಮ್ಮ ಕೊಡಗಿನವರು ಎಷ್ಟೇ ವೀರರಾದರೂ ನಮಗೆ ಜಯವಾಗುವುದಿಲ್ಲ. ಸುಲ್ತಾನರ ದಂಡು ಬಲು ದೊಡ್ಡದು ಇಂಗ್ಲೀಷರಿಗೆ ಬರೆದು ಅವರ ದಂಡನ್ನು ಕರೆಸಬಹುದು ಅವರಿಗೆ ನಾವು ಅಪಾರವಾದ ಹಣವನ್ನು ತೆರಬೇಕಾಗುತ್ತದೆ. ಆ ಯುದ್ಧದಲ್ಲಿ ಇಂಗ್ಲೀಷರಿಗೇ

ಜಯವಾಗುತ್ತಂದೆಬ ಭರವಸೆ ಏನಿದೆ? ಇಂಗ್ಲೀಷರೇ ಮಂಗಳೂರಿನಲ್ಲಿ ಸುಲ್ತಾನ ರೊಂದಿಗೆ ಕರಾರು ಮಾಡಿಕೊಳ್ಳಲಿಲ್ಲವೇ? ಇಂಗ್ಲೀಷರು ಇಲ್ಲಿಗೆ ಬಲವಾದ ಸೈನ್ಯ ವನ್ನು ತಂದರೂ, ನಮ್ಮ ದೇಶದವರು ಅಪ್ರತಿಮ ವೀರ್ಯದಿಂದ ಹೊರಾಡಿದರೂ, ಈ ಮಹಾಯುದ್ಧವು ನಮ್ಮ ದೇಶದಲ್ಲಾದರೆ, ಕೊಡಗು ರಾಜ್ಯವು ಧ್ವಂಸವಾಗಿ ಹೋಗು ವುದು. ನಾವು ಯುಕ್ತಿಯಿಂದ ಇಂಗ್ಲೀಷರಿಗೂ, ಸುಲ್ತಾನರಿಗೂ ಮೈಸೂರು ರಾಜ್ಯ ದಲ್ಲಿಯೇ ಯುದ್ಧವಾಗುವಂತೆ ಮಾಡಬೇಕು ಈ ಯುದ್ಧವು ಕೊಡಗಿನಲ್ಲಿ ಆಗ ಬಾರದು.

ಫಾತಿಮಾಬೇಗಂರವರದೊಂದು ದೊಡ್ಡ ಪ್ರಕರಣಕ್ಕಿಟ್ಟುಕೊಂಡಿದೆ ಈ ಬೇಗಂ ಳನ್ನು ಸುಲ್ತಾನರಿಗೊಪ್ಪಿಸಲು ನನಗೆ ಮನಸ್ಸಿಲ್ಲ. ಸುಲ್ತಾನರ ಪತ್ರದಲ್ಲಿ ಅವಳು ದೊಡ್ಡ ಕುಟುಂಬದವಳೆಂದು ಉಲ್ಲೇಖಿಸಿದ್ದಾರೆ ಅವಳು ವಿದ್ರೋಹಿಯೆಂದು ಬರೆ ದಿದ್ದಾರೆ ಆದರೂ ಅವಳ ದೊಡ್ಡಸ್ತಿಕೆಯಲ್ಲಿ ವಿದ್ರೋಹದ ದೋಷವೆಲ್ಲಾ ಮುಚ್ಚಿ ಹೋಗುತ್ತೆ ಬೇಗಂಸಾಹೇಬಳನ್ನು ಶಿಕ್ಷಿಸುವುದಿಲ್ಲ.

ಅವಳನ್ನು ಸುಲ್ತಾನರ ಜನಾನಾಕ್ಕೆ ಸೇರಿಸಿ ಬಿಡುತ್ತಾರೆ ಬೇಗಂಳು ಸುಲ್ತಾನ ರನ್ನು ನಮ್ಮ ಮೇಲೆಯೇ ಎತ್ತಿ ಕಟ್ಟುತ್ತಾಳೆ ಹೇಗೂ ನಮಗೂ ಸುಲ್ತಾನರಿಗೂ ಯುದ್ಧವು ಸಿದ್ಧ! ಎಂದು ಆಲೋಚಿಸಿದನು ಕೊಡಗಿನ ಮುಖಂಡರನ್ನೆಲ್ಲಾ ಕರೆಸಿ ಆಲೋಚಿಸಬೇಕೆಂದು ನಿರ್ಧರಿಸಿದನು ಮೂರುದಿನಗಳೊಳಗಾಗಿ ಸಮಸ್ತ ಮುಖಂ ಡರನ್ನೂ ಕರೆಸಬೇಕೆಂದು ಅಧಿಕಾರಿಗಳಿಗೆ ಅಪ್ಪಣೆ ಇತ್ತನು.

ರಾಜನು ಫಾತಿಮಳ ವಿಚಾರವಾಗಿ ಚಿಂತಿಸತೊಡಗಿದನು ಬೇಗಂಳನ್ನು ಹೇಗಾ ದರೂ ಒಲಿಸಿಕೊಳ್ಳಬೇಕೆಂದು ಸಂಕಲ್ಪಿಸಿದನು ಸುಲ್ತಾನರ ಪತ್ರವನ್ನು ಅವಳ ಮೇಲೆ ಉಪಯೋಗಿಸಬೇಕೆಂದು ನಿರ್ಧರಿಸಿದನು ಫಾತಿಮಳನ್ನು ನೋಡಲು ವೀರರಾಜ ಪೇಟೆಗೆ ಹೊರಟೇಬಿಟ್ಟನು! ಅರಮನೆಗೆ ತಲಪುತ್ತಲೇ ಬೇಗಂಸಾಹೇಬಳ ಉಪಚಾರ ಕ್ಕಾಗಿ ನಿಯಮಿಸಿದ್ದ ದಾಸಿಯನ್ನು ಕರೆಸಿ, ಬೇಗಂಸಾಹೇಬಳ ಯೋಗಕ್ಷೇಮವನ್ನು ವಿಚಾರಿಸಿದನು

ಆ ದಾಸಿಯು, ಬೇಗಂಸಾಹೇಬಳಲ್ಲಿ ಏನೂ ವ್ಯತ್ಯಾಸ ಕಾಣುವುದಿಲ್ಲವೆಂದೂ, ಯಥಾಪ್ರಕಾರ ಉತ್ಸಾಹದಿಂದ ಇದ್ದಾರೆಂದೂ, ಆದರೆ, ಈ ಅರಮನೆಯಿಂದ ತಪ್ಪಿಸಿ ಕೊಂಡು ಹೋಗಲು ಸರ್ವ ಪ್ರಯತ್ನಗಳನ್ನೂ ಮಾಡುತ್ತಿದ್ದಾರೆಂದೂ ತಿಳಿಸಿದಳು.

ರಾಜನಿಗೆ ಇದನ್ನು ಕೇಳಿ ಸ್ವಲ್ಪ ಸಮಾಧಾನವಾಯಿತು! ರಾಜನು ಬೇಗಂ ಸಾಹೇಬಳ ಸ್ಥಿತಿಯು ಇದಕ್ಕೆ ವ್ಯತಿರಿಕ್ತವಾಗಿರುತ್ತದೆಂದು ಭಾವಿಸಿದ್ದನು ಆ ದಾಸಿಗೆ ಅಂತರಂಗದಲ್ಲಿ ಹೇಳಬೇಕಾದುದೆಲ್ಲವನ್ನೂ ಹೇಳಿ, ಸುಲ್ತಾನರ ಪತ್ರವನ್ನು ಅವಳ ಕೈಲಿ ಕೊಟ್ಟು, ಅದನ್ನು ಬೇಗಂಸಾಹೇಬಳಿಗೆ ತೋರಿಸುವಂತೆ ಹೇಳಿದನು. ಫಾತಿಮಾಬೇಗಂ

ಸಮ್ಮತಿಸುವುದಾದರೆ, ತಾನು ಆ ದಿನ ರಾತ್ರಿ ಬೇಗಂಸಾಹೇಬಳ ಭೇಟಿ ಮಾಡುವುದಾಗಿ ಹೇಳಿ ಕಳುಹಿಸಿದನು

ಹುಚ್ಚಿ ಸಾವಿತ್ರಿಯು ತಂಬೂರಿಯನ್ನು ಹಿಡಿದು ಹಾಡುತ್ತ ಭಿಕ್ಷಕ್ಕೆ ಹೊರಟಳು ಅವಳೆಷ್ಟೋ ಮಂದಿ ದೊಡ್ಡ ದೊಡ್ಡ ಮನುಷ್ಯರ ಮನೆಗಳಿಗೆ ಹೋದಳು ಅಲ್ಲೆಲ್ಲಾ ಯುದ್ಧದ ಮಾತುಗಳನ್ನು ಆಡಿಕೊಳ್ಳುತ್ತಿದ್ದರು ಸಾವಿತ್ರಿಯ ಹಾಡು ಕಿವಿಗೆ ಇಂಪಾಗಿತ್ತು. ಎಲ್ಲರೂ ಹಾಡು ಹೇಳಿಸಿ ಕೇಳುತ್ತಿದ್ದರು ಹಾಗೆಯೇ ಸುತ್ತಿಕೊಂಡು ಅರಮನೆಯ ಮುಂಭಾಗಕ್ಕೆ ಬಂದಳು ಅಲ್ಲಿ ಕಾವಲುಗಾರರು ಅವಳನ್ನು ದೂರ ಓಡಿಸುತ್ತಿದ್ದರು. ಹುಚ್ಚಿಯು ಹೆದರಿ ಓಡಿಹೋಗಲಿಲ್ಲ ! ಅವಳು ಉಚ್ಚಕಂಠದಿಂದ ಹಾಡತೊಡಗಿದಳು. ಪಹರೆಯವರೆಲ್ಲಾ ಸ್ತಬ್ಧರಾದರು ಹುಚ್ಚಿಯ ಹಿಂದಿದ್ದ ಜನರೆಲ್ಲರೂ ಘೊಳ್ಳೆಂದು ನಕ್ಕರು ! ಉಗ್ರಾಣಿಯು ಭಿಕ್ಷವನ್ನು ತಂದು ಕೊಟ್ಟನು ' ಕಾವಲುಗಾರರು ಹೋಗು ಹುಚ್ಚಿ—ಹೊರಟುಹೋಗು ! ಎಂದು ಗದ್ದರಿಸಿದರು ಹುಚ್ಚಿಯು ಹೋಗಲೇ ಇಲ್ಲ !

ಅಷ್ಟರಲ್ಲಿ ಮಹಾರಾಜರು ಅಶ್ವಾರೂಢರಾಗಿ ಅರಮನೆಯ ಮಹಾದ್ವಾರಕ್ಕ ಬಂದರು. ಪಹರೆಯವರು ಜನರನ್ನೆಲ್ಲಾ ದೂರ ತಳ್ಳಿದರು ಜನರ ಗುಂಪಿನಲ್ಲಿ ಗದ್ದಲವು ಹೆಚ್ಚಿತು. ರಾಜರು ನಿಧಾನವಾಗಿ ಕುದುರೆಯನ್ನು ಬಿಡುತ್ತಿದ್ದರು ಹುಚ್ಚಿ ಪುನಃ ಹಾಡತೊಡಗಿದಳು ಜನರ ಗದ್ದಲವೆಲ್ಲವೂ ಅಡಗಿಹೋಯಿತು ರಾಜರು ಅತ್ತಕಡೆ ತಿರುಗಿ ನೋಡಿ, ಯಾರೋ ಹುಚ್ಚಿ ! ಭಿಕ್ಷುಕಳು ! ಹಾಡು-ಬೀದಿಯ ಹಾಡಲ್ಲ ! ಅಕ್ಸರ ಕಂಠ ! ಎಂದುಕೊಂಡು ಅರಮನೆಯೊಳಗೆ ಹೊರಟುಹೋದರು. ಹುಚ್ಚಿಯು ಎಲ್ಲೆಲ್ಲಿಯೋ ತಿರುಗಿಕೊಂಡು, ಊರು ಹೊರಗಿನ ಮಂಟಪದಲ್ಲಿ ಹೋಗಿ ವಿಶ್ರಾಂತಿಯನ್ನು ಪಡೆದಳು.

ಹುಚ್ಚಿಯು ಕೊಡಗಿಗೆ ಬಂದಿರುವುದು ಫಾತಿಮಾಬೇಗಂರವರನ್ನು ನೋಡುವುದಕ್ಕೆ ! ಎಲ್ಲಿಯೂ ಬೇಗಂಸಾಹೇಬಳ ಸಮಾಚಾರವೇ ತಿಳಿಯಲಿಲ್ಲ ! ಹುಚ್ಚಿಯು ಕಾಳೇಶ್ವರವನ್ನು ನೋಡಬೇಕೆಂದು ಸಂಕಲ್ಪಿಸಿದ್ದಳು ಮಾರನೆಯ ದಿನ ನಸುಬೆಳಕಿನಲ್ಲಿಯೇ ಕಾಳೇಶ್ವರಕ್ಕೆ ಪ್ರಯಾಣ ಮಾಡಿದಳು ಮಧ್ಯಾಹ್ನದ ಹೊತ್ತಿಗೆ ಕಾಳೇಶ್ವರವನ್ನು ತಲುಪಿದಳು ಅಲ್ಲಿ ದೇವರ ದರ್ಶನಮಾಡಿದಳು. ಯಾರೋ ಪ್ರಸಾದವನ್ನು ಕೊಟ್ಟರು. ಅದನ್ನು ತಿಂದು ಜಂಗಮವಾಡಿಯಲ್ಲಿ ಹೋಗಿ ಕುಳಿತಳು. ಅಲ್ಲಿ-ಅಲ್ಲಲ್ಲಿ ಭಕ್ತಾದಿಗಳು ಗುಂಪುಗುಂಪಾಗಿ ವಿಶ್ರಮಿಸಿಕೊಳ್ಳುತ್ತಿದ್ದರು ಏನೇನೋ ಮಾತುಗಳನ್ನಾಡಿಕೊಳ್ಳುತ್ತಿದ್ದರು ಜಂಗಮದೇವನ ಮಾತು ! ಫಕೀರನ ಮಾತು ! ಆ ಸಮಾಧಿಯ ಮಹಾತ್ಮೆ, ಇವೆಲ್ಲವನ್ನೂ ಮಾತನಾಡಿಕೊಳ್ಳುತ್ತಿದ್ದರು. ಬೇಗಂಸಾಹೇಬಳ ಮಾತು ಬಂದೇ ಬಂತು ! ಸಾವಿತ್ರಿಗೆ ಕಿವಿಯು ನೆಟ್ಟಗಾಯಿತು. ಅವಳು ಮಾತು

ಗಳನ್ನು ಆಲೈಸಿದಳು. ಬೇಗಂಸಾಹೇಬಳು ಒಬ್ಬ ದೊಡ್ಡ ಮಹಾರಾಣಿಯೆಂದೂ, ಅತುಳೈಶ್ವರ್ಯವನ್ನು ತೆಗೆದುಕೊಂಡು ಕೊಡಗಿಗೆ ಬಂದಳೆಂದೂ, ಕೊಡಗು ಮಹಾ ರಾಜರಿಗೂ, ಬೇಗಂಸಾಹೇಬಳಿಗೂ ಪರಸ್ಪರ ಗಾಂಧರ್ವವಿವಾಹವಾಗಿದೆಯೆಂದೂ, ಆ ಯಾತ್ರಿಕರು ಹೇಳುತ್ತಿದ್ದರು ತ್ರಿಯಂಬಕಭಟ್ಟನು ಬಲು ದೊಡ್ಡ ದೈವಜ್ಞನೆಂದೂ, ಅವನು ಈ ಬೇಗಂಸಾಹೇಬಳ ವಿವಾಹದಿಂದ ರಾಜರಿಗೆ ಹಾನಿ ತಟ್ಟುವುದೆಂದು ರಾಜ ರಿಗೆ ಹೇಳಿದನೆಂದೂ, ಅದಕ್ಕಾಗಿ ಕಾಳೇಶ್ವರದಲ್ಲಿ ಪೂಜೆ ಪುರಸ್ಕಾರಗಳು ನಡೆಯುತ್ತಿವೆ ಯೆಂದೂ ಮತ್ತೊಬ್ಬರು ಹೇಳಿದರು ಬೇಗಂಸಾಹೇಬಳು ಶ್ರೀರಂಗಪಟ್ಟಣದ ಸುಲ್ತಾ ನರು ಪ್ರೇಮಿಸಿದ ಹೆಣ್ಣೆಂದೂ, ಅವಳನ್ನು ಕಟ್ಟಿಕೊಂಡಿದ್ದರಿಂದ ಕೊಡಗಿನ ರಾಜರಿಗೂ, ಸುಲ್ತಾನರಿಗೂ ಯುದ್ಧವಾಗುತ್ತದೆಂದೂ ಇನ್ನೊಬ್ಬರು ಹೇಳಿದರು ಹೀಗೆಯೇ ಮಾತಿಗೆ ಮಾತು ಬೆಳೆದು, ಫಾತಿಮಳು ವೀರರಾಜಪೇಟೆಯ ಅರಮನೆಯಲ್ಲಿದ್ದಾಳೆಂದು ಹುಚ್ಚಿಯ ಕಿವಿಗೆ ಬಿತ್ತು !

ಮಾರನೆಯ ದಿನವೇ ಹುಚ್ಚಿಯು ವೀರರಾಜಪೇಟೆಯನ್ನು ಸೇರಿದಳು ಪೇಟೆ ಯಲ್ಲಿ ಹೊರಟಳು ಜನರ ಗುಂಪು ಅವಳ ಹಿಂದೆ ಸೇರಿತು. ಅವಳ ಗಲಾಟೆಯನ್ನು ತಡೆಯಲಾರದೆ ಕೊತ್ವಾಲನು ಅವಳನ್ನು ಬಂಧಿಸಿದನು ಹುಚ್ಚಿಯು ಕೊತ್ವಾಲನನ್ನು ಬೈಯುವುದಕ್ಕೆ ಆರಂಭಿಸಿದಳು ಕೊತ್ವಾಲನು ಕೋಪಿಸಿಕೊಂಡು, ಬೆತ್ತದಿಂದ ಎರಡು ಏಟು ಕೊಟ್ಟನು ಹುಚ್ಚಿಯು ನಕ್ಕಳು ಜನರೆಲ್ಲಾ ಕೊತ್ವಾಲರೇ ಹೊಡೆಯಬೇಡಿರಿ ! ಅವಳು ಹುಚ್ಚಿ ! ಎಂದು ಕೂಗಿದರು ಕೊತ್ವಾಲನು ಹುಚ್ಚಿಯನ್ನು ಬಿಟ್ಟುಬಿಟ್ಟನು. ಸಾವಿತ್ರಿಯು ಅರಮನೆಯ ಮುಂದೆ ಹೋದಳು ಈ ಜನರ ಗುಂಪೆಲ್ಲವೂ ಅವಳ ಹಿಂದೆ ಹೋಯಿತು ! ಸಂಧ್ಯಾಕಾಲವಾಗಿತ್ತು. ಹುಚ್ಚಿಯು ತಂಬೂರಿಯನ್ನು ಮೀಟುತ್ತ ಹಾಡುತ್ತಿದ್ದಳು.

ಅರಮನೆಯ ರಂಗಮಹಲಿನಲ್ಲಿ ರಾಜರು ಏಕಾಂತವಾಗಿ ಕುಳಿತು, ಎಷ್ಟು ಹೊತ್ತಿಗೆ ರಾತ್ರಿಯು ಕವಿಯುತ್ತದೆ. ಹೇಗೆ ಫಾತಿಮಾಬೇಗಂಳನ್ನು ನೋಡುತ್ತೇನೆ. ಅಂದಿನ ಪ್ರಕರಣದಿಂದ ಖತಿಗೊಂಡ ಬೇಗಂಳನ್ನು ಹೇಗೆ ಮಾತನಾಡಿಸುವುದು ? ಅಂದು ಕ್ರೋಧಮಯಿಯಾಗಿದ್ದ ಫಾತಿಮಳು ಇಂದು ಪ್ರೇಮಮಯಿಯಾಗಿರಬಾರ ದೇಕೆ ? ಎಂದು ಆಶಾಕಲ್ಪನೆಗಳನ್ನು ಮಾಡಿಕೊಳ್ಳುತ್ತಿದ್ದನು.

ಹೀಗೆ ರಾಜನು ಆಲೋಚನಾತರಂಗಗಳಲ್ಲಿ ಮುಳುಗಿ ತೇಲುತ್ತಿರುವಾಗ, ಸಾವಿ ತ್ರಿಯ ಗಾನವು ಕಿವಿಗೆ ಬಿತ್ತು ಎಂತಹ ಮಧುರ ಕಂಠ, ಕೆಸರಿನಲ್ಲಿ ಪದ್ಮವಿರುವಂತೆ, ಈ ಹುಚ್ಚಿಗೆ ಈ ಅಪ್ಸರ ಕಂಠವನ್ನು ಭಗವಂತನು ಕರುಣಿಸಿದ್ದಾನೆ ಎಂದುಕೊಂಡನು. ಅಷ್ಟರಲ್ಲಿ ಅರಮನೆಯ ಮುಂಭಾಗದಲ್ಲಿ ಗದ್ದಲವು ಕೇಳಿಸಿತು. ರಾಜನು ತಾನೇ ಎದ್ದು ಬಂದು, ಜಾಲರಿಯ ಕಿಟಕಿಯಿಂದ ನೋಡಿದನು. ಪಹರೆಯವರಿಗೂ, ಹುಚ್ಚಿಗೂ

ಘರ್ಷಣೆಯಾಗುತ್ತಿತ್ತು. ರಾಜನು ಪ್ರತೀಹಾರಿಯನ್ನು ಕರೆದು ಕೆಳಗೆ ಹೋಗಿ ಆ ಹುಚ್ಚಿಯನ್ನು ರಂಗಮಹಲಿಗೆ ಕರೆತಾ, ಎಂದು ಆಜ್ಞೆ ಮಾಡಿದನು ಪ್ರತೀಹಾರಿಯು ಮುಂದಿನ ಹಜಾರಕ್ಕೆ ಬಂದು, ಆ ಗದ್ದಲವನ್ನು ನಿಲ್ಲಿಸಿ, ಹುಚ್ಚಿಯನ್ನು ಅರಮನೆಯೊಳಗೆ ಬರುವಂತೆ ಕರೆದನು ಪಹರೆಯವರೆಲ್ಲಾ ದಾರಿ ಬಿಟ್ಟರು ಹುಚ್ಚಿಯು ಗಹಗಹಿಸಿ ನಗುತ್ತಾ ಹವಾಲ್ದಾರನನ್ನು ಹಲ್ಲುಕಿರಿದು ಅಣಕಿಸಿ, ನೋಡಿದೆಯಾ ನನ್ನ ಮಹಿಮೆಯನ್ನು, ಎಂದು ಪ್ರತೀಹಾರಿಯ ಜೊತೆಯಲ್ಲಿ ಅರಮನೆಯೊಳಗೆ ಹೋದಳು ಪ್ರತೀಹಾರಿಯು ಸಾವಿತ್ರಿಯನ್ನು ರಾಜರ ಸಮ್ಮುಖಕ್ಕೆ ಕರೆದೊಯ್ದಳು

ಹುಚ್ಚಿಯು ರಾಜರಿಗೆ ತಲೆಬಾಗಿ ಮುಸಲ್ಮಾನ ಪದ್ಧತಿಯಂತೆ ಮುಜರೆ ಮಾಡಿದಳು.

ರಾಜರು ಮುಗುಳುನಗೆಯನ್ನು ನಗುತ್ತಾ, "ನೀನು ಯಾರೇ ತಾಯಿ ?" ಎಂದರು

"ಕಾಣುವುದಿಲ್ಲವೆ ನಿಮಗೆ ? ನಾನು ಕುಲೀನಸ್ತ್ರೀ !"

"ಸರಿ ! ನೀನು ಚೆನ್ನಾಗಿ ಹಾಡುತ್ತಿ !! ಕುಳಿತುಕೋ, ಹಾಡು, ನೋಡೋಣ!"

"ನಾನು ಕುಳಿತುಕೊಳ್ಳುತ್ತೇನೆ. ಹಾಡುವುದಿಲ್ಲ ! ನಾನು ಹಾಡುವುದು ಬೀದಿಯಲ್ಲಿ ! ಇಂಥಾ ಅರಮನೆಯಲ್ಲಲ್ಲ ! ಬೀದಿಯಲ್ಲೇ ಹಾಡುತ್ತಿದ್ದೆನಲ್ಲ ! ನೀವೂ ಕೇಳಬಹುದಾಗಿತ್ತು. ನನ್ನನ್ನು ಇಲ್ಲಿಗೇಕೆ ಕರೆಸಿದಿರಿ ?"

"ಹಾಡುತ್ತಿದ್ದೆ. ಚೆನ್ನಾಗಿ ಹಾಡುತ್ತಿದ್ದೆ ನೋಡೋಣವೆಂದು ಕರೆಸಿದೆವು"

ಹುಚ್ಚಿ ನಗುತ್ತಾ "ಅದು ನನಗೆ ಅಲ್ಲೇ ಗೊತ್ತಾಯಿತು ನಾನು ರೂಪವತಿಯಾಗಿದೇನೇನೋ, ಸುಂದರಿಯೇನೋ ನೋಡೋಣವೆಂದು ನಿಮ್ಮ ಚಪಲ. ಗಂಡಸರೇ ಹೀಗೆ, ಹಾಳು ರೂಪದ ಚಪಲ"

ರಾಜನು ನಗುತ್ತಾ "ನಿನ್ನ ಹೆಸರೇನು ?"

"ಹೆಸರು! ಹೆಸರು! ಇನ್ನೂ ಗೊತ್ತಾಗಲಿಲ್ಲವೆ ? ಹುಚ್ಚಿ ಸಾವಿತ್ರಿ !"

"ನೀನು ಯಾವ ಊರಿನವಳು ? ಇಲ್ಲಿಗೇಕೆ ಬಂದೆ ?"

"ನಾನು ಮೈಸೂರು ದೇಶದವಳು ! ಎಲ್ಲ ದೇಶಗಳಲ್ಲಿಯೂ ಅಲೆಯುತ್ತೇನೆ ದೌಲತ್‌ರಾಣಿಯವರನ್ನು ಬಲ್ಲೆ. ರಾಧಾರಾಣಿಯವರನ್ನು ಬಲ್ಲೆ. ಘಾತಿಮಾರಾಣಿಯವರನ್ನೂ ಬಲ್ಲೆ ನಿಮ್ಮನ್ನೂ ಬಲ್ಲೆ !"

"ಇಲ್ಲಿಗೇಕೆ ಬಂದೆ ? ಹೇಳು !"

ಅದೇ ಹೇಳಿದೆನಲ್ಲಾ ! ಆ ಘಾತಿಮಾರಾಣಿಯವರು ಇಲ್ಲಿ ಕೊಡಗುರಾಜರನ್ನು ಮದುವೆಯಾಗಿದಾರೆಂದು ಕೇಳಿದೆ. ಅವರ ಹೊಸ ಸಂಸಾರವು ಹೇಗಿದೆಯೋ ನೋಡಿ ಹೋಗೋಣವೆಂದು ಬಂದೆ.

ಫಾತಿಮಾಬೇಗಂರವರನ್ನು ನೋಡಿದಿಯೇನು ?

ಇಲ್ಲ! ಕೆಳಗೆ ನಡೆಯುತ್ತಿದ್ದ ಗದ್ದಲ ಕೇಳಲಿಲ್ಲವೆ ? ನಾನು ಬೇಗಂಸಾಹೇಬಳನ್ನು ನೋಡಬೇಕೆಂದು ಕೇಳಿದೆ ಬೇಗಂಸಾಹೇಬಳೂ ಇಲ್ಲ, ಯಾರೂ ಇಲ್ಲ. ಹೋಗು ಎಂದು ಹವಾಲ್ದಾರರು ಹೆದರಿಸಿದರು ಹೊಡೆಯುವುದಕ್ಕೇ ಬಂದರು.

ರಾಜರು ನಗುತ್ತಾ ಒಳ್ಳೆಯದು, ಈಗ ಹೋಗು.

ಏಕೆ ? ನೀವು ನಿಮ್ಮ ಹೊಸ ಹೆಂಡತಿಯನ್ನು ತೋರಿಸುವುದಕ್ಕೆ ನಾಚುತ್ತೀರಾ? ನಿಮ್ಮ ಮುಂದೆ ಹಾಡುತ್ತೇನೆ ಚೆನ್ನಾಗಿ ಹಾಡುತ್ತೇನೆ ಈ ರಾತ್ರಿ ಎಲ್ಲಾ ಹಾಡುತ್ತೇನೆ. ನನಗೆ ಫಾತಿಮಾಬೇಗಂರವರ ಭೇಟಿ ಮಾಡಿಸಿ, ನಿಮಗೆ ಏನಾದರೂ ನಜರು ಮಾಡುತ್ತೇನೆ

ನೋಡು ಹುಚ್ಚಿ, ನಿನಗೆ ಬೇಗಂ ಸಾಹೇಬರ ಭೇಟಿ ಮಾಡಿಸುತ್ತೇನೆ. ಅಲ್ಲಿ ನೀನು ಹುಚ್ಚುಹುಚ್ಚಾಗಿ ಹರಟಿದರೆ ಛಡಿಯಿಂದ ಹೊಡೆದು ಬಂಧನದಲ್ಲಿಡುತ್ತೇನೆ.

ಏಕೆ ? ರಾಜರೆ, ನನ್ನನ್ನೇಕೆ ಬಂಧದಲ್ಲಿಡುತ್ತೀರಿ ? ಬಂಧನದಲ್ಲಿಟ್ಟು ನನ್ನನ್ನು ಮದುವೆ ಮಾಡಿಕೊಳ್ಳುತ್ತೀರಾ ? ಆ ಬೇಗಂ ಸಾಹೇಬಳೊಡನೆ ಎಷ್ಟೋ ಮಾತನಾಡಿದ್ದೇನೆ ಅವಳು ನನ್ನೊಡನೆ ಎಷ್ಟೋ ಹೆಣಗಿದ್ದಾಳೆ ಮಾರಾಯಿತಿ !

ಒಳ್ಳೆಯದು ಒಂದು ಹಾಡು ಹೇಳು ನೋಡೋಣ.

ಹುಚ್ಚಿಯು ತಂಬೂರಿಯನ್ನು ಝೇಂಕರಿಸಿದಳು

ಯಮುನಾ ತೀರೇ । ಧೀರ ಸಮೀರೇ ।
ವಸತಿ ವನೇ ವನಮಾಲೀ ।

ಹಾಡಿದಳು

ರಂಗಮಹಲೆಲ್ಲವೂ ರಾಗಮಯವಾಯಿತು

ರಾಜನು ತಲ್ಲೀನನಾಗಿ ಕೇಳುತ್ತಿದ್ದನು ಆ ಧ್ವನಿಯು ಅಂತಃಪುರಕ್ಕೆ ಕೇಳಿಸಿತು. ಫಾತಿಮಾಬೇಗಂ ಕಿವಿಗೊಟ್ಟು ಕೇಳಿ ಹುಚ್ಚಿ ಸಾವಿತ್ರಿ ! ಎಂದಳು

ಸಮೀಪದಲ್ಲಿದ್ದ ಮಾಲತಿಯು ಅದಾರು ಬೇಗಂಸಾಹೇಬ್, ಎಂದು ಪ್ರಶ್ನೆ ಮಾಡಿದಳು

ಫಾತಿಮಳು ನಿಟ್ಟುಸಿರು ಬಿಟ್ಟು, ಅವಳೊಬ್ಬ ಅಭಾಗಿನಿ ಹುಚ್ಚಿ ಎಂದಳು.

ಅವಳನ್ನು ನೀವು ಬಲ್ಲಿರಾ ?

ಬಲ್ಲೆ, ಚೆನ್ನಾಗಿ ಬಲ್ಲೆ.

ಅವಳು ಇಲ್ಲಿಗೇಕೆ ಬಂದಿದಾಳೆ-

ನಾನಿಲ್ಲಿರುವುದನ್ನು ತಿಳಿದೇ ಬಂದಿದಾಳೆ

ಅವಳು ನಮ್ಮನ್ನು ನೋಡುವುದು ಸಾಧ್ಯವಾಗುತ್ತದೆಯೇ ?

ಹೌದು ಅವಳು ಅಂಥಾ ಸಾಹಸಗಾತಿ! ನನ್ನನ್ನು ನೋಡದೆ ಹೋಗುವುದೇ ಇಲ್ಲ!

ಇಷ್ಟು ಕಟ್ಟು ಕಾವಲಾಗಿರುವ ಅಂತಃಪುರಕ್ಕೆ ಅವಳು ಹೇಗೆ ಬರಬಲ್ಲಳು ?

ಬೇಗಂಸಾಹೇಬಳು ವಿಷಾದ ಪೂರ್ವಕವಾದ ನಗುವನ್ನು ನಕ್ಕು ಅವಳು ಆಕಾಶದಲ್ಲಿ ಹಾರಿಬರುತ್ತಾಳೆ, ಗಾಳಿಯಲ್ಲಿ ತೂರಬರುತ್ತಾಳೆ, ಗೊತ್ತಾಗಲಿಲ್ಲವೇ ನಿನಗೆ, ಅವಳು ಅರಮನೆಯ ರಂಗಮಹಲಿನಲ್ಲಿ ಮಹಾರಾಜರ ಸಮ್ಮುಖದಲ್ಲಿ ಹಾಡುತ್ತಿದ್ದಾಳೆ. ಅಂತಹ ಮಹಾರಾಜರಿಗೆ ಕ್ಷಣದಲ್ಲಿ ಹುಚ್ಚು ಹಿಡಿಸುತ್ತಾಳೆ.

ಅಷ್ಟರಲ್ಲಿ ಹಾಡು ನಿಂತಿತು ನಿಶ್ಯಬ್ದ

ರಾಜರು—ಹುಚ್ಚಿ, ಬಲು ಚೆನ್ನಾಗಿ ಹಾಡಿದೆ ನೀನು ಒಳ್ಳೇ ಸಂಗೀತಗಾತಿ

ಸರಿ ನನಗೆ ಇನಾಮೆಲ್ಲಿ ?

ಕೊಡಿಸುತ್ತೇನೆ. ಒಳ್ಳೇ ಇನಾಮನ್ನೇ ಕೊಡಿಸುತ್ತೇನೆ

ಅಲ್ಲರೀ ಹುಚ್ಚು ರಾಜರೆ! ಇನಾಮಲ್ಲ, ನಾನು ಕೇಳಿದ್ದು ನೀವು ನನಗೆ ಇನಾಮು ಕೊಟ್ಟರೆ ಯಾರಾದರೂ ಕಿತ್ತುಕೊಂಡು ಹೋಗುತ್ತಾರೆ

ನಮ್ಮ ರಾಜ್ಯದಲ್ಲಿ ಯಾರೂ ಕಿತ್ತುಕೊಳ್ಳುವುದಿಲ್ಲ

ಹುಚ್ಚಿಯು ಗಹಗಹಿಸಿ ನಕ್ಕು, ಆಹಾ! ಧರ್ಮರಾಜ. ಅಯ್ಯೋ ಹುಚ್ಚ! ರಾಮರಾಜ್ಯದಲ್ಲಿಯೂ ಕಳ್ಳರುಂಟು ಸುಳ್ಳರುಂಟು ಸ್ವೈರಿಣಿಯರುಂಟು ವ್ಯಭಿಚಾರಿಣಿಗಳುಂಟು.

ಸಾಕು, ಸಾಕು ಮಾತು ನಿಲ್ಲಿಸು. ನೀನಗೇನು ಬೇಕು!

ಅದೇ, ಮೊದಲೇ ಹೇಳಿದೆನಲ್ಲಾ. ಬೇಗಂ ಸಾಹೇಬರ ಭೇಟಿ.

ಬೇಗಂಸಾಹೇಬರ ಭೇಟಿ ಮಾಡಿಸದಿದ್ದರೆ ?

ಹೇಳಿದೆನಲ್ಲಾ ರಾಜನು ಕಳ್ಳ, ಸುಳ್ಳ ಎಂದು ಹೇಳಿಕೊಂಡು ಹೋಗುತ್ತೇನ

ರಾಜನು ಪುನಃ ನಕ್ಕು ಎದ್ದುಬಂದು, ಸಾವಿತ್ರಿಯನ್ನು ಬೆನ್ನು ತಟ್ಟಿ, ನೀನು ನಿಜವಾದ ಹುಚ್ಚಿ.

ನೋಡಿದೆಯಾ, ಮುಟ್ಟಬೇಡ ಮುಟ್ಟಬೇಡ!

ರಾಜನು ಪುನಃ ನಗುತ್ತಾ, ಹೋಗು ಹುಚ್ಚಿ ಈ ಪಹರೆಯವನು ಕರೆದುಕೊಂಡು ಹೋಗಿ ಬೇಗಂಸಾಹೇಬಳ ಭೇಟಿ ಮಾಡಿಸುತ್ತಾನೆ

ಒಳ್ಳೆಯದು ರಾಜರೆ, ದೊಡ್ಡ ಮೆಹರ್ಬಾನಿ, ನನ್ನ ತಂಬೂರಿಯನ್ನು ಇಲ್ಲೇ ಇಟ್ಟುಹೋಗುತ್ತೇನೆ. ನೀವು ಇದನ್ನು ಕಾದು ಕುಳಿತಿರಬೇಕು ನೀವು ಇದನ್ನು ಬಿಟ್ಟು ಎಲ್ಲಿಯಾದರೂ ಹೋದರೆ, ನನ್ನ ತಂಬೂರಿಯು ಝೀಂ ಎನ್ನುತ್ತದೆ ನಾನು ಓಡಿ ಬರುತ್ತೇನೆ.

ರಾಜನು ನೀನು ಓಡಿಬಂದು ಏನು ಮಾಡುತ್ತಿ ?

ಹುಚ್ಚಿಯು ಹಲ್ಲು ಕಡಿಯುತ್ತಾ, ಏನು ಮಾಡುತ್ತಿ, ಏನು ಮಾಡುತ್ತಿ, ಎಷ್ಟು ಧೈರ್ಯ ನಿಮಗೆ ನನಗೆ ಕೋಪ ಬಂದರೆ, ಫಾತಿಮಾಬೇಗಂಳನ್ನು ಮಂತ್ರಶಕ್ತಿಯಿಂದ ಗಿಣಿಯ ಮರಿಯಾಗಿ ಮಾಡಿ, ಈ ಜೋಳಿಗೆಯಲ್ಲಿ ಹಾಕಿಕೊಂಡು ಹಾರಿ ಹೋಗುತ್ತೇನೆ.

ರಾಜನು—ಓಹೋ, ಫಾತಿಮಾಬೇಗಂರವರು ಗಿಣಿಯಾಗುತ್ತಾರೊಯೋ ?

ಹೂ, ಹೂ, ಕೊಡಗಿನ ರಾಜರು ಗಿಡಗರಾಗುತ್ತಾರೇನು.

ಪಹರೆಯವನು ಹುಚ್ಚಿಯನ್ನು ಅಂತಃಪುರದೊಳಗೆ ಕರೆದುಕೊಂಡು ಹೋದನು. ಬಾಗಿಲಿನಲ್ಲಿ ಕಾದಿದ್ದ ದಾಸಿಯನ್ನು ಕುರಿತು, ಮಹಾರಾಜರ ಅಪ್ಪಣೆಯಾಗಿದೆ, ಇವಳಿಗೆ ಬೇಗಂಸಾಹೇಬರ ಭೇಟಿ ಮಾಡಿಸು, ಎಂದು ಹೇಳಿ, ಹೊರಟು ಹೋದನು. ದಾಸಿಯು ಅಂತಃಪುರದಲ್ಲಿ ಬೇಗಂಸಾಹೇಬಳಿದ್ದ ಮಹಲಿಗೆ ಕರೆದೊಯ್ದಳು

ಬೇಗಂಸಾಹೇಬಳು ಕುಳಿತಿದ್ದ ಹಜಾರವು ಪ್ರಶಸ್ತವಾಗಿ ಅಲಂಕೃತವಾಗಿದ್ದಿತು. ಅದನ್ನು ನೋಡಿ, ಹುಚ್ಚಿಯು ಮನಸ್ಸಿನಲ್ಲಿಯೇ ಆನಂದಿಸುತ್ತಾ, ಬೇಗಂಸಾಹೇಬಳ ಸಮೀಪಕ್ಕೆ ಹೋದಳು ಫಾತಿಮಳು ಎದ್ದು ಹುಚ್ಚಿಯ ಕೈ ಹಿಡಿದು ತಾನು ಕುಳಿತಿದ್ದ ಪರ್ಯಂಕದಲ್ಲಿಯೇ ಕುಳ್ಳಿರಿಸಿಕೊಂಡಳು. ಅವಳ ಕ್ಷೇಮ ಸಮಾಚಾರವನ್ನು ವಿಚಾರಿಸಿದಳು

ಹುಚ್ಚಿ, ನೀನು ಇಲ್ಲಿಗೆ ಹೇಗೆ ಬಂದೆ ನಾನು ಇಲ್ಲಿರುವುದು ನಿನಗೆ ಹೇಗೆ ತಿಳಿಯಿತು

ನೀನು ಇಲ್ಲಿರುವುದು ನನಗೆ ಗೊತ್ತು ನಿನ್ನ ಹೊಸ ರಾಣಿಗಿರಿಯನ್ನು ನೋಡಿ ಹೋಗೋಣವೆಂದು ಬಂದೆ.

ರಾಣಿ ಎಂದರೇನೆ ? ನಾನು ಇಲ್ಲಿ ಬಂದಿಯಾಗಿದೇನೆ

ಹೌದು, ಬೇಗಂಸಾಹೇಬ್, ನನ್ನಂತೆ ಇದ್ದರೆ ಸ್ವತಂತ್ರವಾಗಿರಬಹುದು. ಈ ವೈಭವ, ಭೋಗ ಭಾಗ್ಯಗಳು ಬೇಕೆಂದರೆ ಹೆಂಗಸರು ಬಂದಿಯಾಗುತ್ತಾರೆ ವಿವಾಹಿತರಾದ ಹೆಂಗಸೆಂದರೇನು ? ಚಿನ್ನದ ಪಂಜರದಲ್ಲಿರುವ ಗಿಣಿಗಳು ! ನೋಡಿ, ಬೇಗಂ ಸಾಹೇಬ್, ತಾವು ಈ ರಾಜ್ಯದ ರಾಜರನ್ನು ಮದುವೆಯಾಗಿದೀರೆಂದು ತಿಳಿಯಿತು. ನೀವು ಇಲ್ಲಿ ಮಹಾರಾಣಿಯಾಗಿದ್ದೀರೆಂದು ಕೇಳಿದೆ. ತಮ್ಮನ್ನು ಅಂದು ಕಷ್ಟದಲ್ಲಿ ಕೈಬಿಟ್ಟು ಹೋದೆ. ಇಂದು ಸುಖದಲ್ಲಿ ನೋಡೋಣವೆಂದು ಬಂದೆ. !

ನಾನು ಯಾರನ್ನು ಮದುವೆಯಾದರೆ ನಿನಗೇನು ?

ನನಗೇನು ? ಅದೇ ಹೇಳಿಹೋಗೋಣವೆಂದು ಬಂದೆ. ನಿಮ್ಮ ಮದುವೆಯ

ಸುದ್ದಿಯನ್ನು ಕೇಳಿ ಶ್ರೀರಂಗಪಟ್ಟಣಕ್ಕೆ ಪಟ್ಟಣವೇ ಪ್ರಕ್ಷುಬ್ಧವಾಗಿದೆ ಸುಲ್ತಾನ ರವರಿಗೆ ಬಹಳ ಕೋಪ ಬಂದಿದೆ

ಫಾತಿಮಳು ತಿರಸ್ಕಾರವಾದ ನಗುನಕ್ಕು—ನಿಮ್ಮ ಸುಲ್ತಾನರವರಿಗೆ ಕೋಪ ಬಂದರೆ ನನಗೇನು? ಅವರಿಗೆ ಕೋಪ ಬರಿಸಬೇಕೆಂದೇ ನನ್ನ ಇಷ್ಟ ನನ್ನ ಮೇಲೆ ಅವರಿಗೇನು ಅಧಿಕಾರವಿದೆ ಹೌದು, ನಾನು ಈ ಕೊಡಗಿನ ರಾಜರನ್ನು ಮನಃ ಪೂರ್ವಕವಾಗಿ ಮದುವೆಯಾಗಿದ್ದೇನೆಂದು ನಿಮ್ಮ ಸುಲ್ತಾನರಿಗೆ ಹೇಳು!

ಬೇಗಂಸಾಹೇಬ್ ಕೋಪಿಸಿಕೊಳ್ಳಬೇಡಿರಿ ನೀವು ಮದುವೆ ಆದದ್ದು ಬಲು ಸಂತೋಷ. ಆದರೆ, ಅದೇನೋ ದೈವಗತಿ, ನಿಮ್ಮ ಮದುವೆಯೆಂದರೆ ಗಂಡಾಂತರದ ಮೇಲೆ ಗಂಡಾಂತರಗಳು ನೀವು ಭಗವಂತನ ಸಾಕ್ಷಿಯಾಗಿ ದಿವಾನರವರನ್ನು ಮದುವೆಯಾದಿರಿ ಅವರಿಗೆ ಎಂಥಾ ಗಂಡಾತರವು ಬಂತು ಈ ಹುಚ್ಚಿ ಸಾವಿತ್ರಿಯು ಆ ಪಾಪಿ ಮೀರ್‌ಸಾದಕನಿಗೆ ಗಂಟು ಬಿದ್ದಿರಿ ಆ ಪ್ರಕರಣವು ಎಷ್ಟು ಭಯಂಕರ ವಾಯಿತು ಪಾಪ! ಆ ಹುಡುಗ ಹುಸೇನ್‌ಖಾನನ್ನು ವರಿಸಿ, ಮಂಗಳೂರಿನ ವಿಪ್ಲ ವವೆಬ್ಬಿಸಿದಿರಿ ಆ ಹುಸೇನ್‌ಖಾನನು ಹೆಸರೇ ಇಲ್ಲದೆ ನಿರ್ನಾಮವಾದ ಈ ರಾಜ ನನ್ನು ಮದುವೆಯಾದಿರಿ ಇವನಿಗೆ ಗಂಡಾಂತರವು ಬಂದಿದೆ ಸುಲ್ತಾನರು ಕ್ರೋಧಾ ವಿಷ್ಟರಾಗಿ ಸೈನ್ಯವನ್ನು ತೆಗೆದುಕೊಂಡು ಹೊರಟಿದಾರೆ

ಬೇಗಂಸಾಹೇಬಳಿಗೆ ತಡೆಯಲಾರದಷ್ಟು ಕೋಪ ಬಂತು, ಅಳು ಬಂತು, ರೇಗಿಕೊಂಡು ಹುಚ್ಚಿಯ ಕಪಾಳಕ್ಕೊಂದು ಏಟು ಕೊಟ್ಟು, ಮುಚ್ಚುಬಾಯಿ, ಬಾಂದಿ, ಎಂದಳು.

ಹುಚ್ಚಿಯು ನಗುತ್ತಾ ಹೊಡೆಯಿರಿ, ರಾಣಿಯವರೇ ಎಷ್ಟೋ ಪೆಟ್ಟು ತಿಂದಿ ದ್ದೇನೆ. ನಿಮ್ಮ ಮೃದುವಾದ ಹಸ್ತದಿಂದ ಹೊಡೆದರೆ ನನಗೇನಾಗುತ್ತೆ ಸುಲ್ತಾನರು ಕೊಡಗಿನ ಮೇಲೆ ಯುದ್ಧಕ್ಕೆ ಹೊರಟಿದ್ದಾರೆ ನಿಮಗೆ ತಕ್ಕ ಪ್ರಾಯಶ್ಚಿತ್ತವಾಗು ತ್ತದೆ.

ಫಾತಿಮಾ—ಕ್ರೋಧದಿಂದ ಪ್ರಾಯಶ್ಚಿತ್ತ, ಅಂದು ಸುಲ್ತಾನನು ದರಬಾರಿನ ನಾಟಕವನ್ನು ಮಾಡಿ, ದಿವಾನರವರ ಸಮ್ಮುಖದಲ್ಲಿ ವಿಚಾರಣೆಮಾಡಿ, ನೀನು ಸುಳ್ಳು ಸಾಕ್ಷಿ ಹೇಳಿ,—

ಬೇಗಂಸಾಹೇಬ್, ಅನ್ಯಾಯವನ್ನು ನುಡಿಯಬೇಡ, ತಪ್ಪು ನಿನ್ನದು ದೊಡ್ಡ ಬೆಟ್ಟವನ್ನು ಕಡಿದು ಮೈಮೇಲೆ ಕೆಡವಿಕೊಂಡೆ. ಅಂದು ನಿನ್ನಷ್ಟಕ್ಕೆ ನೀನು ಗಂಭೀರವಾಗಿ ದಿವಾನರ ಅತಃಪುರದಲ್ಲಿದ್ದಿದ್ದರೆ, ಈ ಗಂಡಾಂತರವೇ ಬರುತ್ತಿರಲಿಲ್ಲ

ಫಾತಿಮಳು ತಡೆಯಲಾರದೆ ಅತ್ತಳು. ಬಿಕ್ಕಿಬಿಕ್ಕಿ ಅತ್ತಳು.

ಹುಚ್ಚಿ—ಅಳಬೇಡ, ತಾಯಿ. ಈಗಲೂ ನಾನು ನಿಮಗೆ ಸಹಾಯ ಮಾಡುತ್ತೇನೆ

ಹುಚ್ಚಿ, ಹೊರಟುಹೋಗು. ನನಗೆ ನಿನ್ನ ಸಹಾಯವು ಬೇಡ ಸುಲ್ತಾನನು ಈ ರಾಜ್ಯಕ್ಕೆ ಬರಲಿ, ಇಲ್ಲಿ ವೀರರಾದ ಕೊಡಗು ಜನರು ನನ್ನನ್ನು ಬಿಟ್ಟು ಕೊಡುವುದಿಲ್ಲ. ರಾಜನು ಕೊನೆಯವರಿಗೂ ಕಾಪಾಡಲು ಯುದ್ಧ ಮಾಡುತ್ತಾನೆ

ಹುಚ್ಚಿ—ಬೇಗಂಸಾಹೇಬ, ಈಗ ನೀನು ನಿಜವಾದ ಹುಚ್ಚಿ ಯುದ್ಧದಲ್ಲಿ ಸುಲ್ತಾನನನ್ನು ಗೆಲ್ಲುವ ಮಹಾವೀರನು ಈ ಜಗತ್ತಿನಲ್ಲಿ ಹುಟ್ಟಲೇ ಇಲ್ಲ ಮೈಸೂರಿನ ಚಾಮುಂಡೇಶ್ವರಿಯು ಜಗತ್ತನ್ನೆಲ್ಲಾ ಜಯಿಸಬಲ್ಲ ವೀರಪುತ್ರನನ್ನು ದೊಡ್ಡ ನವಾಬರಿಗೆ ವರಪ್ರಧಾನ ಮಾಡಿದಾಳೆ ಆ ಟಪ್ಪೂಸುಲ್ತಾನನು ಈ ಇಡೀ ಹಿಂದೂಸ್ಥಾನವನ್ನು ಜಯಿಸಿ ರಾಜ್ಯವನ್ನು ಕಟ್ಟಬಲ್ಲ ! ಆದರೆ ಅದನ್ನು ಆಳುವ ರಾಜ್ಯಭಾರವು ಅವನಿಗೆ ಗೊತ್ತಿಲ್ಲ ದೊಡ್ಡ ದಿವಾನರು ಬದುಕಿದ್ದರೆ, ಇಯಜ್‌ಖಾನನು ಸುಲ್ತಾನನಿಗೆ ಸಹಾಯಕ್ಕೆ ನಿಂತಿದ್ದರೆ, ಸುಲ್ತಾನೀ ರಾಜ್ಯವು ಮೊಗಲ್ ಸಾಮ್ರಾಜ್ಯಕ್ಕಿಂತ ಬಲವಾಗುತ್ತಿತ್ತು ಆ ಮಾತು ಈಗ ಏಕೆ ? ಸುಲ್ತಾನರ ಕ್ರೋಧಾಗ್ನಿಯಲ್ಲಿ ಈ ಕೊಡಗು ರಾಜ್ಯವು ಸುಟ್ಟು ಹೋಗುತ್ತದೆ.

ಫಾತಿಮಳು ನಡುಗುತ್ತಾ ಹುಚ್ಚಿ, ನೀನು ಹುಚ್ಚಿಯಲ್ಲವೆಂದು ನನಗೆ ಗೊತ್ತು. ಹೇಳು ಈಗ ನಾನೇನು ಮಾಡಬೇಕು

ಬೇಗಂಸಾಹೆಬ್, ನನ್ನ ಮಾತು ಕೇಳುವುದಾದರೆ ನೀವು ಆ ಸುಲ್ತಾನನನ್ನು ವರಿಸಿ, ಎಂದು ಹುಚ್ಚಿಯು ನಕ್ಕಳು.

ಫಾತಿಮಳು— ಹುಚ್ಚು ಗಂಟುಹಾಕಿ, ಛಿ, ಹುಚ್ಚುಮುಂಡೆ, ನೀನು ಯಾವಾಗಲೂ ಕಾಮದ ಪಶು, ಅದೇ ಮಾತನ್ನೆ ಆಡುತ್ತಿ. ನೋಡು, ಸಾವಿತ್ರಿ ನಾನು ಸುಲ್ತಾನನ್ನು ದ್ವೇಷಿಸುತ್ತೇನೆ ಆದರೆ ಒಂದು ಅಂಶದಲ್ಲಿ ಸುಲ್ತಾನನ ವಿಷಯದಲ್ಲಿ ನನಗೆ ಬಹಳ ಗೌರವವಿದೆ ಸುಲ್ತಾನನು ಹೆಂಗಸಿಗೆ ಆಶೆಪಡುವ ಹೀನಪುರುಷನಲ್ಲ

ಹುಚ್ಚಿಯು ನಗುತ್ತಾ,-ಅಯ್ಯೋ ಹುಚ್ಚಿ, ನಾನು ಹುಚ್ಚಿಯೋ, ನೀನು ಹುಚ್ಚಿಯೋ ನೋಡಿಕೋ, ಹೆಣ್ಣಿನ ರೂಪಕ್ಕೆ ಮರುಳಾಗದ ಗಂಡು ಯಾವನಿದ್ದಾನೆಯೇ !

ಫಾತಿಮಳು— ಹುಚ್ಚಿ, ಆ ಮಾತು ಬಿಡು, ನೀನು ಆ ಮಾತನಾಡಿದರೆ ನಿನ್ನ ಕುತ್ತಿಗೆಯನ್ನು ಹಿಚಿಗಿ ಪ್ರಾಣತೆಗೆಯುತ್ತೇನೆ. ಈಗ ಏನು ಉಪಾಯ ಮಾಡಬೇಕು, ಹೇಳು.

ಹುಚ್ಚಿ—ಉಪಾಯವೇನಿದೆ. ನಾನು ಈ ರಾಜರನ್ನು ನೋಡಿ ಹೇಳುತ್ತೇನೆ.

ಸುಲ್ತಾನರಿಗೆ ಶರಣಾಗತರಾಗಿ, ಈ ಫಾತಿಮಾ ರಾಣಿಯನ್ನು ಸುಲ್ತಾನರಿಗೊಪ್ಪಿಸಿಬಿಡಿ, ಎಂದು ಹೇಳುತ್ತೇನೆ

ಫಾ-ಹುಚ್ಚಿ, ಆ ಮಾತುಬಿಡು ಸೂರ್ಯನು ಪಶ್ಚಿಮದಲ್ಲಿ ಉದಯಿಸಿದರೂ, ನಡೆಯುವ ಮಾತಲ್ಲ ಈ ಕೊಡಗಿನ ಧೀರರು ಸುಲ್ತಾನರಿಗೆ ತಲೆ ಬಾಗುವುದಿಲ್ಲ ನಾನು ಸುಲ್ತಾನರ ವಶವಾಗುವುದಿಲ್ಲ

ಹು—ನೀನೇನು ಮಾಡುತ್ತಿ !

ಫಾ—ನಾನು ಪ್ರಾಣ ಬಿಡುತ್ತೇನೆ

ಹು—ನಾನು ನಂಬುವುದಿಲ್ಲ ನಿನಗೆ ಕಾಮೋಪಭೋಗಗಳಲ್ಲಿ ಬಹಳ ಆಶೆ ಇದೆ ಸಾಯುವವಳಾಗಿದ್ದರೆ ಅಂದೇ ಸಾಯುತ್ತಿದ್ದೆ ಈಗೊಂದು ಉಪಾಯವಿದೆ

ಫಾ—ಅದೇನು ಹೇಳು.

ರಾಧಾರಾಣಿಯವರನ್ನೂ, ದೌಲತ್ ರಾಣಿಯವರನ್ನೂ ಮರಹೋಗುವುದು ಅವರು ನಿನ್ನನ್ನು ಉದ್ಧಾರ ಮಾಡಬಲ್ಲರು ಈ ರಾಜನನ್ನು ಬದುಕಿಸಬಲ್ಲರು

ಒಳ್ಳೆಯದು ಹುಚ್ಚಿ, ಹಾಗೇ ಮಾಡುತ್ತೇನೆ ಆದರೆ, ನೀನು ನನಗೊಂದು ವಚನವನ್ನು ಕೊಡು ನೀನು ನನಗಾಗಿ ಪ್ರಾಣವನ್ನು ತೆರುವುದಾಗಿ ಅಂದು ವಾಗ್ದಾನ ಮಾಡಿದೆ ಇಂದು ಅಭಯವನ್ನು ಕೊಡು ಈ ಕೊಡಗಿನ ಪ್ರಕರಣವು ಪೂರೈಸುವವರಗೆ ನೀನು ನನ್ನ ಸಮೀಪದಲ್ಲಿಯೇ ಇದ್ದು, ಸಹಾಯ ಮಾಡುವುದಾಗಿ ವಚನವನ್ನು ಕೊಡು

ನಾನೆಲ್ಲಿರಬೇಕೆನ್ನುವೆ ?

ನೀನು ನನ್ನೊಡನೆಯೇ ಇರು.

ನಾನು ಈ ಅರಮನೆಯಲ್ಲಿರಲಾರೆ ನಾನು ಬೀದಿಬೀದಿ ಅಲೆಯಬೇಕು ಊರೂರು ತಿರುಗಬೇಕು ಇಲ್ಲದಿದ್ದರೆ ನನಗೆ ಹುಚ್ಚು ಹಿಡಿಯುತ್ತೆ

ಆಗಲಿ ಹುಚ್ಚಿ ನೀನು ಈ ಊರಿನಲ್ಲೇ ಇರು

ಹು—ಇರುತ್ತೇನೆ ನಿನಗೆ ಸಹಾಯಮಾಡುತ್ತೇನೆ ನನ್ನ ಮಗುವನ್ನು ಆಡಿಸಲು, ಆ ರಾಜನ ಹತ್ತಿರ ಕೊಟ್ಟು ಬಂದಿದ್ದೆ ಅವನೇನು ಮಾಡಿದನೋ, ಆ ಮಗುವು ಅಳುತ್ತದೆ ನಾನು ಹೋಗುತ್ತೇನೆ.

ಫಾ—ನಗುತ್ತಾ, ಹುಚ್ಚಿ, ನಿನಗೆ ಮಗುವೆಂದರೇನೆ ?

ಹು—ಕೇಳುತ್ತಿಲ್ಲವೇ, ನನ್ನ ತಂಬೂರಿಯನ್ನು ಆ ರಾಜನ ಕೈಗೆ ಕೊಟ್ಟು ಬಂದಿದ್ದೆ ಅವನು ಅದರ ತಂತಿಗಳನ್ನು ಮೀಟುತ್ತಿದ್ದಾನೆ ತಂಬೂರಿಯು ಅಳುತ್ತಿರುವುದು ನನ್ನ ಕಿವಿಗೆ ಕೇಳಿಸುತ್ತದೆ ಎಂದು ಹೊರಟು ಹೋದಳು

ರಾತ್ರಿ ಒಂಭತ್ತು ಗಂಟೆ ಹೊಡೆದು ಹೋಗಿತ್ತು. ಅಮಾವಾಸ್ಯೆಯ ಕಗ್ಗತ್ತಲೆ.

ಊರೆಲ್ಲವೂ ನಿಶ್ಯಬ್ದ. ಮಧ್ಯೆ ಮಧ್ಯೆ ಕಾವಲುಗಾರರು ಕೂಗುವ ಕೂಗು ಕಠೋರವಾಗಿ ಕೇಳಿಸುತ್ತಿತ್ತು. ಅರಮನೆಯೆಲ್ಲವೂ ದೀಪಗಳಿಂದ ಪ್ರಕಾಶಿಸುತ್ತಿತ್ತು ಅಂತಃಪುರ ದಲ್ಲಿ ಪ್ರಕೃಷ್ಟವಾದ ದೀಪಪ್ರಭೆ ಆಹ್ಲಾದಕರವಾದ ಊದುಬತ್ತಿಯ ಗಂಧ, ಅತ್ತ ರುಗಳ ಘಮಘಮವಾಸನೆ. ರಾಜನು ಫಾತಿಮಾಬೇಗಂರವರ ಭೇಟಿಗೆ ಬಂದನು ಫಾತಿಮಳು ತನ್ನ ಮೇಲೆ ಕೋಪಿಸಿಕೊಂಡಿದ್ದಾಳೆಂದು ಎದೆಯು ಬಡಿದು ಕೊಳ್ಳು ತ್ತಿತ್ತು ಇಂದು ಎಲ್ಲವನ್ನೂ ಸರಿಪಡಿಸಿಕೊಳ್ಳುತ್ತೇನೆಂದು ಧೈರ್ಯ ತಂದು ಕೊಳ್ಳು ತ್ತಿದ್ದನು. ರಾಜನು ಅಂತಃಪುರದ ಹಜಾರಕ್ಕೆ ಹೋಗುವ ಸಮಯಕ್ಕೆ ಸರಿಯಾಗಿ ಫಾತಿಮಳು ಮಂದಹಾಸವದನೆಯಾಗಿ, ರಾಜನನ್ನು ಎದುರುಗೊಂಡಳು. ಈ ವರ್ತ ನೆಯು ರಾಜನಿಗೆ ಆಶ್ಚರ್ಯವನ್ನುಂಟುಮಾಡಿತು ರಾಜನು ತಲೆತಗ್ಗಿಸಿಕೊಂಡು ಅಂತಃಪುರವನ್ನು ಪ್ರವೇಶಿಸಿದನು ಫಾತಿಮಾಬೇಗಂಳು ಉಪಚಾರೋಕ್ತಿಗಳನ್ನು ಹೇಳಿ, ಆಸನದಲ್ಲಿ ಕುಳ್ಳಿರಿಸಿದಳು ಸ್ವಲ್ಪ ಹೊತ್ತು ಇಬ್ಬರೂ ಮಾತನಾಡಲಿಲ್ಲ. ಫಾತಿಮಳೇ ಮಾತಿಗೆ ಮೊದಲು ಮಾಡಿದಳು. ರಾಜರೇ ! ತಾವು ಇಂದು ದಯ ಮಾಡಿಸಿದ ಕಾರ್ಯವಾವುದು ?

ಬೇಗಂ ಸಾಹೇಬರವರೇ ! ತಮ್ಮ ಕ್ಷಮೆಯನ್ನು ಕೇಳಲು ಬಂದಿದ್ದೇನೆ ಅಂದಿನ ಪ್ರಸಂಗವನ್ನು ತಾವು ಸಂಪೂರ್ಣವಾಗಿ ಮರೆತು ಬಿಡಿ. ಅಂದು ತಮ್ಮ ಮೇಲೆ ನಡೆಸಿದ ಅಪಚಾರವು ಕ್ಷಮಾತೀತವಾದುದು ಆ ಕೋಪದಲ್ಲಿ ಉದ್ರೇಕದಲ್ಲಿ ಮಹ ದೇವಸ್ವಾಮಿಯನ್ನು ನನ್ನ ಕೈಯ್ಯಿಂದಲೇ ಕೊಲೆಮಾಡಿದ್ದು ಘೋರಪಾತಕ ಆದರೂ ತಾವು ಇಂದು ಇಷ್ಟು ಪ್ರಸನ್ನರಾಗಿ ಭೇಟಿ ಇತ್ತದ್ದು ಆಶ್ಚರ್ಯವಾಗಿದೆ

ಬೇಗಂ—ರಾಜರೇ ತಪ್ಪು ನನ್ನದು ಸ್ತ್ರೀಯರು, ಅದರಲ್ಲಿಯೂ, ನನ್ನಂತಹ ಅಂತಃಪುರ ಸ್ತ್ರೀಯರು ಗಂಡು ಬೀರಿಯರಂತೆ ಈ ರಾಜಕೀಯದಲ್ಲಿ ಓಡಿಯಾಡಿದರೆ ತಮ್ಮಂತಹ ರಾಜಪುರುಷರೊಡನೆ ಸರ್ವದಾ ಹೊಡೆದಾಡುತ್ತಿದ್ದರೆ–ನನ್ನ ರೂಪ ಯೌವನಗಳನ್ನು ನೋಡಿ ತಮ್ಮಂತಹವರು ಭ್ರಾಂತರಾಗುವುದರಲ್ಲಿ ಆಶ್ಚರ್ಯವೇನಿದೆ. ತಪ್ಪೇನಿದೆ ಅಂದಿನ ಘಟನೆಗಳು ಘೋರವಾದುವುಗಳು ನಡೆದು ಹೋದ ಪ್ರಸಂಗ ! ಅದರಲ್ಲಿ ನಾನು ಕ್ಷಮಿಸುವುದೇನಿದೆ ಅಷ್ಟೇ ಅಲ್ಲ ಈಗ ನಾನು ತಮ್ಮ ಬಂದಿ. ಆದರೂ ತಾವು ದಯಮಾಡಿಸಿದ ಕಾರ್ಯವನ್ನು ಅರುಹಿರಿ.

ಬೇಗಂಸಾಹೇಬ ! ಸುಲ್ತಾನರವರು ಬರೆದು ಕಳಿಸಿರುವ ರಾಯಸವನ್ನು ನೀವು ನೋಡಿದಿರಲ್ಲವೇ ?

ಬೇಗಂ ಸಾಹೇಬಳು ನಗುತ್ತಾ ಹೌದು ರಾಜರೇ ! ನೋಡಿದೆ ಅದರಲ್ಲಿರುವ ವಿಷಯಗಳೊಂದೂ ಮುಖ್ಯವಾದವುಗಳಲ್ಲ. ನನ್ನ ವಿಷಯವೇ ಬಲು ಮುಖ್ಯವಾ

ದದು. ನೀವು ಹಿಡಿದು ನನ್ನನ್ನು ಸುಲ್ತಾನರಿಗೆ ಒಪ್ಪಿಸಬೇಕು ಇಲ್ಲದಿದ್ದರೆ ಅವರು ನಿಮ್ಮ ಮೇಲೆ ಯುದ್ಧಕ್ಕೆ ಬರುತ್ತಾರೆ ಅದೇ ತಾಜಾಕಲಂ

ರಾಜ—ಹೌದು, ರಾಣಿಯವರೇ, ಅದೇ ಅವರ ನಿರೂಪ.

ಬೇಗಂ—ಅದಕ್ಕೆ ಅಡ್ಡಿಯೇನಿದೆ! ನೀವು ನನ್ನನ್ನು ಹಿಡಿದು ಬಂಧನದಲ್ಲಿ ಇಟ್ಟೇ ಇದೀರಿ. ಹಾಗೆಯೇ ಸುಲ್ತಾನರಿಗೆ ಒಪ್ಪಿಸಿಬಿಟ್ಟರೆ ತಾವು ಸುಖವಾಗಿರ ಬಹುದು ಯುದ್ಧವೂ ತಪ್ಪುತ್ತದೆ.

ರಾಜ—ಬೇಗಂ ಸಾಹೇಬ್! ನಮ್ಮನ್ನು ಮರೆಹೊಕ್ಕವರನ್ನು ರಕ್ಷಣೆ ಮಾಡ ದಿರುವುದು ಈ ಕೊಡಗಿನ ರಾಜಮನೆತನಕ್ಕೆ ಸೂರ್ಯ ಚಂದ್ರರಿರುವ ಪರ್ಯಂತ ಕಳಂಕ ವನ್ನು ತರತಕ್ಕದ್ದು ಅಂಥಾ ಕೆಲಸವನ್ನು ನಾನೆಂದಿಗೂ ಮಾಡಲಾರೆ

ಬೇಗಂ—ಸರಿ! ನೀವು ಮಹಾವೀರರೆಂದು ತಿಳಿದೇ ಈ ರಾಜ್ಯಕ್ಕೆ ಬಂದ ಇನ್ನು ಸುಲ್ತಾನರ ನಿರೂಪದ ವಿಚಾರದಲ್ಲಿ ನನ್ನನ್ನು ಕೇಳತಕ್ಕದ್ದೇನಿದೆ?

ರಾಜ—ರಾಣಿಯವರೇ! ತಮ್ಮನ್ನು ಕೇಳತಕ್ಕದ್ದಿದೆ ಇದರಲ್ಲಿ ಏನೋ ಗೂಢ ವಾದ ಮರ್ಮವಿದೆ ಆ ಕಾಗದದಿಂದ ನನ್ನ ಮನಸ್ಸು ಸ್ವಲ್ಪವೂ ಚಲಿಸಲಿಲ್ಲ ಆದರೆ ಈ ಸಂಧ್ಯಾಕಾಲ ಆ ಹುಚ್ಚಿಯು ಆಡಿದ ಮಾತಿನಿಂದ ಸಂಶಯಾಸ್ಪದವಾಗಿದ ಸುಲ್ತಾನರವರು ನಿಮ್ಮನ್ನು ಒಲಿದು ಆಶಿಸುತ್ತಿದ್ದರೆ ಅದು ಮಹತ್ತರ ಸುಯೋಗ ವೆಂದೇ ಹೇಳಬೇಕು. ನಾನು ತಮ್ಮಂಥಾ ವೀರರಮಣಿಯನ್ನು ಬಹಳವಾಗಿ ಮೆಚ್ಚಿದೇನೆ. ತಮ್ಮ ರೂಪಲಾವಣ್ಯಗಳು ನನ್ನನ್ನು ಆಕರ್ಷಿಸಿವೆ. ತಮ್ಮ ಧೈರ್ಯ ಸಾಹಸಗಳು ತಮ್ಮಲ್ಲಿ ಗೌರವ ಬುದ್ಧಿಯನ್ನುಂಟು ಮಾಡಿವೆ. ತಾವು ಶ್ರೀರಂಗ ಪಟ್ಟಣಕ್ಕೆ ಹೋಗುವುದಾದರೆ ನಾನು ಸಂತೋಷದಿಂದ ಶ್ರೀರಂಗ ಪಟ್ಟಣದ ಸಾಮ್ರಾ ಟರ ಮಹಾರಾಣಿಯವರನ್ನು ಕಳುಹಿಸಿ ಕೊಡುವಂತೆ ಸಕಲ ಮರ್ಯಾದೆಗಳೊಡನೆ ರಾಜಧಾನಿಗೆ ಕಳುಹಿಸಿಕೊಡುವೆನು

ಬೇಗಂ—ರಾಜರೇ! ಹುಚ್ಚಿಯ ಮಾತನ್ನು ನಂಬಬೇಡಿರಿ ನಾನು ಟಿಪ್ಪೂ ಸುಲ್ತಾನರನ್ನು ಮೆಚ್ಚಿದ್ದರೆ ಎಂದೋ ನಾನಾಗಿ ಹೋಗಿ ಶ್ರೀರಂಗಪಟ್ಟಣದ ರಾಣಿ ಯಾಗುತ್ತಿದ್ದೆ ಇಲ್ಲಿ ಏಕೆ ಬರುತ್ತಿದ್ದೆ! ಆ ಭಾವನೆಯು ನನ್ನ ಮನಸ್ಸಿನ ಮೇಲೆ ಒಂದಾವರ್ತಿಯಾದರೂ ಪ್ರತಿಫಲಿಸಲಿಲ್ಲ ಶ್ರೀರಂಗಪಟ್ಟಣದ ಸುಲ್ತಾನರು ಎಂದೂ ನನ್ನಲ್ಲಿ ಮೋಹಗೊಂಡಿಲ್ಲ ನನ್ನ ಶರೀರದಲ್ಲಿರುವ ರೋಮ ಕೂಪಗಳಲ್ಲೆಲ್ಲಾ ಸುಲ್ತಾನರ ದ್ವೇಷವು ತುಂಬಿದೆ. ಆದರೆ ದೈವದ ಮೇಲೆ ಆಣೆಯಿಟ್ಟು ಹೇಳುತ್ತೇನೆ ಸುಲ್ತಾನರು ಎಂದೂ ಪರನಾರಿಯರನ್ನು ಅಪೇಕ್ಷಿಸುವ ಹೇಡಿಗಳಲ್ಲ. ಅವರು ಧೀರೋ ದಾತ್ತರು ತಾವು ರಾಜ ಧರ್ಮದಂತೆ ರಣರಂಗದಲ್ಲಿ ನಿಂತು ಯುದ್ಧ ಮಾಡುವು ದಾದರೆ ಮಾಡಿರಿ. ಇಲ್ಲದಿದ್ದರೆ ನನ್ನನ್ನು ಬಿಟ್ಟು ಬಿಡಿರಿ ನಾನು ಒಂದು ಕ್ಷಣ ಈ

ರಾಜ್ಯದಲ್ಲಿರುವುದಿಲ್ಲ ದೇಶಾಂತರ ಹೋಗುತ್ತೇನೆ ನಾನು ಹೇಗಾದರೂ ಈ ಜನ್ಮದಲ್ಲಿ ಸುಲ್ತಾನರ ಮೇಲಿನ ಹರವನ್ನು ತೀರಿಸಿ ಕೊಳ್ಳುತೇನೆ

ರಾಜ—ಬೇಗಂ ಸಾಹೇಬ್ ! ನಾನು ತಮ್ಮ ಮಾತನ್ನು ಅಕ್ಷರಶಃ ನಂಬುತ್ತೇನೆ. ಈ ಯುದ್ಧವನ್ನು ಲೋಕವು ಮೆಚ್ಚುವಂತೆ ಮಾಡುತ್ತೇನೆ. ಜಯಾಪಜಯಗಳು ಭಗವಂತನ ಅಧೀನ ಯುದ್ಧದಲ್ಲಿ ಸತ್ತರೆ ವೀರಸ್ವರ್ಗ ನನಗೆ ಜಯವಾದರೆ ತಾವು ನನ್ನನ್ನು ಮನಸಾರ ವರಿಸುವುದಾಗಿ ವಾಗ್ದಾನ ಮಾಡಿರಿ. ಅದರಿಂದ ನನ್ನ ಶಕ್ತಿಯು ನೂರುಮಡಿ ಹೆಚ್ಚುತ್ತದೆ

ಬೇಗಂ—ರಾಜರೇ ! ನೀವು ನನ್ನ ಹೃದಯವನ್ನರಿಯರಿ ನನ್ನ ಹೃದಯದಲ್ಲಿ ಕ್ರೋಧವು ತುಂಬಿದೆ ಈ ಹಾಳು ಹೃದಯವನ್ನು ಹುಡುಕಿ ನೋಡಿದರೆ, ಕ್ರೋಧ, ಹರ, ಛಲಗಳು ಹೊರತಾಗಿ ಕಾಮ ಮೋಹಗಳ ಸುಳಿವೇ ಇಲ್ಲ ಅಂದು ತಾವು ನನ್ನನ್ನು ಆಕ್ರಮಣ ಮಾಡಿದಾಗ, ಆ ಮಹದೇವಸ್ವಾಮಿಯ ಪ್ರಾಣಾಪಹಾರಮಾಡಿ ಆ ಅಂತಃಪುರವನ್ನು ಸ್ಮಶಾನವಾಗಿ ಮಾಡಿಹೋದಾಗ ಅಂದೇ ಪ್ರಾಣವನ್ನು ತೊರೆಯುತ್ತಿದ್ದೆ ಸುಲ್ತಾನರ ಮೇಲಿನ ಕ್ರೋಧದಿಂದ ಹರ ತೀರಿಸುವ ಹುಚ್ಚು ಆಶೆಯಿಂದ ಬದುಕಿಕೊಂಡೆ ನನ್ನಂತಹ ಹೆಣ್ಣು ರೂಪಿನ ರಾಕ್ಷಸಿಯಿಂದ ತಮಗೇನು ಸುಖ, ತಮಗೇನು ಆನಂದ.

ರಾಜ—ದೇವಿಯವರೇ ! ತಮ್ಮ ಮಾತು ನನಗೆ ಶೂಲದಂತೆ ಇರಿಯುತ್ತದೆ. ತಮ್ಮ ಹರವನ್ನು ನಾನು ಗೆಲ್ಲುತ್ತೇನೆ ಆಗ ಈ ಕ್ರೋಧವು ಮುಕ್ತಾಯವಾಗುತ್ತದೆ. ಇಂದು ತಾವು ದುಃಖೋದ್ವಿಗ್ನರಾಗಿದ್ದೀರಿ ನಾನಿಂದು ತಮ್ಮನ್ನು ಕೆರಳಿಸುವುದಿಲ್ಲ. ನಾನು ಸುಲ್ತಾನರವರೊಡನೆ ಯುದ್ಧವನ್ನು ಹೂಡುತ್ತೇನೆ ಆ ಯುದ್ಧವು ಸಿದ್ಧವಾಗಿ ರಣಕ್ಷೇತ್ರಕ್ಕೆ ಹೋಗುವಾಗ ಬಂದು ತಮ್ಮ ಅಪ್ಪಣೆಯನ್ನು ಬೇಡುತ್ತೇನೆ. ಅಂದು ತಾವು ಕಂಠದಲ್ಲಿ ಮಾಲೆಯನ್ನು ಹಾಕಿರಿ.

ಬೇಗಂಸಾಹೇಬಳ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ಅವಳು ಎರಡು ಹೆಜ್ಜೆ ಮುಂದಿಟ್ಟು ರಾಜರ ಕೈ ಹಿಡಿದುಕೊಂಡು ರಾಜರೇ ! ನೀವು ವೀರರು ಧೀರತೆಯಿಂದ ಯುದ್ಧ ಮಾಡಿರಿ ವಿಜಯಲಕ್ಷ್ಮಿಯು ನಿಮ್ಮ ಕೈ ಹಿಡಿಯುವಳು. ನಾನು ಆಮರಣಾಂತನಿಮಗೆ ಕೃತಜ್ಞಳಾಗಿರುವೆನು ಎಂದು ಹೇಳಿದಳು. ಕಂಠಧ್ವನಿಯು ಗದ್ಗದವಾಗುತ್ತಿತ್ತು. ಶರೀರವು ಕಂಪಿಸುತ್ತಿತ್ತು. ಫಾತಿಮಳ ಶರೀರವು ಜ್ಞಾನಶೂನ್ಯವಾಗಿ ಭೂಮಿಯ ಮೇಲೆ ಬೀಳುತ್ತಿತ್ತು. ರಾಜನು ಎರಡು ಕೈಗಳಿಂದಲೂ ಫಾತಿಮಳು ಬೀಳದಂತೆ ಹಿಡಿದುಕೊಂಡನು, ಅವಳನ್ನು ಎತ್ತಿಕೊಂಡು ಹೋಗಿ ಪರ್ಯಂಕದಲ್ಲಿ ಮಲಗಿಸಿದನು. ಭಯ-ಕ್ರೋಧ-ಉದ್ವೇಗಗಳಿಂದ ಫಾತಿಮಾಬೇಗಂ ಮೂರ್ಛಿತಳಾದಳು.

ರಾಜನು—"ಇರಲಿ, ಇವಳನ್ನು ನಾನು ಜಯಿಸುತ್ತೇನೆ ಇವಳಿಗೆ ನನ್ನಲ್ಲಿ ಪ್ರೇಮಾಂಕುರವಾಗಿದೆ ಅದನ್ನು ಇವಳು ಅರಿಯಲಿಲ್ಲ ಅದನ್ನು ಅರಿಯುವಂತೆ ಮಾಡುವೆನು. ಈ ಘಾತಿಮಳು ನನ್ನವಳು" ಎಂದುಕೊಂಡನು ದಾಸಿಯರನ್ನು ಕರದು ಅವಳನ್ನು ಉಪಚರಿಸುವಂತೆ ಹೇಳಿ ಅಪ್ಪಣೆಮಾಡಿ ಹೊರಟುಹೋದನು

ಅಂದಿನಿಂದ ಘಾತಿಮಳು ಸ್ವತಂತ್ರಳು ಅವಳಿಗೆ ಬಂಧನವಿಲ್ಲ ಅವಳು ಎಲ್ಲಿಗೆ ಬೇಕಾದರೂ ಹೋಗಬಹುಧು, ಯಾರಾದರೂ ಬಂದು ಅವಳನ್ನು ನೋಡಬಹುದು ಘಾತಿಮಳು ಎಲ್ಲಿ ಬೇಕಾದರೂ ಇರಬಹುದು

ಮಾರನೆಯ ದಿನವೇ ಅರಮನೆಯಲ್ಲಿ ಕೊಡಗಿನ ಮುಖಂಡರೆಲ್ಲರೂ ಬಂದು ಸೇರಿದರು ರಾಜನು ಅವರನ್ನೆಲ್ಲಾ ಆದರದಿಂದ ಬರಮಾಡಿಕೊಂಡನು ಮೈಸೂರಿನ ಸುಲ್ತಾನರು ಕೊಡಗಿನ ಮೇಲೆ ಯುದ್ಧಕ್ಕೆ ಬರುವ ಸಮಾಚಾರವನ್ನು ತಿಳಿಸಿದನು

ಕೊಡಗು ರಾಜ್ಯದ ವೀರರೇ ! ನೀವೆಲ್ಲರೂ ವೀರಕ್ಷಾತ್ರ ತೇಜಸ್ಸುಳ್ಳವರು ಸುಲ್ತಾನರು ನಮ್ಮ ಮೇಲೆ ಯುದ್ಧ ಮಾಡಿ ನಮ್ಮನ್ನು ದಾಸಾನುದಾಸರಂತೆ ಮಾಡಬೇಕೆಂದು ಹಠ ತೊಟ್ಟಿದ್ದಾರೆ ಅವರಿಗೆ ನಾವು ಭಯಪಟ್ಟರೆ ಇದುವರೆಗೂ ನಮ್ಮ ರಾಜ್ಯಕ್ಕೆ ಬಂದಿರುವ ಕೀರ್ತಿಯು ಅಳಿಸಿ ಹೋಗುತ್ತದೆ. ನೀವೆಲ್ಲರೂ ಯುದ್ಧಕ್ಕೆ ಸಿದ್ಧರಾಗಿರಿ. ನೀವು ಒಂದು ಲಕ್ಷ ಜನ ತರುಣರಿದ್ದೀರಿ ಸುಲ್ತಾನರು ಸ್ವತಃ ಪರಾಕ್ರಮಶಾಲಿಗಳಾದರೂ ನಮ್ಮನ್ನು ಜಯಿಸುವ ಶಕ್ತಿಯು ಅವರಿಗಿಲ್ಲ ಸುಲ್ತಾನರು ಒಂದು ಸಾರಿ ಈ ಕೊಡಗಿನವರ ಪರಾಕ್ರಮವನ್ನು ನೋಡಲಿ ನನಗೆ ಬಹುದಿನಗಳಿಂದ ಸುಲ್ತಾನರ ಮೇಲೆ ಒಂದು ಯುದ್ಧವನ್ನು ಮಾಡಲೇಬೇಕೆಂಬ ಹಠವಿತ್ತು ಈಗ ಇವರಾಗಿ ಕೊಡಗಿನ ಮೇಲೆ ಬಂದು ಬೀಳುತ್ತಿದಾರೆ ಇದರಿಂದ ನನಗೆ ಬಲುಸಂತೋಷವಾಯಿತು ಈ ಜೀವನವು ಶಾಶ್ವತವಲ್ಲ ನಮ್ಮ ಪರಾಕ್ರಮವು ಮಾತ್ರ ಆಚಂದ್ರಾರ್ಕವಾಗಿ ನಿಲ್ಲುತ್ತದೆ ಈ ನಶ್ವರ ಶರೀರದಮೇಲೆ ಆಶೆ ಇಡಬೇಡಿರಿ ಯುದ್ಧಕ್ಕೆ ಹೊರಡಿರಿ ಈ ಯುದ್ಧವನ್ನು ಜಯಿಸಿದರೆ ಇಡೀ ದಕ್ಷಿಣ ಹಿಂದೂಸ್ಥಾನವನ್ನು ಕೊಡಗರು ಆಳುತ್ತಾರೆ ಇಲ್ಲದಿದ್ದರೆ ನಮಗೆ ವೀರಸ್ವರ್ಗವು ಲಭಿಸುತ್ತದೆ "ಕ್ಷಣವಿಧ್ವಂಸಿನಿ ಕಾಯೇ ಕಾಚಿಂತಾ ಮರಣೇ ರಣೇ" ಎಂದು ಹೇಳಿದರು.

ರಾಜರ ಈ ಮಾತುಗಳು ಆ ಕೊಡಗಿನ ಮುಖಂಡರನ್ನು ಉತ್ತೇಜಿತರನ್ನಾಗಿ ಮಾಡಿದವು. ಅವರೆಲ್ಲರೂ ಮಹಾರಾಜರೇ ! ಯುದ್ಧ ಮಾಡಲೇ ಬೇಕು ಸುಲ್ತಾನರ ಮೇಲೆ ಯುದ್ಧವನ್ನು ಹೂಡಲೇ ಬೇಕು. ಕೊಡಗಿನ ಜಾಜ್ವಲ್ಯಮಾನವಾದ ಲಕ್ಷ ಪ್ರಾಣಗಳು ಹಾರುವವರೆಗೆ ಯುದ್ಧವನ್ನು ಮಾಡುತ್ತೇವೆ ಸುಲ್ತಾನರು ಎಂದೂ ಇಂತಹ ಯುದ್ಧವನ್ನು ನೋಡಿರಲಾರರು. ನಮ್ಮ ಕೊಡಗಿನ ಸಾಹಸವನ್ನು ನೋಡಲಿ!

ಎಂದು ಆನಂದೋತ್ಸಾಹಗಳಿಂದ ಹೇಳಿದರು ರಾಜರು ಎಲ್ಲರಿಗೂ ವೀಳಯಗಳನ್ನಿತ್ತು ಕಳಿಸಿದರು.

ರಾಯಸದವರನ್ನು ಕರೆಸಿ ಸುಲ್ತಾನರಿಗೆ ಪತ್ರವನ್ನು ಬರೆದರು

ಮೈಸೂರಿನ ಸುಲ್ತಾನರೇ !

ನಿಮ್ಮ ಪತ್ರವು ಕೈಸೇರಿತು ಪರಾಕ್ರಮಶಾಲಿಗಳಾದ ವೀರಭಟರಿಂದ ನಿಬಿಡ ವಾದ ಕೊಡಗು ರಾಜ್ಯಕ್ಕೆ ಇಂಥಾ ಆಜ್ಞಾ ಪತ್ರವನ್ನು ಕಳಿಸಲು ತಾವು ಚೆನ್ನಾಗಿ ಆಲೋಚನೆ ಮಾಡಿದ್ದರೆ ಉಚಿತವಾಗಿತ್ತು ಕೊಡಗಿನ ರಾಜ್ಯದಿಂದ ನಿಮಗೆ ಯಾವಾ ಗಲೂ ಕಪ್ಪಕಾಣಿಕೆಗಳನ್ನು ಕಳಿಸಲು ಕೊಡಗರು ಒಪ್ಪುವುದಿಲ್ಲ ನಾವು ಇಂಗ್ಲಿಷ ರೊಂದಿಗೆ ಸ್ನೇಹ ಮಾಡಿರುವುದು ನಿಜ ! ಅದರಲ್ಲಿ ಅತಿಶಯವೇನೂ ಇಲ್ಲ ಅವರಿಗೆ ನಾವು ಅಧೀನರಾಗಿಲ್ಲ ಸರಿಸಮ ಭಾವದಿಂದ ಸ್ನೇಹಮಾಡಿದೇವೆ ನಾವು ಸಂಪೂರ್ಣ ಸ್ವತಂತ್ರರು ನಮ್ಮ ಸ್ವಾತಂತ್ರ್ಯವನ್ನು ತಾವೂ ಒಪ್ಪಿಕೊಳ್ಳುವುದು ಮೈಸೂರಿಗೆ ಕ್ಷೇಮ ಏಕೆಂದರೆ, ಹಾಗೆ ನೀವೂ ನಮ್ಮೊಡನೆ ಸಮಾನಸ್ಕಂಧರಾಗಿ ಗೆಳೆತನವನ್ನು ಮಾಡಿ ಕೊಂಡರೆ ಇಂಗ್ಲಿಷರು ಮಲಬಾರಿನ ಕಡೆಯಿಂದ ಕೊಡಗು ಮಾರ್ಗವಾಗಿ ನಿಮ್ಮ ಮೇಲೆ ಬೀಳಲು ಎಂದಿಗೂ ಆಸ್ಪದವಾಗಿಲ್ಲ ಇದನ್ನೆಲ್ಲಾ ಕೂಲಂಕಷವಾಗಿ ಯೋಚನೆ ಮಾಡಿರಿ ಯುದ್ಧ ವಿಗ್ರಹಗಳು ತಮ್ಮ ಇಷ್ಟ ನಾವು ಎರಡಕ್ಕೂ ಸಿದ್ಧರೀದೆವೆ

ಬೇಗಂಸಾಹೇಬರ ವಿಷಯ ತಾವು ಬರೆಸಿರುವುದು ಬಹಳ ಅಸಮಾನಾಸ್ಪದ ವಾಗಿದೆ. ಮೈಸೂರಿನ ದೊಡ್ಡ ದಿವಾನರವರ ಪತ್ನಿಯವರನ್ನು ನೀವು ಬಹಳ ಅಗೌರವ ಪಡಿಸಿದ್ದೀರಿ. ಅವರನ್ನು ಒಬ್ಬ ಮಹಾಮಹಿಮರಾದ ಫಕೀರರು ಕರತಂದು ಆಶ್ರಯ ದಲ್ಲಿ ಬಿಟ್ಟು ಹೋದರು ಶರಣಾಗತ ರಕ್ಷಣೆಯು ನಮ್ಮ ಧರ್ಮ ಅವರ ಮೇಲೆ ತಾವು ಕೈ ಮಾಡುವುದು ಬಹಳ ಅಸಮಾನಾಸ್ಪದವಾದದ್ದು. ನಿಮ್ಮ ಮಂತ್ರಿಗಳು ಮಹಾ ಬುದ್ಧಿಶಾಲಿಗಳಾಗಿದ್ದು ತಾವು ಪರಾಕ್ರಮಶಾಲಿಗಳಾದ ವೀರಪುರುಷರೆಂದು ಪ್ರಖ್ಯಾತಿ ಇದ್ದು ತಾವು ಮಾನನೀಯ ಸ್ತ್ರೀಯಮೇಲೆ ಹರಸಾಧನೆ ಮಾಡುವುದು ತಮಗೆ ಮಹ ತ್ತರವಾದ ಕಳಂಕ ಇದನ್ನೆಲ್ಲಾ ಚೆನ್ನಾಗಿ ಪುನಃ ಪುನಃ ಯೋಚನೆ ಮಾಡಿರಿ ನಾವು ನಿಮ್ಮ ಸ್ನೇಹಿತರೆಂದು ಭಾವಿಸಿರಿ. ಹಿತಾಕಾಂಕ್ಷಿಗಳೆಂದು ಬಗೆಯಿರಿ

ಇತಿ ಶ್ರೀ ವೀರರಾಜ.

ರಾಜರು ಸುಲ್ತಾನರ ರಾಯಭಾರಿಗಳಾದ ಹವಿಾರ್ ಅಬ್ದುಲ್ಲಾಖಾನರನ್ನು ಅರಮನೆಗೆ ಮರ್‍ಯಾದೆಯಿಂದ ಕರೆಸಿದರು ಅವರಿಗೆ ಖಿಲ್ಲತ್ತುಗಳನ್ನು ಕೊಟ್ಟು ಗೌರವಿಸಿ ದರು ಸುಲ್ತಾನರಿಗೆ ಬರೆಸಿದ್ದ ಪತ್ರವನ್ನು ಅವರ ಕೈಯಲ್ಲಿ ಒಪ್ಪಿಸಿ ಅವರಿಗೆ ವೀಳಯ ವನ್ನು ಕೊಟ್ಟು ಕಳುಹಿಸಿಕೊಟ್ಟರು ಖಾನರವರು ಅತ್ಯಂತ ಸಂತುಷ್ಟರಾಗಿ ತಮ್ಮ

ಬಿಡಾರಕ್ಕೆ ತೆರಳಿದರು. ಆ ಮಾರನೆಯ ದಿನ ಪ್ರಾತಃಕಾಲ ರಾಜಧಾನಿಗೆ ಹಿಂದಿರುಗಿದರು

ಶ್ರೀರಂಗಪಟ್ಟಣದಲ್ಲಿ ಸುಲ್ತಾನರು ಕೊಡಗಿಗೆ ಹೋಗಿಬಂದ ರಾಯಭಾರಿಗೆ ಭೇಟಿ ಇತ್ತರು ಕೊಡಗಿನ ರಾಜನ ಪತ್ರವನ್ನು ಸ್ವೀಕರಿಸಿ ಓದಿಕೊಂಡರು ಈ ರಾಜನು ನಿರ್ಲಕ್ಷ್ಯದಿಂದ ನನಗೆ ಪತ್ರ ಬರೆದಿದಾನೆ ಬಹುಶಃ ಇದು ಇಂಗ್ಲಿಷರ ಪ್ರೇರೇಪಣೆಯೇ ಇರಬೇಕು. ಇರಲಿ, ಎಂದುಕೊಂಡು ಅಮೀರ್‌ಖಾನನ ಕಡೆ ತಿರುಗಿ ಫಾತಿಮಾ ಬೇಗಂರವರ ಸಮಾಚಾರವೇನು ? ಎಂದು ಪ್ರಶ್ನಿಸಿದರು

ಖಾವಿಂದ್, ಫಾತಿಮಾ ಬೇಗಂರವರು ಕೊಡಗಿನ ರಾಜರ ಅಂತಃಪುರದಲ್ಲಿಯೇ ಇದ್ದಾರೆ. ಈ ರಾಜರು ಮೈಸೂರಿಗೆ ಯುದ್ಧದ ವೀಳಯವನ್ನು ಕೊಡಲು ಅವರೇ ಕಾರಣರಿರಬಹುದು

ಖಾನರೇ ನೀವು ಬೇಗಂರವರನ್ನು ಭೇಟಿ ಮಾಡಿದರೇನು ?

ಇಲ್ಲ ! ಹುಜೂರ್ ! ಹುಚ್ಚಿ ಸಾವಿತ್ರಿಯು ಬೇಗಂಸಾಹೇಬರನ್ನು ಸಾವಕಾಶವಾಗಿ ನೋಡಿದ್ದಳು.

ಬೇಗಂಸಾಹೇಬಳಿಗೂ ರಾಜನಿಗೂ ಏನು ಸಂಬಂಧ !

ಖಾನನು ತಲೆಬಾಗಿಸಿದನು.

ಖಾನರೇ ನೀವು ಆ ವಿಷಯವನ್ನು ಅರಿಯಿರಿ. ಬೇಗಂಸಾಹೇಬಳು ಸಾಮಾನ್ಯ ಹೆಂಗಸಲ್ಲ ಎಳೆಂದಿಗೂ ಆ ರಾಜನನ್ನು ಮದುವೆಯಾಗಲು ಒಪ್ಪುವಳಲ್ಲ. ಏನೋ ಉಪಾಯದಿಂದ ಆ ರಾಜನನ್ನು ಉದ್ರೇಕಗೊಳಿಸಿದಾಳೆ ಅಥವಾ ಏನೋ ಪ್ರಬಲ ವಾದ ಆಶೆಯನ್ನು ತೋರಿದಾಳೆ !

ಹೇಗೇ ಆಗಲಿ ನಾವು ಕೊಡಗಿನ ಮೇಲೆ ಯುದ್ಧ ಮಾಡಲೇಬೇಕು ನಮ್ಮ ಆಜ್ಞೆಯಾಗಿದೆಯೆಂದು ಸೈನ್ಯಾಧಿಕಾರಿಗಳಿಗೆ ತಿಳಿಸಿರಿ. ನಾಳೆಯ ದಿನವೇ ಮೈಸೂರು ಸೈನ್ಯವು ಕೊಡಗಿಗೆ ಹೊರಡಲಿ ಮೀರ್ ನೀರುಲ್ಲಾ ಖಾನರವರು ಸರ್ವಾಧಿಕಾರಿಗಳಾಗಿ ಸೈನ್ಯವನ್ನು ನಡೆಸಿಕೊಂಡು ಹೋಗಲಿ ! ಈ ಬಾರಿ ಕೊಡಗು ಧೂಳೀಪಟವಾಗಿ ಹೋಗುವುದು ಎಂದು ಆಜ್ಞೆ ಇತ್ತರು.

## ಕೊಡಗಿನ ಪ್ರಳಯ

ಸುಲ್ತಾನರ ಆಜ್ಞೆಯಂತೆ ಕೊಡಗಿನ ಮೇಲೆ ಪ್ರಚಂಡ ಸೈನ್ಯವು ಹೊರಟಿತು. ಒಂದು ಲಕ್ಷ ಸೈನಿಕರು ಹೊರಟರು ಐದುಸಹಸ್ರ ಫ್ರೆಂಚ್ ಸೈನಿಕರು ಹಿಂಬಾಲಿಸಿದರು ಆನೆಗಳ ಗುಂಪು ಹೊರಟಿತು, ಅದರ ಮೇಲೆ ಗುಡಾರಗಳನ್ನು ಹೊರಿಸಿದರು ಒಂಟೆ

ಗಳ ಮೇಲೆ ಆಹಾರ ಸಾಮಗ್ರಿಗಳನ್ನು ಹೇರಿದರು ಒಂದು ಸಾವಿರ ಎತ್ತಿನ ಗಾಡಿಗಳು ಹೊರಟವು. ಕಾಲೇಗಾರರು, ಸೇವಕರು, ಅಡಿಗೆಯವರು, ಎಲ್ಲರೂ ಉತ್ಸಾಹದಿಂದ ಹೊರಟರು. ಫಿರಂಗಿಯ ಗಾಡಿಗಳು ಮುಂದೆ ಹೊರಟವು ಆಟದವರು ಹೊರಟರು. ಅಂಗಡಿಗಳವರು ಮುಂದೆ ಹೊರಟರು ಶ್ರೀರಂಗಪಟ್ಟಣದಿಂದ ಕೊಡಗಿನವರೆಗೆ ಉದ್ದಕ್ಕೆ ಸೈನಿಕರ ವಾಹಿನಿಯೇ ಕಾಣುತ್ತಿತ್ತು ಮುಂದುಗಡೆ ಸರ್ವ ಸೇನಾನಾಯಕ ರಾದ ಮೀರ್ ನೂರುಲ್ಲಾ ಖಾನರು ದರ್ಪದಿಂದ ಹೊರಟರು ಸುಲ್ತಾನರವರು ರಾಜ ಯೋಗ್ಯವಾದ ಮ್ಯಾನಾದಲ್ಲಿ ಕುಳಿತು ಎಲ್ಲ ಸೈನ್ಯಕ್ಕೂ ಹಿಂದೆ ಹೊರಟರು ಅವರ ಶಿಬಿರದಲ್ಲಿ ಮೀರ್ ಸಾದಕನು ಅವನ ಪರಿವಾರದೊಂದಿಗೆ ಕೊಡಗಿಗೆ ಪ್ರಯಾಣ ಮಾಡಿ ದನು ಈ ಸೈನ್ಯದ ರಣೋತ್ಸಾಹವನ್ನು ನೋಡಿ, ಪುರಜನರೆಲ್ಲರೂ ಕೊಡಗು ಮುಳುಗಿ ಹೋಯಿತು ಎಂದುಕೊಂಡರು.

ಈ ಸಮಾಚಾರವು ಒಂದೆರಡು ದಿನಗಳಲ್ಲಿಯೇ ಕೊಡಗಿನ ರಾಜರಿಗೂ ತಿಳಿ ಯಿತು ಅವರು ಯುದ್ಧ ಸನ್ನಾಹವನ್ನು ಬಹಳ ವ್ಯವಸ್ಥೆಯಿಂದ ಮಾಡಿದರು. ಪ್ರತಿ ಯೊಂದು ಕಣಿವೆಯಲ್ಲಿಯೂ ಫಿರಂಗಿಗಳನ್ನು ಇಡಿಸಿದರು ಗುಪ್ತಸೈನ್ಯವನ್ನು ಸಜ್ಜು ಗೊಳಿಸಿದರು ಬಯಲು ಪ್ರದೇಶದಲ್ಲಿ ದೊಡ್ಡ ದೊಡ್ಡ ಸೈನ್ಯಗಳನ್ನು ಸಿದ್ಧಗೊಳಿಸಿದರು. ವೀರರಾಜಪೇಟೆ, ಮಡಕೇರಿಗಳನ್ನು ರಕ್ಷಿಸಲು ಸೈನ್ಯಗಳನ್ನು ಸಿದ್ಧಗೊಳಿಸಿದರು. ಕೊಡಗು ರಾಜ್ಯದಲ್ಲೆಲ್ಲಾ ವೀರಧ್ವನಿಗಳು ಕೇಳಿಬರುತ್ತಿದ್ದವು. ಆ ಸಿದ್ಧತೆ, ಬಲ, ಪರಾಕ್ರಮಗಳನ್ನು ನೋಡಿದರೆ ಕೊಡಗಿಗೆ ವಿಜಯವು ಸಿದ್ಧ ಎಂಬಂತೆ ಕಂಗೊಳಿಸು ತ್ತಿದ್ದಿತು.

ಇಮಾಮನು ಇದೆಲ್ಲವನ್ನೂ ನೋಡಿಕೊಂಡು ಬಂದು ಫಾತಿಮಾ ಬೇಗಂರವ ರಿಗೆ ವರದಿ ಮಾಡುತ್ತಿದ್ದನು. ಬೇಗಂರವರ ಆನಂದಕ್ಕೆ ಪಾರವಿಲ್ಲ. ಇಂತಹುದೊಂದು ಸನ್ನಿವೇಶವನ್ನು ನೋಡಬೇಕೆಂದೇ ಅವರ ಪ್ರಾಣವು ತಲ್ಲಣಿಸುತ್ತಿದ್ದಿತು ಅವರು ಒಂದು ದಿನ ಪ್ರಾತಃಕಾಲ ವೀರರಾಜಪೇಟೆಯ ಅರಮನೆಯಿಂದ ಕಾಳೇಶ್ವರದ ಸಮೀ ಪದಲ್ಲಿದ್ದ ತಮ್ಮ ವಾಸಸ್ಥಾನಕ್ಕೆ ಪ್ರಯಾಣ ಮಾಡಿದರು.

ಮೈಸೂರಿನ ಸೈನ್ಯವು ಬಂದು ಕೊಡಗನ್ನು ಸುತ್ತುಗಟ್ಟಿತು. ಕೊಡಗರು ಬಲು ಸಾಹಸದಿಂದ ಯುದ್ಧ ಮಾಡುತ್ತಿದ್ದರು. ದಿನದಿನವೂ ಎರಡು ಸೈನ್ಯಗಳಿಗೂ ನಾನಾ ಪ್ರದೇಶಗಳಲ್ಲಿ ಯುದ್ಧವಾಗುತ್ತಿತ್ತು. ಇಪ್ಪತ್ತೆರಡು ದಿನಗಳು ಮಹಾಯುದ್ಧ. ಹತ್ತುದಿನಗಳು ಕಳೆದವು. ಬಹುಮಂದಿ ಕೊಡಗರು ವೀರಾವೇಶದಿಂದ ಯುದ್ಧ ಮಾಡಿ ಸತ್ತರು. ಮೈಸೂರಿನ ಸೈನ್ಯದಲ್ಲಿಯೂ ಬಲು ನಷ್ಟವಾಯಿತು ಎಷ್ಟೋ ಬಾರಿ ಸುಲ್ತಾನನಿಗೆ ಜಯದಲ್ಲಿ ಸಂದೇಹ ಬರುತ್ತಿತ್ತು ಕೊಡಗಿನ ರಾಜನು ಬಹು ಪರಾಕ್ರಮದಿಂದ ಯುದ್ಧವನ್ನು ಮುಂದೆ ಸಾಗಿಸುತ್ತಿದ್ದನು. ಹಾಗೆ ಸುಲ್ತಾನನಿಗೆ

ಎದುರು ನಿಂತು ಅಷ್ಟು ದಿನಗಳು ಯಾವ ರಾಜರೂ ಹೋರಾಡಲಿಲ್ಲ ಸುಲ್ತಾನನು ರಾಜನ ಪರಾಕ್ರಮವನ್ನು ನೋಡಿ ಮೆಚ್ಚಿದನು ರಾಜನು ತಾನಾಗಿ ಸಂಧಿಯನ್ನು ಬೇಡಿದರೆ ಯುದ್ಧವನ್ನು ನಿಲ್ಲಿಸೋಣವೆಂದು ಸುಲ್ತಾನನಿಗೆ ತೋರಿತ್ತು ಮಳೆಗಾಲವು ಸಮೀಪಿಸುತ್ತಿತ್ತು ಮಳೆ ಹಿಡಿದರೆ ಕೊಡಗಿನಲ್ಲಿ ಸುಲ್ತಾನರ ಸೈನ್ಯಕ್ಕೆ ಬಲು ಕಷ್ಟ ಈ ಸನ್ನಿವೇಶದಲ್ಲಿ ಮೀರ್‌ಸಾದಕನು ಈಗ ಬಿಟ್ಟು ಹೋಗಬಾರದೆಂದೂ, ಈ ಕೊಡಗರೆನ್ನು ಪೂರ್ತಿಯಾಗಿ ಸೋಲಿಸಿ ಸೆರೆಹಿಡಿಯಬೇಕೆಂದೂ ಸುಲ್ತಾನರನ್ನು ಪ್ರೇರೇಪಿಸುತ್ತಿದ್ದನು ಒಂದು ದಿನ ಮಧ್ಯಾಹ್ನ ಮೀರ್‌ಸಾದಕನು ಸುಲ್ತಾನರನ್ನು ಭೇಟಿ ಮಾಡಿದನು. ತನಗೆ ಫಾತಿಮಾಬೇಗಂ ಇರುವ ಸ್ಥಳವು ಗೊತ್ತಾಗಿದೆಯೆಂದೂ, ಅವಳನ್ನು ಭೇಟಿ ಮಾಡಿ, ಹೇಗಾದರೂ ಚಿತಾವಣೆ ಮಾಡಿ, ಮೋಸದಿಂದ ಅವಳನ್ನು ಸುಲ್ತಾನರ ಸಮ್ಮುಖಕ್ಕೆ ಕರೆತರುವುದಾಗಿಯೂ ಹೇಳಿದನು ಈ ಮಾತುಗಳನ್ನು ಕೇಳಿ ಸುಲ್ತಾನನಿಗೆ ಆಶ್ಚರ್ಯವಾಯಿತು ! ಆದರೂ ಮೀರ್‌ಸಾದಕನ ಉಪಾಯಗಳಲ್ಲಿ ಸುಲ್ತಾನರಿಗೆ ಬಹಳ ನಂಬಿಕೆ ಇತ್ತು ! ಮತ್ತು ಬೇಗಂಸಾಹೇಬಳನ್ನು ವಶಪಡಿಸಿಕೊಂಡು ಕೊಡಗು ರಾಜನನ್ನು ಹೇಗಾದರೂ ಮೋಸದಿಂದ ಕೊಲ್ಲಬಹುದೆಂದು ಸುಲ್ತಾನನು ಆಲೋಚಿಸಿದನು

ಮೀರ್‌ಸಾದಕನು ಹುಚ್ಚಿಯನ್ನು ಪ್ರೇರೇಪಿಸಿದನು. ಹುಚ್ಚಿಯು ಮೀರ್‌ಸಾದಕನ ಪಂಜರದ ಹಕ್ಕಿ ! ಅವಳು ಮೀರ್‌ಸಾದಕನನ್ನು ವೇಶಾಂತರದಲ್ಲಿ ಕರೆದೊಯ್ದಳು ಅಂದು ಬೇಗಂಸಾಹೇಬಳು ಕಾಳೇಶ್ವರಕ್ಕೆ ಬರುವಳೆಂದು ಹುಚ್ಚಿಗೆ ಗೊತ್ತಿತ್ತು. ಫಾತಿಮಳು ಹುಚ್ಚಿಯನ್ನು ಯಾವಾಗಲೂ ನಂಬುತ್ತಿದ್ದಳು ಮೀರ್‌ಸಾದಕನಿಗೆ ಹಾಲಕ್ಕಿ ಬುಡುಬುಡಿಕೆಯ ವೇಶವನ್ನು ಹಾಕಿ, ಕರೆದುಕೊಂಡು, ಹೋಗಿದ್ದಳು. ಆ ವೇಷವು ಅವನಿಗೆ ಬಲು ಚೆನ್ನಾಗಿ ಒಪ್ಪುತ್ತಿತ್ತು. ಅವನನ್ನು ಮಸೀದಿಯ ಹತ್ತಿರವಿದ್ದ ಫಕೀರನ ಗೋರಿಯ ಸಮೀಪದಲ್ಲಿ ಕುಳ್ಳಿರಿಸಿದಳು. ತಾನು ಬೇಗಂಸಾಹೇಬಳ ವಾಸಸ್ಥಾನಕ್ಕೆ ಹೋಗಿ ಹಾಡುವುದಕ್ಕೆ ಪ್ರಾರಂಭಿಸಿದಳು ಮೇಲುಗಡೆ ಬೇಗಂಸಾಹೇಬಳು ಕುಳಿತಿದ್ದಳು ಅವಳು ಹುಚ್ಚಿಯ ಕೊರಳನ್ನು ಕೇಳುತ್ತಲೇ ಅವಳನ್ನು ಮೇಲಕ್ಕೆ ಕರೆಸಿದಳು ಇಬ್ಬರೂ ಮಾತನಾಡತೊಡಗಿದರು ಯುದ್ಧದ ಮಾತುಗಳನ್ನು ಆಡಿದರು. ಜಯಾಪಜಯಗಳ ಮಾತು ಬಂತು !

ಬೇಗಂಸಾಹೇಬಳು — ಹುಚ್ಚಿ, ಯಾರಿಗೆ ಜಯವಾಗುವುದು ಹೇಳು !

ಹುಚ್ಚಿ—ದೇವಿಯವರೇ ! ಅದರಲ್ಲಿ ಸಂದೇಹವೇನು ? ನಮಗೇ ಜಯ, ಸುಲ್ತಾನರಿಗೆ ಜಯವಾಗುವುದು !

ಬೇಗಂಸಾಹೇಬಳು—(ಕ್ರೋಧದಿಂದ) ಬಾಯಿ ಮುಚ್ಚು ! ಸುಲ್ತಾನರಿಗೆ ಈ ಯುದ್ಧದಲ್ಲಿ ಅಪಜಯವು ಸಿದ್ಧ ! ಕೊಡಗಿನ ರಾಜರಿಗೆ ಜಯವಾಗುವುದು.

ಹುಚ್ಚಿ—(ನಗುತ್ತಾ) ಕೊಡಗಿನ ರಾಜರಿಗೆ ಜಯವಾದರೆ ನಿಮಗೇನು ಸಿಕ್ಕು ವುದು ? ನಾನು ಹೇಳಿದ ಹಾಗೆ ಕೇಳಿರಿ, ನಿಮಗೆ ಜಯವಾಗುವುದು

ಬೇಗಂ—ಹುಚ್ಚಿ, ನೀನು ಹೇಳುವುದೇನು?

ಹುಚ್ಚಿ—ಸುಲ್ತಾನರನ್ನು ಮದುವೆಯಾಗಿರಿ, ಎಂದು ನಕ್ಕಳು

ಬೇಗಂ—(ಕೋಪದಿಂದ) ಅಯ್ಯೋ ಕೆಟ್ಟಮುಂಡೆ, ಯಾವಾಗಲೂ ಮದುವೆ ಯಮಾತೆ, ಏಕೆ ಹೀಗೆ ಮಾಡುತ್ತಿ ? ಸುಲ್ತಾನರು ನನ್ನನ್ನು ಮದುವೆಯಾಗುವು ದಾಗಿ ಹೇಳುತ್ತಾರೇನು ?

ಹುಚ್ಚಿ—ಅವರೇಕೆ ಹೇಳುತ್ತಾರ ? ಅವರೂ ಹೇಳುವುದಿಲ್ಲ ನೀವೂ ಹೇಳು ವುದಿಲ್ಲ. ನಾನು ನಿಮ್ಮಿಬ್ಬರ ಮನಸ್ಸನ್ನೂ ಬಲ್ಲೆ ! ಇಲ್ಲದಿದ್ದರೆ ಇಷ್ಟು ಸೈನ್ಯವನ್ನು ಕಟ್ಟಿಕೊಂಡು, ಸುಲ್ತಾನರು ಕೊಡಗಿಗೇಕೆ ಬರುತ್ತಿದ್ದರು ಈ ಕೊಡಗಿನ ರಾಜನು ಮಾಡಿದ ಅಪರಾಧವೇನು ? ಆ ದೌಲತ್ ರಾಣಿಯವರ ಮೋಹದಿಂದ ಸುಲ್ತಾನರು ನಗರದ ಮೇಲೆ ದಂಡೆತ್ತಿ ಹೋದರು ಈಗ ನಿಮ್ಮ ಮೇಲಿನ ಮೋಹದಿಂದ ಈ ಕೊಡಗಿನ ಮೇಲೆ ಬಂದಿದ್ದಾರೆ ಬೇಗಂ ಸಾಹೇಬರೇ ! ನಿಮಗೆ ಗಂಡಸರ ಹೃದ ಯವೇ ತಿಳಿಯುವುದಿಲ್ಲವೇನು ?

ಬೇಗಂ—ಹಾಳಾಗಿ ಹೋಗು ! ಆ ಮಾತು ನನಗೆ ಬೇಡ ! ಯುದ್ಧವು ಏನಾ ಗುತ್ತೆ ಹೇಳು !

ಹುಚ್ಚಿ—ಮಶೀದಿಯ ಬಳಿಯಲ್ಲಿ ಯಾವನೋ ಒಬ್ಬ ಹಕ್ಕಿ ಶಾಸ್ತ್ರ ಹೇಳುವವ ನನ್ನು ನೋಡಿದೆ ಬನ್ನಿ, ಹೋಗಿ ನಾವಿಬ್ಬರೂ ಅವನನ್ನು ಕೇಳೋಣ.

ಬೇಗಂಸಾಹೇಬಳು ತಮಾಷೆಯನ್ನು ನೋಡೋಣವೆಂದು ಹೊರಟಳು ಹುಚ್ಚಿಯೂ ಹೊರಟಳು ದೂರದಿಂದ ವಿಾರ್‌ಸಾದಕನು ಅವರಿಬ್ಬರೂ ಬರುವುದನ್ನು ನೋಡಿದನು ಎಷ್ಟು ದಿವಸಗಳಾಯಿತು, ಈ ದಿವ್ಯ ಸುಂದರಿಯನ್ನು ನೋಡಿ ! ಎಷ್ಟು ಚೆನ್ನಾಗಿದ್ದಾಳೆ. ಅಂದಿಗಿಂತ ಇಂದು ನೂರು ಪಾಲು ಸೌಂದರ್ಯವು ಹೆಚ್ಚಿದೆ ಎಂದುಕೊಂಡನು ಅವರು ಸಮೀಪಕ್ಕೆ ಬರುತ್ತಲೆ ತಲೆ ಬಾಗಿಸಿಕೊಂಡನು ಹುಚ್ಚಿಯು ಬೇಗಂ ಸಾಹೇಬಳನ್ನು ದರದರ ಎಳೆದು ಕೈ ಹಿಡಿದು, ಅಯ್ಯಾ, ಶಾಸ್ತ್ರ ದವನೇ ! ಇವರ ಕೈ ನೋಡಿ ಶಾಸ್ತ್ರ ಹೇಳು ಬಹಳ ದುಡ್ಡು ಕೊಡಿಸುತ್ತೇನೆ

ಬುಡುಬುಡಿಕೆಯವನು—ತಾಯಿ ! ಕೈ ನೋಡಿ ಶಾಸ್ತ್ರಹೇಳುವವನಲ್ಲ ನಾನು. ನಾನು ಹೆಂಗಸರ ಕೈ ಮುಟ್ಟುವುದಿಲ್ಲ ನೀವು ಪ್ರಶ್ನೆ ಕೇಳಿರಿ, ನಾನು ಹೇಳುತ್ತೇನೆ.

ಹುಚ್ಚಿ — ಬೇಗಂಸಾಹೇಬರೇ, ನೀವೇ ಕೇಳಿ.

ಬೇಗಂಸಾಹೇಬಳು ನಗುತ್ತಾ ತಲೆಬಾಗಿ, ಶಾಸ್ತ್ರ ಹೇಳಯ್ಯಾ ! ಎಂದಳು.

ಶಕುನದವನು ಬುಡುಬುಡಿಕೆಯನ್ನು ಬಾರಿಸಿದನು ತಾಯಿ ! ನಿಮ್ಮ ಕಡೆಯು ವರಿಗೆ ಜಯವಾಗುತ್ತದೆ

ಬೇಗಂಸಾಹೇಬಳು ಹುಚ್ಚಿಗೆ ಒಂದೇಟು ಕೊಟ್ಟು, ನೋಡೆ, ಬಾಂದಿ, ನೋಡು ಶಕುನ ಹೇಗಿದೆ ! ಅಲ್ಲವೋ ಹುಚ್ಚ, ಸರಿಯಾಗಿ ಹೇಳು ಸುಲ್ತಾನರಿಗೆ ಜಯ ವಾಗುತ್ತದೋ, ಕೊಡಗಿನ ರಾಜರಿಗೆ ಜಯವಾಗುತ್ತದೋ ?

ತಾಯಿ ! ಕೊಡಗಿನ ರಾಜರಿಗೆ ಜಯವಾಗುತ್ತದೆ

ಬೇಗಂಸಾಹೇಬಳು ಗಹಗಹಿಸಿ ನಕ್ಕಳು ನೋಡು ಸಾವಿತ್ರಿ ಈಗೇನು ಹೇಳುವೆ!

ಸಾವಿತ್ರಿಯು ಆ ಶಾಸ್ತ್ರದವನನ್ನು ನೋಡಿ ಈ ರಾಣಿಯವರಿಗೆ ಮದುವೆಯಾಗು ತ್ತದೋ, ಇಲ್ಲವೊ, ಹೇಳು ?

ಮದುವೆಯಾಗುತ್ತದೆ. ಇನ್ನು ಒಂದು ವಾರದಲ್ಲಿ ಮದುವೆಯಾಗುತ್ತದ ಆದರೆ, ಈ ತಾಯಿಯವರಿಗೆ ಮನಸ್ಸಿಲ್ಲ ! ಆದರೂ ಮದುವೆಯೇನೋ ಸಿದ್ಧ. ಆಮೇಲೆ ಚೆನ್ನಾಗಿರುತ್ತಾರೆ.

ಬೇಗಂಳು ನಗುತ್ತಾ, ಮದುವೆಯ ಪ್ರಶ್ನೆ ಕೇಳಿದವಳು ಈ ಹುಚ್ಚಿ ! ಅವಳಿಗೆ ಮದುವೆಯಾಗುತ್ತದೆ ಆಗಲಿ ! ನನಗಲ್ಲ ಮದುವೆ ! ಬಾ ನನ್ನ ಜತೆಯಲ್ಲಿ ಬಾ ! ನಿನಗೆ ದುಡ್ಡು ಕೊಡುತ್ತೇನೆ, ಎಂದು ಬೇಗಂಸಾಹೇಬಳು ಮುಂದೆ ಮುಂದೆ ಹೋದಳು. ಬುಡುಬುಡಿಕೆಯವನು ಹಿಂದೆ ಹೋದನು ಮಹಡಿಯ ಮೇಲೆ ಬೇಗಂ ಸಾಹೇಬಳು ಅಂತಃಪುರಕ್ಕೆ ಹೋದಳು. ಬುಡುಬುಡಿಕೆಯವನೂ ಹೋದನು. ಹುಚ್ಚಿಯು ಕೆಳಗೇ ನಿಂತಳು. ಬೇಗಂಸಾಹೇಬಳು ಇನಾಮನ್ನು ತಂದು ಕೊಡು ವಾಗ ಅವನ ಮುಖವನ್ನು ದಿಟ್ಟಿಸಿ ನೋಡಿದಳು. ಏನೋ ಸಂದೇಹ ಬಂದಹಾಗಾ ಯಿತು. ಕ್ಷಣಹೊತ್ತು ಚಿಂತಿಸಿದಳು. ಗಪಗಪನೆ ನಕ್ಕಳು. ಶಾಸ್ತ್ರ ಹೇಳುವವರೇ ! ನೀವೆಲ್ಲಿ ಬಂದಿರಿ ! ಇಲ್ಲಿಗೆ ?

ಹೌದು ! ಬೇಗಂಸಾಹೇಬ್. ತಾವು ನನ್ನನ್ನು ಗುರ್ತಿಸಿದಿರಿ ! ನಾನು ತಮ್ಮ ಭೇಟಿಗಾಗಿಯೇ ಬಂದೆ !

ತಮ್ಮ ಭೇಟಿಯ ಉದ್ದೇಶವೇನು ? ಈ ಬಾರಿ ಯಾರ ಪ್ರಾಣವನ್ನು ಕಾಪಾ ಡಲು ಬಂದಿದ್ದೀರಿ ?

ಅಂತಹ ಮಹತ್ಕಾರ್ಯವೇನೂ ಇಲ್ಲ ! ತಮಗೊಂದು ಮಾತು ಹೇಳಿ ಹೋಗಲು ಬಂದಿದ್ದೇನೆ.

ನಿಮ್ಮ ಹುಚ್ಚಿ ಎಲ್ಲಿ ?

ಹಿಂದಿರುಗಿ ನೋಡಿದನು ಹುಚ್ಚಿ ಇಲ್ಲ !

ಬೇಗಂಳು ಹುಚ್ಚಿ, ಹುಚ್ಚಿ, ಬಾ, ಎಂದು ಗಟ್ಟಿಯಾಗಿ ಕರೆದಳು.

ಹುಚ್ಚಿಯು ಮೇಲಕ್ಕೆ ಬಂದಳು.

ನೋಡು, ಹುಚ್ಚಿ, ನಿನ್ನ ಬುಡುಬುಡುಕೆಯವನು ನಿನಗೇ ಶಾಸ್ತ್ರ ಹೇಳಲಿ. ಅಂದು ನೀವಿಬ್ಬರೂ ಸೇರಿ ನನ್ನನ್ನು ಮೋಸ ಮಾಡಿದಿರಿ! ಇಂದು ಏನು ಮಾಡಬಲ್ಲಿರಿ?

ಹುಚ್ಚಿಯು ನಗುತ್ತಾ, ತಾಯಿ! ಈ ಮೀರ್‌ಸಾದಕನು ತಮ್ಮ ದರ್ಶನ ಮಾಡ ಬೇಕೆಂದು ಬೇಡಿದ, ಕರೆದು ತಂದೆ!

ಒಳ್ಳೆಯದು. ಮೀರ್‌ಸಾದಕ್, ನೀನು ಏನು ಹೇಳಬೇಕೆಂದಿರುವೆಯೋ ಅದನ್ನು ಹೇಳು!

ದೇವಿಯರೇ! ಸುಲ್ತಾನರವರು ತಮ್ಮಲ್ಲಿ ಅನುರಕ್ತರಾಗಿದ್ದಾರೆ. ನೀವು ಅವ ರನ್ನು ವರಿಸಿದರೆ ಮಹಾರಾಣಿಯಾಗುವಿರಿ! ಈ ಯುದ್ಧವೂ ನಿಲ್ಲುತ್ತದೆ.

ಮೀರ್‌ಸಾದಕ್! ನಾನು ಮಹಾರಾಣಿಯಾದರೆ ನೀನೇನಾಗುವಿ?

ನಾನೇನಾಗಬೇಕು? ನನ್ನಷ್ಟಕ್ಕೆ ನಾನು ಸುಖವಾಗಿರುವೆನು

ನಾನು ಮಹಾರಾಣಿಯಾದರೆ, ನೀನು ಸಾಯುವವರೆಗೂ ಬಂದೀಖಾನೆಯಲ್ಲಿ ಇರಬೇಕಾಗುತ್ತದೆ ನಾನು ಸುಲ್ತಾನರವರಲ್ಲಿ ಕೇಳುವ ಮೊದಲನೆಯ ವರವೇ ಅದು!

ರಾಣಿಯವರೇ! ನಾನು ಬಂದೀಖಾನೆಯಲ್ಲಿದ್ದರೂ ಸಂತೋಷ! ತಾವು ಮಹಾ ರಾಣಿಯವರಾಗಬೇಕು

ಮೀರ್‌ಸಾದಕ್, ನಾನು ಮಹಾರಾಣಿಯಾಗಲಿ, ಆಗದಿರಲಿ ನಿನಗೆ ಬಂದೀ ಖಾನೆಯೇನೋ ಶಾಶ್ವತ! ಅದನ್ನು ತಪ್ಪಿಸಿಕೊಂಡು ಹೋಗಲಾರೆ! ಆಹಾ, ಎಂದಿನ ಅಪರಾಧಕ್ಕೆ ಎಂದು ಪ್ರಾಯಶ್ಚಿತ್ತ, ನೀನು ಈಗ ನನ್ನ ಬಂದಿ, ದಿವಾನರಿಗೆ ವಿಷ ಕುಡಿಸಿದಂತೆ ನಿನಗೆ ಈಗ ನಾನು ವಿಷ ಕುಡಿಸುತ್ತಿದ್ದೆ ವಿಷ ಕುಡಿಸಿದರೆ ಬೇಗ ಸಾಯುತ್ತಿ! ನೀನು ಉಪವಾಸ ಬಿದ್ದು ಕತ್ತಲೆಯ ಕೋಣೆಯಲ್ಲಿ ಸಾಯಬೇಕು. ಅಲ್ಲಿಯೇ ಸಿಲ್ಲು, ಹೆಜ್ಜೆಯನ್ನು ಮುಂದಿಟ್ಟರೆ, ಈ ಕ್ಷಣವೇ ಸಾಯುವಿ, ಎಂದು ಗದರಿಸಿ ದಳು

ಇಮಾಮನನ್ನು ಕರೆದಳು.

ಇಮಾಮನು ಬಂದು ಸಲಾಂ ಮಾಡಿದನು.

ಇವರು ಸುಲ್ತಾನರವರ ಪರಮಮಿತ್ರರು, ಇವರನ್ನು ನೆಲಮಾಳಿಗೆಯಲ್ಲಿ ಕತ್ತಲು ಕೋಣೆಯಲ್ಲಿಡಿಸು!

ಹುಚ್ಚಿ! ನಿನ್ನನ್ನು ಬಿಡುತ್ತಿದ್ದೆ. ಈಗ ನಿನ್ನನ್ನು ಬಿಡುವಂತಿಲ್ಲ. ಈಗ ನೀನು ಬಂದೀಖಾನೆಯಲ್ಲಿರಬೇಕು.

ಇಮಾಮನು ಇಬ್ಬರನ್ನೂ ನೆಲಮಾಳಿಗೆಯಲ್ಲಿ ಬಂದೀಖಾನೆಯಲ್ಲಿಟ್ಟನು.

ಫಾತಿಮಳು ಅತ್ಯಂತ ಸಂತೋಷದಿಂದ. ಈ ಪಾಪಿಯು ನನ್ನ ಮೇಲಿನ ಮೋಹ

ದಿಂದ ದಿವಾನರವರಿಗೆ ಮೃತ್ಯುವಾದ ಇಂದು ಅದೇ ಮೋಹದಿಂದ ಬಂದು ಅಗ್ನಿಯಲ್ಲಿ ಧುಮುಕಿದ ಅಂದಿನ ಮೃದು ಹೃದಯವು ಇಂದು ನನಗಿಲ್ಲ ಇಂದು ವಜ್ರಹೃದಯ ಹೀಗೆಯೇ ಒಂದಾನೊಂದು ದಿನ ಸುಲ್ತಾನರನ್ನು ಕಟ್ಟಿ ತರಿಸುತ್ತೇನೆ ಅಲ್ಲಿಗೆ ನನ್ನ ಹಠವು ಪೂರೈಸುತ್ತದೆ ಎಂದುಕೊಂಡಳು

ಫಾತಿಮಾಬೇಗಂಳು ಕೊಡಗಿನ ವಿದ್ಯಮಾನಗಳನ್ನೆಲ್ಲಾ ವಿವರವಾಗಿ ಬರೆದು ನಗರಕ್ಕ ದೌಲತ್‌ರಾಣಿಯವರಿಗೆ ಕಳುಹಿಸಿದಳು. ಇನಾಮನು ಈ ಕಾಗದವನ್ನು ತೆಗೆದುಕೊಂಡು ನಗರಕ್ಕೆ ಪ್ರಯಾಣ ಮಾಡಿದನು ನಗರಕ್ಕೆ ಕೊಡಗಿನ ಸಮಾಚಾರವೆಲ್ಲವೂ ಗೊತ್ತಾಗಿದ್ದಿತು ಸುಲ್ತಾನರು ಕೊಡಗಿನ ಮೇಲೆ ದಂಡೆತ್ತಿ ಹೊರಟಿದ್ದಾರೆಂಬ ಸುದ್ದಿಯೂ ಬಂದಿದ್ದಿತು ಇಮಾಮನು ನಗರಕ್ಕೆ ತಲಪಿ ಸೋನಾಮಹಲಿನಲ್ಲಿ ದೌಲತ್‌ರಾಣಿಯವರ ಭೇಟಿ ಮಾಡಿದನು ಫಾತಿಮಾಬೇಗಂರವರ ಪತ್ರವನ್ನು ಅರ್ಪಿಸಿದನು ದೌಲತ್‌ರಾಣಿಯವರು ಮಹಲಿನೊಳಕ್ಕೆ ಹೋಗಿ ರಾಧಾರಾಣಿಯವರನ್ನು ಕರೆದು ಆ ಪತ್ರವನ್ನು ತೋರಿಸಿದಳು ಇಬ್ಬರೂ ಆ ಪತ್ರವನ್ನು ಓದಿ ನಕ್ಕರು

"ಮಹಾರಾಣಿಯವರೇ !

ನಾನು ಕೊಡಗಿನಲ್ಲಿರುವುದು ತಮಗೆ ತಿಳಿದೇ ಇದೆ ಈಗ ಈ ಕೊಡಗಿಗೆ ಮಹದಾಪತ್ತು ಬಂದಿದೆ. ಸುಲ್ತಾನರು ನಾನಿಲ್ಲಿರುವುದನ್ನು ತಿಳಿದು, ನನ್ನನ್ನು ಹಿಡಿಸಿ ಕಳುಹಿಸಬೇಕೆಂದು ಕೊಡಗಿನ ರಾಜರಿಗೆ ಅಪ್ಪಣೆಯನ್ನು ಕಳುಹಿಸಿದರು ಶರಣಾಗತರಾದವರನ್ನು ಬಿಟ್ಟುಕೊಡುವುದಿಲ್ಲವೆಂದು ರಾಜರು ಸುಲ್ತಾನರಿಗೆ ಪ್ರತ್ಯುತ್ತರ ಬರೆಸಿದರು. ಈಗ ಕೊಡಗಿಗೂ ಸುಲ್ತಾನರವರಿಗೂ ಮಹಾಯುದ್ಧವು ಸನ್ನಿಹಿತವಾಗಿದೆ ಈ ದೇಶದ ಜನರು ಸುಲ್ತಾನರ ಮೇಲೆ ಬದ್ಧದ್ವೇಷವುಳ್ಳವರಾಗಿದ್ದಾರೆ ಅವರವರು ಯುದ್ಧ ಮಾಡಿದರೆ ನನಗೇನು ? ಇಲ್ಲಿಂದ ಬಿಟ್ಟು ಎಲ್ಲಿಗೂ ಹೊರಟುಹೋಗುತ್ತಿದ್ದ ನನ್ನ ಕಾರಣವಾಗಿಯೇ ಯುದ್ಧವಾಗುವುದರಿಂದ ನಾನು ಹಾಗೆ ತಪ್ಪಿಸಿಕೊಂಡು ಹೋಗುವಂತಿಲ್ಲ ಇತ್ತೀಚೆಗೆ ಒಂದು ಆಶ್ಚರ್ಯಕರವಾದ ಸಮಾಚಾರವು ಖಚಿತವಾಗಿ ತಿಳಿದುಬಂದಿದೆ. ಸುಲ್ತಾನರು ನನ್ನಲ್ಲಿ ಮೋಹಗೊಂಡು ಮದುವೆಯಾಗಬೇಕೆಂದಿದ್ದಾರೆಂದು ನನಗೆ ಹೇಳಿಕಳಿಸಿದ್ದಾರೆ ನನ್ನ ಹೃದಯದಲ್ಲಿ ಸುಲ್ತಾನರ ಮೇಲಿನ ದ್ವೇಷವು ಉರಿಯುತ್ತಲಿದೆ. ನಾನು ಅವರನ್ನು ಹೇಗೆ ಮದುವೆಯಾಗುವುದು ? ಯಾವುದೋ ಕಾರಣದಿಂದ ದಿವಾನರವರನ್ನು ಕೊಲ್ಲಿಸಿ, ಅವರ ಧರ್ಮಪತ್ನಿಯನ್ನು ಸುಲ್ತಾನರು ಮದುವೆಯಾದರೆ ಅವರಿಗೆ ಎಂಥಾ ಅಪಖ್ಯಾತಿ ಆದರಿಂದ ಮೈಸೂರು ರಾಜ್ಯಕ್ಕೆಷ್ಟು ಅಪಘಾತ ಈ ಅವಗಡದಿಂದ ತಾವು, ರಾಧಾರಾಣಿಯವರು ನೀವಿಬ್ಬರು ಮಾತ್ರ ನನ್ನನ್ನು ಉದ್ಧಾರ ಮಾಡಬಲ್ಲಿರಿ. ನಾನು ನನ್ನ ಮಾನಕ್ಕೆ ಭಂಗ

ಬರುವ ಸಂದರ್ಭವು ಬಂದರೆ ವಿಷಪಾನ ಮಾಡಿ ಪ್ರಾಣಬಿಡುವೆನು. ಇದೇ ತಮಗೆ ಅಂತ್ಯ ಪ್ರಣಾಮಗಳು"

ಈ ಪತ್ರವನ್ನು ಓದಿ ದೌಲತ್ ಮತ್ತು ರಾಧಾರಾಣಿಯವರು ಮಾತನಾಡಿ ಕೊಂಡರು ಇದೆಂತಹ ಪ್ರಮಾದ ಈ ಬೇಗಂ ಸಾಹೇಬಳು ನಾವೆಷ್ಟು ಹೇಳಿ ದರೂ ನಗರವನ್ನು ಬಿಟ್ಟು ಹೋದಳು ಇಂತಹ ಆಪತ್ತನ್ನು ತಂದುಕೊಂಡಳು. ಆದರೆ, ಸುಲ್ತಾನ್‌ರವರು ದಿವಾನರ ಪತ್ನಿಯನ್ನು ಮದುವೆಯಾಗುವುದೆಂದರೇನು ? ಇದಕ್ಕಾಗಿ ಕೊಡಗಿನ ಮೇಲೆ ಯುದ್ಧಕ್ಕೆ ಹೋಗುವುದೆಂದರೇನು ? ಹೀಗೆ ಇಬ್ಬರೂ ಮಾತನಾಡಿಕೊಂಡರು ಇಷ್ಟು ಮಾತು ಕಥೆಗಳಾದ ಮೇಲೆ ಅವರಿಬ್ಬರೂ ಕೊಡ ಗಿಗೆ ಹೋಗಬೇಕೆಂದೂ, ಈ ಯುದ್ಧವನ್ನು ತಪ್ಪಿಸಬೇಕೆಂದೂ, ಬೇಗಂಸಾಹೇಬಳ ಮಾನ ಸಂರಕ್ಷಣೆ ಮಾಡಬೇಕೆಂದೂ, ನಿಶ್ಚಯಿಸಿದರು ಇಮಾಮನನ್ನು ಕರೆಸಿ— 'ಬೇಗಂಸಾಹೇಬರಿಗೆ ತಿಳಿಸು. ದೌಲತ್‌ರಾಣಿಯವರು ಕೊಡಗಿಗೆ ಬರುತ್ತಾರೆ ಅವರು ಈ ಯುದ್ಧವನ್ನು ತಪ್ಪಿಸುತ್ತಾರೆ" ಎಂದು ಹೇಳಿಕಳುಹಿಸಿದರು. ಇಮಾಮನು ಆ ದಿನ ಅಲ್ಲಿಂದ ಪ್ರಯಾಣ ಮಾಡಿದನು

ದೌಲತ್‌ರಾಣಿಯವರೂ, ರಾಧಾರಾಣಿಯವರೂ ಮಿತಪರಿವಾರದೊಂದಿಗೆ ಕೊಡಗಿಗೆ ಹೊರಟರು ಆ ಯುದ್ಧಸಮಯದಲ್ಲಿ ದೌಲತ್‌ರಾಣಿಯವರೂ ರಾಧಾರಾಣಿ ಯವರೂ ಕೊಡಗಿನಲ್ಲಿ ಎಲ್ಲಿರಬೇಕು ? ಅವರುಗಳು ಕಾಳೇಶ್ವರಕ್ಷೇತ್ರಕ್ಕೆ ಹೋಗಿ ತಲಪಿದರು ಅಲ್ಲಿ ತ್ರಿಯಂಬಕಭಟ್ಟನನ್ನು ಭೇಟಿಮಾಡಿ ಅವನಿಗೆ ತಮ್ಮ ಪೂರ್ವೋ ತ್ತರಗಳನ್ನೆಲ್ಲಾ ಯಥೋಚಿತವಾಗಿ ತಿಳಿಸಿದರು ತಾವು ಕೊಡಗಿನ ರಾಜರಿಗೂ ಸುಲ್ತಾ ನರಿಗೂ ರಾಜೀ ಮಾಡಿಸಲು ಬಂದವರೆಂದೂ, ತಮಗೆ ಸಹಾಯ ಮಾಡಬೇಕೆಂದೂ ಪ್ರಾರ್ಥಿಸಿದರು. ಮಹಂತನಿಗೆ ಬಹಳ ಸಂತೋಷವಾಯಿತು. ಅವನಿಗೂ ಸಂಧಿಯಾ ಗಬೇಕೆಂಬ ಬಲವತ್ತರವಾದ ಅಭಿನಿವೇಶನವಿತ್ತು. ಅವನು ತನ್ನ ಕೈಲಾದ ಸಹಾಯ ವನ್ನೆಲ್ಲಾ ಮಾಡುವುದಾಗಿ ಭರವಸೆ ಇತ್ತನು ಜಂಗಮವಾಡಿಯಲ್ಲಿಯೇ ಆ ರಾಣಿಯವರುಗಳಿಗೂ, ಅವರ ಪರಿವಾರದವರಿಗೂ ವಸತಿಗೆ ಸ್ಥಳವನ್ನು ಮಾಡಿ ಕೊಟ್ಟನು. ರಾಣಿಯವರಿಬ್ಬರೂ ಕೊಡಗಿನಲ್ಲಿ ಅಲ್ಲಲ್ಲಿ ಸಂಚಾರ ಮಾಡಲು ಆರಂಭಿಸಿ ದರು. ಕೊಡಗರ ಉತ್ಸಾಹವು ಬಹಳವಾಗಿದೆಯೆಂದೂ, ಕೊಡಗಿನವರು ಸುಲ್ತಾನ ರೊಡನೆ ಸರಿಜೋಡಿ ಯುದ್ಧ ಮಾಡಬಲ್ಲರೆಂದೂ ತಿಳಿದುಕೊಂಡರು ಕೊಡಗಿನಲ್ಲಿ ಯುದ್ಧವೂ ಬಹಳ ಬಿರುಸಾಗಿ ನಡೆಯುತ್ತಿದೆಯೆಂದು ಗೊತ್ತಾಯಿತು ರಾಜರ ಗೂಢ ಚಾರರು ನಗರದಿಂದ ಯಾರೋ ಇಬ್ಬರು ರಾಣಿಯವರು ಬಂದು ಕಾಳೇಶ್ವರದಲ್ಲಿ ಇಳಿ ದಿದ್ದಾರೆಂದೂ, ಇವರು ಸುಲ್ತಾನರ ಕಡೆಯವರೆಂದೂ ಕಂಡುಹಿಡಿದು ರಾಜರಿಗೆ ತಿಳಿಸಿ

ದರು. ಈ ಸಮಾಚಾರವು ಬೇಗಂಸಾಹೇಬಳಿಗೂ ತಿಳಿಯಿತು. ಬೇಗಂಸಾಹೇಬಳು ಲಗುಬಗೆಯಿಂದ ಕಾಳೇಶ್ವರಕ್ಕೆ ಬಂದು ರಾಣಿಯವರ ಭೇಟಿ ಮಾಡಿದಳು

ಬೇಗಂಸಾಹೇಬಳ ಯೋಗಕ್ಷೇಮವನ್ನೆಲ್ಲಾ ಯಥಾಯೋಗ್ಯವಾಗಿ ವಿಚಾರಿಸಿದರು

ರಾಧಾರಾಣಿಯು—ಬೇಗಂಸಾಹೇಬ್ ! ತಮ್ಮ ಕಾಗದದಂತೆ ನಾವು ಬಂದಿದ್ದೇವೆ. ತಾವು ಭಯಪಡಬೇಕಾದ ಅಗತ್ಯವಿಲ್ಲ.

ಬೇಗಂ—ರಾಣಿಯವರೇ, ಈಗ ನನಗೆ ಧೈರ್ಯ ಬಂತು

ರಾಧಾ— ಇಲ್ಲಿನ ಸಮಾಚಾರಗಳನ್ನು ನೋಡಿದರೆ ನಿಮಗೆ ಭಯವೇ ಇರುವಂತೆ ತೋರುವುದಿಲ್ಲ ನೀವು ಸರ್ವಸ್ವತಂತ್ರರಾಗಿದ್ದೀರಿ

ಬೇಗಂ—ಭಯವಿಲ್ಲದೇ ಏನು ? ರಾಣಿಯವರೇ ! ಸುಲ್ತಾನರವರು ಅಪಾರ ಸೈನ್ಯದೊಂದಿಗೆ ಬಂದಿದ್ದಾರೆ ನನ್ನನ್ನು ಹಿಡಿಯುವುದಕ್ಕೇ ಬಂದಿದ್ದಾರೆಂದು ಸುದ್ದಿಯು ಬಂದಿದೆ.

ರಾಧಾ—ನೀವು ಇಲ್ಲಿ ಮಹಾರಾಣಿಯಾಗಿದ್ದೀರೆಂದು ಬಲವಾಗಿ ವರ್ತಮಾನವಿದೆ ಎಂದು ನಕ್ಕಳು

ಬೇಗಂ—(ಅಳುತ್ತಾ) ರಾಣಿಯವರೇ ! ಅದು ಸುಲ್ತಾನರವರು ನನ್ನ ಮೇಲೆ ತುಫಾನು ಎಬ್ಬಿಸಿದ್ದಾರೆ. ಈ ಕೊಡಗಿನ ರಾಜನು ನನ್ನನ್ನು ಸೆರೆಯಲ್ಲಿಟ್ಟಿದ್ದ. ಸುಲ್ತಾನರು ಯುದ್ಧಕ್ಕೆ ಬಂದಮೇಲೆ ಭಯದಿಂದ ನನ್ನನ್ನು ಬಿಡುಗಡೆ ಮಾಡಿದನು. ನಾನು ಈ ರಾಜನನ್ನು ಮದುವೆಯಾಗಿದ್ದೇನೆಂಬ ಅಪವಾದವನ್ನು ಸುಲ್ತಾನರ ಕಡೆಯವರು ದೇಶದಲ್ಲೆಲ್ಲಾ ಹಬ್ಬಿಸಿದ್ದಾರೆ ತಾವು ನನ್ನನ್ನು ಉದ್ಧಾರ ಮಾಡಬೇಕು.

ದೌಲತ್—ಬೇಗಂಸಾಹೇಬ್ ! ಅಂತಹ ಅಪವಾದಗಳಿಗೆ ಭಯಪಡುವ ಕಾರಣವಿಲ್ಲ. ನೀವು ನಮ್ಮ ಜೊತೆಯಲ್ಲಿರಿ ಸುಲ್ತಾನರು ನಿಮ್ಮನ್ನು ಏನೂ ಮಾಡಲಾರರು.

ಬೇಗಂ—ದೌಲತ್‌ರಾಣಿಯವರೇ, ತಮ್ಮಷ್ಟು ಧೈರ್ಯಪರಾಕ್ರಮಗಳು ನನಗಿಲ್ಲ. ಸುಲ್ತಾನರು ಈ ಕಾಳೇಶ್ವರವನ್ನು ಧ್ವಂಸಮಾಡುತ್ತಾರೆಂದು ವದಂತಿಯು ಹರಡಿದೆ. ಈ ಸ್ಥಳದಲ್ಲಿ ನಾನು ಇರಲಾರೆ. ನನ್ನ ವಾಸಸ್ಥಳಕ್ಕೆ ತಮ್ಮ ಸವಾರಿಯು ಬಿಜಯಮಾಡಿದರೆ ಧನ್ಯಳಾಗುತ್ತೇನೆ

ದೌಲತ್—ಇಲ್ಲ! ಬೇಗಂಸಾಹೇಬ್, ಸುಲ್ತಾನರು ಈ ಕಾಳೇಶ್ವರ ಕ್ಷೇತ್ರದ ಮೇಲೆ ಧಾಳಿ ನಡೆಸುವುದಾದರೆ ನಾವು ಇಲ್ಲಿಯೇ ಇರಬೇಕು. ರಾಧಾರಾಣಿಯವರ ಸಮಕ್ಷಮ ಸುಲ್ತಾನರು ಈ ಕ್ಷೇತ್ರಕ್ಕೆ ಕಾಲಿಡಲು ಅವರಿಗೆಷ್ಟು ಧೈರ್ಯ ಬೇಕು. ಆಗ

ಸುಲ್ತಾನರು ರಾಧಾರಾಣಿಯವರೊಡನೆ ಪ್ರತ್ಯಕ್ಷ ನಿಂತು ಯುದ್ಧ ಮಾಡಬೇಕಾಗು ತ್ತದೆ. ಒಳ್ಳೆಯದು ! ನೀವು ಇಲ್ಲಿರಲು ಭಯಪಡುವುದಾದರೆ ನಿಮ್ಮ ಆವಾಸದಲ್ಲಿಯೇ ಇರಿ. ನಿಮ್ಮ ರಕ್ಷಣೆಯು ನಮಗೆ ನೇರಿದ್ದು ಫಾತಿಮಳು ಸಂತೋಷಪಟ್ಟುಕೊಂಡು ಆವಾಸಕ್ಕೆ ತೆರಳಿದಳು

ಫಾತಿಮಳು ತನ್ನ ಆವಾಸಕ್ಕೆ ಸೇರಿದ ಸ್ವಲ್ಪ ಹೊತ್ತಿನಲ್ಲಿಯೇ ಇಮಾಮನು ಕುದುರೆಯನ್ನು ಓಡಿಸಿಕೊಂಡು ಬಂದು ಬಹಳ ಆತುರದಿಂದ ಬೇಗಂಸಾಹೇಬಳ ಭೇಟಿ ಮಾಡಿದನು ಅವನು—ಬೇಗಂಸಾಹೇಬ್ ! ಪ್ರಮಾದವು ಸನ್ನಿಹಿತವಾಗಿದೆ ದೌಲತ್ ರಾಣಿಯವರೂ, ರಾಧಾರಾಣಿಯವರೂ ಕಾಳೇಶ್ವರದಲ್ಲಿದ್ದಾರೆಂದು ಕೊಡಗಿನ ರಾಜರಿಗೆ ತಿಳಿಯಿತು. ಅವರು ಆ ಇಬ್ಬರು ರಾಣಿಯವರೂ ಸುಲ್ತಾನರ ಕಡೆಯವರೆಂದೂ, ಅವ ರನ್ನು ಇಂದಿನ ರಾತ್ರಿಯೇ ಸೆರೆಹಿಡಿಯಬೇಕೆಂದೂ ರಾಜರು ಏರ್ಪಾಡು ಮಾಡಿದ್ದಾರೆ ಪ್ರಮಾದ ! ಪ್ರಮಾದ ! ಎಂದು ಹೇಳಿದನು

ಫಾತಿಮಳು ಭಯಪಡಲಿಲ್ಲ ! ಅವಳು ಆ ದಿನವೇ ಬಂದು ದರ್ಶನ ಕೊಡ ಬೇಕೆಂದು ರಾಜರಿಗೆ ದೂತರ ಮುಖಾಂತರ ಹೇಳಿ ಕಳುಹಿಸಿದಳು

ಈ ವಾರ್ತೆಯನ್ನು ಕೇಳಿ ರಾಜರಿಗೆ ಆಶ್ಚರ್ಯವಾಯಿತು. ಫಾತಿಮಾಬೇಗಂ ರವರನ್ನು ಮೊದಲು ಎಲ್ಲಿ ನೋಡಿದನೋ ಇಂದು ಅದೇ ಸ್ಥಳದಲ್ಲಿ ಅವರು ಭೇಟಿಗೆ ಹೇಳಿಕಳುಹಿಸಿದ್ದಾರೆ ಸಹಸ್ರ ಸಹಸ್ರ ಮುಖವಾಗಿ ಆವನ ಆಶಾಕಲ್ಪನೆಗಳು ಮೂಡಿ ದವು ಎಷ್ಟೋ ದಿನಗಳಿಂದ ಕಾದಿದ್ದ ಇಷ್ಟಾರ್ಥವು ಇಂದು ಪೂರೈಸುತ್ತದೆಂದು ಕೊಂಡನು ಫಾತಿಮಳ ಅನುಗ್ರಹವು ಇಂದು ತನ್ನ ಮೇಲೆ ಸಂಪೂರ್ಣವಾಗಿ ಆಗಿದೆ ಯೆಂದು ನಿಶ್ಚಯಿಸಿದನು ಸಂಧ್ಯಾಕಾಲಕ್ಕೆ ಸರಿಯಾಗಿ ಆ ಸ್ಥಳಕ್ಕೆ ಬಂದು ಸೇರಿದನು. ತಲೆಬಾಗಿಲಿನಲ್ಲಿ ಇಮಾಮನು ನಿಂತಿದ್ದನು ರಾಜರಿಗೆ ಬಗ್ಗಿ ಸಲಾಂ ಮಾಡಿ ಒಳಗಡೆ ದಾರಿಯನ್ನು ತೋರಿಸಿದನು ಹೊರಗಿನ ಹಜಾರದಲ್ಲಿ ಮಾಲತಿಯು ನಿಂತಿದ್ದಳು. ಅವಳು ಆ ರಾಜನನ್ನು ಹೆಣ್ಣು ಸಿಂಹದಂತೆ ಬಿರುಗಣ್ಣಿನಿಂದ ನೋಡುತ್ತಿದ್ದಳು. ರಾಜನು ಅಪ್ರತಿಭನಾಗಿ ಅವಳ ಕಣ್ಣುಗಳನ್ನು ನೋಡಿದನು ಆ ತೇಜೋವಿರಾಜ ಮಾನವಾದ ಮುಖಪದ್ಮವನ್ನು ನೋಡಿದನು ಚಿನ್ನದ ಪ್ರತಿಮೆಯಂತಿರುವ ಆ ಶರೀರ ವನ್ನು ನೋಡಿದನು ಆ ಕಪ್ಪನೆಯ ಕೇಶಪಾಶವನ್ನು ಕಂಡನು ಆ ರೂಪರಾಶಿಯನ್ನು ಗೈರಿಕವಸನವು ಬೆಳಗುತ್ತಿತ್ತು ಹಣೆಯಲ್ಲಿ ವಿಭೂತಿಯನ್ನು ನೋಡಿದನು ಅವಳನ್ನು ನೋಡುತ್ತ ರಾಜನು ಮೈಮರೆತು, ಆ ಹಜಾರದಲ್ಲಿಯೇ ಸ್ತಬ್ಧನಾಗಿ ನಿಂತನು ಇವ ಳಾರು ? ಎಲ್ಲಿಂದ ಬಂದಳು ? ಎಂದುಕೊಂಡನು ಮಹಡಿಯ ಮೇಲಿನಿಂದ ಫಾತಿಮಾ ಬೇಗಂರವರು ಮೆಟ್ಟಲುಗಳನ್ನು ಇಳಿಯುತ್ತಿರುವ ಕಾಲುಸರದ ಸದ್ದು ಕೇಳಿಸಿತು. ರಾಜನು ಎಚ್ಚೆತ್ತು, ಮುಂದೆ ಹೆಜ್ಜೆಯನ್ನು ಇಡುತ್ತಿದ್ದನು. ಹಿಂದೆ ಹಿಂದೆ ತಿರುಗಿ

ನೋಡುತ್ತ ಮಹಡಿಯ ಮೆಟ್ಟಿಲುಗಳ ಹತ್ತಿರ ಹೋಗಿ ಮೆಟ್ಟಿಲುಗಳನ್ನು ನಿಧಾನವಾಗಿ ಹತ್ತಿದನು ಮಾಲತಿಯು ಕಲ್ಲುಪ್ರತಿಮೆಯಂತೆ ನಿಂತು ಅದೇ ಬಿರುಗಣ್ಣಿನಿಂದ ರಾಜನನ್ನು ನೋಡುತ್ತಿದ್ದಳು ರಾಜನು ಕಣ್ಣುಮರೆಯಾಗಿ ಮೇಲಿನ ಹಜಾರಕ್ಕೆ ಹೊರಟು ಹೋದನು

ರಾಜನು ಮಹಡಿಯ ಮೇಲಿನ ಹಜಾರದಲ್ಲಿ ಫಾತಿಮಾಬೇಗಂರವರನ್ನು ಕಂಡನು ರಾಜನು ಬೇಗಂರವರ ದಿವ್ಯವಾದ ಪ್ರಸನ್ನ ಮುದ್ರೆಯನ್ನು ನೋಡಿದನು ಫಾತಿಮಳು ಕೇಸರೀಬಣ್ಣದ ತೆಳುವಾದ ಸೀರೆಯನ್ನುಟ್ಟಿದ್ದಳು ಕಾವಿಯ ಬಣ್ಣದ ಮೇಲುದುವನ್ನು ಹೊದ್ದಿದ್ದಳು ಕಲಾಪತ್ತಿನ ಬಿಳಿಯ ಕಂಚುಕವನ್ನು ಧರಿಸಿದ್ದಳು ಕಿವಿಯಲ್ಲಿ ದೊಡ್ಡ ಮುತ್ತಿನ ಲೋಲಕವು ಪ್ರಕಾಶಿಸುತ್ತಿತ್ತು ಕೊರಳಲ್ಲಿ ಮುಕ್ತಾಹಾರ ಕೈಗಳಲ್ಲಿ ದಾಳಿಂಬೆಯ ಬೀಜಗಳಂತೆ ರಕ್ತವರ್ಣವನ್ನು ಕಾರುತ್ತಿರುವ ಕೈ ಬಳೆಗಳು ನಡುವಿನಲ್ಲಿ ಬಿಗಿಯಾಗಿ ಕಟ್ಟಿದ ವಜ್ರದ ನಡುಕಟ್ಟು ಕಾಲಿನಲ್ಲಿ ಚಿನ್ನದ ಸರಪಣಿ ಬೆರಳುಗಳಲ್ಲಿ ದೊಡ್ಡ ಪಚ್ಚೆಯುಂಗುರ ರಾಜನು ನೋಡಿ ನೋಡಿ ದಣಿಯದೇ ಹೋದನು ಇದೆಂತಹ ಮೋಹಿನಿಯ ರೂಪ ಎಂತಹ ಮನೋಹರ ಸೌಭಾಗ್ಯ. ಈ ಫಾತಿಮಳು ಇಂತಹ ಜಗನ್ಮೋಹಿನಿಯುಲ್ಲದಿದ್ದರೆ, ಆ ಸುಲ್ತಾನನು ಇಷ್ಟು ಸೈನ್ಯ ಸನ್ನಾಹದಿಂದ ಈ ಕೊಡಗಿಗೆ ಬರುತ್ತಿದ್ದನೆ

ಈ ಮನೋಹರವಾದ ವನಮಧ್ಯದಲ್ಲಿ, ಈ ಪ್ರಕಾಶಮಾನವಾದ ಸೌಧದಲ್ಲಿ, ಈ ಮೋಹಿನಿಯ ಸಾನ್ನಿಧ್ಯದಲ್ಲಿ ನಾನು ಇಂದು ಸ್ವರ್ಗದಲ್ಲಿದ್ದೇನೆ ಎಂದುಕೊಂಡನು ಬೇಗಂಸಾಹೇಬಳು ರಾಜನನ್ನು ಆದರದಿಂದ ಆಸನದಲ್ಲಿ ಕುಳ್ಳಿರಿಸಿದಳು ರಾಜನು, ದೇವಿಯವರೇ ! ಇಂದು ನನ್ನನ್ನು ಕರೆಕಳಿಸಿದ ಅತಿಶಯವೇನು ?

ಬೇಗಂಸಾಹೇಬಳು ಮಂದಹಾಸವನ್ನು ಬೀರುತ್ತಾ—ರಾಜರವರೇ ! ಯಾರೋ ಇಬ್ಬರು ರಾಣಿಯವರು ಕೊಡಗಿಗೆ ಬಂದಿದ್ದಾರೆಂದು ಸಮಾಚಾರವನ್ನು ಕೇಳಿದೆ ಅವರ ವಿಷಯದಲ್ಲಿ ತಮ್ಮ ಅಭಿನಿವೇಶವು ಹೇಗಿದೆಯೋ ತಿಳಿದುಕೊಳ್ಳೋಣವೆಂದು ತಮ್ಮ ಭೇಟಿಯನ್ನು ಪ್ರಾರ್ಥಿಸಿದೆ

ರಾಜ—ಬೇಗಂರವರೇ ! ನಮಗೆ ಆ ಸಮಾಚಾರವು ಈ ದಿನ ಪ್ರಾತಃಕಾಲದಲ್ಲಿ ತಿಳಿಯಿತು ಅವರ ಆಗಮನವು ಆಶ್ಚರ್ಯವನ್ನುಂಟುಮಾಡಿದೆ ಅವರುಗಳು ನಗರದ ರಾಣಿಯವರಂತೆ ತಮಗೆ ಅವರ ಪರಿಚಯವಿರಲೇಬೇಕು

ಬೇಗಂ—ಹೌದು ! ಅವರಿಬ್ಬರನ್ನೂ ನಾನು ಚೆನ್ನಾಗಿ ಬಲ್ಲೆ ಒಬ್ಬರ ಹೆಸರು ದೌಲತ್‌ರಾಣಿ, ಮತ್ತೊಬ್ಬರ ಹೆಸರು ರಾಧಾರಾಣಿ ನಾನು ಕೆಲವು ಕಾಲ ಅವರ ರಕ್ಷಣೆಯಲ್ಲಿದ್ದೆ.

ರಾಜ—ಅವರಿಬ್ಬರೂ ಸುಲ್ತಾನರ ಕಡೆಯವರೆಂದು ಕೇಳಿದ್ದೇನೆ.

ಬೇಗಂ—ಹೌದು ! ಇಬ್ಬರೂ ಸುಲ್ತಾನರ ಕಡೆಯುವರು. ನಗರದ ಯುದ್ಧದಲ್ಲಿ ಅವರಿಂದಲೇ ಸುಲ್ತಾನರು ಬದುಕಿಕೊಂಡರು ಇಲ್ಲದಿದ್ದರೆ, ಇಯುಜ್‌ಖಾನರು ಆ ಸುಲ್ತಾನರ ತಲೆಯನ್ನು ಅಂದೇ ಹಾರಿಸುತ್ತಿದ್ದರು

ರಾಜ—ತಾವು ಅವರೊಡನೆ ಇದ್ದು ಅವರನ್ನು ತ್ಯಜಿಸಿ ಬಂದುದೇಕೆ ?

ಬೇಗಂ—ನಾನು ಸುಲ್ತಾನರ ಪರಮದ್ವೇಷಿ ಅವರು ಸುಲ್ತಾನರ ಪ್ರಿಯಬಂಧುಗಳು ಆದ್ದರಿಂದಲೇ ಅವರ ಸಾನ್ನಿಧ್ಯವನ್ನು ತೊರೆದು ಬಂದೆ

ರಾಜ—ನಮ್ಮ ಗೂಢಚಾರರು ಅವರು ಸುಲ್ತಾನರ ಕಡೆಯವರೆಂದು ಸುದ್ದಿ ತಂದರು ತಮ್ಮ ಮಾತುಗಳಿಂದ ಅದು ನಿಜವಾದಂತಾಯಿತು.

ಬೇಗಂ—ತಾವು ಅವರನ್ನು ಏನು ಮಾಡಬೇಕೆಂದಿದ್ದೀರಿ ?

ರಾಜ—ಇಂಥಾ ಯುದ್ಧ ಸಂದರ್ಭದಲ್ಲಿ ಸುಲ್ತಾನರ ಕಡೆಯವರು ನಮ್ಮ ರಾಜ್ಯಕ್ಕೆ ಬಂದರೆ, ನಾವು ಅವರನ್ನು ಸ್ವತಂತ್ರರಾಗಿರಲು ಬಿಡುವುದೆಂತು ? ಅವರನ್ನು ಹಿಡಿದು ಬಂಧನದಲ್ಲಿಡಲೇ ಬೇಕು

ಬೇಗಂ—ರಾಜರೇ ! ತಾವು ಪರಾಕ್ರಮಶಾಲಿಗಳೇನೋ ನಿಜ ಆದರೆ, ರಾಣಿಯವರನ್ನು ಹಿಡಿಯುವುದು ಸುಲಭವಲ್ಲ. ಈ ಯುದ್ಧಕಾಲದಲ್ಲಿ ಸೈನ್ಯವಿಲ್ಲದೇ ಧೈರ್ಯವಾಗಿ ಅವರು ನಿಮ್ಮ ರಾಜ್ಯಕ್ಕೆ ಬರಬೇಕಾದರೆ, ಅವರಿಗೆಷ್ಟು ಧೈರ್ಯವಿದೆ ಯೆಂಬುದನ್ನು ತಿಳಿದುಕೊಳ್ಳಿರಿ !

ರಾಜ—ಅವರಿಗೆ ಅಂತಹ ರಕ್ಷಣೆ ಏನಿದೆ ? ಕಾಳೇಶ್ವರದಲ್ಲಿ ಯಾತ್ರಿಕರಂತೆ ಬಂದು ಇಳಿದಿದ್ದಾರೆ

ಬೇಗಂ—ಅವರಿಗೆ ನಿಮ್ಮ ಭಯವಿದ್ದರೆ, ರಕ್ಷಣೆಯು ಬೇಕೆಂದು ಬಗೆದಿದ್ದರೆ ಅವರು ಸುಲ್ತಾನರ ಶಿಬಿರದಲ್ಲಿಯೇ ಇಳಿಯುತ್ತಿದ್ದರು ತಮ್ಮ ರಾಜ್ಯಕ್ಕೆ ಏಕೆ ಬಂದು ಈ ಕ್ಷೇತ್ರದಲ್ಲಿ ಯಾತ್ರಿಕರಂತೆ ಇಳಿಯುತ್ತಿದ್ದರು

ರಾಜ—ಬೇಗಂಸಾಹೇಬ್ ! ನನಗೊಂದೂ ತೋರುವುದಿಲ್ಲ ಅವರು ಸುಲ್ತಾನರ ಕಡೆಯವರೆಂದು ತಾವೇ ಹೇಳತ್ತೀರಿ ಅವರನ್ನು ನಾವು ಹಿಡಿಯಲೇ ಬೇಕು

ಬೇಗಂ—ರಾಜರೇ ! ಅವರು ನನ್ನ ಪ್ರಾರ್ಥನೆಯಂತೆ ಇಲ್ಲಿಗೆ ಬಂದಿದ್ದಾರೆ. ನಿಮ್ಮಿಂದ ಅವರಿಗೆ ಯಾವ ತೊಂದರೆಯೂ ಸಂಭವಿಸಕೂಡದೆಂದು ತಮ್ಮಲ್ಲಿ ಪ್ರಾರ್ಥನೆ ಮಾಡುವುದಕ್ಕಾಗಿಯೇ ತಮ್ಮನ್ನು ಇಲ್ಲಿಗೆ ಕರೆಸಿದ್ದೇನೆ.

ರಾಜ—ದೇವಿಯವರೇ, ಇದಕ್ಕೆ ಇಷ್ಟು ಸನ್ನಾಹವೇತಕ್ಕೆ ? ನನಗೆ ದೂತರೊಡನೆ ಹೇಳಿಕಳುಹಿಸಿದ್ದರೆ ತಮ್ಮ ಆಜ್ಞೆಯನ್ನು ಶಿರಸಾ ಮಾಡುತ್ತಿದೆ

ಬೇಗಂ—ರಾಜರೇ, ತಮ್ಮ ಪರಮಾನುಗ್ರಹ.

ರಾಜ—ಬೇಗಂಸಾಹೇಬ್ ! ತಾವು ಆ ರಾಣಿಯವರ ಭೇಟಿಯನ್ನು ನನಗೆ ಮಾಡಿಸುತ್ತೀರಾ ?

ಬೇಗಂ—(ನಗುತ್ತಾ) ಮಹಾರಾಜರೇ, ಆ ರಾಣಿಯರಿಬ್ಬರೂ ಒಬ್ಬರಿಗಿಂತ ಮತ್ತೊಬ್ಬರು ಸೌಂದರ್ಯವತಿಯರು ನನ್ನ ಸೌಂದರ್ಯವನ್ನು ಅವರ ಸೌಂದರ್ಯ ದೊಡನೆ ಹೋಲಿಸಿದರೆ ಅವರದು ಪ್ರಗಲ್ಭ ಸೌಂದರ್ಯ! ಅವರ ಪಾದದಾಸಿಯಾಗುವ ಯೋಗ್ಯತೆಯೂ ನನಗಿಲ್ಲ ನೀವು ಅವರನ್ನು ನೋಡಿ ಮೋಹಗೊಂಡು ಹುಚ್ಚರಾ ದರೆ ಪ್ರಮಾದವಾದೀತು ! ಈ ಕೊಡಗು ರಾಜ್ಯವು ಸುಟ್ಟು ಉರಿದುಹೋದೀತು !

ರಾಜ—ಇಲ್ಲ ! ಬೇಗಂಸಾಹೇಬ್ ಎಂದೆಂದಿಗೂ ಅಂತಹ ಅಪರಾಧವನ್ನು ಮಾಡುವುದಿಲ್ಲ. ನಾನು ತಮ್ಮಲ್ಲಿ ಮನ ಸೋತಿದ್ದೇನೆ ಈ ಜನ್ಮದಲ್ಲಿ ತಾವು ಅನು ಗ್ರಹಿಸಿದರೆ ನಾನು ಕೃತಾರ್ಥನಾದಂತೆ !

ಬೇಗಂ—(ನಾಚಿಕೆಯಿಂದ ತಲೆಬಾಗಿಸಿ) ರಾಜರೇ ! ಈ ಕೊಡಗಿನಲ್ಲಿ ಮಹಾ ಯುದ್ಧವು ಪ್ರಾಪ್ತವಾಗಿದೆ ಈ ಯುದ್ಧವು ಪೂರೈಸುವವರೆಗೆ ಈ ಸೌಂದರ್ಯದ ಜಿಜ್ಞಾಸೆಯನ್ನು ಮರತು ಬಿಡಿರಿ ಮೋಹಕಥೆಗಳನ್ನು ನೆನೆಯದಿರಿ ! ಸುಲ್ತಾನ ರೊಡನೆ ಯುದ್ಧ ಮಾಡುವುದು ಸಾಮಾನ್ಯವಲ್ಲ ನೀವು ಈ ಕೊಡಗಿನಲ್ಲಿ ಅಸಾಧಾರಣ ವಾದ ಯುದ್ಧ ಸನ್ನಾಹವನ್ನು ಮಾಡಿದ್ದೀರಿ ತಮ್ಮ ಧೈರ್ಯಸಾಹಸಗಳನ್ನು ನಾನು ಸಹಸ್ರಬಾರಿ ಮೆಚ್ಚಿದ್ದೇನೆ ಕೊಡಗಿನ ವೀರರು ಉತ್ಸಾಹದಿಂದ ಯುದ್ಧಕ್ಕೆ ಹೊರಟಿ ದ್ದಾರೆ. ಈ ಯುದ್ಧದ ಖರ್ಚಿಗೆ ತಮಗೆ ಅಪಾರವಾದ ಧನವು ಬೇಕು ಈ ಯುದ್ಧ ವನ್ನು ನನ್ನ ಯುದ್ಧವೆಂದು ಭಾವಿಸಿದ್ದೇನೆ ಇದು ನನ್ನಜೀವನದ ಕಡೆಯಸನ್ನಿವೇಶ ಇಂದು ನಾನು ತಮಗೆ ನನ್ನ ಸರ್ವಸ್ವವನ್ನೂ ಅರ್ಪಣೆ ಮಾಡಬೇಕೆಂದು ಸಂಕಲ್ಪಿಸಿ ದ್ದೇನೆ" ಎಂದು ಹೇಳುತ್ತಾ ಫಾತಿಮಾಳು ರಾಜರನ್ನು "ನನ್ನ ಜೊತೆಯಲ್ಲಿ ಬನ್ನಿರಿ" ಎಂದು ಹೇಳಿ ಕೆಳಗಿನ ಅಂತಸ್ತಿಗೆ ಕರೆದೊಯ್ದಳು. ರಾಜನು ಮಂತ್ರಮುಗ್ಧನಂತೆ ಅವಳ ಹಿಂದೆ ಹೋದನು. ಮೆಟ್ಟಲುಗಳನ್ನು ಇಳಿದು ಆ ಮನೆಯ ನೆಲಮಾಳಿಗೆಗೆ ಹೋದಳು ಅಲ್ಲಿ ದೀಪವು ಹಚ್ಚಿತ್ತು ಆ ಪೆಟ್ಟಿಗೆಗಳ ಬಾಗಿಲುಗಳನ್ನೆಲ್ಲಾ ತೆರೆದಿಟ್ಟಿ ದ್ದರು ಅವುಗಳನ್ನು ರಾಜನಿಗೆ ತೋರಿಸಿ, "ರಾಜರೇ, ಇದರಲ್ಲಿ ಅಪಾರವಾದ ಚಿನ್ನ ವಿದೆ ಲೆಕ್ಕವಿಲ್ಲದಷ್ಟು ಬೆಳ್ಳಿಯ ನಾಣ್ಯಗಳಿವೆ. ಇವೆಲ್ಲವನ್ನೂ ಇಂದು ತಮಗೆ ಒಪ್ಪಿಸಿ ದ್ದೇನೆ ಇದನ್ನು ತೆಗೆದು ಈ ಯುದ್ಧಕ್ಕೆ ಧಾರಾಳವಾಗಿ ಖರ್ಚುಮಾಡಿರಿ ಇದಕ್ಕಾ ಗಿಯೇ ಶೇಖರಿಸಿಟ್ಟ ನಿಧಿಯಿದು ಈಗ ಇದನ್ನು ನೀವು ವೆಚ್ಚಮಾಡಿಬಿಡಿರಿ ನಿಮ್ಮ ಕೊಡಗಿನ ರಾಜಭಂಡಾರದಲ್ಲಿ ಇಷ್ಟು ಐಶ್ವರ್ಯವಿಲ್ಲ" ಎಂದು ಹೇಳಿದಳು

ರಾಜನು ಆಶ್ಚರ್ಯಚಕಿತನಾಗಿ ರಾಣಿಯವರೇ, ಈ ಹಣ, ಇಷ್ಟು ಐಶ್ವರ್ಯವು ಎಲ್ಲಿಯದು ? ಇದನ್ನು ಸೇರಿಸಿದವರಾರು ? ಎಂದನು

ಬೇಗಂಳು, ಅದೆಲ್ಲಾ ಬಲು ದೊಡ್ಡ ಕಥ ಈ ಕೊಡಗಿನ ಯುದ್ಧವು ಪೂರೈಸಿದ ಮೇಲೆ ನಿಮಗೆ ಅದನ್ನೆಲ್ಲಾ ವಿಸ್ತಾರವಾಗಿ ಹೇಳುತ್ತೇನೆ ಇದೆಲ್ಲಾ ವಿದ್ರೋಹಿಗಳ ಹಣ ಇದರ ಯಜಮಾನನು ಹುಸೇಕಖಾನನೆಂಬ ವೀರಾಗ್ರಣಿ ಮಹದೇವಸ್ವಾಮಿಯೂ ಆ ಸಮಾಧಿಯಲ್ಲಿರುವ ಫಕೀರನೂ ಇದನ್ನು ತಂದು ಇಲ್ಲಿ ಸೇರಿಸಿದರು. ಇಂದು ಇದಕ್ಕೆಲ್ಲಾ ನಾನು ಅಧಿಕಾರಿಣಿ ಈಗ ನಿಮಗೆ ದಾನ ಮಾಡಿದ್ದೇನೆ ಇನ್ನು ನೀವು ಇದಕ್ಕೆ ಮುಂದೆ ಅಧಿಕಾರಿಗಳು ಇದಕ್ಕೆ ಇಮಾಮುನೂ, ಇಂದು ನೀವು ಕಂಡ ಸನ್ಯಾಸಿಯೂ ಕಾವಲುಗಾರರು

ಫಾತಿಮಳು ದೀಪವನ್ನು ಆರಿಸಿ, ಮೆಟ್ಟಲುಗಳನ್ನು ಹತ್ತಿ ಮೇಲೆ ಬಂದಳು ರಾಜನು ಆವಳ ಜೊತೆಯಲ್ಲಿ ಮೇಲಿನ ಹಜಾರಕ್ಕೆ ಬಂದನು. ಅಲ್ಲಿ ಮಾಲತಿ ಎಂದು ಉಚ್ಚಕಂಠದಿಂದ ಕೂಗಿದಳು ಆ ನವಮೋಹನಯುವತಿಯು ಮುಂದೆ ಬಂದು ನಿಂತಿಳು ರಾಜನು ಅವಳನ್ನುದುರದುರನೆ ನೋಡುತ್ತಿದ್ದನು ಫಾತಿಮಳು, "ಮಾಲತಿ ಈ ನಿಧಿಯನ್ನೆಲ್ಲಾ ರಾಜರಿಗೆ ಸಮರ್ಪಣೆ ಮಾಡಿದ್ದೇನೆ" ಎಂದು ಹೇಳಿದಳು. ಮಾಲತಿಯು ಮಾತನಾಡಲಿಲ್ಲ ರಾಜನು, "ಬೇಗಂಸಾಹೇಬ್ ಈ ರಮಣಿ ಯಾರು ?"

"ಅವಳೊಬ್ಬ ನನ್ನಂತಹ ಅಭಾಗಿನಿ !" ಎಂದು ಫಾತಿಮಳು ನಿಟ್ಟುಸಿರು ಬಿಟ್ಟಳು ಮಾಲತಿಯ ಕೆಂಡದಂತಹ ಕಣ್ಣುಗಳಿಂದ ಕಂಬನಿಯು ಸುರಿಯುತ್ತಿತ್ತು. ರಾಜನು ಈ ಮನೆಗ ಬಂದಾಗ ಶೃಂಗಾರದ ಲಹರಿಯು ಮೇಲೆ ಮೇಲೆ ಏಳುತ್ತಿದ್ದಂತೆ ಭಾಸವಾಯಿತು ಈಗ ಹೊರಟುಹೋಗುವಾಗ ಮಹಾದುಃಖಸಾಗರವು ಮೇಲೆ ಹರಿದುಬರುವಂತೆ ಬೋಧೆಯಾಗುತ್ತಿತ್ತು! ಮಾಲತಿಯ ಕಣ್ಣೀರು, ಫಾತಿಮಳ ನಿಟ್ಟುಸಿರುಗಳು, ರಾಜನಿಗೆ ಕಗ್ಗತ್ತಲೆ ಕವಿದಂತಾಯಿತು ರಾಜನು ಬೀಳ್ಕೊಂಡು ಹೊರಟುಹೋದನು

ಯುದ್ಧವು ದಿನದಿನಕ್ಕ ಬಹಳ ಬಲವಾಯಿತು ಪ್ರತಿದಿನವೂ ಮೈಸೂರಿನ ಸೈನ್ಯದ ಕೈ ಮೇಲಾಗುತ್ತ ಬಂದಿತು ಕಡೆಯ ಮೂರು ದಿನಗಳು ಘೋರಯುದ್ಧ, ರಾತ್ರಿ ಹಗಲು ನಡೆಯಿತು ಪ್ರತಿಯೊಬ್ಬ ಕೊಡಗಿನವನೂ ಪ್ರಾಣದ ಹಂಗು ತೊರೆದು ಯುದ್ಧ ಮಾಡಿದನು ಮೈಸೂರಿನ ಸೈನ್ಯವೂ ಬಹಳವಾಗಿ ರಣರಂಗಕ್ಕೆ ಆಹುತಿಯಾಯಿತು ಕೊನೆಯದಿನ ಯುದ್ಧದಲ್ಲಿ ಕೊಡಗಿನ ರಾಜನು ಪೂರ್ತಿಯಾಗಿ ಸೋತನು ನೂರುಲ್ಲಾಖಾನರವರು ಅವನನ್ನು ಸೆರೆ ಹಿಡಿಯಬೇಕೆಂದು ಅಸಮಸಾಹಸ ಮಾಡಿದರು ಆದರೆ ಅಷ್ಟರಲ್ಲಿ ಕತ್ತಲೆ ಕವಿಯಿತು ಯುದ್ಧವು ನಿಂತುಹೋಯಿತು. ಮೈಸೂರು ಸೈನಿಕರೆಲ್ಲಾ ಬಹಳ ದಣಿದಿದ್ದರು ನೂರುಲ್ಲಾಖಾನರವರು ಎಲ್ಲರಿಗೂ ಯಥೇಷ್ಟವಾಗಿ ಪಾನಮಾಡಲು ಮದ್ಯವನ್ನು ಕೊಡಿಸಿದರು. ಸೈನ್ಯವೆಲ್ಲವೂ ಮದ್ಯಪಾನದಲ್ಲಿ ಪ್ರಮತ್ತವಾಗಿದ್ದಿತು. ಈ ಯುದ್ಧದ ಸಮಾಚಾರವನ್ನೆಲ್ಲಾ ಫಾತಿಮಳು

ಇಮಾಮನಿಂದ ಕೇಳಿ ತಿಳಿದುಕೊಂಡಳು ಅವಳಿಗೆ ಬಹಳ ದುಃಖವಾಯಿತು ಆ ಉದ್ವೇಗದಿಂದ ಉತ್ತೇಜಿತಳಾದಳು ಕುದುರೆಯನ್ನೇರಿ ಕೊಡಗಿನ ಸ್ತ್ರೀಯರನ್ನೆಲ್ಲಾ ಹುರಿದುಂಬಿಸಿದಳು. ಸ್ತ್ರೀಯರು ಗುಂಪುಗುಂಪಾಗಿ ದೊಂದಿಗಳನ್ನು ಹಿಡಿದು ಹೂರಟರು. ಮೈಸೂರಿನ ಸೈನ್ಯದ ಕಾವಲುಗಾರರು ಈ ಗುಂಪುಗಳನ್ನು ನೋಡಿದರು "ಪಾಪ! ಪುರುಷರನ್ನು ಕಳೆದುಕೊಂಡ ಸ್ತ್ರೀಯರು ಆ ಕಡುರಾತ್ರಿಯಲ್ಲಿ ತಮ್ಮ ತಮ್ಮ ಪುರುಷರ ಶವಗಳನ್ನು ಹುಡುಕುತ್ತಾರೆ"ಂದು ಅವರು ಭಾವಿಸಿದರು ಆದರೆ ಸ್ತ್ರೀಯರ ಗುಂಪುಗಳು ಸುಲ್ತಾನರ ಶಿಬಿರವನ್ನು ಆಕ್ರಮಿಸಿದುವು ಆ ಸ್ತ್ರೀಯರು ಪ್ರಾಣದ ಮೇಲೆ ಹಂಗು ತೊರೆದು ಶಿಬಿರದಲ್ಲಿ ನುಗ್ಗಿ ಡೇರೆಗಳಿಗೆ ಬೆಂಕಿಯನ್ನು ಹಚ್ಚಿದರು ನಾಲ್ಕು ಕಡೆಗಳಿಂದ ಬೆಂಕಿ ಎದ್ದು ಉರಿಯಲಾರಂಭಿಸಿತು ರಾಧಾರಾಣಿಯವರು, ದೌಲತ್‌ರಾಣಿಯವರು ಕುದುರೆಗಳನ್ನು ಹತ್ತಿ ಸುಲ್ತಾನರ ಶಿಬಿರದಕಡೆಗೆ ಹೊರಟರು ಆ ಶಿಬಿರದಲ್ಲಿ ಬೆಂಕಿಯ ಜ್ವಾಲೆಯನ್ನು ನೋಡಿ ಗಾಬರಿಗೊಂಡರು ಸುಲ್ತಾನರ ಶಿಬಿರದ ಕಡೆ ಕುದುರೆಗಳನ್ನು ದೌಡಾಯಿಸಿದರು ಅವರು ಈ ಕೊಡಗಿನ ಸ್ತ್ರೀಯರ ತಂಡಗಳನ್ನು ನೋಡಿದರು ಸ್ತ್ರೀಯರ ತಂಡವು ನಾವಿರಗಟ್ಲೆ ಇದ್ದಿತು ಆ ಸ್ತ್ರೀಯರ ಕ್ರೋಧಾವೇಶವನ್ನೂ, ಸಾಹಸವನ್ನೂ ನೋಡಿ ರಾಣಿಯರಿಬ್ಬರೂ ಆಶ್ಚರ್ಯಪಟ್ಟರು ಅವರು ಸುಲ್ತಾನರ ಶಿಬಿರದ ಕಡೆಗೆ ಹೋಗುತ್ತಿದ್ದಾಗ ಎದುರಿಗೆ ಬೇಗಂಸಾಹೇಬಳನ್ನು ಸಂಧಿಸಿದರು ಬೇಗಂಸಾಹೇಬಳು ರಾಣಿಯವರನ್ನು ನೋಡಿ, "ರಾಣೀಸಾಹೇಬರೆ, ಇಲ್ಲಿರಬೇಡಿರಿ ನನ್ನ ಜೊತೆಯಲ್ಲಿ ಬನ್ನಿರಿ, ನೀವು ಬೆಂಕಿಯ ಮಧ್ಯದಲ್ಲಿ ಸಿಕ್ಕಿಬೀಳುತ್ತೀರಿ! ಇಲ್ಲವೇ ಸೈನಿಕರ ಗುಂಡಿನೇಟಿಗೆ ತುತ್ತಾಗುತ್ತೀರಿ!" ಎಂದು ಕೂಗಿದಳು

"ಫಾತಿಮಾಬೇಗಂ, ನೀವು ಹೋಗಿರಿ! ತಲೆತಪ್ಪಿಸಿಕೊಳ್ಳಿರಿ! ನಾವು ಸುಲ್ತಾನರ ಗುಡಾರಕ್ಕೆ ಹೋಗುತ್ತೇವೆ" ಎಂದು ದೌಲತ್ತಳು ಹೇಳಿದಳು

ಬೇಗಂ ನಗುತ್ತಾ, "ಸುಲ್ತಾನರ ಗುಡಾರವೆಲ್ಲಿದೆ? ಯಜ್ಞೇಶ್ವರನಿಗೆ ಆಹುತಿಯಾಗಿದೆ ಸುಲ್ತಾನರು ಗುಡಾರದೊಳಗಿದ್ದರೆ ಜ್ವಾಲೆಯನ್ನು ಆಲಿಂಗಿಸುತ್ತಿರುತ್ತಾರೆ" ಎಂದಳು ಅಷ್ಟರಲ್ಲಿ ಹಿಂದಿನಿಂದ ಗುಂಡಿನ ಶಬ್ದವು ಕೇಳಿಸಿತು ಬೇಗಂಳ ಕುದುರೆಯು ಕೆಳಗೆ ಬಿತ್ತು! ದೌಲತ್ ಮತ್ತು ರಾಧಾರಾಣಿಯವರ ಕುದುರೆಗಳು ಚಿಮ್ಮಿ ಹಾರಿದವು. ಮಧ್ಯದಲ್ಲಿ ಸ್ತ್ರೀಯರ ಗುಂಪೊಂದು ದೊಂದಿಗಳನ್ನು ಹಿಡಿದುಕೊಂಡು ಕೂಗುತ್ತಾ ನುಗ್ಗಿತು

ಈ ಗದ್ದಲವು ಏಳುತ್ತಲೇ ಶಿಬಿರದಲ್ಲಿ ಹಾಹಾಕಾರವೆದ್ದಿತು ಇದನ್ನು ಕೇಳಿ ಶಿಬಿರದಲ್ಲಿ ತಮ್ಮ ಗುಡಾರದಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದ ಸುಲ್ತಾನರು ಎದ್ದು ಹೊರಗೆ ಬಂದರು ಸೈನ್ಯದ ಶಿಬಿರದಲ್ಲಿ ನೂರಾರುಕಡೆ ಬೆಂಕಿಯ ಜ್ವಾಲೆಗಳು ಉರಿಯುತ್ತಿರುವುದನ್ನು ಕಂಡರು. ಏನೋ ಪ್ರಮಾದವಾಗಿದೆಯೆಂದು ಕುದುರೆಯನ್ನು ಹತ್ತಿ

ಸೈನ್ಯ ಶಿಬಿರದ ಕಡೆ ದೌಡಾಯಿಸಿದರು. ಎಲ್ಲೆಲ್ಲಿಯೂ ಕೊಡಗಿನ ಸ್ತ್ರೀಯರು ನಿಬಿಡ ವಾಗಿದ್ದುದನ್ನು ಕಂಡರು ಕ್ಷಣದಲ್ಲಿ ಇದೆಲ್ಲಾ ಈ ಸ್ತ್ರೀಯರ ಸಾಹಸ ಕಾರ್ಯ ಎಂದು ಕೊಂಡರು ಸ್ವಲ್ಪ ದೂರದಲ್ಲಿದ್ದ ಮತ್ತೊಂದು ಶಿಬಿರಕ್ಕೆ ಹೋಗಿ, ಅಲ್ಲಿದ್ದ ಸೈನಿಕ ರನ್ನೆಲ್ಲಾ ಜೊತೆಗೊಳಿಸಿ, ಸುಲ್ತಾನರ ಶಿಬಿರದ ಸುತ್ತಲೂ ಇರುವ ಸ್ತ್ರೀಯರನ್ನೆಲ್ಲಾ ಹಿಡಿಯಿರಿ ! ಎಂದು ಆಜ್ಞಾಪಿಸಿದರು ಸೈನಿಕರು ಗುಂಪು ಗುಂಪಾಗಿ ಸ್ತ್ರೀಯರನ್ನು ಹಿಡಿಯುತ್ತಾ ಬಂದರು ಸುಲ್ತಾನರ ಸೈನಿಕರು ಸಹಸ್ರಾರು ಸ್ತ್ರೀಯರನ್ನು ಹಿಡಿದು ಬಂಧಿಸಿದರು

ಈ ಗಡಿಬಿಡಿಯಲ್ಲಿ ದೌಲತ್ ರಾಣಿಯವರು, ರಾಧಾರಾಣಿಯವರು ಸುಲ್ತಾನರ ಗುಡಾರದ ಸಮೀಪವನ್ನು ಸೇರಿದ್ದರು ದೌಲತ್ತಳು ಸುಲ್ತಾನರಿಗೆ ಏನಾದರೂ ಘಾಸಿ ಯಾಗಿದೆಯೇ ನೋಡಬೇಕೆಂದು ಆ ಉರಿಯುತ್ತಿರುವ ಗುಡಾರದ ಹತ್ತಿರ ಸುತ್ತುತ್ತಿ ದ್ದಳು ರಾಧೆಯೂ ಅಲ್ಲಿ ನಿಂತು ನೋಡುತ್ತಿದ್ದಳು. ಹಿಂದಿನಿಂದ ಸೈನಿಕರು ಬಂದು ಈ ಇಬ್ಬರು ಸ್ತ್ರೀಯರನ್ನೂ ಹಿಡಿದರು ಅವರಿಬ್ಬರೂ ಭಯಪಡಲಿಲ್ಲ ಸೊಂಟದಲ್ಲಿದ್ದ ಕತ್ತಿ ಯನ್ನು ಸೆಳೆದು ಬೀಸಿದರು ಆ ಸೈನಿಕರ ತಲೆಗಳು ಕಳಚಿಬಿದ್ದವು ಹಿಂದಿನಿಂದ ಮತ್ತೊಂದು ಸೈನಿಕರ ಗುಂಪು ಬಂದು ಆ ಇಬ್ಬರು ಸ್ತ್ರೀಯರನ್ನೂ ಬಂಧಿಸಿತು ಹೀಗೆ ಇಬ್ಬರು ರಾಣಿಯರೂ ಸೆರೆಸಿಕ್ಕಿದರು ಸಾವಿರಾರು ಮಂದಿ ಸ್ತ್ರೀಯರು ಸೆರೆಹಿಡಿಯಲ್ಪ ಟ್ಟರು.

ಫಾತಿಮಾಬೇಗಂಳು ಈ ಶಿಬಿರದಿಂದ ಓಡಿಹೋದಳು. ಅವಳು ಮಡಕೇರಿಯ ಅರಮನೆಯ ಹತ್ತಿರ ಹೋಗಿ ನೋಡಿದಳು ಅರಮನೆಯೆಲ್ಲಾ ಸುಲ್ತಾನರ ಸೈನಿಕರಿಂದ ನಿಬಿಡವಾಗಿತ್ತು ಅಲ್ಲಿಂದ ಕುದುರೆಯನ್ನು ಓಡಿಸುತ್ತಾ. ಕಾಳೇಶ್ವರದ ಸಮೀಪದಲ್ಲಿದ್ದ ತನ್ನ ವಾಸಸ್ಥಾನಕ್ಕೆ ಹೋದಳು ಅವಳಿಗೆ ಈ ಪ್ರಪಂಚವೆಲ್ಲವೂ ಶೂನ್ಯವಾಗಿ ಕಂಡಿತು. ತನ್ನ ವಿಶ್ರಾಂತಿಗೃಹಕ್ಕೆ ಹೋಗಿ ತನ್ನ ಪರ್ಯಂಕದ ಮೇಲೆ ಹೋಗಿ ಕುಳಿತಳು ಮಾಲ ತಿಯು ಬಂದ ತನ್ನ ಸ್ವಾಮಿನಿಯನ್ನು ನೋಡಿದಳು ಬೇಗಂಳು "ಮಾಲತಿ ! ಇಂದಿಗೆ ಯುದ್ಧವು ಮುಕ್ತಾಯವಾಯಿತು ನಾಳೆಯ ದಿನ ಸುಲ್ತಾನರ ಕಡೆಯವರು ಬಂದು ನಮ್ಮನ್ನು ಹಿಡಿಯುತ್ತಾರೆ ನೀನೇನು ಮಾಡುವಿ ?"

"ತಾಯೆ ! ನಮ್ಮನ್ನು ಹಿಡಿದರೆ ಭಯವೇನು ? ಸುಲ್ತಾನರು ನಮ್ಮನ್ನೇನು ಮಾಡಬಲ್ಲರು ?"

"ಮಾಲತಿ ! ಆ ಮಾತುಗಳಿಂದ ಈಗ ಫಲವಿಲ್ಲ ನಾನು ಮಾತನಾಡಲಾರೆ. ನನಗೆ ಸ್ವಲ್ಪ ಮಧುವನ್ನು ತಂದುಕೊಡು ! ಇಂದು ಮನಸಾರ ಪಾನಮಾಡುತ್ತೇನೆ."

ಮಾಲತಿಯು ಮಧುವಿನ ಹೂಜಾವನ್ನು ತಂದು ಬೇಗಂಸಾಹೇಬಳ ಮುಂದಿ ಟ್ಟಳು ಬೇಗಂಸಾಹೇಬಳು ಬಟ್ಟಲಿಗೆ ಬಗ್ಗಿಸಿ ಸ್ವಲ್ಪ ಪಾನ ಮಾಡಿದಳು.

ಮಾಲತಿಯು "ಬೇಗಂಸಾಹೇಬ್ ! ಈ ಕೊಡಗಿನ ರಾಜನ ಗತಿ ಯೇನಾಯಿತು ?" ಎಂದಳು

ಬೇಗಂಳು "ರಾಜನ ಗತಿಯೇ ! ಅವನೆಲ್ಲಿಯೋ ಓಡಿಹೋಗಿದ್ದಾನೆ ಅವನ ಚಿಂತೆಯು ನನಗೇಕೆ ? ನೀನು ಕಾಳೇಶ್ವರಕ್ಕೆ ಓಡಿಹೋಗಿ—ಆ ಮಹಂತನನ್ನು ನೋಡಿ—ದೌಲತ್ ರಾಣಿಯವರು, ರಾಧಾರಾಣಿಯವರು ಸೆರೆ ಸಿಕ್ಕಿದ್ದಾರೆಂದು ತಿಳಿಸಿಬಿಡು ! ಅವನೇನಾದರೂ ಸಾಹಸ ಮಾಡಿ ಅವರನ್ನು ಉಳಿಸುವುದಾದರೆ ಉಳಿಸಲಿ," ಎಂದಳು

ಮಾಲತಿಯು "ತಾಯಿ ! ಆ ರಾಣಿಯವರು ಸೆರೆ ಸಿಕ್ಕಿದರೇನು ? ಹಾಗಾದರ ಅವರು ಉಳಿಯುವುದಿಲ್ಲ."

ಬೇಗಂಳು ಮತ್ತೊಂದು ಬಟ್ಟಲು ಮಧುವನ್ನು ಪಾನಮಾಡಿ, ಕೇಕೆ ಹಾಕಿ ನಕ್ಕು, "ಆ ರಾಣಿಯವರಿಗೆ ಭಯವೇನು ? ಅವರು ಆತ್ಮ ರಕ್ಷಣೆ ಮಾಡಿಕೊಳ್ಳಬಲ್ಲರು! ನೀನು ಹೋಗಿ ಆ ಮಹಂತನಿಗೆ ಹೇಳಿಬಿಡು ಹೋಗು "

ಮಾಲತಿಯು ಕಾಳೇಶ್ವರಕ್ಕೆ ಹೊರಟುಹೋದಳು

ಬೇಗಂಸಾಹೇಬಳು ಪುನಃ ಮಧುವನ್ನು ಪಾನಮಾಡಿದಳು ಪೂರ್ಣವಾಗಿ ಪ್ರಜ್ಞಾಶೂನ್ಯಳಾಗಿ ಪರ್ಯಂಕದಲ್ಲಿ ಬಿದ್ದುಬಿಟ್ಟಳು ಅರ್ಧರಾತ್ರಿ ಕಳೆದು ಮೂರನೆಯ ಝಾಮವು ಬರುತ್ತಿತ್ತು ಕೊಡಗಿನ ರಾಜನು ಸಮರಕ್ಷೇತ್ರದಿಂದ ಬೇಗಂಸಾಹೇಬಳ ಆವಾಸಸ್ಥಾನಕ್ಕೆ ಬಂದನು ಅವಳ ವಿಶ್ರಾಂತಿಗೃಹಕ್ಕೆ ಹೋಗಿ ನೋಡಿದನು ಅವನ ಹೃದಯವು ನಡುಗುತ್ತಿತ್ತು ಮೈಯೆಲ್ಲಾ ರಕ್ತಮಯವಾಗಿತ್ತು ಬೇಗಂಸಾಹೇಬಳ ಪರ್ಯಂಕದ ಸಮೀಪಕ್ಕೆ ಹೋಗಿ ನಿಂತನು ಫಾತಿಮಳ ಕೈ ಹಿಡಿದೆತ್ತಿದನು ಅವಳು ಅಲುಗಾಡಲಿಲ್ಲ, ಪ್ರಜ್ಞೆ ಬರಲಿಲ್ಲ ರಾಜನು ಬಗ್ಗಿ ಫಾತಿಮಳ ಮುಖದ ಮೇಲೆ ಮುಖವಿಟ್ಟು ಚುಂಬಿಸಿದನು ಅಷ್ಟರಲ್ಲಿ ಹಿಂದುಗಡೆ ಹೆಜ್ಜೆಯ ಸದ್ದು ಕೇಳಿಸಿತು ರಾಜನು ಸ್ವಲ್ಪ ಹಿಂದಿರುಗಿ ನೋಡಿದನು ಮಾಲತಿಯು ಓಡುತ್ತಾ ಬಂದಳು

ಫಾತಿಮಳ ಮಂಚದ ಬಳಿ ಪುರುಷಾಕಾರವನ್ನು ನೋಡಿದಳು ಹಿಂದಿನಿಂದ ಬಂದು ರಾಜನನ್ನು ಬಲವಾಗಿ ಹಿಡಿದು ಎಳೆದಳು ರಾಜನು ಮತ್ತೊಮ್ಮೆ ಅವಳ ಮುಖವನ್ನು ನೋಡಿ, "ನೀನಾರೇ ?" ಎಂದು ಕೇಳಿದನು

ಮಾಲತಿ—ನನ್ನನ್ನು ಅರಿಯೆಯಾ ? ಅಂದು ನೋಡಲಿಲ್ಲವೇ ?

ರಾಜ—ಹೌದು ಮಾಲತಿ. ಅಂದು ನಿನ್ನ ಜಗನ್ಮೋಹನ ರೂಪವನ್ನು ಕಂಡೆ

ಮಾಲತಿ—ಹಾಳು ಮಾತನಾಡಬೇಡ. ನಾಲಿಗೆಯನ್ನು ಅಪವಿತ್ರಮಾಡಬೇಡ. ಅಂದು ನೀನು ಅನ್ಯಾಯವಾಗಿ ನನ್ನ ಪತಿಯನ್ನು ಕೊಂದೆ. ಆ ಮಹದೇವಸ್ವಾಮಿಯು ನಿನಗೇನು ಅಪರಾಧ ಮಾಡಿದ. ನನ್ನ ಬಾಳಿಕೆಯನ್ನು ಹಾಳು ಮಾಡಿದೆ.

ಇಂದು ಫಾತಿಮಾಬೇಗಂ ಜ್ಞಾನಶೂನ್ಯಳಾಗಿ ಬಿದ್ದಿರುವಾಗ ಅವಳನ್ನು ಚುಂಬಿಸುತ್ತಿರುವೆ ನಿನಗೆ ಇನ್ನು ಜೀವದ ಆಶೆಯಿದೆಯೇ ?

ರಾಜ—ಇಲ್ಲ ಮಾಲತಿ ! ನನ್ನೊಡನೆ ಕಠಿಣವಾಗಿ ಮಾತನಾಡಿ ನೋಯಿಸಬೇಡ ಇದೊಂದು ರಾತ್ರಿ ನನಗೆ ಜೀವನದ ಆಶೆ ಅದೂ ಈ ಫಾತಿಮಳಿಗಾಗಿ ಅವಕ್ಕಾಗಿಯೇ ಈ ಯುದ್ಧಕ್ಷೇತ್ರದಿಂದ ಇಲ್ಲಿಗೆ ಬಂದೆ.

ಮಾಲತಿ—ರಾಜನೆ, ಈ ಫಾತಿಮಾಬೇಗಂರವರ ಮೇಲಿನ ಆಶೆಗಾಗಿ ಇಲ್ಲಿಗೆ ಬಂದೆಯಾ ? ನಾನು ನನ್ನ ಆಶೆಯನ್ನು ತಿರಿಸಿಕೊಳ್ಳುವುದಕ್ಕೆ ಒಂದು ಸಮಯ ಸಿಕ್ಕಿತು. ಎಂದು ಹೇಳಿ, ತಲೆಯ ತುರುಬಿನಿಂದ ಕಠಾರಿಯನ್ನು ತೆಗೆದು ರಾಜನ ಹೃದಯದಲ್ಲಿರಿಸಿದಳು ರಾಜನು ಆರ್ತನಾದ ಮಾಡುತ್ತಾ ಭೂಮಿಯಲ್ಲಿ ಬಿದ್ದನು. ಅವನ ಶರೀರವು ಹೊರಳಾಡುತ್ತಿತ್ತು

ಅಷ್ಟರಲ್ಲಿ ಬೇಗಂಸಾಹೇಬಳಿಗೆ ಎಚ್ಚರವಾಯಿತು ಅವಳೆದ್ದು ಬಂದು, "ರಾಜ ರಾಜ !" ಎಂದು ಕೂಗಿದಳು ಮಾಲತಿಯು ಸಮೀಪದಲ್ಲಿ ನಿಂತಿದ್ದಳು

ಫಾತಿಮಳು—ಮಾಲತಿ, ಇವನನ್ನು ಯಾರು ಕೊಂದವರು ?

ಮಾಲತಿ—ದೇವಿ, ಇವನನ್ನು ನಾನು ಕೊಂದೆ ಮಹದೇವಸ್ವಾಮಿಯ ಆತ್ಮಕ್ಕೆ ಶಾಂತಿಯಾಗಲು ನಿನ್ನ ಪಾದಾರವಿಂದದಲ್ಲಿ ಇವನನ್ನು ಬಲಿಕೊಟ್ಟೆ !

ಫಾತಿಮಳು ನೆಲದಮೇಲೆ ಹೊರಳಾಡುತ್ತಿದ್ದ ರಾಜನ ಶರೀರವನ್ನು ಕೈಗಳಿಂದ ಹಿಡಿದುಕೊಂಡು ಅವನ ಮುಖದ ಹತ್ತಿರ ಮುಖವಿಟ್ಟು "ರಾಜ," ಎಂದು ಕೂಗಿದಳು ರಾಜನು ಕಣ್ಣು ಬಿಟ್ಟು ನೋಡಿದನು ಅವನ ಮುಖದಲ್ಲಿ ಒಂದು ನಗುವು ಬಂತು. ಪ್ರಾಣಗಳು ಹಾರಿಹೋದವು

ಅಷ್ಟರಲ್ಲಿ ಸೈನಿಕರ ಹೆಜ್ಜೆಗಳ ಸದ್ದು ಕೇಳಿಸಿತು ಆ ಮನೆಯನ್ನು ಸೈನಿಕರು ಸುತ್ತುಗಟ್ಟಿದರು. ಫಾತಿಮಾಬೇಗಂ ಮತ್ತು ಮಾಲತಿ ಇಬ್ಬರೂ ಬಂದಿಗಳಾದರು

ಬೆಳಗಾಯಿತು ಸುಲ್ತಾನರು ತಮ್ಮ ಶಿಬಿರಕ್ಕೆ ಬಂದರು ಶಿಬಿರದ ಬಹುಭಾಗ ಸುಟ್ಟು ಭಸ್ಮವಾಗಿದೆ ರಾತ್ರಿ ಬಹುಮಂದಿ ಸೈನಿಕರು ಸತ್ತಿದ್ದಾರೆ. ಸುಲ್ತಾನರ ಅಪ್ಪಣೆಯಂತೆ ಸಹಸ್ರಾರು ಸ್ತ್ರೀಯರು ಸೆರೆ ಹಿಡಿಯಲ್ಪಟ್ಟಿದ್ದಾರೆ ಹಿಂದಿನ ರಾತ್ರಿಯ ಪ್ರಸಂಗವು ಸುಲ್ತಾನರಿಗೆ ಆಶ್ಚರ್ಯವನ್ನುಂಟುಮಾಡಿತು ಸುಲ್ತಾನರು ಎಷ್ಟೋ ಯುದ್ಧಗಳನ್ನು ಮಾಡಿದ್ದಾರೆ ಆದರೆ ಇಂತಹ ಯುದ್ಧವನ್ನು ಅವರೆಲ್ಲಿಯೂ ಕಂಡಿಲ್ಲ. ಸ್ತ್ರೀಯರು ಹೀಗೆ ತಂಡತಂಡವಾಗಿ ಬಂದು ಸೈನ್ಯದ ಮೇಲೆ ಅಪಘಾತ ಮಾಡಿದ್ದು ಅವರಿಗೆ ಆಶ್ಚರ್ಯವನ್ನುಂಟುಮಾಡಿತು ಸರ್ವಸೇನಾಧಿಪತಿಗಳಾದ ಅಮೀರ್ ನೂರುಲ್ಲಾಖಾನರವರು ಬಂದು ಸುಲ್ತಾನರ ಭೇಟಿ ಮಾಡಿದರು. ಹಿಂದಿನ ರಾತ್ರಿ ಹತ್ತು ಸಹಸ್ರ ಸೈನಿಕರು ಮರಣ ಹೊಂದಿದರೆಂದು ಅರಿಕೆ 'ಮಾಡಿದರು. ಸುಲ್ತಾನ

ರವರು ಸೇನಾನಾಯಕರನ್ನು ಕುರಿತು, "ಖಾನರವರೇ, ಬೇಗಂಸಾಹೇಬರವರ ಸಮಾಚಾರವೇನಾದರೂ ತಿಳಿಯಿತೆ ? ಈ ಕೊಡಗುರಾಜರು ಮರಣ ಹೊಂದಿದರೆ ? ಅಥವಾ ಸೆರೆ ಸಿಕ್ಕಿದರೆ ? ರಾಜರ ಅರಮನೆಗಳನ್ನು ವಶಪಡಿಸಿಕೊಂಡಿದ್ದೀರಾ ? ಈ ರಾಜರ ರಾಣಿವಾಸದವರು ಎಲ್ಲಿದ್ದಾರೆ ?" ಎಂದು ಕೇಳಿದರು

ಸೇನಾನಾಯಕರು - ಹುಜೂರು, ಬೇಗಂಸಾಹೇಬರು ಸಿಕ್ಕಲಿಲ್ಲ ರಾಜರ ಪತ್ತೆಯಾಗಲಿಲ್ಲ. ನಾವು ಬೇಗಂಸಾಹೇಬರ ತಂಟೆಗೆ ಹೋಗಿಲ್ಲ ರಾಣಿವಾಸದವರ ಗೋಜಿಗೆ ಹೋಗಿಲ್ಲ. ಆದರೆ, ಎಲ್ಲ ಸ್ಥಳಗಳಲ್ಲಿಯೂ ಬಲವಾದ ಪಹರೆಗಳನ್ನು ಇಟ್ಟಿದ್ದೇವೆ. ನಿನ್ನೆಯ ರಾತ್ರಿ ಧಾಳಿ ನಡೆಸಿದ ಸ್ತ್ರೀಯರನ್ನೆಲ್ಲಾ ಬಂಧನದಲ್ಲಿಟ್ಟಿದ್ದೇವೆ ಅವರಿಗೆಲ್ಲಾ ಏನಪ್ಪಣೆ ಎಂದು ಕೇಳಿದರು. ಸುಲ್ತಾನರು ಈ ಸ್ತ್ರೀಯರೆಲ್ಲಾ ಬಹಳ ಹರಾಂ ಮಾಡಿದ್ದಾರೆ. ಇವರಿಗೆಲ್ಲಾ ತಕ್ಕ ಶಿಕ್ಷೆಯಾಗಬೇಕು ನಾವು ಮೊದಲು ಬೇಗಂಸಾಹೇಬರ ಭೇಟಿ ಮಾಡಲಪೇಕ್ಷಿಸುತ್ತೇವೆ ಅವರೆಲ್ಲಿದ್ದಾರೆ, ಬಲ್ಲಿರಾ ? ಎಂದು ಕೇಳಿದರು

"ಜಹಾಪನಾ, ಅವರು ಕಾಳೇಶ್ವರ ಕ್ಷೇತ್ರದ ಸಮೀಪದಲ್ಲಿರುವ ಅವರ ಆವಾಸದಲ್ಲಿದ್ದಾರೆಂದು ದೂತರು ಸಮಾಚಾರ ತಂದಿದ್ದಾರೆ"

"ಒಳ್ಳೆಯದು ! ನಾವು ಅಲ್ಲಿಗೆ ಈಗಲೇ ಹೊರಡುತ್ತೇವೆ"

"ಈ ಸ್ತ್ರೀಯರೆಲ್ಲರೂ ನಮ್ಮ ಸೈನ್ಯದ ಮೇಲೆ ಹರಾಂ ಮಾಡಿದ್ದಾರೆ ಇವರನ್ನೆಲ್ಲಾ ಅರಮನೆಯ ಮುಂಭಾಗದ ಜೈಲಿನಲ್ಲಿ ಸಾಲುಸಾಲಾಗಿ ನಿಲ್ಲಿಸಿರಿ ನಮ್ಮ ಸೈನಿಕರಿಗೆ ಈ ಸ್ತ್ರೀಯರನ್ನೆಲ್ಲಾ ಭಕ್ಷೀಸ್ ಕೊಡಿಸುತ್ತೇನೆ ಯಾವ ಯಾವ ಸೈನಿಕರಿಗೆ ಯಾವ ಯಾವ ಸ್ತ್ರೀಯು ಬೇಕೋ ಅವಳನ್ನು ಚುನಾಯಿಸಲಿ'" ಎಂದು ಅಪ್ಪಣೆ ಮಾಡಿದನು

ತಾವು ಕುದುರೆಯನ್ನು ಹತ್ತಿ ಕಾಳೇಶ್ವರದ ಕಡೆಗೆ ಹೊರಟರು. ಮುಂಗಾವಲಿನವರು ದಾರಿ ತೋರಿಸುತ್ತಾ ಮುಂದೆ ಹೊರಟರು. ಕಾಳೇಶ್ವರದ ಸಮೀಪದಲ್ಲಿರುವ ಬೇಗಂರವರ ವಸತಿಯನ್ನು ಸೇರಿದರು ಅಲ್ಲಿ ಸೈನಿಕರು ಕಾವಲು ಕಾಯುತ್ತಿದ್ದರು. ಸುಲ್ತಾನರವರ ಸವಾರಿಯು ಬರುತ್ತಲೇ ಎಲ್ಲರೂ ಅದಬ್ಬಿನಿಂದ ಮುಜರೆ ಮಾಡಿದರು ಸುಲ್ತಾನರವರು ಗಂಭೀರವಾಗಿ ಅರಮನೆಯೊಳಗೆ ಪ್ರವೇಶಮಾಡಿದರು ಹೋಗಿ ಹಜಾರದಲ್ಲಿ ನಿಂತು, ಸುಲ್ತಾನರು ಗಂಭೀರಸ್ವರದಿಂದ, "ಬೇಗಂಸಾಹೇಬರವರು ಎಲ್ಲಿದ್ದಾರೆ ?" ಎಂದು ಕೇಳಿದರು

ಕಾವಲುಗಾರರ ಯಜಮಾನನು — ಖಾವಂದರವರೇ, ಬೇಗಂಸಾಹೇಬರು ಉಪ್ಪರಿಗೆಯ ಮೇಲಿದ್ದಾರೆ ಎಂದು ಅರಿಕೆ ಮಾಡಿದನು. ಸುಲ್ತಾನರವರು "ಯಾರಾದರೂ ದಾಸಿಯರಿದ್ದರೆ ಕರೆದುತಾ" ಎಂದು ಅಪ್ಪಣೆ ಮಾಡಿದರು.

"ಹುಜೂರು! ಇಲ್ಲಿ ಯಾರೂ ದಾಸಿಯರಿಲ್ಲ. ಒಬ್ಬ ಹಿಂದೂ ಸ್ತ್ರೀ ಇದ್ದಾಳೆ" ಎಂದು ಕಾವಲುಗಾರನು ಬಿನ್ನವಿಸಿದನು

ಸುಲ್ತಾನರು, "ಅವಳನ್ನೇ ಸಮುಖಕ್ಕೆ ಕರೆದುತಾ!" ಎಂದು ಅಪ್ಪಣೆ ಮಾಡಿದರು ಕಾವಲುಗಾರರು ಮೇಲೆ ಹೋಗಿ ಮಾಲತಿಯನ್ನು ಕರೆತಂದರು ಮಾಲತಿಯು ಬಂದು ಸುಲ್ತಾನರ ಸಮುಖದಲ್ಲಿ ನಿಂತಳು

ಸುಲ್ತಾನರವರು, "ನೀನಾರು ?" ಎಂದು ನಿಧಾನವಾಗಿ ಕೇಳಿದರು

ಮಾಲತಿಯು "ನಾನೊಬ್ಬ ಬಂದಿ" ಎಂದು ದಿಟ್ಟತನದಿಂದ ಉತ್ತರ ಹೇಳಿದಳು

"ಒಳ್ಳೆಯದು ನೀನು ಬೇಗಂಸಾಹೇಬರ ಸನ್ನಿಧಾನದಲ್ಲಿ ಹೇಳು ಸುಲ್ತಾನರು ಭೇಟಿಗೆ ಬಂದಿದ್ದಾರೆಂದು ತಿಳಿಸು ಅವರ ಅಪ್ಪಣೆಯಾದರೆ ಬಂದು ಭೇಟಿ ಮಾಡುತ್ತೇನೆ" ಎಂದು ಸುಲ್ತಾನರು ವಿನಯದಿಂದ ಹೇಳಿದರು

ಮಾಲತಿಯು ಬೇಗಂಸಾಹೇಬರ ಬಳಿಗೆ ಹೋಗಿ ಸ್ವಯಂ ಸುಲ್ತಾನರವರು ಭೇಟಿಗೆ ಬಂದು ವಿನಯದಿಂದ ಪ್ರಾರ್ಥಿಸುತ್ತಿದ್ದಾರೆಂದು ಹೇಳಿದಳು

ಬೇಗಂಸಾಹೇಬಳು—ಮಾಲತಿ, ಸುಲ್ತಾನರನ್ನು ಇಲ್ಲಿಗೆ ಕರೆದು ತಾ ನಾನು ಅವರಲ್ಲಿ ಕಡೆಯ ಎರಡು ಮಾತುಗಳನ್ನು ಆಡುವುದಿದೆ ಅವರಾಗಿ ಬಂದುದು ಒಳ್ಳೆಯದೇ ಆಯಿತು ಎಂದಳು

ಮಾಲತಿಯು ಕೆಳಗೆ ಇಳಿದು ಹೋಗಿ ಸುಲ್ತಾನರಿಗೆ ಮುಜರೆಮಾಡಿ "ಸುಲ್ತಾನರವರೇ, ತಾವು ಬೇಗಂಸಾಹೇಬರ ಭೇಟಿ ಮಾಡಬಹುದು ಅಂತಃಪುರಕ್ಕೆ ದಯಮಾಡಿಸೋಣವಾಗಲಿ!" ಎಂದು ವಿನಯದಿಂದ ಅರಿಕೆಮಾಡಿದಳು.

ಸುಲ್ತಾನರು ಆ ಮನೆಯ ಸೊಬಗನ್ನು ನಿರೀಕ್ಷಿಸುತ್ತಾ ಮಹಡಿಯ ಮೇಲೆ ಹತ್ತಿ ಅಂತಃಪುರಕ್ಕೆ ಹೋದರು ಅಲ್ಲಿ ಮಾಲತಿಯು ಸುಲ್ತಾನರನ್ನು ಸುಖಾಸನದಲ್ಲಿ ಕುಳ್ಳಿರಿಸಿದಳು ಒಳಗಿನಿಂದ ಫಾತಿಮಾಬೇಗಂರವರು ಬಂದು ದ್ವಾರದಲ್ಲಿ ತಲೆಬಾಗಿ ನಿಂತರು.

ಸುಲ್ತಾನರವರು—ಬೇಗಂಸಾಹೇಬರವರೇ! ಇಲ್ಲಿ ತಮ್ಮ ದರ್ಶನವಾದದ್ದು ನಮಗೆ ಆಶ್ಚರ್ಯವನ್ನುಂಟುಮಾಡಿದೆ. ತಾವು ಇಲ್ಲಿಗೆ ಹೇಗೆ ದಯಮಾಡಿಸೋಣವಾಯಿತು ?

ಬೇಗಂ—ಸುಲ್ತಾನರವರೇ ತಾವು ಬಲು ದೊಡ್ಡ ಸೈನ್ಯವನ್ನು ತಂದು ನನ್ನನ್ನು ಹಿಡಿಯಲು ಬಂದಿದ್ದೀರಿ ನನ್ನ ದರ್ಶನದಲ್ಲಿ ಆಶ್ಚರ್ಯವೇನಿದೆ ? ನಾನು ಇಂದು ತಮ್ಮ ಬಂದಿ

ಸುಲ್ತಾನ್—ಬೇಗಂಸಾಹೇಬರವರೇ, ತಾವು ನಮಗೆ ಪೂಜ್ಯರು. ನಮ್ಮ ರಾಜ್ಯ

ದಲ್ಲಿ ಗೌರವೀಯರು ತಾವು ಬಂದಿಗಳಲ್ಲ ದೇವಿಯವರೇ, ನಾನು ಅತ್ಯಂತ ದುಃಖ ಕರವಾದ ಒಂದು ಪ್ರಶ್ನೆಯನ್ನು ಕೇಳಬೇಕಾಗಿದೆ

ಬೇಗಂ—ಕೇಳಬಹುದು ಮುಚ್ಚುಮರೆಯಿಲ್ಲದೇ ಕೇಳಬಹುದು ಇದು ನನ್ನ ಕಡೆಯದಿನ.

ಸುಲ್ತಾನ್— (ನಿಧಾನವಾಗಿ) ಬೇಗಂಸಾಹೇಬರೇ, ತಮಗೂ ಈ ಕೊಡಗಿನ ರಾಜನಿಗೂ ಏನು ಸಂಬಂಧ ?

ಬೇಗಂ—ಸುಲ್ತಾನರೇ, ನೀವು ಇಲ್ಲಿ ಸುಲ್ತಾನರೆಂದುಕೊಂಡು ಮಾತನಾಡ ಬೇಡಿರಿ. ದೊಡ್ಡ ನವಾಬರು ನನ್ನನ್ನು ಮಗಳಿಗಿಂತಲೂ ಹೆಚ್ಚು ಪ್ರೀತಿಸುತ್ತಿದ್ದರು ನಾನು ಪೂಜ್ಯರಾದ ದೊಡ್ಡ ದಿವಾನರವರ ಧರ್ಮಪತ್ನಿ ನಾನು ತಮ್ಮ ಸಹೋದರಿ ಯಂತೆ ಅಂಥಾ ನನ್ನನ್ನು ಭರದರ್ಬಾರಿನಲ್ಲಿ ಅಪಮಾನ ಪಡಿಸಿ ಗು‌ಾಮುನ ಕೊಠ ಳಿಗೆ ಹಾಕಿದಿರಿ. ಇಂದು ನನ್ನ ಎದುರಿನಲ್ಲೇ ನಾನು ಈ ಕೊಡಗಿನ ರಾಜನನ್ನು ಮದುವೆಯಾಗಿದ್ದೇನೆಂಬ ಆರೋಪವನ್ನು ಹೊರಿಸಲು ಬಂದಿದ್ದೀರಿ ನಿಮಗೆಷ್ಟು ಧೈರ್ಯ ನಿಮಗೆ ಹೃದಯವಿಲ್ಲವೇ ? ಸುಲ್ತಾನರೆಂಬ ಗಾಂಭೀರ್ಯವಿಲ್ಲವೇ ? ನಿಮ್ಮ ರಾಜ್ಯದ ದೊಡ್ಡ ದಿವಾನರ ಧರ್ಮಪತ್ನಿಯೆಂಬ ಅಭಿಮಾನವಿಲ್ಲವೇ? ಛೇ! ನೀವು ಎಷ್ಟು ಬುದ್ಧಿ ಹೀನರು ನಿಮಗೆ ಧಿಕ್ಕಾರವಿರಲಿ ಹೋಗಿರಿ! ನನ್ನ ಅಂತಃಪುರವನ್ನು ಬಿಟ್ಟು ಹೊರ ಡಿರಿ. ನಿಮ್ಮ ಸೈನಿಕರು ನನ್ನನ್ನು ಬಂದಿಯಾಗಿ ಹಿಡಿದಿದ್ದಾರೆಂದು ನಾನು ಬಲ್ಲೆ ! ಈ ಹಾಳು ಶರೀರವನ್ನು ಇನ್ನು ಒಂದು ಕ್ಷಣದಲ್ಲಿ ನಿಮಗೆ ಒಪ್ಪಿಸುತ್ತೇನೆ ಆದರ ನನ್ನ ಜೀವದ ಮೇಲೆ ತಮಗೆ ಅಧಿಕಾರವಿಲ್ಲ. ಆ ಜೀವವನ್ನು ನನ್ನ ಕೈಯಿಂದಲೇ ಹಿಂಡಿ, ಈ ನಿರ್ಜೀವವಾದ ಶರೀರವನ್ನು ತಮ್ಮ ಮುಂದೆ ಬಿಸಾಡುತ್ತೇನೆ

ಸುಲ್ತಾನನು ಆಸನದಿಂದ ಎದ್ದು, ಬೇಗಂಳ ಮುಂದೆ ವಿನಯದಿಂದ ಕೈಜೋ ಡಿಸಿ, "ಬೇಗಂಸಾಹೇಬರವರೇ, ಕ್ಷಮಿಸಿರಿ, ನನ್ನ ಅಪರಾಧವನ್ನು ಕ್ಷಮಿಸಿರಿ ನಾನು ದೊಡ್ಡ ನವಾಬರ ಮೇಲೆ ಆಣೆ ಇಟ್ಟು ಹೇಳುತ್ತೇನೆ ಕ್ಷಮಿಸಿರಿ ನಾನು ತಪ್ಪು ಮಾ ಡಿದೆ. ತಾವು ಶ್ರೀರಂಗಪಟ್ಟಣಕ್ಕೆ ಬಂದು ನನ್ನ ಮಾತೃಶ್ರೀಯವರಂತೆ ರಾಜಧಾನಿ ಯಲ್ಲಿರಬೇಕೆಂದು ಬೇಡುತ್ತೇನೆ "

ಬೇಗಂ—ಸುಲ್ತಾನನೇ, ನೀನು ಸುಳ್ಳ, ವಂಚಕ ದಿವಾನರವರನ್ನು ಮೋಸ ಮಾಡಿ ಕೊಂದೆ. ನನ್ನನ್ನು ರಾಜಸಭೆಯಲ್ಲಿ ಅಪಮಾನಪಡಿಸಿದೆ. ನಿನ್ನ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂದು ನಾನು ನಾನಾಕಷ್ಟಗಳನ್ನು ಅನುಭವಿಸಿದೆ ಇಂದು ಸಂಪೂರ್ಣವಾಗಿ ಸೋತಿದ್ದೇನೆ. ಇಂದು ನನ್ನ ಕಡೆಯ ದಿನ. ನಾನು ಮರಣಕ್ಕೆ ಸಿದ್ಧ ಳಾಗಿದ್ದೇನೆ-; ನೀವು ಈ ಮನೆಯನ್ನು ಬಿಟ್ಟು ಹೊರಡುವಷ್ಟರಲ್ಲಿ ನನ್ನ ಪ್ರಾಣವು ಈ

ಶರೀರವನ್ನು ಬಿಟ್ಟು ಹಾರಿಹೋಗುತ್ತದೆ ಈಗಲೂ ಇಂತಹ ಸನ್ನಿವೇಶದಲ್ಲಿಯೂ ನೀನು ವಂಚನೆ ಮಾಡುತ್ತಿದ್ದಿ

ಸುಲ್ತಾನ್—ತಾಯಿಯವರೇ, ತಮ್ಮ ದುಃಖವು ಮೂರ್ತಿಮತ್ತಾಗಿ ನನ್ನ ಮುಂದೆ ಕಾಣುತ್ತದೆ ಅದು ನನ್ನ ಹೃದಯವನ್ನು ದಹಿಸುತ್ತಿದೆ ನಾನು ವಂಚನೆ ಮಾಡುತ್ತೇನೆಂದು, ಪುನಃಪುನಃ ಕ್ರೂರವಾಗಿ ಆಡಿ ನನ್ನನ್ನು ನೋಯಿಸುತ್ತೀರಿ ನನ್ನ ವಂಚನೆಯೇನಿದೆ ?

ಬೇಗಂ—ಸುಲ್ತಾನನೇ, ಅದು ವಂಚನೆಯು ಮಾತ್ರವಲ್ಲ. ಅತ್ಯಂತ ನೀಚ ವೃತ್ತಿ ಸುಲ್ತಾನರಿಗೆ ಅಳಿಸದ ಅಪಕೀರ್ತಿ ಮೈಸೂರಿಗೆ ಹಾನಿ ಅದನ್ನು ನಾನು ಹೇಗೆ ಬಾಯಿಯಲ್ಲಿ ಉಚ್ಚರಿಸಲಿ ನೀನೇ ನಿನ್ನ ಮನಸ್ಸನ್ನು ಶೋಧನೆಮಾಡಿ ಕೊಳ್ಳಬಾರದೆ ?

ಸುಲ್ತಾನ್—ದೇವಿಯವರೇ, ತಮ್ಮ ಮಾತು ಜಟಿಲಸಮಸ್ಯೆಯಂತಿದೆ. ನನ್ನ ಅಪರಾಧವು ಏನೇನೂ ಇಲ್ಲ

ಬೇಗಂ—(ಕ್ರೋಧದಿಂದ) ಸುಲ್ತಾನನೇ, ನೀನು ನನ್ನನ್ನು ಮದುವೆಯಾಗ ಬೇಕೆಂದು ಹೇಳಿಕಳುಹಿಸಲಿಲ್ಲವೇ ? ಅದೇ ಆಸೆಯಿಂದಲ್ಲವೆ ಈ ಕೊಡಗಿನ ಮೇಲೆ ದಂಡೆತ್ತಿ ಬಂದು ಇಷ್ಟು ಅತ್ಯಾಚಾರಗಳನ್ನು ನಡೆಸಿದ್ದು ?

ಸುಲ್ತಾನ್—ಹಾಯ್, ಹಾಯ್, ಎಂತಹ ಮಾತು ನನ್ನ ಕಿವಿಗಳಲ್ಲಿ ಸೀಸ ವನ್ನು ಕಾಸಿ ಹುಯಿದಂತಾಗುತ್ತಿದೆ ಹೃದಯವು ಶಲ್ಯಯಾತನೆಯನ್ನನುಭವಿಸುತ್ತಿದೆ. ಬೇಗಂಸಾಹೇಬ್, ಯಾರೋ ನನ್ನ ಶತ್ರುಗಳು ತಮ್ಮ ಕಿವಿಗೆ ಈ ಅಸಹ್ಯವಾದ ಮಾತುಗಳನ್ನು ಹಾಕಿದ್ದಾರೆ ತಾವು ಅದನ್ನು ಹೇಗೆ ನಂಬಿದಿರಿ ತಾಯೇ ?

ಬೇಗಂ—ನನ್ನಲ್ಲಿ ಬಲವಾದ ಸಾಕ್ಷಿ ಇದೆ ನೀವು ನಿಮ್ಮ ದರ್ಬಾರಿನಲ್ಲಿ ನನ್ನ ವಿಚಾರಣೆಯನ್ನು ಮಾಡಿದಂತಲ್ಲ. ಇಂದು ತಮ್ಮನ್ನು ವಿಚಾರಣೆ ಮಾಡುವವರೊಬ್ಬ ರಿದ್ದರೆ ನನ್ನಲ್ಲಿ ಪ್ರಬಲವಾದ ಸಾಕ್ಷಿ ಇದೆ

ಸುಲ್ತಾನ್—ಬೇಗಂಸಾಹೇಬ್, ತಮ್ಮ ಸಾಕ್ಷಿಯನ್ನು ಕೊಡಿರಿ ತಾವೇ ನನ್ನನ್ನು ವಿಚಾರಣೆ ಮಾಡಿರಿ ತಾವೇ ಶಿಕ್ಷಯನ್ನು ವಿಧಿಸಿರಿ. ನಾನು ಒಪ್ಪಿಕೊಳ್ಳುತ್ತೇನೆ

ಬೇಗಂಸಾಹೇಬಳು ಮಾಲತಿಯ ಕಡೆ ತಿರುಗಿ "ಮಾಲತಿ, ಕೆಳಗೆ ಹೋಗಿ ನನ್ನ ಸಾಕ್ಷಿಗಳನ್ನು ಹಿಡಿದು ತರುವಂತೆ ಇಮಾಮುಸಿಗೆ ಹೇಳು" ಎಂದಳು

ಬೇಗಂ— ಸುಲ್ತಾನರೇ, ಕುಳಿತುಕೊಳ್ಳಿರಿ ಆಸನದಲ್ಲಿ ಕುಳಿತುಕೊಳ್ಳಿರಿ ನಿಮ್ಮ ಸಾಕ್ಷಿಯು ಬರುತ್ತದೆ ಎಂದು ಹೇಳಿದಳು ಸುಲ್ತಾನನು ಆಸನದಲ್ಲಿ ಕುಳಿತನು.

ಇಮಾಮನು ಮೀರ್‌ಸಾದಕನನ್ನೂ ಹುಚ್ಚಿಯನ್ನೂ ಅಂತಃಪುರಕ್ಕೆ ಕರೆತಂದು ನಿಲ್ಲಿಸಿದನು.

ಅವರನ್ನು ನೋಡಿ ಸುಲ್ತಾನರಿಗೆ ಆಶ್ಚರ್ಯವಾಯಿತು

ಹುಚ್ಚಿಯು ಸುಲ್ತಾನರವರನ್ನು ನೋಡಿ, "ಸುಲ್ತಾನರವರೇ ! ಈ ರಾಣಿಯು ನಗರದ ರಾಣಿಯುವರಂತಲ್ಲ ಬಹಳ ಕ್ರೂರಹೃದಯಳು. ನಮ್ಮಿಬ್ಬರನ್ನೂ ಬಂದೀಖಾನೆಯಲ್ಲಿ ಹಾಕಿ ಚಿತ್ರಹಿಂಸೆ ಕೊಟ್ಟಿದ್ದಾಳೆ ಇವಳಿಗೆ ತಕ್ಕ ಶಿಕ್ಷೆಯಾಗಬೇಕು" ಎಂದಳು

ಬೇಗಂಸಾಹೇಬಳು ಕ್ರೋಧದಿಂದ ಮುಂದೆ ಬಂದು "ಬಾಂದಿ, ಬಾಯಿಮುಚ್ಚು ಈಗ ಶಿಕ್ಷೆ ಮಾಡಿಸುತ್ತೇನೆ" ಎಂದು ಗದ್ದರಿಸಿ—ಮೀರ್‌ಸಾದಕನೇ, ಇಂದು ನಿನ್ನ ವಿಚಾರಣೆ ನಿಜವನ್ನು ಹೇಳು ಸುಳ್ಳು ಹೇಳಿದರೆ ಈ ಕತ್ತಿಯಿಂದ ಒಂದೇ ಏಟಿಗೆ ನಿನ್ನ ತಲೆಯನ್ನು ಹಾರಿಸುತ್ತೇನೆ ಇನ್ನು ಸುಲ್ತಾನರು ಪಾಪಿಯಾದ ನಿನ್ನನ್ನು ರಕ್ಷಿಸಲಾರರು

"ನೀನು ನನ್ನಲ್ಲಿ ಬಂದು ಸುಲ್ತಾನರು ನನ್ನಲ್ಲಿ ಮೋಹಗೊಂಡಿದ್ದಾರಂದೂ, ನಾನು ಅವರನ್ನು ಮದುವೆಯಾಗಬೇಕೆಂದೂ ಕೇಳಲಿಲ್ಲವೇ ? ಅವರು ಈ ಮಹಾ ಸೈನ್ಯದೊಂದಿಗೆ ಕೊಡಗಿಗೆ ಬಂದಿರುವುದು ಅದೇ ಉದ್ದೇಶವೇ ಎಂದು ಹೇಳಲಿಲ್ಲವೇ ? ಇದಕ್ಕೆ ಈ ಹುಚ್ಚಿಯು ಸಾಕ್ಷಿ

ಹುಚ್ಚಿಯು ಮುಂದೆ ಬಂದು, "ಸುಲ್ತಾನರವರೇ, ಬೇಗಂಸಾಹೇಬರೇ, ನೀವು ಪ್ರಾಣದಾನ ಮಾಡುವುದಾದರೆ ನಾನು ಸಾಕ್ಷಿಯನ್ನು ಹೇಳುತ್ತೇನೆ. ನಿಜ ಈ ಮೀರ್ ಸಾದಕನು ಹಾಗೆ ಹೇಳಿದನು "

ಬೇಗಂಸಾಹೇಬಳು—ಸುಲ್ತಾನರವರೇ ! ಈಗ ಏನು ಹೇಳುವಿರಿ ?

ಸುಲ್ತಾನನು ವಿಷಣ್ಣನಾಗಿ "ಮೀರ್‌ಸಾದಕ್, ನೀನು ಪಾಪಿ ದೊಡ್ಡ ನವಾಬರು ಆ ಮಾತನ್ನು ಎಷ್ಟೋ ಬಾರಿ ಹೇಳಿದ್ದಾರೆ ಇರಲಿ ಈಗ ಒಂದು ಬಾರಿ ನಿಜವನ್ನು ಹೇಳು, ನಾನು ಎಂದಾದರೂ ಬೇಗಂಸಾಹೇಬರ ವಿಷಯದಲ್ಲಿ ಹಾಗೆ ನುಡಿದುದುಂಟೆ ? ಮನದಲ್ಲಾದರೂ ಹಾಗೆ ಎಣಿಸಿದುದುಂಟೆ?"

ಮೀರ್‌ಸಾದಕನು—ಇಲ್ಲಾ, ಇಲ್ಲಾ, ಅದೆಲ್ಲಾ ನನ್ನ ಕಲ್ಪನೆ ಈ ಬೇಗಂಳನ್ನು ವಂಚಿಸಲು ನಾನು ಮಾಡಿದ ಪ್ರಲೋಭ, ಎಂದು ದೀನವಾಣಿಯಿಂದ ನುಡಿಯುತ್ತಾ ಸುಲ್ತಾನರ ಪಾದದಲ್ಲಿ ಬಿದ್ದನು

ಸುಲ್ತಾನರು ಬೇಗಂಸಾಹೇಬರ ಕಡೆ ತಿರುಗಿ, "ಬೇಗಂಸಾಹೇಬ್, ಇವರಿಬ್ಬರನ್ನೂ ಪುನಃ ಬಂಧನದಲ್ಲಿಡಿಸಿರಿ. ಇವರ ವಿಚಾರಣೆಯನ್ನು ಮತ್ತೊಂದು ದಿನ ನಡೆಸುತ್ತೇನೆ. ತಮಗೆ ಈಗಲಾದರೂ ನಾನು ನಿರಪರಾಧಿಯೆಂದು ಕಂಡರೆ ನನ್ನ ತಪ್ಪುಗಳನ್ನು ಕ್ಷಮಿಸಿರಿ."

ಅಷ್ಟರಲ್ಲಿ ಮೀರ್‌ಸಾದಕನು ಧೈರ್ಯದಿಂದ ಮುಂದೆ ಬಂದು, "ಸುಲ್ತಾನರವರೇ, ನನ್ನನ್ನು ಬಂಧನದಲ್ಲಿಡಿಸುವುದು ಮಾತ್ರವಲ್ಲ. ಗಲ್ಲಿಗೇರಿಸಿರಿ. ಆದರೆ, ತಾವು ಅಪರಾಧಿಗಳಲ್ಲವೆಂದು ಸಾಬೀತಾದ ಮಾತ್ರಕ್ಕೆ ಬೇಗಂಸಾಹೇಬಳ ಅಪರಾಧವು ಅಳಿಸಿಹೋಗ

ಲಾರದು. ಈ ಬೇಗಂಸಾಹೇಬಳು ದೊಡ್ಡ ದಿವಾನರವರ ಪತ್ನಿಯಾಗಿದ್ದು, ಈ ಕೊಡಗಿನ ರಾಜರನ್ನು ವರಿಸಿ ಕುಲಕ್ಕೆ ಕಳಂಕ ತಂದಿದ್ದಾಳೆ ಸುಲ್ತಾನ್ ರಾಜ್ಯದ ಮೇಲೆ ಈ ಕೂಡಗರನ್ನು ಎತ್ತಿ ಕಟ್ಟಿದ್ದಾಳ" ಎಂದನು

ಸುಲ್ತಾನನು ಕ್ರೋಧದಿಂದ "ಮೀರ್‌ಸಾದಕ್, ನೀನು ಸುಳ್ಳ! ವಂಚಕ! ಆ ರಾಜನೆಲ್ಲಿದ್ದಾನೆ ಅವನು ಓಡಿಹೋಗಿದ್ದಾನೆ ನೀನು ಬೇಗಂಸಾಹೇಬರ ಮೇಲೆ ಅಪವಿತ್ರವಾದ ದೂರುಗಳನ್ನು ಆಡಿದರೆ ನಿನ್ನ ನಾಲಿಗೆಯನ್ನು ಸೀಳಿಸುತ್ತೇನೆ"

ಬೇಗಂಸಾಹೇಬಳು—ಸುಲ್ತಾನರೇ! ನಾನು ಇಂಥ ವಿಚಾರಣೆಯನ್ನೊಪ್ಪುವುದಲ್ಲ ಆ ಮೀರ್‌ಸಾದಕನು ನನ್ನ ವಿಚಾರಣೆಯಾಗಬೇಕೆನ್ನುತ್ತಾನೆ ಅದು ನ್ಯಾಯವಾಗಿದೆ ಆ ಸಾಕ್ಷಿಯನ್ನು ನಾನು ಒದಗಿಸುತ್ತೇನೆ ಎಂದು ಎದೆ ತಟ್ಟಿ ಹೇಳಿದಳು ಬನ್ನಿ ನನ್ನ ಜೊತೆಯಲ್ಲಿ ಬನ್ನಿ! ಕೊಡಗಿನ ರಾಜರನ್ನು ತೋರಿಸುತ್ತೇನೆ ಎಂದು ದಡದಡನೆ ತನ್ನ ವಿಶ್ರಾಂತಿ ಗೃಹದ ಬಾಗಿಲಿಗೆ ಹೋಗಿ, ಆ ಬಾಗಿಲನ್ನು ಡಬಾರನೆ ಒದ್ದಳು. ಬಾಗಿಲು ತೆಗೆಯಿತು!

"ಸುಲ್ತಾನರೇ! ಇಲ್ಲಿ ನೋಡಿರಿ! ಈ ಕೊಡಗಿನ ರಾಜರನ್ನು" ಎಂದು ತೋರಿಸಿದಳು

ಸುಲ್ತಾನನು ಗಾಬರಿಯಿಂದ ಹೋಗಿ ನೋಡಿದನು

ಆ ಮೃತದೇಹವನ್ನು ನೋಡಿ, "ಇವನು ಕೊಡಗಿನ ರಾಜನೇ!" ಎಂದನು.

ಹುಚ್ಚಿಯು ತಟ್ಟನೆ ಹಾರಿಬಂದು ನೋಡಿದಳು. "ಹೌದು, ಹೌದು, ಇವನೇ ಕೂಡಗಿನ ರಾಜ! ನಾನು ನೋಡಿದ್ದೇನೆ ಬೇಗಂಸಾಹೇಬಳ ಶಯನಗೃಹದಲ್ಲಿ ರಾಜನ ಮೃತಶರೀರ" ಎಂದು ಕೂಗಿದಳು ಸುಲ್ತಾನರು ಆಶ್ಚರ್ಯಚಕಿತರಾಗಿ "ಈ ರಾಜನನ್ನು ಯಾರು ಕೊಂದರು" ಎಂದು ಕೇಳಿದರು.

ಮಾಲತಿಯು ಮುಂದೆ ಬಂದು "ಸುಲ್ತಾನರೇ! ಇವನನ್ನು ನಾನು ನನ್ನ ಕೈಯಾರ ಕೊಂದೆ ಇವನು ನನ್ನ ಪ್ರಿಯಪತಿಯನ್ನು ಕೊಂದನು ಒಂದುದಿನ ಬೇಗಂರವರ ಮೇಲೆ ಈ ರಾಜನು ಆಕ್ರಮಣ ಮಾಡಿ ಅತ್ಯಾಚಾರ ನಡೆಸುವುದರಲ್ಲಿದ್ದನು. ನನ್ನ ಪತಿಯು ಈ ರಾಜನನ್ನು ಆಕ್ರಮಿಸಿ ದೂರ ತಳ್ಳಿದನು. ರಾಜನು ಕೋಪೋದ್ರೇಕದಿಂದ ಅವನನ್ನು ಇರಿದು ಕೊಂದನು ಅಂದಿನಿಂದ ಬೇಗಂಸಾಹೇಬಳನ್ನು ಈ ರಾಜನು ಗುಪ್ತವಾಗಿ ಬಂಧನದಲ್ಲಿಟ್ಟನು ತಾವು ಸೈನ್ಯಸಮೇತವಾಗಿ ಕೊಡಗಿಗೆ ಬರುತ್ತಲೇ ಭಯದಿಂದ ರಾಣಿಯವರನ್ನು ಬಂಧನದಿಂದ ಬಿಟ್ಟನು. ನಿನ್ನೆ ರಾತ್ರಿ ಬೇಗಂಸಾಹೇಬರು ಗಾಢನಿದ್ರೆಯಲ್ಲಿದ್ದಾಗ ಈ ರಾಜನು ಯುದ್ಧದಲ್ಲಿ ಸೋತುಬಂದು ಬೇಗಂರವರನ್ನು ಆಕ್ರಮಣ ಮಾಡುವುದರಲ್ಲಿದ್ದನು ಬೇಗಂಸಾಹೇಬರನ್ನು ಕಾಯುತ್ತಿದ್ದ ನಾನು ಕಠಾರಿಯಿಂದ ಇರಿದು ಇವನನ್ನು ಕೊಂದೆನು" ಎಂದಳು.

ಸುಲ್ತಾನನು —ಮಾಲತಿ, ನೀನು ! ನೀನು ಈ ರಾಜನನ್ನು ಕೊಂದೆಯಾ ? ಈ ಯುದ್ಧವನ್ನು ಮುಕ್ತಾಯ ಮಾಡಿದವಳು ನೀನು ! ಎಂದು ಶಹಬಾಸ್‌ಗಿರಿಯನ್ನು ಕೊಟ್ಟನು

ರಾಜಭಟರನ್ನು ಕರೆಸಿ, ಮಿರ್‌ಸಾದಕನನ್ನೂ ಹುಚ್ಚಿಯನ್ನೂ ಬಂಧನದಲ್ಲಿಡುವಂತೆ ಆಜ್ಞಾಪಿಸಿದನು ಭಟರು ಅವರಿಬ್ಬರನ್ನೂ ಕರೆದೊಯ್ದರು.

ಸುಲ್ತಾನನು ಬೇಗಂಸಾಹೇಬಳನ್ನು ಮರ್ಯಾದೆಯಿಂದ ವಂದಿಸಿ, "ಬೇಗಂ ಸಾಹೇಬಾ ! ನನ್ನ ಅಪರಾಧಗಳನ್ನು ಕ್ಷಮಿಸಿರಿ ತಾವು ನನ್ನೊಡನೆ ಶ್ರೀರಂಗಪಟ್ಟಣಕ್ಕೆ ದಯಮಾಡಿಸಿರಿ" ಎಂದು ಬೇಡಿಕೊಂಡನು

ಬೇಗಂ—ಸುಲ್ತಾನರೆ ! ಬಡಾಫಕೀರರು ನನ್ನನ್ನು ದೌಲತ್‌ರಾಣಿಯವರಿಗೊಪ್ಪಿಸಿದರು ನಾನು ಅವರ ಸಾನ್ನಿಧ್ಯವನ್ನು ಬಿಟ್ಟುಬಂದುದೇ ತಪ್ಪು. ದೌಲತ್ ರಾಣಿಯವರೂ, ರಾಧಾರಾಣಿಯವರೂ ಇಲ್ಲಿಗೆ ಬಂದಿದ್ದಾರೆ. ನಾನು ನಿಮ್ಮ ಬಂದಿಯಲ್ಲದಿದ್ದರೂ, ನಾನು ಆ ರಾಣಿಯವರ ಬಂದಿ ನಾನು ಅವರ ಜೊತೆಯಲ್ಲಿ ಹೋಗುವೆನು ಇನ್ನು ಆಮರಣಾಂತ ಅವರ ನೆರಳನ್ನು ಬಿಟ್ಟು ಅಲುಗುವುದಿಲ್ಲ

ಸುಲ್ತಾನ್—ಬೇಗಂಸಾಹೇಬ್! ದೌಲತ್ ರಾಧಾರಾಣಿಯವರು ಈ ಕೊಡಗಿಗೆ ಬಂದಿದ್ದಾರೆಯೇ ? ಅವರೇಕೆ ಇಲ್ಲಿಗೆ ಬಂದರು ? ನಾನು ಅವರ ದರ್ಶನವನ್ನೇ ಮಾಡಲಿಲ್ಲ.

ಬೇಗಂ—ಸುಲ್ತಾನರವರೇ ! ಅವರು ನನ್ನನ್ನು ರಕ್ಷಣೆ ಮಾಡುವುದಕ್ಕಾಗಿ ಬಂದರು.

ಸುಲ್ತಾನ್—ಅವರೆಲ್ಲಿದ್ದಾರೆ ? ನನಗೆ ಭೇಟಿ ಮಾಡಿಸಲಾರಿರಾ ?

ಬೇಗಂ—ಸುಲ್ತಾನರವರೇ, ನಾನು ಅವರನ್ನು ನಿನ್ನೆ ಅರ್ಧರಾತ್ರಿಯಲ್ಲಿ ತಮ್ಮ ಗುಡಾರದ ಹತ್ತಿರ ನೋಡಿದೆ ಪುನಃ ಅವರನ್ನು ನಾನೆಷ್ಟು ಹುಡುಕಿಸಿದರೂ ಅವರು ಸಿಕ್ಕಲಿಲ್ಲ

ಸುಲ್ತಾನ್—ಬೇಗಂಸಾಹೇಬರೇ, ಅವರಿಗೆ ಭಯವಿಲ್ಲ ಅವರು ಎಂಥಾ ರಣರಂಗದಲ್ಲಿದ್ದರೂ ಜಯಿಸಬಲ್ಲರು ನಮ್ಮ ಸೈನಿಕರು ಅವರ ಮೇಲೆ ಕೈ ಎತ್ತುವುದಿಲ್ಲ ಕೊಡಗಿನ ಸೈನಿಕರು ಅವರನ್ನು ನೋಡಿದರೆ ಬೆದರುತ್ತಾರೆ. ನಾನು ಅವರನ್ನು ಪತ್ತೆ ಮಾಡಿಸಿ ತಮ್ಮ ಬಿಡಾರಕ್ಕೆ ಕಳುಹಿಸುತ್ತೇನೆ. ಪುನಃ ಇಲ್ಲಿಗೆ ಬಂದು ತಮ್ಮ ದರ್ಶನ ಮಾಡುತ್ತೇನೆ.

ಬೇಗಂ—ಸುಲ್ತಾನರೇ, ರಾಣಿಯರಿಬ್ಬರೂ ಕಾಳೇಶ್ವರಕ್ಷೇತ್ರದಲ್ಲಿ ಇಳಿದಿದ್ದಾರ ಅಲ್ಲೇ ಅವರ ವಸತಿ.

ಸುಲ್ತಾನ್—ನಾನು ಅವರ ಅನ್ವೇಷಣ ಮಾಡುತ್ತೇನೆ.

ಸುಲ್ತಾನನು ಬೇಗಂರವರ ಅಪ್ಪಣೆ ಪಡೆದು ಶಿಬಿರಕ್ಕೆ ಹೋಗಿ ಸೇರಿದನು

ಸುಲ್ತಾನರವರು ಶಿಬಿರಕ್ಕೆ ತಲಪುವ ಹೊತ್ತಿಗೆ ಸೇನಾಧಿಪತಿಗಳು ಮುಂದಿನ ರಂಗವನ್ನು ಸಿದ್ಧಪಡಿಸಿದ್ದರು ಸುಲ್ತಾನನು ಬಂದು ಆ ದೃಶ್ಯವನ್ನು ಕಣ್ಣಾರೆ ನೋಡಿದನು ಸೇನಾಧಿಪತಿಗಳು ಅರಮನೆಯ ಮುಂದಿನ ಎತ್ತರವಾದ ಪ್ರದೇಶದಲ್ಲಿ ಸಾಲು ಸಾಲಾಗಿ ಸ್ತ್ರೀಯರನ್ನು ನಿಲ್ಲಿಸಿದ್ದಾರೆ ಸಾವಿರಸಂಖ್ಯಾತರಾದ ಸ್ತ್ರೀಯರು ನಿಲ್ಲಿಸಲ್ಪಟ್ಟಿದ್ದಾರೆ ಅವರ ಮುಖಕಮಲಗಳು ರೋಷದಿಂದ ಕೆಂಪಡರಿವೆ ಹಿಂದಿನದಿನ ರಾತ್ರಿ ಸುಲ್ತಾನನ ಶಿಬಿರವನ್ನು ಧ್ವಂಸಮಾಡಿದ ಹೆಮ್ಮೆಯಿಂದ ಉತ್ತೇಜಿತವಾಗಿವೆ ಅವರುಗಳು ದಿಟ್ಟತನದಿಂದ ನಿಂತಿದ್ದಾರೆ ಆ ಮೈದಾನದ ಎಂಟು ಮೂಲೆಗಳಲ್ಲಿಯೂ ದೊಡ್ಡ ಫಿರಂಗಿಗಳು ಸಿದ್ಧವಾಗಿವೆ ಬಿಚ್ಚುಕತ್ತಿಗಳನ್ನು ಹಿಡಿದು ಎರಡು ಪಕ್ಕದಲ್ಲಿಯೂ ಸೈನಿಕರು ನಿಂತಿದ್ದಾರೆ ಆ ಸ್ತ್ರೀ ರತ್ನಗಳೆಲ್ಲಾ ಸೈನಿಕರಿಗೆ ಕೊಡುವ ಪುರಸ್ಕಾರಗಳೆಂದು ಸೈನ್ಯಿಕರು ಅತ್ಯಾನಂದ ಭರಿತರಾಗಿದ್ದಾರೆ ಸುಲ್ತಾನನು ಬಂದು ಆಸನದಲ್ಲಿ ಕುಳಿತನು ಸೇನಾಧಿಪತಿಗಳನ್ನು ಕರೆದು ಉಚ್ಚಕಂಠದಿಂದ, "ಈ ಸ್ತ್ರೀಯರನ್ನು ಸಾಮಾನ್ಯ ಸ್ತ್ರೀಯರಂತೆ ಎಣಿಸಲು ಸಾಧ್ಯವಿಲ್ಲ ಇದನ್ನು ಮಹತ್ತರವಾದ ಸ್ತ್ರೀ ಸೈನ್ಯವೆಂದೇ ಭಾವಿಸಬೇಕು ನಿನ್ನೆಯ ರಾತ್ರಿ ಇವರು ನಮ್ಮ ಶಿಬಿರದ ಮೇಲೆ ಪ್ರಬಲವಾದ ಧಾಳಿಯನ್ನು ನಡೆಸಿದ್ದಾರ ಮೈಸೂರಿನ ಹತ್ತು ಸಾವಿರ ಸೈನಿಕರನ್ನು ಕೊಂದಿದ್ದಾರ ನಮ್ಮ ಶಿಬಿರವನ್ನೆಲ್ಲಾ ಸುಟ್ಟು ಭಸ್ಮ ಮಾಡಿದ್ದಾರೆ ಈ ಸ್ತ್ರೀಯರಿಗೆ ತಕ್ಕ ಶಿಕ್ಷೆಯಾಗಲೇ ಬೇಕು ನಮ್ಮ ಸೈನಿಕರು ಅವರವರಿಗೆ ಯಾವ ರಮಣಿಯು ಬೇಕೋ ಅವಳನ್ನು ಸ್ವೀಕರಿಸಲಿ ರಾಜಧಾನಿಗೆ ಕರೆದುಕೊಂಡು ಹೋಗಿ ಅವರನ್ನು ಮದುವೆಯಾಗಲಿ" ಎಂದು ಅಪ್ಪಣೆ ಮಾಡಿದನು ಸೇನಾ ನಾಯಕರು ಸೈನಿಕರಿಗೆ ಪುರಸ್ಕಾರವನ್ನು ದಾನಮಾಡುವಷ್ಟರಲ್ಲಿ ದೂರದಿಂದ ಕುದುರೆಯನ್ನು ಓಡಿಸುತ್ತಾ, ಬೇಗಂ ಸಾಹೇಬಳು ಉಚ್ಚ ಕಂಠದಿಂದ ಕೂಗುತ್ತಾ, ಸುಲ್ತಾನರ ಸಮ್ಮುಖದಲ್ಲಿ ಬಂದು ಬಿದ್ದಳು. ಸುಲ್ತಾನರಿಗೆ ಗಾಬರಿಯಾಯಿತು ಬೇಗಂ ಸಾಹೇಬರು ಚೇತರಿಸಿಕೊಂಡು ಎದ್ದು, "ಸುಲ್ತಾನರೆ! ಪ್ರಮಾದ, ಪ್ರಮಾದ! ನೀವು ಎಂತಹ ಮಹಾಪರಾಧವನ್ನು ಮಾಡಿದಿರಿ ಈ ದರಬಾರನ್ನು ಇಲ್ಲಿಗೆ ಮುಕ್ತಾಯ ಮಾಡಿರಿ ಇಂದಿನ ಕಾರ್ಯವು ಸ್ವಲ್ಪ ಕೈಮಿಂಚಿ ಹೋಗಿದ್ದರೆ, ಮೈಸೂರಿಗೆ ಶಾಶ್ವತವಾದ ಕಳಂಕವು ತಟ್ಟುತ್ತಿದ್ದಿತು ಈ ಸ್ತ್ರೀ ಸಮೂಹದಲ್ಲಿ, ಈ ಬಂದಿಗಳ ಮಧ್ಯದಲ್ಲಿ ದೌಲತ್‌ರಾಣಿಯವರೂ ರಾಧಾರಾಣಿಯವರೂ ಇದ್ದಾರೆ ನಿಮ್ಮ ಪುರಸ್ಕಾರದಲ್ಲಿ ಅವರೂ ಸೇರಿ ಹೋಗಿದ್ದಾರೆ ಈ ಕೃತ್ಯವು ಕೈ ಮಿಂಚಿ ಹೋಗಿದ್ದರೆ ನೀವು ಆತ್ಮಹತ್ಯ ಮಾಡಿಕೊಳ್ಳುತ್ತಿದ್ದಿರಿ. ಈ ಸ್ತ್ರೀಯರೆಲ್ಲರೂ ಪತಿವ್ರತಾ ಶಿರೋಮಣಿಗಳು ವೀರ ರಮಣಿಯರು ಈ ಇಡೀ ರಾಜ್ಯದ ಮೇಲೆ ನೀವು ಅತ್ಯಾಚಾರ ಮಾಡುತ್ತಿದ್ದೀರಿ.

ಇವರನ್ನೆಲ್ಲಾ ಚಿತ್ರಿಕಟ್ಟಿದವಳು ನಾನು. ಈ ಮಹಾಯುದ್ಧಕ್ಕೆ ಕಾರಣೀಭೂತಳು ನಾನು ಈ ಪಾಪವನ್ನು ನಾನು ನೋಡಲಾರೆ, ನೋಡಿ ಸಹಿಸಲಾರೆ" ಎಂದು ಹುಚ್ಚಳಂತೆ ಕೂಗುತ್ತಾ, ಕೈಯ್ಯಲ್ಲಿದ್ದ ಕರಾರಿಯನ್ನು ಬಲವಾಗಿ ಎದೆಗೆ ಚುಚ್ಚಿಕೊಂಡಳು ಫಾತಿಮಾ ಬೇಗಂಳ ಶರೀರವು ಭೂಮಿಯ ಮೇಲೆ ಬಿತ್ತು ಸುಲ್ತಾನನೇ ಎದ್ದು ಬಂದು ಬೇಗಂ ಸಾಹೇಬಳನ್ನು ಉಪಚರಿಸಿದನು ಹೃದಯದಲ್ಲಿ ನಾಟಿದ್ದ ಕರಾರಿಯನ್ನು ಮೆತ್ತಗೆ ಕಿತ್ತು ತೆಗೆದನು ಫಾತಿಮಾಬೇಗಂಳ ತಲೆಯು ಸುಲ್ತಾನನ ತೊಡೆಯ ಮೇಲಿತ್ತು ಫಾತಿಮಳು ಒಂದು ಬಾರಿ ಬಿರುಗಣ್ಣನ್ನು ಬಿಟ್ಟು, ನೋಡಿದಳು ಮತ್ತೊಂದು ಬಾರಿ ನಕ್ಕಳು ! ಜೀವವು ಹಾರಿಹೋಯಿತು ಸುಲ್ತಾನರ ಕಣ್ಣುಗಳು ಅಶ್ರುಮಯವಾದುವು. ಟಿಪ್ಪೂಸುಲ್ತಾನನು ಎದ್ದು ಕಾಲು ನಡಿಗೆಯಲ್ಲಿಯೇ ತನ್ನ ಗುಡಾರಕ್ಕೆ ಹೋದನು. ಅಲ್ಲಿ ಜ್ಞಾನಶೂನ್ಯನಾಗಿ ತನ್ನ ಪರ್ಯಂಕದಲ್ಲಿ ಬಿದ್ದು ಬಿಟ್ಟನು

ಸೈನ್ಯದ ಶಿಸ್ತು ಹಾಗೆಯೇ ಇದ್ದಿತು ಆ ಬಂಧನದಲ್ಲಿದ್ದ ಸ್ತ್ರೀ ವೃಂದದಿಂದ ಬುರಕಿಯನ್ನು ಹಾಕಿದ್ದ ಸ್ತ್ರೀ ವ್ಯಕ್ತಿಯೊಂದು ಧೈರ್ಯದಿಂದ ಮುಂದೆ ಬಂದಿತು ಯಾರೂ ಅವಳನ್ನು ತಡೆಯಲಾರದೆ ಹೋದರು ಆ ವ್ಯಕ್ತಿಯು ಸುಲ್ತಾನರು ಕುಳಿತಿದ್ದ ಆಸನದ ಸಮೀಪಕ್ಕೆ ಬಂದು ನಿಂತಳು ! ಸರ್ವ ಸೇನಾನಾಯಕರಾದ ಅಮೀರ್ ನೂರುಲ್ಲಾ ಖಾನರು, ಗಡುಸು ಧ್ವನಿಯಿಂದ "ನೀನಾರು ? ನಿನ್ನ ಸ್ಥಳವನ್ನು ಬಿಟ್ಟು ಇಲ್ಲಿಗೇಕೆ ಬಂದೆ ! ಹೋಗಿ ನಿನ್ನ ಸ್ಥಳದಲ್ಲಿ ಹೋಗಿ ನಿಂತುಕೋ ! ಇಲ್ಲದಿದ್ದರೆ ಗುಂಡಿನಿಂದ ಹೊಡೆಸುತ್ತೇನೆ" ಎಂದು ಘರ್ಜಿಸಿದರು

ದೌಲತ್ತಳು— ಖಾನ್‌ಸಾಹೇಬರೇ ! ನಾನು ಕೊಡಗಿನ ಸ್ತ್ರೀಯಲ್ಲ, ನಾನು ದೊಡ್ಡ ನವಾಬರ ಪುತ್ರಿ ! ಈ ಉಂಗುರವನ್ನು ನೋಡಿ, ಎಂದು ತನ್ನ ಕೈಯ್ಯನ್ನು ಅವನ ಕಡೆ ತೋರಿಸುತ್ತಾ— ಸುಲ್ತಾನರು ಇಲ್ಲಿ ಇಲ್ಲ ! ಅವರಿಲ್ಲದಾಗ ನಾನು ಮಹಾರಾಣಿ ! ನನ್ನ ಹೆಸರು ದೌಲತ್ ! ನಾನು ಮುಸಲ್ಮಾನಳಾದರೂ ಈ ಬುರುಕಯನ್ನು ಕಿತ್ತೊಗೆಯುತ್ತೇನೆ ನೋಡಿರಿ ! ಎಂದು ಬುರುಕೆಯನ್ನು ತೆಗೆದು, ಫಾತಿಮಳ ಶವದ ಮೇಲೆ ಹೊದ್ದಿಸಿದಳು ನಂತರ ಸುಲ್ತಾನರು ಕುಳಿತಿದ್ದ ಆಸನದ ಮೇಲೆ ಏರಿನಿಂತು, "ಸೇನಾನಾಯಕರೇ ! ನನ್ನ ಆಜ್ಞೆಯನ್ನು ಪಾಲನ ಮಾಡುವುದಾದರೆ ಮಾಡಿರಿ ! ಇಲ್ಲದಿದ್ದರೆ ಎಂಟು ದಿಕ್ಕುಗಳಲ್ಲಿಯೂ ಇರುವ ತೋಪುಗಳನ್ನು ಉಡಾಯಿಸಿರಿ ! ಈ ಸಹಸ್ರ ಸಹಸ್ರ ಸಂಖ್ಯಾತರಾದ ಕೊಡಗಿನ ಸತೀಮಣಿಯರೊಡನೆ ನಾನೂ ಸಂತೋಷದಿಂದ ಪ್ರಾಣವನ್ನೊಪ್ಪಿಸುತ್ತೇನೆ ಒಬ್ಬ ಸೈನಿಕನೂ ಒಬ್ಬ ಸ್ತ್ರೀಯಳ ಕರಸ್ಪರ್ಶವನ್ನೂ ಮಾಡಕೂಡದು." ಎಂದು ಆಜ್ಞೆ ಮಾಡಿದಳು.

ಸೇನಾನಾಯಕನು ಮುಂದೆ ಬಂದು ಅಭಿವಾದನ ಮಾಡಿ, "ಮಹಾರಾಣಿಯ

ವರೇ ! ಕ್ಷಮಿಸಬೇಕು. ಇದು ನನ್ನ ತಪ್ಪಲ್ಲ ! ಸುಲ್ತಾನರವರ ಆಜ್ಞೆ !" ಎಂದು ಹೇಳಿದನು.

"ಖಾನ್ ಸಾಹೇಬರವರೇ ! ಈ ಮೈಸೂರು ರಾಜ್ಯವು ದೊಡ್ಡ ನವಾಬರದು ! ಈ ಸೈನ್ಯವು ಅವರದು, ಅವರ ಹೆಸರು ಹೇಳಿದ ಸ್ಥಳದಲ್ಲಿ ಇಂಥಾ ಅತ್ಯಾಚಾರವು ನಡೆಯಕೂಡದು ! ನಾನು ಅಪ್ಪಣೆ ಮಾಡುತ್ತೇನೆ ಸೈನಿಕರೆಲ್ಲರೂ ಸರಿದು ಒಬ್ಬೊಬ್ಬರಾಗಿ ಹೊರಟು ಹೋಗಬೇಕು ಇಲ್ಲಿ ಸ್ತ್ರೀಯರು ಮಾತ್ರ ಇರಬೇಕು !" ಎಂದು ದೌಲತ್ತಳು ಆಜ್ಞೆ ಮಾಡಿದಳು.

ಆ ಸ್ತ್ರೀಯರ ಕಂಠದಿಂದ "ಜೈ ದೌಲತ್‌ರಾಣಿಕಿ-ಜೈ !" ಎಂಬ ಜಯಧ್ವನಿ ಎದ್ದಿತು ಆ ಜಯಧ್ವನಿಯು ಭೂಮ್ಯಾಕಾಶಗಳನ್ನು ವ್ಯಾಪಿಸಿತು ಸೇನಾಪತಿಯು ಕತ್ತಿಯನ್ನೆತ್ತಿ ಸೈನ್ಯಿಕರಿಗೆಲ್ಲಾ ಆ ಸ್ಥಳವನ್ನು ಬಿಟ್ಟು ಹೋಗಬೇಕೆಂದು ಅಪ್ಪಣೆ ಮಾಡಿದನು ಎಲ್ಲರೂ ಒಬ್ಬೊಬ್ಬರಾಗಿ ಹೊರಟು ಹೋದರು

ದೌಲತ್ ರಾಣಿಯು ರಾಜಪೀಠದ ಮೇಲೆಯೇ ನಿಂತಿದ್ದಳು ಸೈನಿಕರೆಲ್ಲರೂ ಹೊರಟು ಹೋಗುತ್ತಲೇ ಸ್ತ್ರೀಯರನ್ನುದ್ದೇಶಿಸಿ—"ಮಹಿಳೆಯರಿರಾ ! ವೀರ ರಮಣಿಯರಿರಾ ! ನೀವುಗಳು ಸ್ವತಂತ್ರರು ನಿಮ್ಮ ನಿಮ್ಮ ಮನೆಗಳಿಗೆ ತೆರಳಿರಿ ! ನಾಳೆಯ ದಿನ ಕಾಳೇಶ್ವರಕ್ಕೆ ಎಲ್ಲರೂ ಬನ್ನಿರಿ ! ಈ ಕೊಡಗು ರಾಜ್ಯವನ್ನು ಸುಲ್ತಾನರ ಕೈಯ್ಯಿಂದ ತಪ್ಪಿಸಿ, ಮಹಾ ಕಾಳೇಶ್ವರನ ರಾಜ್ಯವನ್ನಾಗಿ ಮಾಡೋಣ ! ಈ ರಾಜ್ಯವು ನಿಮ್ಮದು ! ಜಯವು ನಿಮ್ಮದು !" ಎಂದು ಘೋಷಿಸಿದಳು. ಸ್ತ್ರೀಯರೆಲ್ಲರೂ ಸಂತೋಷದಿಂದ ತೆರಳಿದರು

ದೌಲತ್ತಳು ಸೇನಾಪತಿಗಳನ್ನು ಕರೆದು "ಈ ಫಾತಿಮಾ ಬೇಗಂರವರ ಶರೀರವನ್ನು ಕಾವಲಿಟ್ಟು ರಕ್ಷಿಸಿರಿ ನಾಳೆಯ ದಿನ ಗೋರಿಯನ್ನು ಮಾಡಿಸುತ್ತೇನೆ ಎಂದು ಹೇಳಿದಳು ಆ ಮೈದಾನವೆಲ್ಲವೂ ಬರಿದಾಗಿ ಹೋಯಿತು ಒಬ್ಬ ಸ್ತ್ರೀ ವ್ಯಕ್ತಿಯು ಮಾತ್ರ ಅಲುಗದೆ ನಿಂತಲ್ಲಿಯೇ ನಿಂತಿದ್ದಳು ದೌಲತ್‌ರಾಣಿಯು ಆ ವ್ಯಕ್ತಿಯ ಹತ್ತಿರ ಹೋಗಿ ನಿಂತಳು

"ದೌಲತ್ ರಾಣಿಯವರೇ ! ಇಂದು ನೀವು ನಿಜವಾದ ರಾಣಿಯವರಂತೆ ಶೋಭಿಸಿದಿರಿ ! ಈ ಕೊಡಗನ್ನು ಉದ್ಧಾರ ಮಾಡಿದಿರಿ ! ಸನಾತನ ಧರ್ಮವನ್ನು ರಕ್ಷಿಸಿದಿರಿ ! ಮೈಸೂರಿಗೆ ಕೀರ್ತಿಯನ್ನು ತಂದಿರಿ !" ಎಂದು ಹೇಳಿ, ಆ ಸ್ತ್ರೀ ವ್ಯಕ್ತಿಯು ಕೊಂಡಾಡುತ್ತಾ ದೌಲತ್ತಳನ್ನು ಆಲಿಂಗಿಸಿದಳು. ಅವಳು ರಾಧಾರಾಣಿ !

ದೌಲತ್ ಮತ್ತು ರಾಧಾರಾಣಿಯರು ಸುಲ್ತಾನರ ಶಿಬಿರಕ್ಕೆ ಹೋದರು ಅವರ ಪರ್ಯಂಕದ ಬಳಿ ಹೋಗಿ ನಿಂತರು. ಸುಲ್ತಾನನು ಜ್ಞಾನಾವಸ್ಥೆಯಲ್ಲಿ ಇಲ್ಲ ! ಅಜ್ಞಾನಾವಸ್ಥೆಯಲ್ಲಿ ಕನವರಿಸುತ್ತಿದ್ದನು.

ಘಾತಿಮಾಬೇಗಂ ನಿಮ್ಮನ್ನು ಕೊಂದ ಪಾಪಿಯು ನಾನು ದೌಲತ್ ನೀನು ಬಂದಿಯಾದೆಯಾ ? ರಾಧಾರಾಣಿಯವರೇ ! ನನ್ನ ಅಪರಾಧಕ್ಕೆ ಕ್ಷಮೆಯುಂಟೆ ? ಇಯಜ್ ಖಾ್ಞ ! ನೀನೆಲ್ಲಿ ಹೋದೆ ? ಎಂದು ಹಂಬಲಿಸುತ್ತಿದ್ದನು ದೌಲತ್ ರಾಣಿಯು ಹೋಗಿ ಮಂಚದ ಮೇಲೆ ಕುಳಿತಳು ಸುಲ್ತಾನನ ತಲೆಯನ್ನು ತನ್ನ ತೊಡೆಯ ಮೇಲಿಟ್ಟು ಕೊಂಡಳು ಮೆತ್ತಗೆ ಮೈ ತಡವುತ್ತಿದ್ದಳು ರಾಧಾರಾಣಿಯು ಪನ್ನೀರನ್ನು ತಂದು ಸುಲ್ತಾನನ ಹಣೆಯ ಮೇಲೆ ಚುಮುಕಿಸಿದಳು ಲಾಮಂಚದ ಬೀಸಣಿಗೆಯಿಂದ ಬೀಸತೊಡಗಿದಳು ಈ ಶೈತ್ಯೋಪಚಾರಗಳಿಂದ ಸುಲ್ತಾನನಿಗೆ ತಿಳಿವು ಬಂತು !

ಸುಲ್ತಾನನು ಕಣ್ಣು ಬಿಟ್ಟು ಒಂದು ಬಾರಿ ದೌಲತ್ತಳ ಮುಖವನ್ನು ನೋಡಿದನು. ಮತ್ತೊಂದು ಬಾರಿ ರಾಧಾರಾಣಿಯ ಮುಖವನ್ನು ನೋಡುತ್ತಾ ಪರ್ಯಂಕದಿಂದ ಎದ್ದನು. ಕೈಮುಗಿದು ರಾಧಾರಾಣಿಯವರನ್ನು ಕ್ಷಮೆ ಬೇಡಿದನು ಗುಡಾರದಿಂದ ಹೊರಗೆ ಹೋಗಲು ಹೊರಟನು ರಾಧಾರಾಣಿಯು ಸುಲ್ತಾನನನ್ನು ತಡೆದು "ಸುಲ್ತಾನರೇ, ಎಲ್ಲಿಗೆ ಹೋಗುತ್ತೀರಿ !" ಎಂದು ಕೇಳಿದಳು

"ತಾಯೇ, ರಾಣಿಯವರೇ ! ಆ ಸ್ತ್ರೀಯರನ್ನೆಲ್ಲಾ ಬಿಡುಗಡೆ ಮಾಡಿ ಕ್ಷಮೆ ಬೇಡಲು ಹೋಗುತ್ತೇನೆ ಆ ದಿವಾ್ಞರವರ ಧರ್ಮಪತ್ನಿಯ ಶರೀರವು ಅಲ್ಲಿ ಬಿದ್ದಿದೆ ಅದನ್ನು ತಂದು ಇಲ್ಲಿ ಇಡುತ್ತೇನೆ" ಎಂದು ಬಿಕ್ಕಳಿಸುತ್ತಾ ಹೇಳಿದನು

ರಾಧೆಯು ನಗುತ್ತಾ, "ಸುಲ್ತಾನರೇ, ಕುಳಿತುಕೊಳ್ಳಿರಿ ಅದನ್ನೆಲ್ಲಾ ದೌಲತ್ ರಾಣಿಯವರು ನಿಜವಾದ ಮಹಾರಾಣಿಯಾಗಿ ನಿಮ್ಮ ರಾಜಪೀಠವನ್ನೇರಿ ನಿಮ್ಮ ನವಾಬ್‌ಗಿರಿಯನ್ನು ಪೂರ್ಣವಾಗಿ ಚಲಾಯಿಸಿದ್ದಾರೆ'' ಎಂದು ಹೇಳಿ ಸುಲ್ತಾನನನ್ನು ಪರ್ಯಂಕದಲ್ಲಿ ಕುಳ್ಳಿರಿಸಿದಳು.

ಸುಲ್ತಾನನು ದೌಲತ್ತಳ ಕಡೆ ತಿರುಗಿ, "ದೌಲತ್! ನೀನು ಇಂದು ರಾಣಿಗಿರಿಯನ್ನು ವಹಿಸಿದೆಯಾ ! ಇನ್ನು ನಾನು ಆ ರಾಜಪೀಠವನ್ನು ಏರುವುದಿಲ್ಲ ನಾನು ನಿನ್ನ ಸೇನಾನಾಯಕನಾಗಿ ಸೇವೆ ಮಾಡುತ್ತೇನೆ' ಎಂದು ಹೇಳಿ ದೌಲತ್ತಳ ಕೈ ತೆಗೆದುಕೊಂಡು ಅವಳ ಹಸ್ತವನ್ನು ಚುಂಬಿಸಿದನು

ದೌಲತ್ತಳು—ಸುಲ್ತಾನರವರೇ ! ನಾನು ಇಂದು ರಾಜಪೀಠವನ್ನೇರಿ, ಕ್ಷಣ ಹೊತ್ತು ರಾಣಿಗಿರಿಯನ್ನು ಚಲಾಯಿಸಿದ್ದರಿಂದ ನಿಮ್ಮ ಪಾಪವೆಲ್ಲಾ ಪರಿಹಾರವಾಗುವುದಿಲ್ಲ ನೀವು ಈ ಕೊಡಗು ರಾಜ್ಯದ ಮೇಲೆ ನಿಷ್ಕಾರಣವಾಗಿ ದಂಡೆತ್ತಿ ಬಂದು ಅತ್ಯಾಚಾರ ಮಾಡಿದ್ದೀರಿ. ಈ ಸ್ತ್ರೀಯರ ವಿಷಯದಲ್ಲಿ ತೋರಿದ ಕ್ರೌರ್ಯವಂತೂ ಭೂಮಂಡಲದಲ್ಲಿ ಅಳಿಸಿಹೋಗದಂತಹುದು ! ನಾನೊಂದು ಪ್ರಾರ್ಥನೆಯನ್ನುಮಾಡು

ತ್ತೇನೆ. ನೀವು ಅದರಂತೆ ಮಾಡಲೇಬೇಕು. ಹಾಗೆ ಮಾಡುವುದಾಗಿ ವಾಗ್ದಾನ ಕೊಡಿರಿ !

ಸುಲ್ತಾನ್—ದೌಲತ್ ! ನಿನ್ನ ಮಾತಿಗೆ ಪ್ರತಿಯುಂಟೆ ! ಆಜ್ಞೆಮಾಡು ಆ ಅರಮನೆಯ ಜೈಲಿನಲ್ಲಿ ಹೇಗೆ ರಾಣಿಗಿರಿಯನ್ನು ಮಾಡಿದೆಯೋ, ಈಗಲೂ ಹಾಗೆಯೇ ಮಾಡು ನಾನು ಶಿರಸಾವಹಿಸಿ ಅದನ್ನು ನೆರವೇರಿಸುವೆನು

ದೌಲತ್—ಸುಲ್ತಾನರವರೇ, ನಿಮ್ಮ ಪದಾಘಾತದಿಂದ ಈ ಕೊಡಗು ನುಚ್ಚು ನೂರಾಗಿದೆ ನೀವು ಸಂಪೂರ್ಣವಾಗಿ ಕೊಡಗಿನವರಿಗೇ ಬಿಟ್ಟು ಹೊರಟುಹೋಗ ಬೇಕು ಈ ರಾಜ್ಯವನ್ನು ಪುನಃ ನೀವು ಎಂದಿಗೂ ಮುಟ್ಟಕೂಡದು

ಸುಲ್ತಾನರು ಸೇನಾನಾಯಕನನ್ನು ಕರೆಸಿದರು ಅಮೀರ್ ನೂರುಲ್ಲಾಖಾನ ರವರೇ ತಮ್ಮ ಉಪಕಾರವನ್ನು ನಾನೆಂದಿಗೂ ಮರೆಯುವುದಿಲ್ಲ. ನೀವು ದೌಲತ್ ರಾಣಿಯವರ ಆಜ್ಞೆಯನ್ನು ನೆರವೇರಿಸಿ ಮೈಸೂರಿಗೆ ಕೀರ್ತಿಯನ್ನು ತಂದಿರಿ ! ಈ ದಿನವೇ ಮೈಸೂರಿನ ಸೈನ್ಯಗಳೆಲ್ಲವೂ ಹಿಂದಕ್ಕೆ ಹೊರಡತಕ್ಕದ್ದು. ನೀವು ಇವುಗಳ ನ್ನೆಲ್ಲಾ ತೆಗಿಸಿಕೊಂಡು ರಾಜಧಾನಿಗೆ ಹೊರಡಿರಿ ನಾವು ಹಿಂದೆ ಬರುತ್ತೇವೆ ಈ ಕೊಡಗಿನಿಂದ ಒಂದು ಕುರುಡು ಕಾಸನ್ನೂ ತೆಗೆದುಕೊಂಡು ಹೋಗಕೂಡದು! ಎಂದು ಆಜ್ಞೆ ಮಾಡಿದನು

ಸೇನಾಧಿಪತಿಗಳು ತಕ್ಷಣ ಆಜ್ಞೆಯನ್ನು ಜಾರೀಮಾಡಿದರು. ಸೈನ್ಯವೆಲ್ಲವೂ ಹೊರಟೇಬಿಟ್ಟಿತು

ಆ ದಿನ ರಾತ್ರಿ ದೌಲತ್ ಮತ್ತು ರಾಧಾರಾಣಿಯವರುಗಳು ಕಾಳೇಶ್ವರಕ್ಕೆ ಹೋಗಿ ಅಲ್ಲಿ ತಮ್ಮ ಬಿಡಾರದಲ್ಲಿ ತಂಗಿದರು

ಮಾರನೆಯ ದಿನ ಪ್ರಾತಃಕಾಲದಲ್ಲಿ ಉತ್ಸವದೊಂದಿಗೆ ಘಾತಿಮಾಬೇಗಂಳ ಶವವು ಕಾಳೇಶ್ವರಕ್ಕೆ ತರಲ್ಪಟ್ಟಿತು ಮಶೀದಿಯ ಪಕ್ಕದಲ್ಲಿ ಫಕೀರನ ಸಜೀವಸಮಾ ಧಿಯ ಸಮೀಪದಲ್ಲಿಯೇ ಘಾತಿಮಳ ಗೋರಿಯು ಸಂಭ್ರಮದಿಂದ ಮಾಡಲ್ಪಟ್ಟಿತು. ದೌಲತ್‌ರಾಣಿಯವರೂ ರಾಧಾರಾಣಿಯವರೂ ಘಾತಿಮಾಬೇಗಂರವರ ವಸತಿಗೃಹಕ್ಕೆ ಹೋಗಿ ಮಾಲತಿಯ ಸಹಾಯದಿಂದ ನೆಲಮಾಳಿಗೆಯಲ್ಲಿದ್ದ ಧನಧಾನ್ಯಗಳನ್ನೆಲ್ಲಾ ಕಾಳೇಶ್ವರಕ್ಷೇತ್ರಕ್ಕೆ ಸಾಗಿಸಿದರು ಅಲ್ಲಿ ಆ ದಿನ ಸಂಧ್ಯಾಕಾಲ ದೌಲತ್‌ರಾಣಿಯ ವರು ದೇವಾಲಯದ ಮಹಾದ್ವಾರದಲ್ಲಿ ಭದ್ರಪೀಠದಮೇಲೆ ಮಂಡಿಸಿದರು. ಕೊಡ ಗಿನ ಸ್ತ್ರೀಯರೆಲ್ಲರೂ ಆ ಮಹಾರಾಣಿಯ ದರ್ಶನಕ್ಕೆ ಬಂದು ನೆರೆದಿದ್ದರು. ದೌಲತ್ ರಾಣಿಯು ಆ ಧನಕನಕಗಳನ್ನೆಲ್ಲಾ ಯುದ್ಧದಲ್ಲಿ ಮನೆ ಮಾರುಗಳನ್ನು, ಪತಿ-ಪುತ್ರ ರನ್ನೂ ಕಳೆದುಕೊಂಡ ಸ್ತ್ರೀಯರಿಗೆ ದಾನಮಾಡಿದಳು ಅವಳ ದಾನವು ಅರ್ಧರಾತ್ರಿ ಯವರೆಗೆ ನಡೆಯುತ್ತಿತ್ತು ಸುಲ್ತಾನನು ಅಲ್ಲಿಗೆ ಗುಪ್ತವಾಗಿ ಬಂದು ಒಂದು ಎತ್ತರ

ವಾದ ಪ್ರದೇಶದಲ್ಲಿ ನಿಂತು ಆ ವೈಭವವನ್ನು ನೋಡುತ್ತಿದ್ದನು ಈ ದಾನಧರ್ಮಗಳೆಲ್ಲಾ ಪೂರೈಸುವವರೆಗೆ ಮಾಲತಿಯು ದೌಲತ್ತಳ ಪಕ್ಕದಲ್ಲಿಯೇ ನಿಂತಿದ್ದಳು ಇಮಾಮನು ಅಲ್ಲಿಯೇ ಕಣ್ಣೀರಿಡುತ್ತ ನಿಂತಿದ್ದನು ಎಲ್ಲವೂ ಪೂರೈಸಿದ ಮೇಲೆ ಮಾಲತಿಯು "ಮಹಾರಾಣಿಯವರೇ ನನ್ನ ಭಾರವೆಲ್ಲವೂ ಪೂರೈಸಿತು ಬೇಗಂಸಾಹೇಬರವರು ಈ ನಿಧಿಯನ್ನು ನನಗೆ ವಹಿಸಿದ್ದರು ಅದನ್ನು ತಾವು ವಿನಿಯೋಗಿಸೋಣವಾಯಿತು ಇಂದಿಗೆ ಪೂರೈಸಿತು" ಎಂದು ರಾಣಿಯವರನ್ನು ವಂದಿಸಿದಳು

ದೌಲತ್—ಮಾಲತಿ ! ನಿನ್ನ ಒಡತಿಯ ಮರಣಕ್ಕಾಗಿ ನೀನು ದುಃಖಿಸಬೇಡ ನೀನು ನಮ್ಮೊಡನೆ ಬಾ ! ಎಂದು ಹೇಳಿದಳು ಮಾಲತಿಯು ಕಣ್ಣೀರು ಸುರಿಸುತ್ತಾ ದೇವಿಯವರೇ, ಅಪ್ಪಣೆ ಕೊಡಿರಿ ! ನಾನು ಇಲ್ಲೇ ಈ ಬೇಗಂಸಾಹೇಬರ ಸಮಾಧಿಯ ಬಳಿಯಲ್ಲೇ ಕೆಲವು ಕಾಲವಿರುತ್ತೇನೆ ಕಾಲಾನುಕಾಲಕ್ಕೆ ತಮ್ಮ ಸನ್ನಿಧಾನಕ್ಕೆ ಬಂದು ಸೇರುತ್ತೇನೆ ಎಂದು ಹೇಳಿದಳು

ಇಮಾಮನು—ರಾಣಿಯವರೇ ! ನನ್ನ ಕಾರ್ಯವು ಇನ್ನೂ ಪೂರೈಸಲಿಲ್ಲ ನನ್ನಲ್ಲಿ ಇಬ್ಬರು ಬಂದಿಗಳಿದ್ದಾರೆ ಅವರಿಬ್ಬರೂ ಮಹಾಪರಾಧಿಗಳು ಎಂದು ಹೇಳಿದನು ದೌಲತ್ತಳು ಅವರನ್ನು ಕರತರುವಂತೆ ಅಪ್ಪಣೆ ಮಾಡಿದಳು ಇಮಾಮನು ಇಬ್ಬರನ್ನು ಕರತಂದು ನಿಲ್ಲಿಸಿದನು.

ದೌಲತ್ತಳು ಮೀರ್‌ಸಾದಕನನ್ನೂ, ಹುಚ್ಚಿ ಸಾವಿತ್ರಿಯನ್ನೂ ನೋಡಿದಳು ಆಶ್ಚರ್ಯದಿಂದ "ನೀವಿಬ್ಬರೂ ಸುಲ್ತಾನರ ಸೈನ್ಯದೊಂದಿಗೇ ಬಂದಿರುವಿರಾ ? ಎಲ್ಲಿ ಅನಾಹುತಗಳು ನಡೆದರೆ ಅಲ್ಲಿ ನೀವು ಇರಲಿ ! ನಿಮ್ಮಿಬ್ಬರನ್ನೂ ನಾನು ಬಿಡುಗಡೆ ಮಾಡುತ್ತೇನೆ ಹೊರಟುಹೋಗಿರಿ !" ಎಂದು ದೌಲತ್ತಳು ಅಪ್ಪಣೆ ಮಾಡಿದಳು ಇಬ್ಬರೂ ಕೈಮುಗಿದು ಅಡ್ಡಬಿದ್ದು ಹೊರಟುಹೋದರು

ಇಮಾಮನನ್ನು ರಾಣಿಯವರು ಜೊತೆಯಲ್ಲಿಯೇ ಕರೆದುಕೊಂಡು ಹೋದರು

ರಾಣಿಯರಿಬ್ಬರೂ ದೇವಾಲಯಕ್ಕೆ ಹೋಗಿ ತ್ರಿಯಂಬಕಭಟ್ಟನಿಗೆ ವಂದಿಸಿ, ಆಶೀರ್ವಾದವನ್ನು ಪಡೆದು ಕಾಳೀಶ್ವರಕ್ಷೇತ್ರದಿಂದ ಪರಿವಾರದೊಡನೆ ಸುಲ್ತಾನರ ಶಿಬಿರಕ್ಕೆ ಹೊರಟರು

ಸುಲ್ತಾನರವರು ಅಶ್ವಾರೂಢರಾಗಿ ಹಿಂದೆಯೇ ಹಿಂಬಾಲಿಸಿದರು ಎಲ್ಲರೂ ಹೋಗಿ ಶಿಬಿರಕ್ಕೆ ಸೇರಿದರು. ಸುಲ್ತಾನನು ದೌಲತ್ತಳನ್ನೂ, ರಾಧಾರಾಣಿಯವರನ್ನೂ ರಾಜಧಾನಿಗೆ ಬರಲೇಬೇಕೆಂದು ಬಹಳವಾಗಿ ಬೇಡಿದನು ಅವರಿಬ್ಬರೂ ದಾಕ್ಷಿಣ್ಯಬದ್ಧರಾಗಿ ಸುಲ್ತಾನರೊಡನೆ ರಾಜಧಾನಿಗೆ ಹೊರಡಲು ಒಪ್ಪಿದರು.

ಸುಲ್ತಾನರು ರಾಣಿಯವರುಗಳೊಡಗೂಡಿ ಶ್ರೀರಂಗಪಟ್ಟಣಕ್ಕೆ ತೆರಳಿದರು

ಕೊಡಗು ನಿರ್ಮುಕ್ತವಾಯಿತು.

# ದೌಲತ್ತಳ ಸಾನ್ನಿಧ್ಯದಲ್ಲಿ

ಸುಲ್ತಾನನು ಕೊಡಗಿನಿಂದ ರಾಜಧಾನಿಗೆ ಹಿಂದಿರುಗಿದನು ದೌಲತ್ ಮತ್ತು ರಾಧಾರಾಣಿಯವರುಗಳನ್ನು ಕರೆದು ತಂದನು ಅವರನ್ನು ದರಿಯಾ ದೌಲತ್ತಿನಲ್ಲಿ ಇಳಿಸಿದನು ಅವರುಗಳಿಗೆ ರಾಜಯೋಗ್ಯವಾದ ಆಧಿತ್ಯಗಳು ಸಿದ್ಧ ಮಾಡಲ್ಪಟ್ಟಿವೆ. ಟಿಪ್ಪೂಸುಲ್ತಾನನು ಪ್ರತಿ ದಿನವೂ ರಾಣಿಯವರ ದರ್ಶನಕ್ಕೆ ಬಂದು ಹೋಗುತ್ತಾನೆ ದೌಲತ್ ರಾಣಿಯ ಸಮ್ಮುಖದಲ್ಲಿ ಬಹಳ ಹೊತ್ತು ಕಳೆಯುತ್ತಾನೆ ಎಷ್ಟೋ ವಿಷಯಗಳನ್ನು ಮಾತನಾಡುತ್ತಾರೆ. ಪ್ರತಿಯೊಂದು ಬಾರಿಯೂ ದೌಲತ್ತಳು ಎಂಥಾ ರಾಜನೀತಿಜ್ಞಳೆಂದು ಆಶ್ಚರ್ಯ ಪಡುತ್ತಾನೆ ದೌಲತ್ತಳ ಬುದ್ಧಿಯನ್ನು ನೋಡಿ ಕ್ಷಣಕ್ಷಣವೂ ಮೆಚ್ಚುತ್ತಾನೆ ಕೊಡಗಿನಲ್ಲಿ ದೌಲತ್ತಳೂ, ರಾಧೆಯೂ ಮಾಡಿದ ಸಾಹಸವನ್ನು ನೆನೆನೆನೆದು ಆನಂದಿಸುತ್ತಾನೆ ಕೊಡಗಿನ ಪ್ರಕರಣದಲ್ಲಿ ದೌಲತ್ತಳು ರಾಜಲಕ್ಷ್ಮಿಯಂತೆ ವಿರಾಜಿಸಿದುದನ್ನು ಸ್ಮರಿಸಿ, ಈ ದೌಲತ್ತಳು ರಾಣಿಗಿರಿಗೆ ಅರ್ಹಳೆಂದು ನೂರಾರು ಬಾರಿ ಹೇಳುತ್ತಾನೆ ಸುಲ್ತಾನನು ಈಗ ನಿಜವಾಗಿಯೂ, ಪೂರ್ಣ ಮನೋರಥನಾಗಿದ್ದಾನೆ ದೌಲತ್ತಳ ಸಾನ್ನಿಧ್ಯವು ನನಗೆ ದೊರಕಿದೆ ಇದು ಶಾಶ್ವತವಾಗಿರುವಂತೆ ಮಾಡಬೇಕು ಆದರೂ ಸುಲ್ತಾನನಿಗೆ ಮನೋವೇದನೆಯು ಇದ್ದೇ ಇದೆ ದೌಲತ್ತಳು ಪ್ರತ್ಯಕ್ಷವಾಗಿ ನನ್ನನ್ನು ಮದುವೆಯಾಗಬೇಕು ಈ ಜಗತ್ತು ಒಪ್ಪುವಂತೆ ದೌಲತ್ತಳು ರಾಣಿಪಟ್ಟವನ್ನು ಅಲಂಕರಿಸಬೇಕು ಕೊಡಗಿನಲ್ಲಿ ದೌಲತ್ತಳು ರಾಣಿಗಿರಿಯನ್ನು ಚಲಾಯಿಸಿದಂತೆ ಸರ್ವದಾ ದರಬಾರನ್ನು ನಡೆಸುತ್ತಲೇ ಇರಬೇಕು ಇದೇ ಸುಲ್ತಾನನ ಅಪೇಕ್ಷೆ ಇದಕ್ಕೆ ಪ್ರತಿಬಂಧಕವೇನಿದೆ ?

ದೌಲತ್ತಳ ಮಾತುಕತೆಗಳಲ್ಲಿ ಸರ್ವದಾ ಪ್ರೀತಿ ವಿಶ್ವಾಸಗಳು ಕಾಣುತ್ತಿವೆ. ಸುಲ್ತಾನ ರಾಜ್ಯಸ್ಥಾಪನೆಯಲ್ಲಿ ಸುಲ್ತಾನರಿಗಿಂತ ದೌಲತ್ತಳಿಗೇ ಹೆಚ್ಚು ಆಸಕ್ತಿ ಇದೆ. ಇದನ್ನೆಲ್ಲಾ ನೋಡಿ ಸುಲ್ತಾನನು ಹೀಗೆಯೇ ಎಂದು ನಿರ್ಣಯ ಮಾಡಲಾರದೇ ಹೋಗಿದ್ದಾನೆ ದೌಲತ್ತಳಲ್ಲಿ ಸರಳತೆಯಿದ್ದರೂ ತನ್ನ ಅಭೀಷ್ಟವನ್ನು ಬಿಚ್ಚಿ ಹೇಳಲಾರದೇ ಇದ್ದಾನೆ. ಏಕೆ ? ತನ್ನ ಆಶೆಯನ್ನು ದೌಲತ್ತಳು ಅರಿಯಳೇನು ? ನಗರದಲ್ಲಿ ಸೋನಾಮಹಲಿನಲ್ಲಿ ಸುಲ್ತಾನನು ಪ್ರಣಯ ಭಿಕ್ಷೆಯನ್ನು ಕೇಳಿಲ್ಲವೇನು ? ಅವನ ನೋಟದಲ್ಲಿ, ಮಾತಿನಲ್ಲಿ, ನಡೆನುಡಿಗಳಲ್ಲಿ ಹಾವಭಾವಗಳಲ್ಲಿ ಆ ಪ್ರಣಯವು ಹೊತ್ತಿಸೂಸುತ್ತಿಲ್ಲವೇನು ? ಆದರೂ ದೌಲತ್ತಳು ತನ್ನನ್ನು ಸ್ವಯಂವರ ಮಾಡಿಕೊಳ್ಳಲಿಲ್ಲ. ವಿರೋಧಭಾವವನ್ನು ತೋರಲೂ ಇಲ್ಲ ! ಇದೇನು ವೈಚಿತ್ರ್ಯ ! ಸುಲ್ತಾನನು ದೌಲತ್ತಳ ಸಾನ್ನಿಧ್ಯದಲ್ಲಿ, ಮನಸ್ಸಿನ ಉದ್ವೇಗದಿಂದ ಪರಿತಪಿಸುತ್ತಾ, ಹಿಂದಕ್ಕೆ ಹೋಗದೇ ಸುಗ್ಗಲಾರದೇ ಸ್ತಂಭಿತನಾದಂತಾಗಿದ್ದಾನೆ

ರಾಜಧಾನಿಯಲ್ಲಿ ಹೆಚ್ಚು ಹಣವಿಲ್ಲ ಕೊಡಗಿನ ಯುದ್ಧದಲ್ಲಿ ಕೋಟ್ಯಾಂತರ

ರೂಪಾಯಿಗಳು ಖರ್ಚಾಗಿವೆ. ಕೊಡಗಿನಿಂದ ಏನೂ ತರಲು ಆಗಲಿಲ್ಲ ಸುಲ್ತಾನನು ಹಣಕ್ಕೇನು ಮಾಡುವುದು ಎಂದು ಆಲೋಚಿಸತೊಡಗಿದನು ಏನು ಮಾಡಬೇಕು? ಎಲ್ಲಿಂದ ಹಣ ತರಬೇಕು ಅವನಿಗೆ ಒಂದೂ ತೋರದೆ ಇದೆ ಈ ವಿಷಯವನ್ನು ದೌಲತ್‌ರಾಣಿಯವರೊಡನೆಯೂ, ರಾಧಾರಾಣಿಯವರೊಡನೆಯೂ ಮಂತ್ರಾಲೋಚನೆ ನಡೆಸಿದನು ಸುಲ್ತಾನನೇ ಕನ್ನಾನೂರಿನ ರಾಣಿಯವರು ತನ್ನನ್ನು ಬಹಳವಾಗಿ ಗೌರವಿಸುತ್ತಾರೆಂದೂ, ಅವರಿಗೆ ರಾಯಸಗಳನ್ನು ಬರೆದು ಕಳಿಸಿ ಹಣವನ್ನು ತರಿಸಬೇಕೆಂದೂ ಸೂಚಿಸಿದನು ಮಲಬಾರಿನಲ್ಲಿ ಮಹೀಬಂದರಿನಲ್ಲಿ ಅಲ್ಲೀಸೇಟನೆಂಬ ದೊಡ್ಡ ಹಡಗುವ್ಯಾಪಾರಿ ಇದ್ದಾನೆಂದೂ, ಅವನಲ್ಲಿ ಬಹಳ ಐಶ್ವರ್ಯವಿದೆಯೆಂದೂ, ಅವನು ಜವಾಹಿರಿಗಳನ್ನು ಒತ್ತೆಯಿಡದೇ ಹಣ ಕೊಡಲು ಒಪ್ಪುವುದಿಲ್ಲವೆಂದೂ ಸುಲ್ತಾನನು ವಿಷಾದದಿಂದ ತಿಳಿಸಿದನು.

ರಾಧಾರಾಣಿಯವರು—ಸುಲ್ತಾನರೇ! ಈ ರಾಯಭಾರಕ್ಕೆ ದೌಲತ್‌ರಾಣಿಯವರನ್ನು ಮಲಬಾರಿಗೆ ಕಳುಹಿಸಿರಿ! ನಾನು ಅವರ ಜೊತೆಯಲ್ಲಿ ಹೋಗುವೆನು ನನ್ನಲ್ಲಿ ಕೆಲವು ಆಭರಣಗಳಿವೆ ಮತ್ತು ಫಾತಿಮಾಬೇಗಂರವರ ಜವಾಹಿರಿಗಳು ನಮ್ಮಲ್ಲಿವೆ ಅವುಗಳನ್ನೂ ನಮ್ಮ ಆಭರಣಗಳನ್ನೂ ಅಲ್ಲೀಸೇಟರವರಲ್ಲಿಡಲು ಏರ್ಪಾಡು ಮಾಡುತ್ತೇವೆ ಅದರಿಂದ ಮೈಸೂರು ಸುಲ್ತಾನರಿಗೆ ಅಗೌರವವಿಲ್ಲ ಎಂದು ಹೇಳಿದಳು ದೌಲತ್‌ರಾಣಿಯವರು ಅದನ್ನು ಒಪ್ಪಿದರು ಆದರೆ, ಸುಲ್ತಾನರು ಏನೂ ಮಾತನಾಡದೆ ವಿಷಣ್ಣವದನರಾಗಿ ಹೊರಟುಹೋದರು

ಸುಲ್ತಾನರಿಗೆ ರಾಜಕೀಯದಲ್ಲಿಯೂ ಬಲು ಚಿಂತೆ ಇತ್ತು ಕಂಪನಿಯವರು ಒಳಗೊಳಗೆ ವಿರೋಧವನ್ನು ಬೆಳಸುತ್ತಿದ್ದಾರೆ ಮಹಾರಾಷ್ಟ್ರರು ಮೈಸೂರನ್ನು ನುಂಗಬೇಕೆಂದು ಹವಣಿಸುತ್ತಿದ್ದಾರೆ. ಹೈದರಾಬಾದಿನವರು ಮೈಸೂರಿನವರ ವಿರೋಧಿಗಳೇ! ಎಂದು ಬುಗ್ಗನೆ ಕಾಡುಕಿಚ್ಚು ಏಳುತ್ತದೆಯೋ ನಿಶ್ಚಯವಿಲ್ಲ ಸುಲ್ತಾನನು ಎಲ್ಲ ಕಡೆಯೂ ಸಂಧಾನಗಳನ್ನು ನಡೆಸುತ್ತಲೇ ಇದ್ದಾನೆ ಮಹಾರಾಷ್ಟ್ರರೊಡನೆ ಸಂಧಾನಕ್ಕೆ ಆಪ್ತರಾದ ಬ್ರಾಹ್ಮಣರನ್ನು ಕಳುಹಿಸಿದ್ದಾನೆ ಕಂಪನಿಯವರೊಡನೆಯೂ ಹೈದರಾಬಾದಿನವರೊಡನೆಯೂ ರಾಯಭಾರಿಗಳು ಸಂಧಾನಗಳನ್ನು ನಡೆಸುತ್ತಲೇ ಇದ್ದಾರೆ ಆದರೇನು? ಇದೊಂದೂ ಶಾಂತಿಸೂಚಕವಾಗಿಲ್ಲ!

ರಾಣಿಯವರೊಡನೆ ಮಾತನಾಡುವಾಗ ಮಾತಿಗೆ ಮಾತು ಬಂದು ಇಯಜ್ ಖಾನರ ಮಾತು ಬಂದಿತು ಸುಲ್ತಾನನು ಬಲು ಖಿನ್ನನಾಗಿ, "ರಾಧಾರಾಣಿಯವರೆ! ಇಯಜ್ ಖಾನರವರ ಸಮಾಚಾರವೇ ಇಲ್ಲ ಅವರೆಲ್ಲಿ ಇದ್ದಾರೆ. ಏನು ಮಾಡುತ್ತಾರೆ? ನಾನು ಅವರ ವಿಷಯದಲ್ಲಿ ತಪ್ಪು ಮಾಡಿದೆ ಆದರೆ ದೊಡ್ಡ ನವಾಬರಲ್ಲಿ ಭಕ್ತಿಯಿಂದಲಾದರೂ ಅವರು ಕ್ಷಮಿಸುತ್ತಾರೆಂದು ನಂಬಿದೆ ಅವರು ಇನ್ನೂ ನಗರದ ಶೀಮೆ

ಯಲ್ಲಿಯೇ ಅಜ್ಞಾತವಾಸ ಮಾಡುತ್ತಾರೆಂದು ನಾನು ಭಾವಿಸಿದ್ದೇನೆ. ಅವರ ಸುಳಿವನ್ನು ತಾವಾದರೂ ಪತ್ತೆ ಹಚ್ಚಲಾರದೇ ಹೋದಿರಾ ? ಅವರ ಬೆಂಬಲವಿದ್ದಿದ್ದರೆ ನನಗೆಷ್ಟೋ ಧೈರ್ಯ ಬರುತ್ತಿತ್ತು ! ಎಂದು ಹೇಳಿದನು

ರಾಧಾರಾಣಿಯು—ಸುಲ್ತಾನರವರೇ ! ಖಾನರವರು ನಗರದ ಶೀಮೆಯಲ್ಲಿರುವರೆಂಬ ತಮ್ಮ ಭಾವನೆಯು ಶುದ್ಧ ಭ್ರಾಂತಿ ! ಅವರು ನನ್ನನ್ನೂ, ದೌಲತ್ ರಾಣಿಯವರನ್ನೂ ಕಂಡು ಬೀಳ್ಕೊಂಡು ನಗರದ ದೇಶವನ್ನು ಪ್ರತ್ಯಕ್ಷವಾಗಿ ತ್ಯಾಗ ಮಾಡಿದರು ನಾವು ಅವರನ್ನು ಪತ್ತೆ ಹಚ್ಚಲು ಸರ್ವಸಾಹಸ ಮಾಡಿದೆವು ಫಲವಾಗಲಿಲ್ಲ ! ಆದರೆ, ನಮ್ಮಿಬ್ಬರಿಗೂ ಆಕಸ್ಮಿಕವಾಗಿ ಅವರ ದರ್ಶನವು ಮತ್ತೊಮ್ಮೆ ದೊರೆಯಿತು !

ಮಂಗಳೂರಿನ ವಿಪ್ಲವವಾದಾಗ ನಾವು ಅವರನ್ನು ಕಂಡೆವು ಅಲ್ಲಿ ಖಾನರವರನ್ನು ಕಾಣುತ್ತಲೇ ಆ ವಿಪ್ಲವದ ಮೂಲಪುರುಷರು ಅವರೇ ಎಂದು ನಾವು ದಿಗ್ಭ್ರಾಂತರಾದೆವು ಆ ವಿಪ್ಲವವನ್ನೆಬ್ಬಿಸಿದವನು 'ಭಕ್ಷಿ' ಎಂದು ತಾವು ಕೇಳಿರಬಹುದು ಆ ಭಕ್ಷಿ ಎಂಬ ಹೆಸರು ನಿಜವಲ್ಲ, ನಗರದಲ್ಲಿದ್ದ ಇಯಜ್‌ಖಾನರವರ ಸೇನಾನಾಯಕನೇ ಆ ಭಕ್ಷಿ ಅವನನ್ನು ಹಿಡಿದು ಆ ವಿಪ್ಲವವನ್ನು ಕೊನೆಗಾಣಿಸಿದವರು ಇಯಜ್‌ಖಾನರವರೇ ! ಅವರಲ್ಲಿ ಯಾವ ಬದಲಾವಣೆಯನ್ನೂ ನಾವು ಕಾಣಲಿಲ್ಲ ಅದೇ ಔದಾರ್ಯ, ಅದೇ ವೈಭವ, ಅವರು ಒಬ್ಬ ರಾಜರಂತೆಯೇ ಕಂಗೊಳಿಸುತ್ತಿದ್ದರು ಅವರು ಎಲ್ಲೋ ಅಜ್ಞಾತವಾಸದಲ್ಲಿದ್ದಾರೆ. ಆದರೆ ಅವರಲ್ಲಿ ದೊಡ್ಡ ನವಾಬರ ಭಕ್ತಿಯು ಅಚ್ಚಳಿಯದೇ ಇದೆ. ಮೈಸೂರಿನ ಮೇಲಿನ ಅಭಿಮಾನವು ಅಪಾರವಾಗಿದೆ ಎಂದಾದರೊಂದು ದಿನ ಪ್ರತ್ಯಕ್ಷವಾಗಿ ಅವರು ನಿಮ್ಮ ಸೇವೆ ಮಾಡುವುದನ್ನು ನಾವು ಕಣ್ಣಾರ ನೋಡುವೆವೆಂಬ ಆಶೆಯು ನಮಗಿದೆ

ಸುಲ್ತಾನನ ಕಣ್ಣುಗಳಲ್ಲಿ ನೀರು ಬಂತು ಸುಲ್ತಾನನು "ರಾಣಿಯವರೇ ! ತಾವು ಆ ಖಾನರನ್ನು ಹೇಗಾದರೂ ಗೊತ್ತು ಹಚ್ಚಬಲ್ಲಿರಿ ಅವರನ್ನು ನನಗೊಮ್ಮೆ ಭೇಟಿ ಮಾಡಿಸಿರಿ ! ಪುನಃ ಅವರು ನನ್ನನ್ನು ಬಿಟ್ಟು ಹೋಗದಂತೆ ನಾನು ನೋಡಿಕೊಳ್ಳುವೆನು ನನ್ನ ಸರ್ವಸ್ವವನ್ನೂ ಅವರಿಗೊಪ್ಪಿಸಿ ಬೇಡಿಕೊಳ್ಳುವೆನು" ಎಂದು ಹೇಳಿದನು.

ರಾಧಾರಾಣಿಯು ತಾನೇ ಸ್ವತಃ ಖಾನರನ್ನು ಅನ್ವೇಷಣ ಮಾಡುವುದಾಗಿಯೂ, ಅವರನ್ನು ಕರೆತಂದು ಸುಲ್ತಾನರವರಿಗೂ, ಅವರಿಗೂ ಸಖ್ಯ ಮಾಡಿಸುವುದಾಗಿಯೂ ಆಶ್ವಾಸನವನ್ನಿತ್ತಳು.

ಕೆಲವು ದಿನಗಳ ತರುವಾಯ ರಾಧಾರಾಣಿಯವರು, ದೌಲತ್ ರಾಣಿಯವರು ಬಲು ಪ್ರಯಾಸದಿಂದ ಸುಲ್ತಾನರನ್ನೊಪ್ಪಿಸಿ ತಮ್ಮ ಪ್ರಯಾಣವನ್ನು ಸಿದ್ಧಗೊಳಿಸಿದರು. ಅವರುಗಳು ನಗರಕ್ಕೆ ಹೊರಡುವುದು ಗೊತ್ತಾಯಿತು. ಸುಲ್ತಾನರ ಪ್ರಾರ್ಥನೆಯಂತೆ

ರಾಣಿಯರಿಬ್ಬರು ಕನ್ನಾನೂರಿಗೆ ಸುಲ್ತಾನರ ರಾಯಭಾರಿಗಳಾಗಿ ಹೋಗುವುದನ್ನು ನಿಶ್ಚಯ ಮಾಡಿದರು. ಶ್ರೀರಂಗಪಟ್ಟಣದಿಂದ ನಗರಕ್ಕೆ ಹೋಗಿ ತಲುಪಿದರು

## ಮೂವರು ರಾಣಿಯರ ಸಮಾಗಮ

ಬೀಬೀರಾಣಿಯು ಸರ್ವದಾ ವಿಲಾಸಪ್ರಿಯೆ! ಅಂತಃಪುರದಲ್ಲಿ ಏಕಾಂತವಾಗಿ ಕುಳಿತಿದ್ದಳು. ಅವಳಿಗೆ ಅಲ್ಲೀಸೇಟರ ವಿಷಯವಾಗಿ ಬಹಳ ಅಸಮಾಧಾನ. ಈ ಸೇಟನು ಎಂತಹ ಹುಚ್ಚ! ಇವನಿಗೆ ವ್ಯಾಪಾರವೇಕೆ? ಈ ಗುಪ್ತ ವೇಷವೇಕೆ? ಇವನು ಪ್ರತ್ಯಕ್ಷವಾಗಿ ರಾಜನಾಗಲೊಲ್ಲನೇಕೆ? ಇದೆಂತಹ ಜೀವನ ನಮ್ಮದು. ಈ ಸೇಟನು ತನ್ನ ನಿಜತ್ವವನ್ನು ಹೊರಪಡಿಸಿ ರಾಜನಾದರೆ. ಈ ಮಲೆಯಾಳವೆಲ್ಲವೂ ಇವನ ಪಾದಾ ಕ್ರಾಂತವಾಗುತ್ತದೆ ತಪ್ಪು ನನ್ನದು! ನಾನು ಅವನನ್ನು ಬಲಾತ್ಕರಿಸುತ್ತೇನೆ ಅವ ನೊಪ್ಪದಿದ್ದರೆ ಪ್ರಾಣತ್ಯಾಗ ಮಾಡುವುದಾಗಿ ಹದರಿಸುತ್ತೇನೆ ಎಂದುಕೊಳ್ಳುತ್ತಿದ್ದಳು ಅಷ್ಟರಲ್ಲಿ ಪರಿಚಾರಿಕೆಯೊಬ್ಬಳು ಬಂದು ಹುಸೇಖಾನನು ಬಂದು ರಾಣಿಯವರ ದರ್ಶನವನ್ನಪೇಕ್ಷಿಸುತ್ತಿದ್ದಾನೆಂದು ಅರಿಕೆ ಮಾಡಿದಳು ರಾಣಿಯು ಸಂತೋಷದಿಂದ ಸೇನಾನಾಯಕನನ್ನು ಅಂತಃಪುರಕ್ಕೆ ಕರೆಸಿದಳು ಹುಸೇಖಾನನು ರಾಣಿಯವರ ಸಮ್ಮುಖಕ್ಕೆ ಬಂದು ಬಗ್ಗಿ ಸಲಾಂ ಮಾಡಿದನು ರಾಣಿಯವರು ಖಾನನನ್ನು ಆಸನ ದಲ್ಲಿ ಕುಳಿತುಕೊಳ್ಳುವಂತೆ ಸನ್ನೆ ಮಾಡಿದರು ಖಾನನು ಕುಳಿತುಕೊಂಡನು ರಾಣಿ ಯವರು ಸೇನಾನಾಯಕನ ಯೋಗಕ್ಷೇಮವನ್ನು ವಿಚಾರಿಸಿ, ಅವರು ಬಂದ ಕಾರ್ಯ ವನ್ನು ಪ್ರಶ್ನೆ ಮಾಡಿದರು ಖಾನನು ವಿನಯದಿಂದ "ಮಹಾರಾಣಿಯವರೇ! ನಗರ ದಿಂದ ರಾಧಾರಾಣಿಯವರು, ದೌಲತ್ ರಾಣಿಯವರು ಕನ್ನಾನೂರಿಗೆ ಬರುವುದಾಗಿ ಚಾರರ ಮೂಲಕ ಹೇಳಿ ಕಳುಹಿಸಿದ್ದಾರೆ ಅವರು ಸುಲ್ತಾನರವರ ರಾಯಭಾರಿಗಳಾಗಿ ಇಲ್ಲಿಗೆ ಬರುತ್ತಾರೆ" ಎಂದು ಅರಿಕೆ ಮಾಡಿದನು ಈ ಮಾತುಗಳನ್ನು ಕೇಳಿ ಬೀಬೀ ರಾಣಿಗೆ ಅತ್ಯಾನಂದವಾಯಿತು ಅವರಿಬ್ಬರೂ ನಗರದ ಮಹಾರಾಣಿಯವರೆಂದೂ, ಅತುಳೈಶ್ವರ್ಯವತಿಯರೆಂದೂ ಬೀಬೀರಾಣಿಯು ಕೇಳಿದ್ದಳು ಬಹುದಿನಗಳಿಂದ ಅವ ರನ್ನು ಕಾಣಬೇಕೆಂಬ ಆಶೆ ಇದ್ದಿತು. ಅವರಾಗಿ ತನ್ನ ರಾಜ್ಯಕ್ಕೆ ಬರುತ್ತಾರೆಂಬುದನ್ನು ಕೇಳಿ, ಬೀಬೀರಾಣಿಯು ಚಿಕ್ಕಹುಡುಗಿಯಂತೆ ಕುಣಿದು ಕುಪ್ಪಳಿಸತೊಡಗಿದಳು ತನ್ನ ಅರಮನೆಯಲ್ಲಿಯೇ ಅವರುಗಳನ್ನು ಇಳಿಸುವುದಾಗಿ ಹುಸೇಖಾನನಿಗೆ ತಿಳಿಸಿದಳು. ಹುಸೇಖಾನನು ರಾಣಿಯವರ ಸಮ್ಮುಖದಿಂದ ಹಿಂದಿರುಗಿದನು

ನಗರವನ್ನು ಬಿಟ್ಟು ಒಂದು ವಾರದೊಳಗಾಗಿ ಮಿತಪರಿವಾರದೊಂದಿಗೆ ರಾಧಾ ರಾಣಿಯವರು, ದೌಲತ್‌ರಾಣಿಯವರು ಮಂಗಳೂರಿನ ಮಾರ್ಗವಾಗಿ ನಾವೆಗಳಲ್ಲಿ ಪ್ರಯಾಣಮಾಡಿ, ಕನ್ನಾನೂರಿಗೆ ಬಂದು ಸೇರಿದರು. ಹುಸೇಖಾನನು ಅವರನ್ನು

ಎದುರುಗೊಂಡು ಅರಮನೆಗೆ ಕರೆತಂದನು ಅರಮನೆಯ ದ್ವಾರದಲ್ಲಿಯೇ ಬೀಬೀ ರಾಣಿಯವರೇ ಬಂದು ನಗರದ ಇಬ್ಬರು ರಾಣಿಯರನ್ನೂ ಎದುರುಗೊಂಡು ಸ್ವಾಗತ ವನ್ನು ನೀಡಿ, ಅಂತಃಪುರಕ್ಕೆ ಕರೆದೊಯ್ದರು ಅಲ್ಲಿ ರಾಜಯೋಗ್ಯವಾದ ಆತಿಥ್ಯ ವೆಲ್ಲವೂ ಅಣಿಯಾಗಿದ್ದಿತು ಮಧ್ಯಾಹ್ನ ಭೋಜನೋತ್ತರ ಬೀಬೀರಾಣಿಯು ರಾಧಾ ರಾಣಿಯವರನ್ನೂ, ದೌಲತ್‌ರಾಣಿಯವರನ್ನೂ ಭೇಟಿ ಮಾಡಿದಳು ನಗರದ ರಾಣಿ ಯರಿಬ್ಬರೂ ಕನ್ನಾನೂರಿನ ರಾಣಿಯವರನ್ನೂ ಬಹಳ ಗೌರವವಾಗಿ ಕಂಡು ಮಾತ ನಾಡಿಸಿದರು ಸುಲ್ತಾನರ ರಾಯಸವನ್ನು ಬೀಬೀರಾಣಿಗೆ ಒಪ್ಪಿಸಿದರು. ಬೀಬೀ ರಾಣಿಯು ಆ ಪತ್ರವನ್ನು ಓದಿಕೊಂಡು ಹುಡುಗಿಯಂತೆ ಕಿಲಕಿಲನೆ ನಕ್ಕಳು. "ರಾಣಿ ಯವರೇ! ಈ ಪತ್ರವು ನನಗೆ ಆಶ್ಚರ್ಯವನ್ನುಂಟುಮಾಡಿದೆ ತಾವಿಬ್ಬರೂ ಈ ರಾಯ ಭಾರವನ್ನು ತಂದಿರುವುದಂತೂ ನನ್ನನ್ನು ಅಪಹಾಸ್ಯ ಮಾಡುವಂತಿದೆ- ನಾನು ಹಣ ವನ್ನು ಕೊಡುವುದೂ, ತಾವು ತೆಗೆದುಕೊಂಡುಹೋಗುವುದೂ ಇದೆಲ್ಲಾ ಬೂಟಾಟಿ ಕೆಯ ಮಾತುಗಳು ನಾನು ಸತ್ಯವಾಗಿ ಹೇಳುತ್ತೇನೆ, ಈ ರಾಜ್ಯವೇ ತಮ್ಮದು. ನಮ್ಮಲ್ಲಿರುವ ಸಮಸ್ತ ಧನಕನಕಗಳನ್ನು ತಮಗೆ ಒಪ್ಪಿಸುತ್ತೇನೆ ತಾವು ಸುಲ್ತಾನ ರವರಿಗೆ ಕಳುಹಿಸಬಹುದು ಸುಲ್ತಾನರವರು ಅವರ ರಾಯಭಾರಿಗಳಾದ ದೌಲತ್ ರಾಣಿಯವರಿಗೆ ಅಲ್ಲೀಸೇಟರ ಭೇಟಿ ಮಾಡಿಸಬೇಕೆಂದು ನನಗೆ ಬರೆಸಿದ್ದಾರೆ ಇದು ಸೋಜಿಗದ ಸುದ್ದಿಯೇ ಸರಿ ಏನು ದೌಲತ್‌ರಾಣಿಯವರೇ! ತಮಗೆ ನಾನು ಅಲ್ಲೀ ಸೇಟರ ಭೇಟಿ ಮಾಡಿಸಬೇಕೇನು? ಎಂದು ಹಾಸ್ಯಮಾಡಿ ನಕ್ಕಳು ರಾಧೆಗೆ ಈ ರಾಣಿಯ ಮಾತುಕಥೆಗಳನ್ನು ನೋಡಿ ಆಶ್ಚರ್ಯವಾಯಿತು

ಬೀಬೀರಾಣಿಯು—ರಾಣಿಯವರೇ! ಈ ದೌಲತ್‌ರಾಣಿಯವರಿಗಾಗಿ ಸುಲ್ತಾ ನರವರು, ಇಯಜ್‌ಖಾನರವರು ನಗರದಲ್ಲಿ ಯುದ್ಧಮಾಡಿದರೆಂದು ಜನವದಂತಿಯಿದೆ. ಇಂದು ದೌಲತ್‌ರಾಣಿಯವರು ಸುಲ್ತಾನರ ರಾಯಭಾರಿಗಳಾಗಿ ಬಂದಿದ್ದಾರೆ ಸುಲ್ತಾ ನರವರು ದೌಲತ್‌ರಾಣಿಯವರನ್ನು ಗೆದ್ದಂತೆಯೇ ಆಯಿತು! ಎಂದು ಹಾಸ್ಯಮಾಡಿ ದಳು ದೌಲತ್ತಳು ಬೀಬಿಯ ಬಾಯಿ ಮುಚ್ಚಿ, "ಬೀಬೀರಾಣಿಯವರೇ! ನೀವು ಈ ರಾಜ್ಯದ ರಾಣಿಯಾಗಿ ಹುಡುಗಿಯಂತೆ ಮಾತನಾಡುತ್ತೀರಿ!" ಎಂದು ಕಣ್ಣುಗಳನ್ನು ಅರಳಿಸಿ ನೋಡಿದಳು ಬೀಬೀರಾಣಿಯು ನಗುತ್ತಾ, ದೌಲತ್‌ರಾಣಿಯವರ ಕೈಹಿಡಿ ದುಕೊಂಡು "ರಾಣಿಯವರೇ! ತಮ್ಮ ಬಿರುಗಣ್ಣು ನೋಟಕ್ಕೆ ಸುಲ್ತಾನರು ಬೆದರ ಬಹುದು. ಅಲ್ಲೀಸೇಟರು ಬೆಚ್ಚಿಬೀಳಬಹುದು!" ಎಂದು ಹೇಳುತ್ತಾ ದೌಲತ್‌ರಾಣಿ ಯವರನ್ನು ಆಲಿಂಗಿಸಿದಳು.

ದೌಲತ್‌ರಾಣಿಯು, ಬೀಬೀರಾಣಿಯ ಗಲ್ಲವನ್ನು ಹಿಡಿದೆತ್ತಿ ಮುದ್ದಿಟ್ಟು, "ಎಂತಹ ರಾಣಿಯೇ, ನೀನು! ನೀನು ಎಷ್ಟು ಬೆಡಗಿನ ರಾಣಿಯೇ ನೀನು! ನಿನ್ನನು

ಸುಲ್ತಾನರ ರಾಯಭಾರಕ್ಕೆ ಒಡಂಬಡಿಸುವುದು ಹೇಗೆ ? ಎಂದು ಚಿಂತಿಸುತ್ತಾ ನಾವಿಬ್ಬರೂ ಬಂದೆವು. ನೀನು ಎಳೆಯ ಮಗುವು ತಾಯಿಯ ಕೊರಳಿನಲ್ಲಿ ತೆಕ್ಕೆ ಬಿದ್ದಂತೆ ನಮಗೆ ಗಂಟು ಬಿದ್ದಿರುವೆ ನಮ್ಮಿಬ್ಬರನ್ನೂ ಹತ್ತಾರು ವರ್ಷಗಳಿಂದ ಬಲ್ಲವಳಂತೆ ಮಾತನಾಡುವೆ ಬೀಬೀ ! ನೀನು ನಮ್ಮೊಡನ ನಗರಕ್ಕೆ ಬರುವೆಯಾ ? ಕಾಡುಮೇಡುಗಳನ್ನಲೆಯಬಲ್ಲೆಯಾ ? ರಣಕ್ಷೇತ್ರದಲ್ಲಿ ನುಗ್ಗಬಲ್ಲೆಯಾ? ನೀನು ಅಂತಃಪುರವನ್ನು ಬಿಟ್ಟರೆ ಸರೋವರದಿಂದ ಕಿತ್ತ ಕಮಲದಂತೆ ಬಾಡಿಹೋಗುವೆ ”

“ಅಕ್ಕನವರೇ, ಬರುವೆನು ನಗರಕ್ಕೆ ಮಾತ್ರವೇ ಏಕೆ, ಎಲ್ಲಿಗೆ ಬೇಕಾದರೂ ಬರುವೆನು. ಈ ಕನ್ನಾನೂರಿನ ರಾಣಿಗಿರಿಯು ನನಗೆ ಬೇಸರವಾಗಿದೆ.”

ಒಂದೇ ದಿನದಲ್ಲಿ ಅವರುಗಳು ಬಹಳ ಸ್ನೇಹಿತರಾಗಿಬಿಟ್ಟರು

ಮಾರನೆಯ ದಿನ ಕೋಬೇಬಂದರಿಗೆ ಹೋಗುವ ಏರ್ಪಾಡುಗಳೆಲ್ಲಾ ಸಿದ್ಧವಾದುವು. ಮೂವರೂ ದೋಣಿಯಲ್ಲಿ ಹೊರಟರು. ಆ ಪ್ರಕೃತಿ ಸೌಂದರ್ಯವನ್ನು ನೋಡಿ ದೌಲತ್ತಳು ಆನಂದಿಸುತ್ತಿದ್ದಳು ಕೋಬೇಬಂದರಿಗ ದೋಣಿಯು ತಲಪುತ್ತಲೇ ಬೀಬೀರಾಣಿಯು ದಡಕ್ಕೆಹಾರಿದಳು. ದೌಲತ್ ಮತ್ತು ರಾಧಾರಾಣಿಯವರನ್ನು ದೋಣಿಯಿಂದ ಇಳಿಸಿದಳು ಅವರು ಮೂವರೂ ಅಲ್ಲೀಸೇಟನ ಮನೆಯನ್ನು ಒಳಹೊಕ್ಕರು. ಸೇಟರೇ ಸ್ವತಃ ಬಂದು ಮೂವರನ್ನೂ ಎದುರುಗೊಂಡರು ಮಹಡಿಯ ಮೇಲಂತಸ್ತಿನಲ್ಲಿ ಹೋಗಿ ಎಲ್ಲರೂ ಆಸನಗಳಲ್ಲಿ ಕುಳಿತುಕೊಂಡರು

ಬೀಬೀರಾಣಿಯು—ಸೇಟರೇ ! ಇವರಿಬ್ಬರೂ ಟಿಪ್ಪೂಸುಲ್ತಾನರ ರಾಯಭಾರಿಗಳು. ಅವರು ಬಂದಿರುವ ರಾಯಭಾರವನ್ನು ಅವರೇ ತಿಳಿಸುತ್ತಾರೆ ಅದನ್ನು ಸಲ್ಲಿಸಿಕೊಡಬೇಕೆಂದು ನಾನೂ ಸಿಫಾರಸು ಮಾಡುತ್ತೇನೆ ಎಂದು ಹೇಳಿದಳು

ಸೇಟ್—ಅವರು ಯಾವಾಗಲೂ ಸುಲ್ತಾನರ ರಾಯಭಾರಿಗಳೇ ! ನಮ್ಮ ರಾಯಭಾರವನ್ನು ಯಾವಾಗಲೂ ಅವರು ವಹಿಸುವುದೇ ಇಲ್ಲ !

ದೌಲತ್—ನಾವು ಯಾವಾಗಲೂ ತಮ್ಮವರಾಗಿಯೇ ಇದ್ದೇವೆ.

ಬೀಬೀ—ದೌಲತ್ತಳು ಸುಲ್ತಾನರಿಗೆ ಒಂದು ಕೋಟಿ ರೂಪಾಯಿಗಳ ಸಾಲ ಕೇಳುವುದಕ್ಕೆ ತಮ್ಮಲ್ಲಿಗೆ ಬಂದಿದ್ದಾಳೆ ತಮ್ಮ ವ್ಯಾಪಾರ ಧರ್ಮವನ್ನು ಅವರಿಗೆ ತಿಳಿಸಿದ್ದೇನೆ ಎಂದು ನಕ್ಕಳು

ದೌಲತ್—ಮಂದಹಾಸವನ್ನು ಬೀರುತ್ತಾ, ಸೇಟರೇ ! ಸುಲ್ತಾನರವರೇ ಹೇಳಿದರು, ಅಲ್ಲೀಸೇಟರು ಜವಾಹಿರಿಗಳನ್ನು ಒತ್ತೆ ಇಟ್ಟಲ್ಲದೆ ಹಣವನ್ನು ಕೊಡಲೊಪ್ಪುವುದಿಲ್ಲವೆಂದು ! ನಾವು ಅನರ್ಘ್ಯವಾದ ಜವಾಹಿರಿಗಳನ್ನು ತಂದಿದ್ದೇವೆ ಅದನ್ನು ತಮಗೆ ಒಪ್ಪಿಸುತ್ತೇವೆ

ಸೇಟ್—ಕನ್ನಾನೂರಿನ ಕೋಟೆಯಲ್ಲಿ ಜವಾಹಿರಿಗಳನ್ನು ಇಟ್ಟು ಒಂದುಕೋಟಿ

ರೂಪಾಯಿಗಳಿಗೆ ಸರಿಗಟ್ಟುವ ಚಿನ್ನದ ನಾಣ್ಯಗಳನ್ನು ತೆಗೆಸಿಕೊಂಡು ಹೋಗಬಹುದು. ಅದನ್ನು ಬೀಬೀರಾಣಿಯವರು ಭದ್ರವಾಗಿ ಸುಲ್ತಾನರವರಿಗೆ ತಲುಪಿಸುತ್ತಾರೆ

ಸೇಟ್—ರಾಧೆಯ ಕಡೆಗೆ ತಿರುಗಿ, ರಾಣಿಯವರೇ ! ಕೊಡಗಿನ ಸಮಾಚಾರ ವೇನು ? ಸುಲ್ತಾನರೇಕೆ ಕೊಡಗಿನ ಮೇಲೆ ದಂಡೆತ್ತಿ ಹೋದರು? ಏಕೆ ಕೊಡಗನ್ನು ಬಿಟ್ಟು ಬಂದರು? ತಾವುಗಳೇಕೆ ಅಲ್ಲಿಗೆ ಹೋಗಿದ್ದಿರಿ ? ಎಂದು ಕೇಳಿದನು

ರಾಧೆ—ಖಾನರವರೇ ! ತಾವು ಎಲ್ಲವನ್ನೂ ತಿಳಿದುಕೊಂಡಿದ್ದೀರಿ. ಕೊಡಗನ್ನು ಸುಲ್ತಾನರು ಬಿಟ್ಟು ಬಂದದ್ದರಲ್ಲೇನೂ ಆಶ್ಚರ್ಯವಿಲ್ಲ ದೌಲತ್ ರವರು ಕ್ಷಣಹೊತ್ತು ರಾಣಿಗಿರಿಯನ್ನು ವಹಿಸಿ, ಕೊಡಗನ್ನೆಲ್ಲಾ ಕೊಡಗರಿಗೆ ದಾನ ಮಾಡಿಬಿಟ್ಟರು ಸುಲ್ತಾನರವರನ್ನು ಸೈನ್ಯವನ್ನೆತ್ತಿಕೊಂಡು ರಾಜಧಾನಿಗೆ ಹೋಗಬೇಕೆಂದೂ ಆಜ್ಞೆ ಮಾಡಿದರು.

ಸೇಟ್—ಹಾ ! ದೌಲತ್‌ರವರ ಪ್ರಭಾವವು ಅಷ್ಟಿದೆಯೇ ?

ರಾಧೆ—ನಗುತ್ತಾ, ಇಲ್ಲದೆ ಏನು ? ದೌಲತ್ತರವರಿಗಾಗಿ ನವಾಬರು ನಗರವನ್ನು ಪರಿತ್ಯಾಗ ಮಾಡಲಿಲ್ಲವೆ ? ಸುಲ್ತಾನರು ಕೊಡಗನ್ನು ಬಿಟ್ಟು ಬರುವುದರಲ್ಲೇನು ಆಶ್ಚರ್ಯ !

ಸೇಟ್—ಈಗ ಕೊಡಗಿನ ದೊರೆತನವು ಯಾರದು ?

ದೌಲತ್—ಕೊಡಗಿನ ಮಹಾರಾಣಿಯರದು !

ಸೇಟ್—(ನಗುತ್ತಾ,) ಎಲ್ಲೆಲ್ಲಿಯೂ ರಾಣಿಯವರ ರಾಜ್ಯಭಾರವಾಗಿದೆ ಶ್ರೀರಂಗಪಟ್ಟಣದ ಸಿಂಹಾಸನವನ್ನೂ ಒಬ್ಬ ರಾಣಿಯವರು ಏರಿದರೆ, ಪ್ರಪಂಚವೆಲ್ಲವೂ ಸ್ತ್ರೀಯರ ದೊರತನವಾಗಿ ಹೋಗುತ್ತದೆ

ಎಲ್ಲರೂ ನಕ್ಕರು.

ಸೇಟ್—ದೌಲತ್‌ರಾಣಿಯವರೂ, ತಾವೂ ಕೊಡಗಿಗೆ ಚಿತ್ತೈಸಿದ ರಾಜಕಾರಣವಾವುದು ?

ರಾಧೆ—ಆ ಫಾತಿಮಾಬೇಗಂರವರನ್ನು ಕಾಪಾಡುವುದಕ್ಕೆ ಹೋಗಬೇಕಾಯಿತು!

ಸೇಟ್—ಬೇಗಂಸಾಹೇಬರವರ ಗತಿ ಏನಾಯಿತು ?

ರಾಧೆ—ಅವರು ಸ್ವರ್ಗಧಾಮವನ್ನೇರಿದರು.

ಸೇಟ್—ರಾಣಿಯವರೇ, ತಾವು ಅವರನ್ನು ರಕ್ಷಿಸಲಾರದೇ ಹೋದಿರಾ ?

ರಾಧೆ—ಇಲ್ಲ ಖಾನರವರೇ! ಬೇಗಂಸಾಹೇಬಳು ಆತ್ಮಹತ್ಯ ಮಾಡಿಕೊಂಡಳು

ಸೇಟ್—(ವಿಷಾದದಿಂದ) ಹಾಗಾದರೆ ನೀವು ಕೊಡಗಿಗ ಹೋದದ್ದು ವ್ಯರ್ಥಯಿತು

ರಾಧೆ—ವ್ಯರ್ಥವೇಕೆ ? ಸಹಸ್ರ, ಸಹಸ್ರ ಸಂಖ್ಯಾತರಾದ ಕೊಡಗಿನ ರಮಣಿ

ಯರ ಉದ್ಧಾರವಾಯಿತು ದೌಲತ್ತರವರಿಲ್ಲದಿದ್ದರೆ ಈ ಜಗತ್ತಿನಲ್ಲಿ ಎಂದೂ, ಎಲ್ಲಿಯೂ ನಡೆಯದ ಅನಾಹುತವು ಸುಲ್ತಾನರ ಕೈಯಿಂದ ನಡೆದುಹೋಗುತ್ತಿತ್ತು !

ಸೇಟ್—ಆಹಾ ! ದೇವರು ರಕ್ಷಿಸಿದ ಹಾಗೇನಾದರೂ ಅತ್ಯಾಚಾರ ನಡೆದಿದ್ದರೆ ಮೈಸೂರು ನಾಶವಾಗಿ ಹೋಗುತ್ತಿತ್ತು.

ರಾಧೆ—ನಗುತ್ತಾ ಸುಲ್ತಾನೀರಾಜ್ಯದ ರಾಜ್ಯಲಕ್ಷ್ಮಿಯವರಾದ ದೌಲತ್‌ರಾಣಿಯವರಿರುವಾಗ ಅಂತಹ ಅತ್ಯಾಚಾರಕ್ಕೆ ಎಡೆಯೆಲ್ಲಿ ?

ಸೇಟ್—ಸುಲ್ತಾನರವರು ತಮ್ಮ ಹಠವನ್ನು ಮುಂದುವರಿಸಿದ್ದರೆ ?

ದೌಲತ್—ಮುಂದುವರಿಸಿದ್ದರೆ— ನಾವಿಬ್ಬರೂ ಆತ್ಮಹತ್ಯ ಮಾಡಿಕೊಳ್ಳುತ್ತಿದ್ದೆವು

ಸೇಟ್—ಎರಡು ಜೀವರತ್ನಗಳು ಅಸ್ತವಾಗುತ್ತಿದ್ದುವು.

ಈ ದೌಲತ್‌ರಾಣಿಯ ಪ್ರಭಾವವು ಸುಲ್ತಾನರ ಮೇಲೆಷ್ಟಿದೆ ! ಇವರು ಸುಲ್ತಾನರ ರಾಣಿಯವರೇ ಆಗಿದ್ದರೆ ಸುಲ್ತಾನರ ಕೀರ್ತಿಯು ಇಡೀ ಹಿಂದೂಸ್ಥಾನದಲ್ಲಿ ಪ್ರಕಾಶಿಸುತ್ತಿತ್ತು

ದೌಲತ್ತಳ ಮುಖವು ಕೆಂಪೇರಿತು ಲಜ್ಜೆಯಿಂದ ತಲೆಬಾಗಿದವಳಾಗಿ ಖಾನರವರೇ ನೀವು ಸ್ತ್ರೀಮರ್ಯಾದೆಯನ್ನು ಮೀರಿ ಮಾತನಾಡುತ್ತೀರಿ ನಾನಿಲ್ಲಿರುವುದಿಲ್ಲ ! ಎಂದು ಎದ್ದುಹೊರಟಳು

ಬೀಬಿ—ದೌಲತ್‌ರಾಣಿಯವರೇ, ತಮ್ಮ ರಾಯಭಾರವನ್ನು ನಿರ್ವಹಿಸುವವರಾರು ? ಎಂದು ಕೈ ಹಿಡಿದಳು

ದೌಲತ್ತಳು ಕಿರುನಗುವಿನಲ್ಲಿ ನಗುತ್ತಾ, ನೀನು ! ನೀನು ರಾಯಭಾರವನ್ನು ವಹಿಸು ! ಎಂದು ಹೇಳುತ್ತಾ ಆ ಬೀಬೀರಾಣಿಯ ಕೋಮಲ ಕಪೋಲದ ಮೇಲೆ ತನ್ನ ಮೃದುಹಸ್ತದಿಂದ ನೋಯದಂತೆ ಒಂದೇಟು ಕೊಟ್ಟು ಹೊರಟುಹೋದಳು

ದೌಲತ್ತಳು ಸಮುದ್ರ ತೀರದಲ್ಲಿ ಹೋಗಿ ನಿಂತಳು ಆ ಅಗಾಧ ಸಾಗರವನ್ನು ನೋಡುತ್ತಾ, ಆ ಅಲೆಗಳ ಆಂದೋಳವನ್ನು ನಿರೀಕ್ಷಿಸುತ್ತಾ ನಿಂತಳು. ಚಂದ್ರಮನು ಭೂರಮಣಿಯ ಮೇಲೆ ಬೆಳದಿಂಗಳನ್ನು ಚಲ್ಲುತ್ತಿದ್ದನು. ತಾರಾಮಣಿಯರು ನಿಶಾನಾಥನನ್ನು ಓಲೈಸುತ್ತಿದ್ದರು. ಆ ಆನಂದದಲ್ಲಿ ದೌಲತ್ತಳು ಎಲ್ಲವನ್ನೂ ಮರೆತಳು. ಇಯಜ್ ಖಾನನನ್ನು ಮರೆತಳು ಸುಲ್ತಾನನನ್ನು ಮರೆತಳು. ದರಿಯಾಬಾಗಿನ ಸೋನಾ ಮಹಲು ಜ್ಞಾಪಕಕ್ಕೆ ಬಂದಿತು. ಆ ಸೋನಾಮಹಲು ಮೇಲೆ ಮೇಲಕ್ಕೆ ಹಾರಿ ಚಂದ್ರಮಂಡಲವನ್ನು ಸೇರಿದಂತೆ ಭಾಸವಾಯಿತು ಶ್ರೀರಂಗಪಟ್ಟಣವು ಸ್ಮೃತಿ ಪಥವನ್ನಡರಿತು ಆ ರಾಜಧಾನಿಯು ಗಂಭೀರವಾದ ಸಮುದ್ರದ ಮೇಲೆ ತೇಲುವಂತೆ ಕಂಡಿತು. ಸೂರ್ಯಬಿಂಬವು ಪಶ್ಚಿಮ ಸಮುದ್ರದಲ್ಲಿ ಹೆಜ್ಜೆ ಹೆಜ್ಜೆಯಾಗಿ ಮುಳುಗು

ವಂತೆ ಆ ಪಟ್ಟಣವು ಗಂಭೀರ ಸಾಗರ ಗರ್ಭದಲ್ಲಿ ಮುಳುಗುತ್ತಿರುವಂತೆ ಬೋಧೆ ಯಾಯಿತು ! ತಕ್ಷಣ ಕೊಡಗಿನ ಅಂದಿನ ಘೋರ ದೃಶ್ಯವು ಕಣ್ಣಿಗೆ ಕಟ್ಟಿತು. ಆ ಕೊಡಗಿನ ಸುಂದರಿಯರ ಮುಖಾರವಿಂದಗಳು ನೆನಪಿಗೆ ಬಂದಿತು ಅವು ಚಂದ್ರನನ್ನು ಧಿಕ್ಕರಿಸುತ್ತಿರುವಂತೆ ಭಾಸವಾಯಿತು ಆ ದಿವ್ಯವದನಾರವಿಂದಗಳಿಂದ ಎದ್ದು ಬಂದ ದೀನವಾಣಿಯು ಕೇಳಿಸಿತು ಆಹಾ ! ಅನಾಥರಾದ ಅಬಲೆಯರನ್ನು ರಕ್ಷಿಸುವರಿಲ್ಲ ಎಂಬ ಆರ್ತನಾದವು ಸ್ವರ್ಗಧಾಮದಿಂದ ಕೇಳಿಬಂದಂತಾಯಿತು ಏಕಿಲ್ಲ, ನಾನು ಜನ್ಮವೆತ್ತಿರುವುದೇಕ ? ನಾನು ಅಬಲೆಯೇ! ನನ್ನ ಭುಜಗಳಲ್ಲಿ ಬಲವಿಲ್ಲವೆ ? ಎನ್ನಿಸಿತು ನಾನು ರಕ್ಷಿಸುತ್ತೇನೆ ಸ್ತ್ರೀಯರನ್ನು ನಾನು ರಕ್ಷಿಸುತ್ತೇನೆ ಎಂದಳು. ಅಷ್ಟರಲ್ಲಿ ಹಿಂದಿನಿಂದ ಯಾರೋ ಬಂದು ಮೃದುವಾಗಿ ಬೆನ್ನು ತಟ್ಟಿದರು ದೌಲತ್ತಳು ತಟ್ಟನೆ ಹಿಂದಿರುಗಿ, ಯಾರು ? ಎಂದಳು

ಇಯಜ್‌ಖಾನನು "ನಾನು ! ದೌಲತ್ ನೀನು ಯಾರನ್ನು ರಕ್ಷಿಸುವಿ ?" ಎಂದನು

ದೌಲತ್ತಳು ನಕ್ಕಳು. ಆ ಸಮುದ್ರದ ಕಡೆಗೆ ಕೈ ತೋರಿಸಿ—ನೋಡು ಖಾ ಆ ಸಮುದ್ರವು ಎಷ್ಟು ಗಾಂಭೀರ್ಯದಿಂದಿದೆ ಆ ಸಮುದ್ರ ಮಧ್ಯಕ್ಕೆ ನನ್ನನ್ನು ಕರದೊಯ್ಯುವೆಯಾ ? ಎಂದಳು ಖಾನನು, ದೌಲತ್ ಮತ್ತೊಂದು ದಿನ ಆ ಸಮುದ್ರ ಮಧ್ಯಕ್ಕೆ ನಿನ್ನನ್ನು ಕರೆದೊಯ್ಯುವೆನು ಇಂದು ಅರ್ಧರಾತ್ರಿಯಾಯಿತು ! ಮನೆಗೆ ಹೋಗೋಣ ನಡೆ ! ನೀನು ಕೋಪಿಸಿಕೊಂಡು ಬಂದೆಯೆಂದು ನಾನು ನಿನ್ನನ್ನು ಅರಸುತ್ತ ಬಂದೆ ! ನೀನು ಈ ದಿವ್ಯವಾದ ಸೈಕತರಾಶಿಯ ಮೇಲೆ ಮನೋಹರವಾದ ಬೆಳದಿಂಗಳಿನಲ್ಲಿ ನಿಂತಿದ್ದುದನ್ನು ಕಂಡೆ ! ಆ ಸಮುದ್ರದಿಂದ ಎದ್ದು ಬಂದ ಮೋಹಿನಿಯಂತೆ ನೀನು ಪ್ರಕಾಶಿಸುತ್ತಿರುವೆ ! ನಿನ್ನ ಈ ಸೌಂದರ್ಯವನ್ನು ನೋಡಿ ನೋಡಿ ಮನದಣಿದು ನಿನ್ನ ಸಮೀಪಕ್ಕೆ ಬಂದೆ ಎಂದನು ದೌಲತ್ತಳ ಕೈ ಹಿಡಿದು ಮುಂಗೈಯನ್ನು ಸವರುತ್ತಾ ಆ ಹಸ್ತವನ್ನೆತ್ತಿ ಚುಂಬಿಸಿದನು ದೌಲತ್ತಳು ಖಾನನ ಭುಜದ ಮೇಲೆ ಕೈ ಹಾಕಿಕೊಂಡು ಮಹಲಿನ ಕಡೆಗೆ ನಡೆದಳು ಅವರಿಬ್ಬರೂ ಮಹಲಿನ ಮೇಲಂತಸ್ತಿಗೆ ಪ್ರವೇಶಿಸಿದರು. ಭವ್ಯವಾದ ಮಹಲನ್ನು ಕಂಡು ದೌಲತ್ತಳು ಅಪ್ರತಿಭಳಾದಳು ನೆಲದಮೇಲೆ ಬಿಳಿಯ ರತ್ನಗಂಬಳಿಯು ಹಾಸಲ್ಪಟ್ಟಿದೆ ಅದನ್ನು ನೋಡಿದರೆ ಹಾಲು ಚಲ್ಲಿದಂತಿದೆ ಗೋಡೆಗಳಿಗೆಲ್ಲಾ ಎಳಗೆಂಪು ಬಣ್ಣ ! ನಾಲ್ಕು ಬಾಗಿಲುಗಳಿಗೂ ಎಣ್ಣೆಗೆಂಪು ಬಣ್ಣದ ತೆಳ್ಳನೆಯ ರೇಸಿಮೆಯ ಫರದೆಗಳು ಕಟ್ಟಿ ಬಿಡಲ್ಪಟ್ಟಿವೆ ಆ ಹಜಾರದಲ್ಲಿ ಎರಡು ವಿಶಾಲವಾದ ರಜತ ಪರ್ಯಂಕಗಳು ಶೋಭಿಸುತ್ತಿವೆ ಆ ಪರ್ಯಂಕದ ಮೇಲೆ ಹಂಸತೂಲಿಕಾತಲ್ಪಗಳು ಅವು ಸಮುದ್ರದ ನೊರೆಯಂತೆ ಬೆಳ್ಳಗಿವೆ. ಆ ಹಂಸತೂಲಿಕಾತಲ್ಪಗಳ ಮೇಲೆ ಕೆಂಪು ಬಣ್ಣದ ಕುತ್ತನಿಯ ದಿಂಬುಗಳು ವಿರಾಜಿಸು

ತ್ತಿವೆ. ಬಿಳಿಯ ಮೇಘಗಳ ಮಧ್ಯದಿಂದ ಎಳೆಯ ಸೂರ್ಯಬಿಂಬವು ಉದಯಿಸುತ್ತಿರುವಂತೆ ಭಾಸವಾಗುತ್ತಿವೆ. ಆ ಮಂಚಗಳಿಗೆ ಮೇಲುಗಡೆ ಮುತ್ತಿನ ಝಲರಿಗಳು ಕಟ್ಟಲ್ಪಟ್ಟವೆ ದೂರದಲ್ಲಿ ಎರಡು ಬೆಳ್ಳಿಯ ಸೋಫಾಗಳು ರಂಜಿಸುತ್ತಿವೆ ಈ ಸೋಫಾಗಳಿಗೆ ಹಸನಾದ ನೇರಳೆಯ ಬಣ್ಣದ ಮಕಮಲ್ಲಿನ ಮೆತ್ತೆಗಳಿವೆ ಅವುಗಳ ಮೇಲೆ ಜರಿಗೆ ಪೋತಿಯಿಂದ ಕಮಲಗಳು ಕೆತ್ತಲ್ಪಟ್ಟವೆ ಆ ಕೋಣೆಯ ಮಧ್ಯದಲ್ಲಿ ಎರಡು ಬೆಳ್ಳಿಯ ಕಾಲುಮಣೆಗಳು ನಿಂತಿವೆ ಆ ಕಾಲುಮಣೆಗಳ ಮೇಲೆ ಗಂಧರ್ವಕನ್ನಿಕೆಯರ ಚಿನ್ನದ ಪ್ರತಿಮೆಗಳು ವಿರಾಜಿಸುತ್ತಿವೆ ಆ ದಿಗಂಬರ ಪ್ರತಿಮೆಗಳ ಶಿರದಲ್ಲಿ ಜಾಜ್ವಲ್ಯಮಾನವಾದ ವಜ್ರದ ಕಿರೀಟಗಳು ವಿರಾಜಿಸುತ್ತಿವೆ ಆ ಪ್ರತಿಮೆಗಳ ಕೈಯಲ್ಲಿ ಊದುಬತ್ತಿಯ ದಾನಿಗಳಿವೆ ಆ ಊದುಬತ್ತಿಗಳ ಸುವಾಸನೆಯು ಮಹಲನ್ನೆಲ್ಲಾ ಆವರಿಸಿದೆ. ಮೇಲೆ ನಾಲ್ಕು ಕಡೆಗಳಲ್ಲಿಯೂ ಕಂದೀಲು ದೀಪಗಳು ಉರಿಯುತ್ತಿವೆ ಬಿತ್ತಿಗಳಲ್ಲಿ ದಂತದ ಚೌಕಟ್ಟುಗಳಿಂದ ವಿರಾಜಮಾನವಾದ ನಿಲುಗನ್ನಡಿಗಳು ಅಲಂಕರಿಸಲ್ಪಟ್ಟವೆ ಚಿನ್ನದ ಕಟ್ಟುಗಳಿಂದ ಶೋಭಿಸುತ್ತಿರುವ ನಾಲ್ಕಾರು ಚಿತ್ರಪಟಗಳಿವೆ ಆ ಚಿತ್ರಪಟದಲ್ಲಿ ಫಾರಸೀ ದೇಶದ ನಗ್ನ ಸೌಂದರ್ಯ

ದೌಲತ್ತಳು ಆ ಕನ್ನಡಿಯ ಮುಂದೆ ಹೋಗಿ ನಿಂತಳು ಕಪೋಲಗಳಲ್ಲಿ ಕೆಂಪೇರಿ ಹಣೆಯ ಮೇಲೆ ಬೆವರು ಹನಿಗಳೆದ್ದು ಸಣ್ಣ ಮುತ್ತುಗಳಂತೆ ಕಂಗೊಳಿಸುತ್ತಿದ್ದವು ಬಿಚ್ಚಿದ ಕೇಶದಾಮವು ನಿತಂಬದ ಮೇಲೆ ಹಾರುತ್ತಿತ್ತು ವಾತಾಯನದಿಂದ ಬೀಸುತ್ತಿರುವ ಮಂದಮಾರುತದಿಂದ ಶೆರಗು ಜಾರಿತ್ತು ದೌಲತ್ತಳು ತನ್ನ ಆ ರೂಪವನ್ನು ನೋಡಿ ತಾನೇ ನಕ್ಕಳು ಆ ದಂತಪಂಕ್ತಿಯು ನಕ್ಷತ್ರಪಂಕ್ತಿಯಂತೆ ಮಿಣುಗುತ್ತಿತ್ತು. ಹಿಂದಿರುಗಿ ಖಾನನ ಕಡೆ ಒಮ್ಮೆ ನೋಡಿದಳು ಮತ್ತೊಮ್ಮೆ ನಿಲುಗನ್ನಡಿಯಲ್ಲಿ ತನ್ನ ಮೂರ್ತಿಯನ್ನು ನೋಡಿಕೊಂಡಳು ಪುನಃ ಖಾನನ ಮೇಲೆ ದೃಷ್ಟಿಯನ್ನು ಬೀರಿದಳು.

ಖಾನನು ಆ ತೇಲುವ ಕಣ್ಣುಗಳನ್ನು ನೋಡಿದನು. ಆ ಆಲಸ್ಯದೃಷ್ಟಿಯನ್ನು ನೋಡಿದನು. ಆ ಬೆವರುಹನಿಗಳಿಂದ ಶೋಭಿಸುತ್ತಿರುವ ಮುಖಕಮಲವನ್ನು ನೋಡಿದನು. ಆ ಬಳುಕುತ್ತಿರುವ ಶರೀರವನ್ನು ನೋಡಿದನು. ಕಂಪಿಸುತ್ತಿರುವ ಕೆಂದುಟಿಗಳನ್ನು ನೋಡಿದನು ಮಂದಹಾಸವನ್ನು ಬೀರುತ್ತಿರುವ ದಂತಪಂಕ್ತಿಯನ್ನು ನೋಡಿದನು. ಅವಳ ಸಮೀಪಕ್ಕೆ ಬಂದು ದೌಲತ್! ದೌಲತ್! ಎಂದು ಆ ದೌಲತ್ತಳನ್ನು ಚುಂಬಿಸಿದನು

ಆ ಪ್ರಶಸ್ತಭವನದಲ್ಲಿ, ಈ ಪ್ರಶಾಂತನಿಶಿಯಲ್ಲಿ ಆ ಏಕಾಂತದಲ್ಲಿ ಆ ರಾತ್ರಿಯು ಕಳೆದು ಹೋದುದನ್ನು ದೌಲತ್ತಳಾಗಲೀ ಖಾನನಾಗಲಿ ಅರಿಯಲಿಲ್ಲ. ನಿಶಾದೇವಿಯು

ಈ ಜಗತ್ತನ್ನು ಕಾಲದ ತೊಟ್ಟಿಲಲ್ಲಿಟ್ಟು ತೂಗಿ ಚಂದ್ರನೊಡನೆ ನಗುತ್ತ ನಲಿಯು ತ್ತಿದ್ದಳು

## ಹುಸೇ‌ಖಾನನು ರಾಜಧಾನಿಗೆ

ಬೀಬೀರಾಣಿಯವರು ಒಂದು ಕೋಟಿ ರೂಪಾಯಿಗಳನ್ನು ಸ್ವರ್ಣ ನಾಣ್ಯ ಗಳನ್ನು ಶ್ರೀರಂಗ ಪಟ್ಟಣಕ್ಕೆ ಕಳುಹಿಸಲು ಸಿದ್ಧ ಮಾಡಿದರು ಆ ಸ್ವರ್ಣಭಾರವನ್ನು ಆನೆಯ ಮೇಲೆ ಹೂರಸಿ ಕಳಿಸಿದರು ಆ ನಿಧಿಯನ್ನು ಸೇನಾನಾಯಕ ಹುಸೇ‌ ಖಾನನೇ ಬಲವಾದ ಕಾವಲಿನಿಂದ ತೆಗೆಸಿಕೊಂಡು ಹೋಗಿ ಸುಲ್ತಾನರ ಸಮ್ಮುಖದಲ್ಲಿ ಒಪ್ಪಿಸಿ ಬರಬೇಕೆಂದು ರಾಣಿಯವರು ಅಪ್ಪಣೆ ಮಾಡಿದರು. ಹುಸೇ‌ಖಾನನು ಬಲಿ ಷ್ಟರಾದ ಇನ್ನೂರು ಮಂದಿ ಬಂದೂಕಿನ ಸೈನಿಕರನ್ನು ಕರೆದುಕೊಂಡು ಆ ಸುವರ್ಣ ನಾಣ್ಯಗಳನ್ನು ರಾಜಧಾನಿಗೆ ತೆಗೆಸಿಕೊಂಡು ಹೂರಟನು. ಕನ್ನಾನೂರಿನಿಂದ ಮೈಸೂರಿಗೆ ಹೋಗುವ ಮಾರ್ಗವು ಅರಣ್ಯ ಮಾರ್ಗವಾಗಿತ್ತು. ಅಲ್ಲಿ ಇತರ ರಾಜರ ಭಯವಿರಲಿಲ್ಲ ಮಧ್ಯೆ ಇಂಗ್ಲೀಷರ ಸೈನ್ಯವೂ ಇರಲಿಲ್ಲ ಆದರೆ ಅರಣ್ಯ ಮಾರ್ಗದಲ್ಲಿ ಕಳ್ಳಕಾಕರ ಭಯವು ಬಹಳ ಜಾಸ್ತಿಯಾಗಿತ್ತು ಸುಸಜ್ಜಿತರಾದ ಸೈನಿಕರಿಂದ ಸುರ ಕ್ಷಿತವಾದ ನಿಧಿಯನ್ನು ಅಪಹರಿಸುವ ಧೈರ್ಯವು ಯಾವ ಕಳ್ಳರ ಗುಂಪಿಗೂ ಇರಲಿಲ್ಲ. ಹುಸೇ‌ಖಾನನು ಒಂದು ತಿಂಗಳ ದಿನ ಪ್ರಯಾಣದ ಮೇಲೆ ಪ್ರಯಾಣ ಮಾಡಿ ಶ್ರೀರಂಗ ಪಟ್ಟಣವನ್ನು ತಲುಪಿದನು ತಾನು ಬಂದಿರುವ ಸಮಾಚಾರವನ್ನು ಸುಲ್ತಾ ನರಿಗೆ ದೂತರ ಮುಖಾಂತರ ಹೇಳಿ ಕಳುಹಿಸಿದನು ಸುಲ್ತಾನನು ಬಹಳ ಮರ್ಯಾ ದೆಯೊಡನೆ ಕನ್ನಾನೂರಿನ ಸೇನಾನಾಯಕನನ್ನು ರಾಜಭವನಕ್ಕೆ ಬರಮಾಡಿಕೊಂಡನು. ಮಂತ್ರಿಗಳು, ಸೇನಾನಾಯಕರ ಸಮ್ಮುಖದಲ್ಲಿ ಹುಸೇ‌ಖಾನನಿಗೆ ಬೇಟಿ ಕೊಟ್ಟನು. ಹುಸೇ‌ಖಾನನು ತಾನು ತೆಗೆಸಿಕೊಂಡು ಬಂದಿದ್ದ ನಿಧಿಯನ್ನೆಲ್ಲಾ ಸುಲ್ತಾನರ ಸನ್ನಿ ಧಾನದಲ್ಲಿ ಒಪ್ಪಿಸಿ ಮುಜರೆ ಮಾಡಿದನು ಕನ್ನಾನೂರಿನ ರಾಣಿಯವರು ಈ ಕಾಣಿಕೆ ಯನ್ನುಕಳಿಸಿದಾರೆಂದೂ, ಇದು ಒಂದು ಕೋಟಿ ರೂಪಾಯಿಗಳ ಬೆಲೆ ಬಾಳುವ ಸ್ವರ್ಣ ನಿಧಿಯೆಂದೂ ವಿನಯದಿಂದ ಅರಿಕೆ ಮಾಡಿದನು

ಸುಲ್ತಾನನು ಹುಸೇ‌ಖಾನನನ್ನು ಆಸನದಲ್ಲಿ ಕುಳಿತುಕೊಳ್ಳುವಂತೆ ಸೂಚಿಸಿ ದನು ರಾಣಿಯವರ ಕ್ಷೇಮ ಸಮಾಚಾರಗಳನ್ನು ಆದರದಿಂದ ವಿಚಾರಿಸಿದನು. ಹುಸೇ‌ಖಾನನಿಗೆ ವಿಶೇಷ ಉಪಚಾರೋಕ್ತಿಗಳನ್ನು ಹೇಳಿ ಅವನಿಗಾಗಿ ಏರ್ಪಡಿಸಿ ರುವ ಬಿಡಾರದಲ್ಲ ವಿಶ್ರಮಿಸಿಕೊಳ್ಳುವಂತೆ ಹೇಳಿದನು ಮಾರನೆಯ ದಿನ ಸುಲ್ತಾ ನನು ರಾಜದೂತರಿಂದ ಹುಸೇ‌ಖಾನನನ್ನು ಕರೆಸಿ ಅಂತರಂಗದಲ್ಲಿ ಭೇಟಿಯನ್ನು

ಕೊಟ್ಟನು. ರಾಧಾರಾಣಿಯವರೂ, ದೌಲತ್‌ರಾಣಿಯವರೂ ಕನ್ನಾನೂರಿಗೆ ಬಂದ ಸಮಾಚಾರವನ್ನೂ, ಅವರು ಅಲ್ಲಿಯೇ ಇರುವ ಸಮಾಚಾರವನ್ನೂ ಸಾವಕಾಶವಾಗಿ ವಿಚಾರಿಸಿದರು

ಹುಸೇನ್‌ಖಾನನು ದೌಲತ್‌ರಾಣಿಯವರೂ ರಾಧಾರಾಣಿಯವರೂ ರಾಯಭಾರಿಗಳಾಗಿ ಬಂದಿರುವ ಸುದ್ದಿಯನ್ನೂ, ಬೀಬೀರಾಣಿಯವರು ಅವರನ್ನು ಆದರಿಸಿ ಅರಮನೆಯಲ್ಲಿಯೇ ಇಟ್ಟುಕೊಂಡಿರುವ ಅಂಶವನ್ನೂ ವಿವರಿಸಿದನು ಸುಲ್ತಾನರು ಹುಸೇನ್‌ಖಾನರವರೇ ! ಇಷ್ಟೊಂದು ಹಣವನ್ನು ರಾಣಿಯವರು ಹೇಗೆ ಸಂಗ್ರಹಿಸಿದರು ? ಎಂದು ಕೇಳಿದರು ಹುಸೇನ್‌ಖಾನನು ರಾಣಿಯವರು ಅಲ್ಲೀಸೇಟ್‌ರಲ್ಲಿ ಸಾಲಮಾಡಿದಾರೆಂದು ತಿಳಿಸಿದನು ಹಾಗೆಯೇ ಸೇಟರ ಮಾತು ಒಂತು ಸುಲ್ತಾನನು ಸೇನಾಧಿಪತಿಗಳೇ ಆ ಸೇಟರ ಸಮಾಚಾರವನ್ನು ತಿಳಿದುಕೊಳ್ಳಲು ನಮಗೆ ಬಹಳ ಕುತೂಹಲವಿದೆ ನೀವು ಅವರನ್ನು ಬಲ್ಲಿರಾ ? ಎಂದು ಕೇಳಿದನು ಖಾನನು ಹೌದು! ಸುಲ್ತಾನರವರೇ ! ನಾನು ಒಂದೆರಡು ಬಾರಿ ಅವರನ್ನು ನೋಡಿದೇನೆ ಅವರು ಬಲು ದೊಡ್ಡ ಮನುಷ್ಯರು. ಬಹಳ ದೊಡ್ಡ ವ್ಯಾಪಾರಿಗಳು ಇಂಗ್ಲೀಷರ ಕಂಪನಿಗಳಂತೆಯೇ ಸೇಟರ ಕೋಠಿಗಳೂ ಬಹಳ ಪ್ರಬಲವಾಗಿವೆ

ಸೇಟರು ತಮ್ಮ ಕೋಠಿಗಳ ರಕ್ಷಣೆಗೆ ಸೈನ್ಯವನ್ನಿಟ್ಟಿದ್ದಾರೆಯೋ ?

ಇಲ್ಲ ! ಸುಲ್ತಾನರವರೇ ! ಅವರು ಸೈನ್ಯ ಬೇಕಿಲ್ಲವೆನ್ನುತ್ತಾರೆ

ಸುಲ್ತಾನನು-ಅವರ ಕೋಠಿಗಳ ರಕ್ಷಣೆಯು ಹೇಗಾಗುತ್ತೆ ? ಅವರ ಹಣದ ರಕ್ಷಣೆಯನ್ನು ಯಾರು ಮಾಡುವವರು ?

ಸುಲ್ತಾನರವರೇ! ಸೇಟರು ಇಂಗ್ಲೀಷರಿಗೆ ಸ್ನೇಹಿತರು ಫ್ರೆಂಚರಿಗೆ ಮಿತ್ರರು ನಮ್ಮ ರಾಣಿಯವರಿಗೆ ಬೇಕಾದವರು, ತಮಗೂ ವಿಧೇಯರು ಮಲಬಾರಿನಲ್ಲಿರುವ ರಾಜರಿಗೆಲ್ಲಾ ಸಾಲಗಳನ್ನು ಕೊಟ್ಟಿದ್ದಾರೆ

ಹುಸೇನ್‌ಖಾನರವರೇ ! ಒಬ್ಬರಿಗೆ ಹಣವನ್ನು ಕೊಟ್ಟು ಸಹಾಯ ಮಾಡುವುದಾದರೆ ಮತ್ತೊಬ್ಬರ ಕ್ರೋಧಕ್ಕೆ ಕಾರಣವಾಗುವುದಿಲ್ಲವೇ ?

ಸುಲ್ತಾನರವರೇ ! ಅದೇ ಸ್ವಾರಸ್ಯ ! ಅವರು ಜವಾಹಿರಿಗಳನ್ನಿಡದೆ ಸಾಲ ಕೊಡುವುದೇ ಇಲ್ಲ ! ಅವರ ಭಂಡಾರಗಳನ್ನು ಫ್ರೆಂಚರ ಮುಖ್ಯ ಸ್ಥಳವಾದ ಮಹೀ ಬಂದರಿನಲ್ಲಿಯೂ, ಇಂಗ್ಲೀಷರ ಸೈನ್ಯವಿರುವ ತಲಚೇರಿಯಲ್ಲಿಯೂ, ಭದ್ರವಾದ ಕೋಠಿಗಳನ್ನು ಕಟ್ಟಿ ಅಲ್ಲಿಟ್ಟಿದ್ದಾರೆ

ಸು-ಆ ಜನರೇ ಅದನ್ನೆಲ್ಲಾ ಮುಟ್ಟಿಗೋಲು ಹಾಕಿಕೊಂಡರೆ !

ಹು-ಆ ಜನರು ಮುಟ್ಟಿಗೋಲು ಹಾಕುವುದಿಲ್ಲವೆಂದೂ, ಲೂಟಿ ಮಾಡುವುದಿಲ್ಲವೆಂದೂ ಸೇಟರು ನಂಬಿದಾರೆ.

ಹುಸೇನ್‌ಖಾನನು ಆಸನದಿಂದ ಎದ್ದು ನಿಂತು-ಸುಲ್ತಾನರವರೇ ! ಸನ್ನಿಧಾನ

ದಲ್ಲಿ ಒಂದು ಅರಿಕೆ ಮಾಡಿಕೊಳ್ಳತಕ್ಕದ್ದಿದೆ ನಾನು ನಿನ್ನೆಯಿಂದ ಮಹಾಸ್ವಾಮಿಯವರ ಆತಿಥ್ಯದಲ್ಲಿದ್ದೇನೆ ನನಗೆ ನನ್ನ ವಿಷಯವನ್ನು ಮುಚ್ಚಿಟ್ಟುಕೊಂಡು ಕಳ್ಳನಂತೆ ಇರುವುದು ಇಷ್ಟವಿಲ್ಲ

ಸುಲ್ತಾನರವರೇ ನಾನು ಚಿಕ್ಕಂದಿನಿಂದ ಇಯಜ್‌ಖಾನರ ಶಿಷ್ಯನೆಂಬುದು ಸನ್ನಿಧಾನಕ್ಕೆ ಮೊದಲು ಅರಿಕೆ ಮಾಡಬೇಕಾದ ಅಂಶ !

ಹೌದು ! ಸೇನಾಧಿಪತಿಗಳೆ ಅದನ್ನು ನಾನು ಬಲ್ಲೆ

ನಾನು ಖಾಸಿಂಖಾನನ ಸಹೋದರನೆಂಬುದು ಸನ್ನಿಧಾನಕ್ಕೆ ವೇದ್ಯವೇ ಇದೆಯಲ್ಲವೇ ?

ನಗರದ ಆ ಸೇನಾನಾಯಕನ ವೀರರಾದ ಸಹೋದರರು ನೀವೆಂಬುದು ನಮಗೆ ಗೊತ್ತಿದೆ ಆದರಿಂದಲೇ ನಾನು ನಿಜವಾಗಿ ನಿಮ್ಮನ್ನು ಪ್ರೇಮಿಸುತ್ತೇನೆ.

ಹುಜೂರು ! ಮಂಗಳೂರಿನಲ್ಲಿ ವಿಪ್ಲವವನ್ನೆಬ್ಬಿಸಿದ ಭಕ್ಷಿಯು ನಾನೆ ಎಂಬುದು ಸನ್ನಿಧಾನಕ್ಕೆ ತಿಳಿದಿರಲಾರದು

ಗೊತ್ತಿದೆ ! ಚೆನ್ನಾಗಿ ಗೊತ್ತಿದೆ ! ಆದರ ಆ ಕ್ರಾಂತಿಯು ಅಷ್ಟು ಬೇಗ ಕೊನೆ ಮುಟ್ಟಿದ ಬಗೆಯು ಗೊತ್ತಾಗಿಲ್ಲ ಮತ್ತು ನೀವು ಅದೃಶ್ಯರಾದ ಪರಿಯು ತಿಳಿಯಲಿಲ್ಲ ನೀವು ಕನ್ನಾನೂರಿನ ರಾಣಿಯವರ ಸೇನಾನಾಯಕರಾದುದಂತೂ ಮತ್ತೂ ಆಶ್ಚರ್ಯ !

ಸುಲ್ತಾನರವರೇ ! ದೌಲತ್‌ರಾಣಿಯವರೂ ಮತ್ತು ಇಯಜ್‌ಖಾನರಿಂದ ಆ ವಿಪ್ಲವವು ಅಂತ್ಯವಾಯಿತು ನಾನು ಭಿಕಾರಿಯಂತೆ ಮಲಬಾರಿನಲ್ಲಿ ಅಲೆಯುತ್ತಿದ್ದೆ. ಒಂದು ಸಂದರ್ಭದಲ್ಲಿ ಬೀಬೀರಾಣಿಯುವರನ್ನು ನಾನು ಅಪಾಯದಿಂದ ತಪ್ಪಿಸಿದೆ ಅವರು ನನ್ನನ್ನು ಸೇವೆಗೆ ಇಟ್ಟುಕೊಂಡರು ಕ್ರಮೇಣ ನನ್ನ ಸಾಮರ್ಥ್ಯವನ್ನರಿತು ಸೇನಾಧಿಪತ್ಯವನ್ನು ಕೊಟ್ಟರು

ಹುಸೇ್ನಖಾನರೇ ! ನಿಮ್ಮ ವೀರ್ಯ ಪರಾಕ್ರಮಗಳನ್ನು ನೋಡಿ ನಾನು ಮೆಚ್ಚಿದೇನೆ. ಈ ರಾಜ್ಯದಲ್ಲಿ ನವಾಬ್ ಇಯಜ್‌ಖಾನರನ್ನು ಬಿಟ್ಟರೆ ನಿಮ್ಮಂಥಾ ಪರಾಕ್ರಮ ಶಾಲಿಗಳು ಯಾರೂ ಇಲ್ಲ ! ನೀವು ನಮ್ಮವರಾಗಿದೀರೆಂದು ನಮಗೆಷ್ಟೋ ಹೆಮ್ಮೆ

ಹುಸೇ್ನಖಾನನು ಮುಂದೆ ಮಾತನಾಡಲಾಗಲಿಲ್ಲ ಅವನು ಸುಲ್ತಾನರವರ ಔದಾರ್ಯವನ್ನು ನೋಡಿ ಮನಸ್ಸಿನಲ್ಲಿಯೇ ಆಶ್ಚರ್ಯ ಪಟ್ಟುಕೊಂಡನು ಅಪ್ಪಣೆಯನ್ನು ಪಡೆದು ತನ್ನ ಬೀಡಾರಕ್ಕೆ ತೆರಳಿದನು

ಪ್ರತಿದಿನವೂ ಸುಲ್ತಾನನು ಹುಸೇ್ನಖಾನನನ್ನು ಅರಮನೆಗೆ ಕರಸುತ್ತಿದ್ದನು. ಅವನೊಡನೆ ವಿಶೇಷವಾಗಿ ಮಾತನಾಡುತ್ತಿದ್ದನು. ಹೀಗೆ ಒಂದು ತಿಂಗಳಕಾಲ ಕಳೆ

ಯಿತು. ಹುಸೇ೯ಖಾನನಿಗೆ ದಿನದಿನಕ್ಕೆ ಸುಲ್ತಾನರವರಲ್ಲಿ ಭಕ್ತಿಯು ಹೆಚ್ಚುತ್ತ ಬಂದಿತು.

ಹುಸೇ೯ಖಾನನು ಕನ್ನಾನೂರಿಗೆ ಹಿಂದಿರುಗಿ ಹೋಗಲು ಸುಲ್ತಾನರವರ ಅಪ್ಪಣೆಯನ್ನು ಬೇಡಿದನು. ಸುಲ್ತಾನರವರು ಹುಸೇ೯ಖಾನನನ್ನು ಬಹಳವಾಗಿ ಆದರಿಸಿ ಅನೇಕ ಖಿಲ್ಲತ್ತುಗಳನ್ನು ಕೊಡಿಸಿದರು ಸೇನಾನಾಯಕರೇ ! ನಿಮ್ಮಂಥಾ ಪರಾಕ್ರಮಿಗಳನ್ನು ರಾಜಧಾನಿಯಲ್ಲಿಯೇ ಇಟ್ಟುಕೊಳ್ಳಬೇಕೆಂದು ನಮ್ಮ ಆಶೆ ! ಆದರೆ ರಾಣಿಯವರ ಸೇನಾನಾಯಕರನ್ನು ನಾವು ಅವರ ಅನುಮತಿ ಇಲ್ಲದೇ ಇಲ್ಲಿ ಇಟ್ಟು ಕೊಳ್ಳುವುದು ರಾಜಧರ್ಮವಲ್ಲ ಆದರೆ ನೀವು ಮೈಸೂರಿನವರು ನಮ್ಮ ರಾಜ್ಯದಲ್ಲಿಯೇ ಸೇನಾನಾಯಕರಾಗಿರಬೇಕೆಂಬುದು ನಮ್ಮ ಆಶೆ ತಮ್ಮ ಸಹೋದರ ಖಾಸಿಂಖಾನರ ಪರಾಕ್ರಮವನ್ನು ನೋಡಿ ಎಷ್ಟೋ ಮೆಚ್ಚಿದೆ ಅವರನ್ನು ನಮ್ಮ ಸೇನಾನಾಯಕರಾಗಿರಬೇಕೆಂದು ಪ್ರಾರ್ಥಿಸಿದೆ ಭಗವಂತನಿಗೆ ಇಷ್ಟವಿಲ್ಲದೇ ಹೋಯಿತು ಆ ದುಃಖವು ಇನ್ನೂ ನನ್ನ ಹೃದಯದಿಂದ ಹೋಗಿಲ್ಲ. ನಾನು ಖುದಾನ ಆಣೆಯಾಗಿ ನಿಮ್ಮನ್ನು ಪ್ರೀತಿಸುತ್ತೇನೆ

ಹುಜೂರು ! ನಾನು ಇಯಜ್‌ಖಾನರ ಶಿಷ್ಯ ಎಂದಾದರೊಂದು ದಿನ ಈ ಮೈಸೂರಿಗೆ ನಾನು ಪ್ರಾಣವನ್ನರ್ಪಿಸತಕ್ಕವನು ತಮ್ಮ ಅಭಿಮಾನ ತಾವು ತೋರಿಸಿರುವ ಮನ್ನಣೆಗಳಿಂದ ನಾನು ಪ್ರೀತನಾಗಿದೇನೆ

ಈಗ ಸನ್ನಿಧಾನದ ಆಜ್ಞೆಯಾದರೆ ನಾನು ರಾಣಿಯವರ ಸಮ್ಮುಖಕ್ಕೆ ಹೋಗುತ್ತೇನೆ ಈ ಗರೀಬನಿಗೆ ಅಪ್ಪಣೆ ಕೊಡಬೇಕು

ಹುಸೇ೯ಖಾ೯ ಇನ್ನು ಹತ್ತು ದಿವಸಗಳಲ್ಲಿ ನಮ್ಮ ವರ್ಧಂತಿಯು ಇದೆ. ಅದನ್ನು ಪೂರೈಸಿಕೊಂಡು ನೀವು ರಾಣಿಯವರ ಸಮೀಪಕ್ಕೆ ತೆರಳಬಹುದು, ಎಂದು ಸುಲ್ತಾನನು ಅಪ್ಪಣೆ ಮಾಡಿದನು

ಹುಸೇ೯ಖಾನನು ಸಂತೋಷದಿಂದ ತನ್ನ ಬಿಡಾರಕ್ಕೆ ತೆರಳಿದನು ರಾಜಧಾನಿಗೆ ಬರುವಾಗ ಖಾನನಿಗೆ ಯಾವ ಮನೋಭಾವವಿದ್ದಿತೋ ಆ ಮನೋಭಾವವು ಇಂದಿಲ್ಲ. ಇಂದು ಇಯಜ್‌ಖಾನರಲ್ಲಿ ಎಷ್ಟು ಭಕ್ತಿಯಿದೆಯೋ ಸುಲ್ತಾನರಲ್ಲಿ ಅಷ್ಟೇ ಗೌರವ ಐದೆ. ಸುಲ್ತಾನರ ಆದರ ವಿಶ್ವಾಸಗಳು ಅವನನ್ನು ಹಾಗೆ ಮಾಡಿವೆ. ಸುಲ್ತಾನರ ದರಬಾರಿನಲ್ಲಿ ರಾಜಧಾನಿಯಲ್ಲಿ ಹುಸೇ೯ಖಾನನಿಗೆ ದೊರೆತ ಮಾನ ಮನ್ನಣೆಗಳು ಮತ್ತಾರಿಗೂ ಇಲ್ಲ. ಈ ತನ್ನ ಪರಿವರ್ತನೆಯನ್ನು ನೋಡಿ ಇಯಜ್‌ಖಾನರವರು ಏನೆನ್ನುತ್ತಾರೆಯೋ, ದೌಲತ್‌ರಾಣಿಯವರು ಎಷ್ಟು ಪರಿಹಾಸ್ಯ ಮಾಡುತ್ತಾರಯೋ, ಬೀಬಿರಾಣಿಯವರು ಹೇಗೆ ಭಾವಿಸುತ್ತಾರೆಯೋ ಎಂದು ಆಲೋಚಿಸ ತೊಡಗಿದನು. ಈ ಯೋಚನೆಗಳಿಂದೆಲ್ಲಾ ಏನು ಫಲ ! ನಾನು ಇಯಜ್‌ಖಾನರ ಕೈಗೊಂಬೆ ! ಅವರ

ಸನ್ನಿಧಾನದಲ್ಲಿ ಇಲ್ಲಿಯ ವಿದ್ಯಮಾನಗಳನ್ನೆಲ್ಲಾ ನಿವೇದನ ಮಾಡುವೆನು ಅವರ ಅಪ್ಪಣೆಯಂತೆ ನಡೆಯುವೆನು, ಎಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡನು.

ಸುಲ್ತಾನರ ವರ್ಧಂತಿಯ ಏರ್ಪಾಡುಗಳೆಲ್ಲಾ ಬಲು ಸಂಭ್ರಮದಿಂದ ನಡೆಯುತ್ತಿದ್ದುವು ಕೊಡಗಿನ ಅಖಂಡ ವಿಜಯದಿಂದ ದರಬಾರಿಗಳೆಲ್ಲರೂ ದರ್ಪದಿಂದ ಮೆರೆಯುತ್ತಿದ್ದಾರ ಅಷ್ಟರೊಳಗಾಗಿ ನಾಲ್ಕೂ ಕಡೆಯಿಂದ ಗೂಢ ಚಾರರು ಸುಲ್ತಾನರ ಸಮ್ಮುಖಕ್ಕೆ ಬಂದರು ದರಿಯಾ ದೌಲತ್‌ನಲ್ಲಿ ಸುಲ್ತಾನರು ಗೂಢಚಾರರನ್ನು ಸಂಧಿಸಿದರು ಅವರ ಸಮೀಪದಲ್ಲಿ ಹುಸೇನ್‌ಖಾನನೂ ಇದ್ದನು ಇಂಗ್ಲೀಷರಿಗೂ ಮರಾಠರಿಗೂ ಒಪ್ಪಂದವಾಗಿದೆ ಮೈಸೂರಿನ ಮೇಲೆ ದಂಡೆತ್ತಿ ಬರಬೇಕೆಂಬುದೇ ಅವರ ಅಭಿಸಂಧಿ! ಹೈದರಾಬಾದಿನ ನಿಜಾಮರೂ ಅವರಿಗೆ ವಾಗ್ದಾನ ವಿತ್ತಿದ್ದಾರೆ ಇಷ್ಟು ಅಂಶಗಳು ಖಚಿತವಾಗಿ ತಿಳಿದು ಬಂದುವು. ಅಷ್ಟೇ ಅಲ್ಲ! ಇಂಗ್ಲೀಷರು ಕೊಯಮತ್ತೂರಿನ ಕಡೆಯಿಂದ ಮೈಸೂರಿನ ಮೇಲೆ ಒಂದು ಸೈನ್ಯವನ್ನೂ, ಸೇಲಂ ಕಡೆಯಿಂದ ಬೆಂಗಳೂರಿನ ಮೇಲೆ ಮತ್ತೊಂದು ಸೈನ್ಯವನ್ನೂ ಹೊರಡಿಸಿಯೇ ಬಿಟ್ಟಿದ್ದಾರೆಂದು ಗೂಢಚಾರರು ಅರಿಕೆ ಮಾಡಿದರು ಮರಾಠರ ಸೈನ್ಯವು ಪುಣೆಯಿಂದ ಹೊರಟಿದೆಯೆಂದು ಬಿನ್ನವಿಸಿದರು

ಸುಲ್ತಾನರು ಹುಸೇನ್‌ಖಾನರನ್ನು ಕುರಿತು, ಸೇನಾಧಿಪತಿಗಳೇ ನೀವೇನು ಹೇಳುವಿರಿ? ಎಂದು ಕೇಳಿದರು ಖಾನನು ಹುಜೂರು ಬಲು ಸಂತೋಷದ ಸುದ್ದಿ. ಎಂದಾದರೊಂದು ದಿನ ಈ ಸಂಭವವಿದ್ದೇ ಇತ್ತು! ಇಂದೇ ಆಗಬಾರದೇಕೆ? ನಮ್ಮ ನವಾಬರಾದ ಇಯಜ್‌ಖಾನರವರು ಹೇಳಿಯೇ ಇದ್ದರು ಹಿಂದೂಸ್ಥಾನದಲ್ಲಿ ಇಂಗ್ಲೀಷರ ರಾಜ್ಯವೋ, ಸುಲ್ತಾನಿ ಸಾಮ್ರಾಜ್ಯವೋ ಯಾವುದಾದರೊಂದು ಸ್ಥಿರವಾಗಿ ಉಳಿಯಬೇಕು ಒಂದು ಮಹಾಯುದ್ಧದಿಂದಲೇ ಅದು ನಿರ್ಣಯಿಸಲ್ಪಡಬೇಕು ದೌಲತ್ ರಾಣಿಯವರೂ, ಮತ್ತು ರಾಧಾರಾಣಿಯವರೂ ಯುದ್ಧಕ್ಕೆ ಸಿದ್ಧ! ಬೀಬೀರಾಣಿಯವರು ಯುದ್ಧಕ್ಕೆ ಸರ್ವಸ್ವವನ್ನೂ ಧಾರೆ ಎರೆಯಲು ತಯಾರಾಗಿದಾರೆ. ನನಗೂ ನನ್ನ ಪೌರುಷವನ್ನು ತೋರಿಸಲು ಒಂದು ಮಹದವಕಾಶವು ಸಿಕ್ಕಿದೆ.

ಸು—ಸೇನಾಧಿಪತಿಗಳೇ! ನೀವು ಹೇಳುವುದೆಲ್ಲಾ ಯುಕ್ತವಾಗಿದೆ. ನೀವೆಲ್ಲಿ ಯುದ್ಧ ಮಾಡಬೇಕೆಂದು ಬಯಸುತ್ತೀರಿ?

ಖಾವಂದರವರೇ ನಾನು ಕನ್ನಾನೂರಿನ ರಾಣಿಯವರ ಸೇವೆಗೆ ನಿಂತಿದೇನೆ. ಅಲ್ಲಿ ಕಟ್ವಾಳುಗಳ ಹತ್ತು ಸಹಸ್ರ ಸೈನಿಕರಿದ್ದಾರೆ ಆ ಸೈನ್ಯವನ್ನು ಇಂಗ್ಲೀಷ್ ಸೈನ್ಯಕ್ಕೆ ಎದುರಾಗಿ ನಿಲ್ಲಿಸಿ ಯುದ್ಧಮಾಡಿದರೆ ಇಂಗ್ಲೀಷ್‌ಸೈನ್ಯವು ಕಣಿವೆಯನ್ನು ಹತ್ತದಂತೆ ತಡೆಯಬಹುದು. ಶ್ರೀರಂಗಪಟ್ಟಣದ ಸೈನ್ಯವು ಕೊಯಮತ್ತೂರಿನ ಕಡೆಯಿಂದ ಬರುವ ಇಂಗ್ಲೀಷ್ ಸೈನ್ಯವನ್ನು ಎದುರಿಸಬಹುದು

ನನಗೆ ಆ ಮರಾಠರ ಮೇಲೆ ಒಂದು ಬಾರಿ ಯುದ್ಧಮಾಡಿ ನೋಡಬೇಕೆಂದು ಬಲು ದಿವಸಗಳಿಂದ ಆಶೆ ಇದೆ ಶಿವಮೊಗ್ಗೆಯಲ್ಲಿ, ಚಿತ್ರದುರ್ಗದಲ್ಲಿ ಇರುವ ಮೈಸೂರು ಸೈನ್ಯವನ್ನು ನನಗೆ ಒಪ್ಪಿಸಿರಿ ನಾನಿನ್ನೂ ತರುಣ ತಮ್ಮ ಸನ್ನಿಧಾನ ದಲ್ಲಿ ಮಹಾ ಮಹಾ ಸರದಾರರಿದಾರೆ ನನಗೆ ಉತ್ತರ ದಿಕ್ಕಿನ ಸೇನಾಧಿಪತ್ಯವನ್ನು ಕೊಡಬೇಕೆಂದು ಕೇಳುವುದು ಸಾಹಸವೇ ಸರಿ ಹುಜೂರಿನ ಅಪ್ಪಣೆಯಂತೆಯೇ ನಡೆ ಯುತ್ತೇನೆ

ಸೇನಾಧಿಪತಿಗಳೇ, ನಾವು ಸಂತೋಷದಿಂದ ನಿಮಗೆ ಉತ್ತರ ದಿಕ್ಕಿನ ಸೇನಾ ಪತ್ಯವನ್ನು ಕೊಡುತ್ತೇವೆ ನೀವು ಚಿತ್ರದುರ್ಗದಿಂದ ಸೈನ್ಯವನ್ನು ಮುಂದುವರಿಸ ಬಹುದು ನಗರದ ಸೈನ್ಯವು ತಮ್ಮನ್ನು ಅನುವರ್ತಿಸುತ್ತದೆ

ಎಲ್ಲವೂ ಖಂಡಿತವಾಯಿತು ಸುಲ್ತಾನರ ವರ್ಧಂತಿಯಾಗುವವರೆಗೆ ಹುಸೇನ್ ಖಾನನು ರಾಜಧಾನಿಯಲ್ಲಿಯೇ ಇದ್ದನು ವರ್ಧಂತಿಯು ಉತ್ಸವಗಳು ಪೂರೈಸುತ್ತಲೇ ಸುಲ್ತಾನರ ಅಪ್ಪಣೆ ಪಡೆದು ಹುಸೇನ್ ಖಾನನು ಮಲಬಾರಿಗೆ ಪ್ರಯಾಣ ಮಾಡಿದನು. ಐದನೆಯ ದಿನವೇ ಕನ್ನಾನೂರನ್ನು ಸೇರಿದನು

ಹುಸೇನ್ ಖಾನನು ಬೀಬಿರಾಣಿಯವರ ಭೇಟಿಮಾಡಿ ಶ್ರೀರಂಗಪಟ್ಟಣದ ವೃತ್ತಾಂತವೆಲ್ಲವನ್ನೂ ನಿವೇದಿಸಿದನು. ಅವರು ಬಹಳ ಸಂತೋಷಪಟ್ಟರು. ಅದೇ ದಿನವೇ ಸಂಧ್ಯಾಕಾಲ ನೇಟರವರ ಭೇಟಿಮಾಡಿದನು ಅವರೊಡನೆ ವಿನಯದಿಂದ ರಾಜಧಾನಿಯ ಸಮಾಚಾರವೆಲ್ಲವನ್ನೂ ತಿಳಿಯಪಡಿಸಿದನು ಹುಸೇನ್ ಖಾನನು ಸುಲ್ತಾ ನರವರ ಪರಮಾನುಗ್ರಹಕ್ಕೆ ಪಾತ್ರನಾದುದು ಖಾನರವರಿಗೆಷ್ಟೋ ಸಂತೋಷ

ಹುಸೇನ್ ಖಾನನ ಮುಖದಿಂದ ಇಂಗ್ಲೀಷರೂ ಮರಾಟರೂ ಹೈದರಾಬಾದಿ ನವರೂ ಮೈಸೂರಿನ ಮೇಲೆ ದಂಡೆತ್ತಿ ಹೊರಟಿದ್ದಾರೆಂಬುದನ್ನು ಕೇಳಿ ಇಯಜ್ ಖಾನನು ಉದ್ವಿಗ್ನನಾದನು

ಹುಸೇನ್ ಖಾನ್ ನೀನು ಹುಡುಗ ನನ್ನ ಮನಸ್ಸಿನ ಯಾತನೆಯನ್ನು ನೀನು ಅರಿಯಲಾರೆ ತಪ್ಪು ನನ್ನದು. ನಗರವನ್ನು ಬಿಟ್ಟು ಬಂದುದು ತಪ್ಪು ನಾನು ಅಜ್ಞಾತವಾಸದಲ್ಲಿರುವುದು ತಪ್ಪು ಸುಲ್ತಾನನಿಗೆ ನಾನು ಸರ್ವದಾ ಬೆಂಬಲನಾಗಿ ದೇನೆಂದು ಜಗತ್ತಿಗೆ ತೋರಿಸದಿದ್ದುದು ಸರ್ವಥಾ ತಪ್ಪು ದೊಡ್ಡ ನವಾಬರ ಆಣೆಗೆ ನಾನು ಕೃತಘ್ನನಾದೆ. ನಾನು ನಗರದಲ್ಲಿದ್ದಿದ್ದರೆ ಮರಾಟರೂ ಯುದ್ಧಕ್ಕೆ ನಿಲ್ಲುತ್ತಿರ ಲಿಲ್ಲ. ಇಂಗ್ಲೀಷರೂ ಮೈಸೂರನ್ನು ಇಣಿಕಿನೋಡಲು ಭಯಪಡುತ್ತಿದ್ದರು ಸುಲ್ತಾ ನನು ಏಕಾಕಿಯಾದನೆಂದೂ ಶತ್ರುಗಳಿಗೆ ಇಷ್ಟು ಧೈರ್ಯ ಬಂದಿದೆ. ಇರಲಿ, ಕಾಲವು ಮಿಂಚಿಹೋಗಿಲ್ಲ. ಇಯಜ್ ಖಾನನು ಶ್ರೀರಂಗಪಟ್ಟಣವನ್ನು ರಕ್ಷಿಸಲು ಪ್ರಾಣವ ನ್ನೊಪ್ಪಿಸುತ್ತಾನೆಂದು ಲೋಕಕ್ಕೆ ಸಾರಿಹೇಳುತ್ತೇನೆ

ಹುಸೇನ್‌ಖಾನ್ ನೀನು ನಗರಕ್ಕೆ ಹೋಗಿ ಸೇನೆಗಳನ್ನು ಸಜ್ಜುಗೊಳಿಸು ನಾನು ಶ್ರೀರಂಗಪಟ್ಟಣಕ್ಕೆ ಹೊರಡುತ್ತೇನೆ ಎಂದು ಹೇಳಿದನು ಹುಸೇನ್‌ಖಾನನು ಖಾನ್‌ರವರ ಸಮ್ಮುಖದಿಂದ ಕನ್ನಾನೂರಿಗೆ ಹೊರಟನು

ಹುಸೇನ್‌ಖಾನನು ಬೀಬೀರಾಣಿಯವರ ಅಪ್ಪಣೆ ಪಡೆದು ಮಾರನೆಯ ದಿನವೇ ಕನ್ನಾನೂರಿನಿಂದ ಹೊರಟು ನಗರಕ್ಕೆ ಪ್ರಯಾಣ ಬೆಳಸಿದನು. ಚಿತ್ರದುರ್ಗವನ್ನು ಸೇರಿ ಸೇನಾಧಿಪತ್ಯವನ್ನು ವಹಿಸಿಕೊಂಡನು

## ಇಯಜ್‌ಖಾನನ ಪ್ರಯಾಣ ಸನ್ನಾಹ

ಅಲ್ಲೀಸೇಟನು ಬೀಬೀರಾಣಿಯವರ ಭೇಟಿ ಮಾಡಿದನು ಅವರೊಡನೆ ಶ್ರೀರಂಗಪಟ್ಟಣದ ಸಮಾಚಾರವನ್ನೆಲ್ಲಾ ವಿವರಿಸಿದನು ಸುಲ್ತಾನರವರು ಬರೆದಿರುವ ಪತ್ರವನ್ನು ತೋರಿಸಿದನು ಸೇಟನು ಒಂದು ಉಪಾಯವನ್ನು ಹುಡುಕಿದನು ಬೀಬೀರಾಣಿಯವರೂ, ತಾನೂ ಪ್ರತ್ಯಕ್ಷವಾಗಿ ಸುಲ್ತಾನರ ಪಕ್ಷವನ್ನು ವಹಿಸಿದರ ಈ ಕನ್ನಾನೂರನ್ನು ಇಂಗ್ಲೀಷರು ಹಿಡಿಯುವುದು ಖಂಡಿತ! ಕನ್ನಾನೂರನ್ನುರಕ್ಷಿಸಲು ಇಯಜ್‌ಖಾನನು ನಿ ತರೆ ಶ್ರೀರಂಗಪಟ್ಟಣವು ಬೀಳುತ್ತದೆ. ಇದನ್ನು ಯೋಚನೆಮಾಡಿ ರಾಣಿಯವರಿಂದ ತಲಚೇರಿಯಲ್ಲಿರುವ ಇಂಗ್ಲೀಷ್ ಕಛೇರಿಗೆ ಒಂದುಪತ್ರವನ್ನು ಬರೆಸಿದನು. ರಾಣಿಯವರು ಇಂಗ್ಲೀಷರ ಸ್ನೇಹಸಹಾಯಗಳನ್ನು ಬಯಸುತ್ತಾರೆಂದೂ, ಇನ್ನು ಮುಂದೆ ಸುಲ್ತಾನರವರೊಡನೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳುವುದಿಲ್ಲವೆಂದು ಬರೆದು ಕಳಿಸಿದರು ತಲಚೇರಿಯಲ್ಲಿದ್ದ ಇಂಗ್ಲೀಷ್ ಅಧಿಕಾರಿಯು ರಾಣಿಯವರ ಭೇಟಿ ಮಾಡಿದನು ರಾಣಿಯವರ ಸಲಹೆಯನ್ನುಅಂಗೀಕರಿಸಿದನು. ಅದರಂತೆ ಬರೆಸಿ ರಾಣಿಯವರ ದಸ್ಕತ್ತನ್ನು ಹಾಕಿಸಿ ಕಲ್ಕತ್ತೆಗೆ ಕಳುಹಿಸಿದನು

ಸೇಟನೂ, ದೌಲತ್ತಳೂ, ರಾಧೆಯೂ, ಬೀಬೀರಾಣಿಯೂ ಇಲ್ಲಿಂದ ಗುಪ್ತವಾಗಿ ಹೊರಡತಕ್ಕದ್ದೆಂದೂ, ಮಂಗಳೂರಿಗೆ ತಲುಪಿ, ಅಲ್ಲಿಂದ ಕೊಡಗಿನ ಮಾರ್ಗವಾಗಿ ಶ್ರೀರಂಗಪಟ್ಟಣಕ್ಕೆ ಹೋಗತಕ್ಕದ್ದೆಂದೂ ನಿಶ್ಚಯವಾಯಿತು ಬೀಬೀರಾಣಿಯು ರಾಜ್ಯಭಾರವೆಲ್ಲವನ್ನೂ ಮಂತ್ರಿಗಳಿಗೆ ವಹಿಸಿದಳು ತಾನು ನಗರಕ್ಕೆ ಹೋಗಿ ಮೈಸೂರಿನ ಯುದ್ಧವು ಪೂರೈಸುವವರೆಗೆ ರಾಧೆಯವರ ಮತ್ತು ದೌಲತ್‌ರವರ ಜೊತೆಯಲ್ಲಿರುವುದೆಂದು ನಿರ್ಧಾರ ಮಾಡಿದಳು ದೌಲತ್ತಳಿಗೆ ಈ ಬೀಬೀರಾಣಿಯನ್ನು ಜೊತೆಯಲ್ಲಿ ಕರೆದುಕೊಂಡು ಹೋಗಲು ಪರಮ ಆನಂದ! ಬೀಬೀರಾಣಿಯಾದರೂ ಹುಡುಗಿಯಂತೆ ಆಡುತ್ತಾಳೆ. ಇಯಜ್‌ಖಾನರಲ್ಲಿ ಎಲ್ಲರಿಗೂ ಧೈರ್ಯವಾಗಿ ಪರಿಹಾಸ್ಯ ಮಾಡುತ್ತಾಳೆ ಅವಳು ಹಾಸ್ಯಪ್ರಿಯೆ! ಪ್ರಯಾಣಕ್ಕೆ ಹೊರಡುವ ಏರ್ಪಾಡುಗಳನ್ನೆಲ್ಲಾ ಅಲ್ಲೀಸೇಟನು ಬಹಳ ವ್ಯವಸ್ಥೆಯಿಂದ ಮಾಡಿದನು

ದೌಲತ್ತಳು ಮಲಯಾಳಕ್ಕೆ ಬಂದಾಗಿನಿಂದ ದೋಣಿಯಲ್ಲಿ ಸ್ವೇಚ್ಛೆಯಾಗಿ ಆಡಬೇಕೆಂದು ಆಶೆಪಡುತ್ತಿದ್ದಳು ಒಂದೆರಡು ಬಾರಿ ಬೀಬೀ ರಾಣಿಯೊಡನೆ ಹೇಳಿದ್ದಳು. ಬೀಬೀರಾಣಿಯು ಆ ನೌಕಾವಿಹಾರಕ್ಕೆ ಏರ್ಪಾಡು ಮಾಡಿದಳು. ದೌಲತ್ ರಾಥೆ ಮತ್ತು ಬೀಬಿ ಇವರು ಮೂವರೇ ದೋಣಿಯಲ್ಲಿ ಹೊರಟರು ನಾಲ್ಕು ಮಂದಿ ಅಂಬಿಗರು ದೋಣಿಯನ್ನು ನಡೆಸುತ್ತಿದ್ದರು ಮಧ್ಯಾಹ್ನ ಮೂರು ಜಾವದ ಹೊತ್ತಿಗೆ ದೋಣಿಯು ಹೊರಟಿತು ಸಮುದ್ರದಲ್ಲಿ ನಾಲ್ಕಾರು ಮೈಲಿಗಳ ದೂರ ದೋಣಿಯು ಹೋಯಿತು ಮೂವರು ರಾಣಿಯವರುಗಳೂ ಪರಸ್ಪರ ಹಾಸ್ಯ ಮಾಡುತ್ತಾ ಸಮುದ್ರದಲ್ಲಿ ಆಟವಾಡುತ್ತಿದ್ದರು ದೌಲತ್ತಳು ಸಂತೋಷದಿಂದ ಹಾಡಲಾರಂಭಿಸಿದಳು ಆ ಗಾನಸುಧೆಯಲ್ಲಿ ಎಲ್ಲರೂ ಮುಳುಗುತ್ತಿದ್ದರು ಸಂಧ್ಯಾಕಾಲವಾಗಿತ್ತು ಸೂರ್ಯದೇವನು ಅಸ್ತಾಚಲವನ್ನು ಸೇರುತ್ತಿದ್ದನು. ಅಷ್ಟರಲ್ಲಿ ದೋಣಿಯ ಸಮೀಪದಲ್ಲಿ ಒಂದು ದೊಡ್ಡ ಮೀನು ಬಂತು ಆ ಮೀನು ಮನುಷ್ಯಾಕೃತಿಯಷ್ಟು ದೊಡ್ಡದಾಗಿತ್ತು ಥಳಥಳನೆ ಹೊಳೆಯುತ್ತಿರುವ ಚಿನ್ನದ ಬಣ್ಣ! ರಾಥೆಯು ಆ ಮೀನಿಗೆ ಸ್ವಲ್ಪ ತಿಂಡಿಯನ್ನು ಚೆಲ್ಲಿದಳು. ಆ ಮತ್ಸ್ಯವು ಮೇಲಕ್ಕೆ ಹಾರಿ ಆ ತಿಂಡಿಯನ್ನು ಗಬಕ್ಕನೆ ನುಂಗುತ್ತಿತ್ತು, ಅದರ ಆಶ್ಚರ್ಯಕರವಾದ ಅಪ್ಪಟ ಸ್ವರ್ಣವರ್ಣವನ್ನು ನೋಡಿ ಮೂವರೂ ಆನಂದಿಸುತ್ತ ಚಪ್ಪಾಳೆಗಳನ್ನು ಹೊಡೆಯುತ್ತಲಿದ್ದರು, ದೌಲತ್ತಳು ಈ ಮೀನನ್ನು ಹಿಡಿಯಲು ಸಾಧ್ಯವೇ ಎಂದಳು ಬೀಬಿಯು ಗಾಣವನ್ನು ಹಾಕಿ ಬಲೆಯನ್ನು ಬೀಸಿದಳು. ಮೀನು ಸಿಕ್ಕಿಗೊಂಡಿತು. ಎಲ್ಲರಿಗೂ ಆನಂದವಾಯಿತು ಪ್ರಚಂಡ ಗಾಳಿಯೆದ್ದಿತು ನಾವಿಕರು “ಆ ಮೀನನ್ನು ಬಿಟ್ಟುಬಿಡಿ ಈ ಗಾಳಿಯ ಹೊಡೆತದಲ್ಲಿ ದೋಣಿಗೆ ಅಪಾಯವಿದೆ” ಎಂದು ಕೂಗಿಕೊಂಡರು. ಅವರು ನಾಲ್ವರೂ ದೋಣಿಯನ್ನು ಹತೋಟಿಯಲ್ಲಿಡಲು ಸರ್ವಪ್ರಯತ್ನ ಮಾಡುತ್ತಿದ್ದರು ದೌಲತ್ತಳಿಗಾಗಲೀ, ಬೀಬಿಗಾಗಲೀ ಏನೂ ಅಪಾಯವಿರುವಂತೆ ಗೋಚರವಾಗಲಿಲ್ಲ ಅವರಿಬ್ಬರೂ ಮೀನಿನ ಬಲೆಯನ್ನು ಎಳೆಯುತ್ತಿದ್ದರು. ದೋಣಿಯು ಬಲವಾಗಿ ಅಲ್ಲಾಡುತ್ತಿತ್ತು. ದೌಲತ್ ಮತ್ತು ಬೀಬಿಯರು ಮೀನನ್ನು ಎಳೆಯುವಾಗ ಮೀನು ಬಲವಾಗಿ ದೋಣಿಗೆ ಡಿಕ್ಕಿ ಹೊಡೆಯಿತು ದೋಣಿಯು ತಲೆಕೆಳಗಾಯಿತು ರಾಥೆಯು ದೌಲತ್ತಳನ್ನೂ, ಬೀಬಿಯನ್ನೂ ಹಿಡಿದುಕೊಳ್ಳಲು ಹೋಗಿ ಅವರ ಕೈ ಹಿಡಿದುಕೊಂಡಳು. ಮೂವರೂ ನೀರಿನಲ್ಲಿ ಮುಳುಗಿಹೋದರು. ಮೀನು ಬಲೆಯಿಂದ ತಪ್ಪಿಸಿಕೊಂಡು ಹಾರಿಹೋಯಿತು! ನಾವಿಕರು ಗಾಬರಿಯಿಂದ ನೀರಿನಲ್ಲಿ ಧುಮುಕಿದರು.

ದೂರದಲ್ಲಿ ಒಂದು ದೋಣಿಯು ಹೋಗುತ್ತಿತ್ತು ಅದರಲ್ಲಿ ಇಂಗ್ಲಿಷ್ ಸೈನಿಕರಿದ್ದರು. ಅವರು ವೇಗದಿಂದ ತಮ್ಮ ದೋಣಿಯನ್ನು ರಾಣಿಯರ ದೋಣಿಯು ಮುಳುಗಿದ್ದ ಸ್ಥಳಕ್ಕೆ ನಡೆಸಿದರು. ದೋಣಿಯು ತಲೆಕೆಳಗಾಗಿ ತೇಲುತ್ತಿತ್ತು. ಅಂಬಿಗ

ರಲ್ಲೊಬ್ಬನು ನೀರಿನ ಮೇಲೆ ಈಜುತ್ತಾ ಮೂವರು ಮಹಾರಾಣಿಯವರು ಮುಳುಗಿ ಹೋದರು ಎಂದು ಕೂಗಿ ಹೇಳಿದನು ಕ್ಯಾಪ್ಟನ್ನಿಗೆ ಅರ್ಥವಾಗಲಿಲ್ಲ ಅವನು ಗಾಬರಿಯನ್ನು ನೋಡಿ ಯಾರೋ ಮುಳುಗಿದ್ದಾರೆಂದು ತಿಳಿದುಕೊಂಡನು ತಕ್ಷಣ ಇಂಗ್ಲಿಷ್ ಸೈನಿಕರು ನೀರಿನಲ್ಲಿ ಧುಮುಕಿದರು ಬಹಳವಾಗಿ ನೀರಿನಲ್ಲಿ ಹುಡುಕಿದರು ಸ್ವಲ್ಪಹೊತ್ತಿನೊಳಗಾಗಿ ಇಬ್ಬರು ಸ್ತ್ರೀಯರನ್ನು ಎತ್ತಿ ತಂದು ತಮ್ಮ ದೋಣಿಯಲ್ಲಿ ಹಾಕಿದರು ಮಲಯಾಳಿ ಅಂಬಿಗನು ಇಂಗ್ಲೀಷರ ದೋಣಿಯನ್ನು ಏರಿದನು. ಮತ್ತೊಬ್ಬ ರಾಣಿಯವರು ನೀರಿನಲ್ಲೇ ಮುಳುಗಿದ್ದಾರೆ ಎಂದು ಕೂಗಿದನು ಕ್ಯಾಪ್ಟನ್ನನು ಸಾಹಸದಿಂದ ಮತ್ತೊಬ್ಬ ರಾಣಿಯನ್ನು ಹುಡುಕಿ ಎತ್ತಿತಂದನು ಇಷ್ಟು ಹೊತ್ತಿಗ ಅರ್ಧರಾತ್ರಿಯಾಗಿತ್ತು ಇಂಗ್ಲೀಷರ ದೋಣಿಯು ಸಮೀಪದಲ್ಲಿದ್ದ ಇಂಗ್ಲೀಷರ ಶಿಬಿರಕ್ಕೆ ಹೋಯಿತು ಆ ಮೂವರು ಹೆಂಗಸರನ್ನೂ ಹೊತ್ತುಕೊಂಡು ಹೋಗಿ ಶಿಬಿರದಲ್ಲಿ ಇಳಿಸಿದರು ಮೂವರೂ ಸಂಪೂರ್ಣ ಅಜ್ಞಾನಾವಸ್ಥೆಯಲ್ಲಿದ್ದರು ಕ್ಯಾಪ್ಟನ್ನನು ತಕ್ಷಣ ತಮ್ಮ ಕ್ಯಾಂಪಿನ ಡಾಕ್ಟರನ್ನು ಕರೆಸಿದನು ಡಾಕ್ಟರನು ಪರೀಕ್ಷೆ ಮಾಡಿ ನೋಡಿದನು ಜ್ಞಾನವಿಲ್ಲ! ಸರಿಯಾದ ಚಿಕಿತ್ಸೆ ಮಾಡಿದರೆ ಬದುಕುತ್ತಾರೆ ಎಂದು ಹೇಳಿ ಔಷಧಗಳನ್ನು ಕುಡಿಸಿದನು ಮೂವರನ್ನೂ ಮಂಚಗಳ ಮೇಲೆ ಮಲಗಿಸಿದರು.

ಬೆಳಗಾಗುತ್ತಲೇ ಈ ಸ್ತ್ರೀಯರಾರೆಂದು ಇಂಗ್ಲಿಷ್ ಅಧಿಕಾರಿಗಳು ವಿಚಾರಿಸ ತೊಡಗಿದರು ಅವರ ದೋಣಿಯಲ್ಲಿಯೇ ಒದುಕಿ ಬಂದ ಮಲಯಾಳಿ ಅಂಬಿಗನು ಅವರಲ್ಲೊಬ್ಬರು ಕನ್ನಾನೂರಿನ ರಾಣಿಯವರೆಂದು ತಿಳಿಸಿದನು. ಅಧಿಕಾರಿಗಳು ತಕ್ಷಣ ಕನ್ನಾನೂರಿಗೆ ಸಮಾಚಾರವನ್ನು ತಿಳಿಸಿದರು. ಕನ್ನಾನೂರಿನ ಮಂತ್ರಿಗಳು ಬಂದು ನೋಡಿದರು ರಾಣಿಗೆ ಜ್ಞಾನವಿಲ್ಲ ಮೂವರಿಗೂ ವಿಪರೀತ ಜ್ವರ ಬಂದಿದೆ ಮಂತ್ರಿಗಳು ರಾಣಿಯವರನ್ನು ಕರೆದುಕೊಂಡು ಹೋಗಬೇಕೆಂದು ಕೇಳಿದರು ಡಾಕ್ಟರನು ಅವರನ್ನು ಮಲಗಿಸಿರುವ ಸ್ಥಳದಿಂದ ಒಂದು ವಾರ ಎಬ್ಬಿಸಕೂಡದೆಂದೂ, ಪ್ರಯಾಣ ಮಾಡಿಸಿದರೆ ಪ್ರಾಣಾಪಾಯವಾಗುತ್ತದೆಂದೂ ಖಚಿತವಾಗಿ ಹೇಳಿದನು ಅಲ್ಲಿಯೇ ಚಿಕಿತ್ಸೆ ನಡಯುತ್ತಿತ್ತು

ಈ ಸಮಾಚಾರಗಳೆಲ್ಲಾ ಅಲ್ಲೀಸೇಟನಿಗೆ ತಿಳಿಯಿತು ಅವನ ಪ್ರಯಾಣದ ಉತ್ಸಾಹವೆಲ್ಲಾ ಉಡುಗಿಹೋಯಿತು ಆ ಮೂವರು ರಾಣಿಯವರನ್ನೂ ಹಾಗೆ ಶತ್ರುಗಳ ಹಸ್ತದಲ್ಲಿ ಬಿಟ್ಟು ತಾನು ಶ್ರೀರಂಗಪಟ್ಟಣದ ಯುದ್ಧಕ್ಕೆ ಹೋದರೆ ಅವರೆಲ್ಲರೂ ಸೆರೆಯಲ್ಲಿದ್ದಂತೆಯೇ ಶತ್ರುಗಳು ಅವರನ್ನು ಏನು ಬೇಕಾದರೂ ಮಾಡಬಹುದು ಹೀಗೆಲ್ಲಾ ನಾನಾ ವಿಧವಾಗಿ ಯೋಚಿಸತೊಡಗಿದನು ತಾನು ಹೋಗಿ ಆ ಮೂವರನ್ನೂ ಭೇಟಿಮಾಡಬೇಕೆಂದು ಸಂಕಲ್ಪಿಸಿದನು. ತಲಚೇರಿಗೆ ಸ್ವತಃ

ಹೋಗಿ ಇಂಗ್ಲೀಷ್ ಮುಖ್ಯಾಧಿಕಾರಿಯನ್ನು ಭೇಟಿ ಮಾಡಬೇಕೆಂದು ಅಪೇಕ್ಷಿಸಿದನು ಅಧಿಕಾರಿಯು ಅತ್ಯಾದರದಿಂದ ಸೇಟರನ್ನು ಬರಮಾಡಿಕೊಂಡನು ಸೇಟರು ತಾವು ಬೀಬೀರಾಣಿಯವರನ್ನು ನೋಡಬೇಕೆಂದು ಕೇಳಿಕೊಂಡರು. ಇಂಗ್ಲೀಷ್ ಅಧಿಕಾರಿಗೆ ಸೇಟರಿಗೂ, ಬೀಬೀರಾಣಿಯವರಿಗೂ ಇದ್ದ ಅಂತರಂಗ ಸಂಬಂಧವು ತಿಳಿದಿದ್ದಿತು ಆ ಅಧಿಕಾರಿಗೆ ಅದರಲ್ಲೇನೂ ವ್ಯಂಗ್ಯ ತೋರಲಿಲ್ಲ ಅವರು ಸೇಟರಿಗೆ ಬೀಬೀರಾಣಿ ಯವರ ಭೇಟಿ ಮಾಡಿಸುವುದು ತಮ್ಮ ಕರ್ತವ್ಯವೆಂದೇ ಭಾವಿಸಿದರು ವೈದ್ಯರ ಅಪ್ಪಣೆ ಪಡೆದು, ಮುಖ್ಯಾಧಿಕಾರಿಗಳಾದ ಮೇಜರ್ ಡೋವ್‌ಸಾಹೇಬರು ಸೇಟರನ್ನು ರಾಣಿಯವರಿದ್ದ ಸ್ಥಳಕ್ಕೆ ಕರೆದುಕೊಂಡು ಹೋಗಿ ಭೇಟಿ ಮಾಡಿಸಿದರು ಸೇಟರು ಬೀಬೀರಾಣಿಯ ಮಂಚದ ಸಮೀಪದಲ್ಲಿ ನಿಂತು ನೋಡುತ್ತಿದ್ದರು ರಾಣಿಯ ಹಣೆಯ ಮೇಲೆ ಕೈಯಿಟ್ಟು ತಲೆ ಸವರಿದರು ರಾಣಿಯ ಬಿರುಗಣ್ಣು ಬಿಟ್ಟು ನೋಡಿದಳು. ಪುನಃ ಕಣ್ಣು ಮುಚ್ಚಿದಳು ಜ್ವರದ ವೇಗವು ಅತಿಯಾಗಿದ್ದಿತು ದೌಲತ್ ಮತ್ತು ರಾಧಾರಾಣಿಯವರ ಸಮೀಪಕ್ಕೆ ಹೋಗಿ ನೋಡಿದರು ಅವರಿಬ್ಬ ರಿಗೂ ಜ್ಞಾನವಿರಲಿಲ್ಲ. ಮೇಜರ್‌ಡೋವ್‌ಸಾಹೇಬರು ಸೇಟರನ್ನು ತಮ್ಮ ಬಿಡಾರಕ್ಕೆ ಕರೆದೊಯ್ದರು ಆ ಮೇಜರ್ ಸಾಹೇಬರು ಕೆಲವು ದಿನಗಳಿಂದ ಸೇಟರನ್ನು ಚೆನ್ನಾಗಿ ಬಲ್ಲರು. ಅವರನ್ನು ಕುರಿತು, ಈ ರಾಣಿಯವರ ವಿಚಾರದಲ್ಲಿ ಮಾತುಕತೆ ಆರಂಭ ವಾಯಿತು.

"ಸೇಟರವರೇ! ಈ ಬೀಬಿಯವರ ಜೊತೆಗಾತಿಯರಾದ ಮಹಿಳೆಯರಿಬ್ಬರೂ ಯಾರೆಂದು ತಾವು ಗುರ್ತಿಸಬಲ್ಲಿರಾ?

"ಇಲ್ಲ! ಪ್ರತ್ಯಕ್ಷವಾಗಿ ಗುರುತಿಸಲಾರೆ! ಇವರಲ್ಲಿ ಒಬ್ಬ ಹಿಂದು ಮತ್ತೊಬ್ಬರು ಮುಸಲ್ಮಾನ ರಮಣಿ! ಬಹುಶಃ ಇವರಿಬ್ಬರೂ ಸುಲ್ತಾನರ ಕಡೆಯಿಂದ ಈಗ್ಗೆ ಕೆಲವು ದಿನಗಳ ಕೆಳಗೆ ಬೀಬೀರಾಣಿಯವರ ಹತ್ತಿರ ಬಂದವರೆಂದು ನಾವು ಊಹಿಸುತ್ತೇವೆ

"ತಾವು ಸುಲ್ತಾನರವರಿಗೆ ಸಾಲ ಕೊಟ್ಟೇದ್ದೀರಲ್ಲವೆ?"

"ಹೌದು ಒಂದು ಕೋಟಿ ರೂಪಾಯಿಗಳನ್ನು ನಮ್ಮ ಕೋಠಿಯಿಂದ ಸಾಲ ಕೊಟ್ಟಿದೆ ಬೀಬೀರಾಣಿಯವರ ಮೂಲಕ ಎರಡು ಕೋಟಿ ರೂಪಾಯಿಗಳ ಬೆಲೆ ಬಾಳುವ ಜವಾಹಿರಿಗಳನ್ನು ನಮ್ಮಲ್ಲಿ ಒತ್ತೆಯಿಟ್ಟಿದಾರೆ ಅದೆಲ್ಲಾ ತಲಚೇರಿಯಲ್ಲಿ ತಮ್ಮ ರಕ್ಷಣೆಯಲ್ಲಿಯೇ ಇದೆ

ಈಗ ಇಂಗ್ಲಿಷರಿಗೂ ಸುಲ್ತಾನರಿಗೂ ಯುದ್ಧವು ಆರಂಭವಾಗಿದೆಯೆಂದು ತಮಗೆ ತಿಳಿದಿದೆಯೋ?"

ತಿಳಿದಿದೆ. ಚೆನ್ನಾಗಿ ತಿಳಿದಿದೆ,

ತಮ್ಮ ಹಣವೆಲ್ಲವೂ ಮುಳುಗಿಹೋಗುವುದಿಲ್ಲವೇ? ಈ ಜವಾಹಿರಿಗಳನ್ನಿಟ್ಟು ಕೊಂಡು ನೀವೇನು ಮಾಡುವಿರಿ?

ಸೇಟನು ನಗುತ್ತಾ ಮೇಜರ್ ಸಾಹೇಬರೇ, ಸುಲ್ತಾನರನ್ನು ಗೆದ್ದು ಬಿಡುವುದು ಅಷ್ಟು ಸುಲಭವೆಂದು ಭಾವಿಸಬೇಡಿರಿ, ಫ್ರಾನ್ಸಿನ ಚಕ್ರವರ್ತಿಗಳಾದ ನೆಪೋಲಿಯನ್ ರವರಿಗಿಂತಲೂ ಪರಾಕ್ರಮಿಶಾಲಿಗಳು ಸುಲ್ತಾನರು, ಒಂದು ಪಕ್ಷ ದೈವಯೋಗದಿಂದ ಸುಲ್ತಾನರು ರಣದಲ್ಲಿ ಮೃತರಾದರೆ ಈ ಜವಾಹಿರಿಗಳನ್ನು ಇಂಗ್ಲೆಂಡಿನಲ್ಲಿಯೋ, ಫ್ರಾನ್ಸಿನಲ್ಲಿಯೋ ನಾನು ಮಾರಬಲ್ಲೆ, ಒಂದಕ್ಕೆ ಹತ್ತರಷ್ಟು ಲಾಭ ಬರುತ್ತೆ ತಮಗೆ ಈ ನಗಗಳ ಬೆಲೆಯೇ ಗೊತ್ತಿಲ್ಲ ಎಂದು ನಕ್ಕನು.

ಮೇಜರ್ ತಾವು ನನಗೊಂದು ಉಪಕಾರ ಮಾಡಬೇಕು. ಈ ಬೀಬೀರಾಣಿ ಯವರು ಉಳಿಯುತ್ತಾರೆಯೋ ಅಳಿಯುತ್ತಾರೆಯೋ ಅದು ಸಂದಿಗ್ಧವಾಗಿದೆ ಅವರಿಗೆ ಪೂರ್ಣಗುಣವಾಗುವವರೆಗೆ ನಾನು ಇಲ್ಲಿ ತಮ್ಮ ಶಿಬಿರದಲ್ಲೇ ಇರುವುದಕ್ಕೂ ಪ್ರತಿ ದಿನವೂ ರಾಣಿಯವರ ಭೇಟಿ ಮಾಡುವುದಕ್ಕೂ ಅನುಜ್ಞೆ ಕೊಡಬೇಕು

ಸೇಟರೇ, ನಮ್ಮ ಇಂಗ್ಲಿಷ್ ಜನವನ್ನು ತಾವು ಅರಿಯಿರಿ. ಪ್ರೇಮಿಗಳ ಪ್ರೇಮಾರಾಧನೆಗೆ ಸಹಕರಿಸುವುದು ನಮಗೆ ಅತ್ಯಂತ ಪ್ರಿಯವಾದುದು. ಅದರಲ್ಲಿಯೂ ನೀವು ನಮಗೆ ಪರಮಮಿತ್ರರು ನೀವು ಇಲ್ಲಿಯೇ ಇರಬಹುದು ರಾಣಿಯವರ ಸಮೀಪದಲ್ಲೇ ಇರಬಹುದು ನಾನು ಈ ವಿಷಯವನ್ನು ರಾಬರ್ಟ್ ಟೈಲರ್ ಸಾಹೇಬ ರವರಿಗೂ ಬರೆಯುತ್ತೇನೆ ಅವರು ಇದನ್ನು ಸಂತೋಷದಿಂದ ಅಂಗೀಕರಿಸುತ್ತಾರೆ. ಆದರೆ ತಾವು ನಮಗೊಂದು ಮಹೋಪಕಾರ ಮಾಡಬೇಕು ಕನ್ನಾನೂರಿನ ರಾಣಿಯ ವರ ಜೊತೆಗಾತಿಯಾರಾರೆಂಬುದನ್ನು ತಾವು ಪತ್ತೇಮಾಡಿಸಿಕೊಡಬೇಕು. ಸೇಟರು ಒಪ್ಪಿಕೊಂಡರು

ಒಂದು ವಾರದಲ್ಲಿ ಬೀಬಿಯವರಿಗೆ ಪ್ರಜ್ಞೆ ಬಂತು ಅವರನ್ನು ಕನ್ನಾನೂರಿನ ಅರಮನೆಗೆ ಕರೆದೊಯ್ದರು ಚಿಕಿತ್ಸೆಗೆ ಇಂಗ್ಲೀಷ್ ಡಾಕ್ಟರೇ ಕನ್ನಾನೂರಿಗೆ ಹೋಗ ಬೇಕೆಂದು ಏರ್ಪಾಡಾಯಿತು ಬೀಬೀ ರಾಣಿಗೆ ಅರ್ಧಜ್ಞಾನಾವಸ್ಥೆಯು ಬಂದಾಗ, "ದೌಲತ್ ರಾಣಿಯವರೇ, ರಾಧಾರಾಣಿಯವರೇ. ನಾನು ನಿಮ್ಮನ್ನು ಅಗಾಧ ಜಲ ದಲ್ಲಿ ಮುಳುಗಿಸಿಬಿಟ್ಟೆ! ಕ್ಷಮಿಸಿ! ಕ್ಷಮಿಸಿ!" ಎಂದು ಕಿರುಚಿತ್ತಿದ್ದಳು ಪುನಃ ಅಜ್ಞಾನಾವಸ್ಥೆಯು ಪ್ರಾಪ್ತವಾಗುತ್ತಿದ್ದಿತು ಡಾಕ್ಟರರು ಮೂವರು ರೋಗಿಗಳನ್ನೂ ಒಂದೇ ಕಡೆಯಲ್ಲಿಡಬೇಕೆಂದು ಸಲಹೆ ಕೊಟ್ಟರು ಮೂವರನ್ನೂ ಮ್ಯಾನಾದಲ್ಲಿ ಕನ್ನಾ ನೂರಿಗೆ ಸಾಗಿಸಲಾಯಿತು. ಕನ್ನಾನೂರಿನ ಅರಮನೆಯ ಸುತ್ತಲೂ ಇಂಗ್ಲೀಷ್ ಸೋಲ್ಜರುಗಳ ಪಹರೆ ಇತ್ತು ಸೇಟರು ಧಾರಾಳವಾಗಿ ಬಂದು ಹೋಗುವ ಏರ್ಪಾಡಾ ಗಿತ್ತು, ಬೀಬೀರಾಣಿಯು ಕ್ರಮೇಣ ಆರೋಗ್ಯವನ್ನು ಹೊಂದುತ್ತ ಬಂದಳು. ಆದರೆ

ದೌಲತ್ತಳ ಮತ್ತು ರಾಧೆಯ ಸ್ಥಿತಿಯು ಹಾಗಾಗಲಿಲ್ಲ ಅವರ ಜ್ವರವು ವಿಷಮಶೀತ ಜ್ವರಕ್ಕೆ ತಿರುಗಿಕೊಂಡಿತು ಹೀಗೆ ಎರಡು ತಿಂಗಳುಗಳು ಜೀವನ–ಮರಣಗಳ ಹೋರಾಟದಲ್ಲಿಯೇ ರಾಧೆ ಮತ್ತು ದೌಲತ್ತರುಗಳು ಕಳೆಯುತ್ತಿದ್ದರು ಸೇಟನು ಆರ್ತನಾಗಿ ಪ್ರತಿಕ್ಷಣವೂ ಮರಣೋನ್ಮುಖರಾಗಿದ್ದ ಆ ರಾಣಿಯರ ಸಮೀಪದಲ್ಲಿಯೇ ಕುಳಿತಿರುತ್ತಿದ್ದನು. ಎರಡು ತಿಂಗಳ ನಂತರ ಅವರಿಗೂ ದಿನದಿಕ್ಕೆ ಗುಣಮುಖವಾಗುತ್ತ ಬಂತು ಒಂದು ದಿನ ಅರ್ಧರಾತ್ರಿಯಲ್ಲಿ ದೌಲತ್ತಳಿಗೆ ಪೂರ್ಣಜ್ಞಾನ ಬಂದಿತ್ತು ಸಮೀಪದಲ್ಲಿ ಕುಳಿತಿದ್ದ ಖಾನರವರ ಕೈಹಿಡಿದುಕೊಂಡು "ಖಾನರವರೇ ! ತಾವು ಶ್ರೀರಂಗಪಟ್ಟಣಕ್ಕೆ ಯುದ್ಧಕ್ಕೆ ಹೋಗಲಿಲ್ಲವೇ ?" ಎಂದಳು

"ಇಲ್ಲ !"

"ನೀವು ಯುದ್ಧಕ್ಕೆ ಹೋಗದಿದ್ದರೆ ಸುಲ್ತಾನರಿಗೆ ವಾಗ್ದಾನ ಮಾಡಿ ವಂಚಿಸಿದಂತಾಗುವುದಿಲ್ಲವೇ ?"

"ಆಗುತ್ತದೆ."

"ನೀವು ಯುದ್ಧಕ್ಕೆ ಏಕೆ ಹೋಗಲಿಲ್ಲ ? ನಿಮಗೆ ಮನಸ್ಸಿಲ್ಲವೇ ?"

"ಮನಸ್ಸೇ ! ಮನಸ್ಸು ಪ್ರತಿಕ್ಷಣಕ್ಕೂ ಹಾತೊರೆಯುತ್ತಿದೆ ಆದರೆ, ನೀನು ಮತ್ತು ರಾಧಾರಾಣಿಯವರೂ ಬದುಕು ಸಾವುಗಳ ಹೋರಾಟದಲ್ಲಿದ್ದೀರಿ !"

"ಒಳ್ಳೆಯದು, ಖಾನರವರೇ ! ಈಗಲಾದರೂ ನೀವು ನಮ್ಮನ್ನು ಬಿಟ್ಟು ಹೊರಡಿರಿ "

ಖಾನನು ಕುಗ್ಗಿದ ಧ್ವನಿಯಿಂದ "ಇಲ್ಲ ! ದೌಲತ್ ! ಈಗಲೂ ನಾನು ಯುದ್ಧಕ್ಕೆ ಹೋಗುವಂತಿಲ್ಲ. ನಾವೆಲ್ಲರೂ ಇಂಗ್ಲೀಷರ ಕೈಯಲ್ಲಿ ಬಂದಿಗಳಂತೆ ಇದ್ದೇವೆ "

"ನಾವು ಬಂದಿಗಳಾಗಿಯೇ ಇರುತ್ತೇವೆ ನೀವು ತಪ್ಪಿಸಿಕೊಂಡು ಶ್ರೀರಂಗಪಟ್ಟಣಕ್ಕೆ ಹೋಗಲಾರಿರಾ ?"

"ದೌಲತ್ ! ತಪ್ಪಿಸಿಕೊಂಡು ಹೋಗುವುದೇನೂ ಕಷ್ಟವಿಲ್ಲ ! ಆದಕ್ಕೆ ನನ್ನ ಮನಸ್ಸು ಒಪ್ಪುವುದಿಲ್ಲ ನಿಮ್ಮ ಮೂವರ ಪ್ರಾಣಗಳನ್ನೂ ಉಳಿಸಿ ಕಾಪಾಡಿದವರು ಇಂಗ್ಲೀಷ್ ಸರದಾರರು ! ನೀವೂ, ನಾನೂ ಇಂಗ್ಲೀಷರಿಗೆ ಋಣಬದ್ಧರಾಗಿದ್ದೇವೆ "

"ಹಾ ! ಹಾ ! ನಾವಿಬ್ಬರೂ ಆ ಜಲಗರ್ಭದಲ್ಲಿಯೇ ಮುಳುಗಿ ಹೋಗಿದ್ದರೆ ಚೆನ್ನಾಗಿತ್ತು" ಎಂದು ಅರಚಿದಳು ಕಣ್ಣುಗಳಲ್ಲಿ ನೀರು ನಿರರ್ಗಳವಾಗಿ ಸುರಿಯುತ್ತಿತ್ತು. ಪುನಃ ಸಂಪೂರ್ಣವಾಗಿ ಜ್ಞಾನಶೂನ್ಯಳಾಗಿ ಹೋದಳು

ಇಯಜ್‌ಖಾನನು ಹುಚ್ಚನಂತೆ ದೌಲತ್ತಳ ಕೈ ಹಿಡಿದು ಕೊಂಡು ಅಳುತ್ತಾ ಕುಳಿತನು.

ಬೀಬೀರಾಣಿಯು ಎಷ್ಟೋ ಸಮಾಧಾನ ಪಡಿಸಿದಳು ಇಯಜ್‌ಖಾನನ ದುಃಖ ಹನ್ನು ತಡೆಯುವ ಶಕ್ತಿಯು ಖಾನನಿಗೂ ಇರಲಿಲ್ಲ ಬೀಬೀರಾಣಿಗೂ ಸಾಧ್ಯವಾಗ ಲಿಲ್ಲ ! ಕನ್ನಾನೂರಿನ ಅರಮನೆಯು ಅಂಧಕಾರಮಯವಾಗಿತ್ತು !

## ಮೈಸೂರಿನ ಮೂರನೆಯ ಯುದ್ಧ

ಮೈಸೂರಿನ ಮೂರನೆಯ ಯುದ್ಧವು ಚರಿತ್ರೆಯ ದೃಷ್ಟಿಯಿಂದ ಬಲು ಮುಖ್ಯ ವಾದ ಯುದ್ಧ ! ಆ ಯುದ್ಧದ ಕಥೆಗಳು ಎಷ್ಟೋ ಇವೆ ಅವೆಲ್ಲಾ ನಮ್ಮ ಈ ಕಥೆಗೆ ವಿಶೇಷ ಸಂಬಂಧಪಟ್ಟವುಗಳಲ್ಲ ಇಂಗ್ಲೀಷರ ದಂಡು ಒಂದು ಕಡೆಯಿಂದ ಬೆಂಗಳೂರಿನ ಮೇಲೆಯೂ, ಮತ್ತೊಂದು ಕಡೆ ಕೊಯಮತ್ತೂರಿನ ಮಾರ್ಗವಾಗಿ ಮೈಸೂರಿನ ಮೇಲೆಯೂ ಬಂದಿತು ಇಂಗ್ಲೀಷರಿಗೆ ಜಯದ ಮೇಲೆ ಜಯಗಳಾಗುತ್ತ ಬಂದಿತು. ಬೆಂಗಳೂರು ಇಂಗ್ಲೀಷರ ಸ್ವಾಧೀನವಾಯಿತು ಅಲ್ಲಿ ಇಂಗ್ಲೀಷರು ದೊಡ್ಡ ಶಿಬಿರವನ್ನು ಸ್ಥಾಪಿಸಿದರು ಈ ಯುದ್ಧದಲ್ಲಿ ಜನರಲ್ ಕಾರ್ನವಾಲೀಸರೇ ಖುದ್ದಾಗಿ ಯಾಜ ಮಾನ್ಯವನ್ನು ವಹಿಸಿದ್ದರು ಶ್ರೀರಂಗಪಟ್ಟಣದ ಮೇಲೆ ನುಗ್ಗಿಯೇ ಬಿಡಬೇಕೆಂದು ತೀರ್ಮಾನ ಮಾಡಿಕೊಂಡು ಸಿದ್ಧಮಾಡುತ್ತಿದ್ದರು. ಟಿಪ್ಪೂಸುಲ್ತಾನರವರೂ ಅಧೈರ್ಯ ಪಟ್ಟಿರಲಿಲ್ಲ ಕಡೆಯವರೆಗೆ ಯುದ್ಧ ಮಾಡಿಯೇ ಮುಕ್ತಾಯಪಡಿಸಬೇಕೆಂದು ಹಠ ತೊಟ್ಟಿದ್ದರು

ಉತ್ತರದ ಕಡೆ ಹುಸೇ೯ಖಾನನು ಬಲವಾದ ಸೈನ್ಯ ವ್ಯವಸ್ಥೆಯನ್ನಿಟ್ಟಿದ್ದನು. ಆ ಕಡೆಯಿಂದ ಮರಾಟರ ಸೈನ್ಯವು ಮೈಸೂರಿಗೆ ಬರುವುದು ಅಸಾಧ್ಯವೆಂಬುದನ್ನು ಮರಾ ಟರು ಚೆನ್ನಾಗಿ ತಿಳಿದಿದ್ದರು ಆದರೂ ಹೈದರಾಬಾದನ್ನು ಒಳಹಾದು ಪ್ರಚಂಡವಾದ ಮರಾಟರ ಸೈನ್ಯವು ಮೈಸೂರಿನ ಗಡಿಯನ್ನು ದಾಟಿಯೇಬಿಟ್ಟಿತು ಈ ಸಮಾಚಾರವು ಹುಸೇ೯ಖಾನನಿಗೆ ತಿಳಿಯಿತು ಹುಸೇ೯ಖಾನನು ತನ್ನ ಪ್ರಚಂಡ ಸೈನ್ಯವನ್ನು ತೆಗೆದು ಕೊಂಡು ಹೊರಟು ಮರಾಟರನ್ನು ಎದುರಿಸಿದನು ಮರಾಟರನ್ನು ಹಜ್ಜೆ ಮುಂದಿಕ್ಕ ದಂತೆ ತಡೆದನು ಹುಸೇ೯ಖಾನನಿಗೂ, ಮರಾಟರಿಗೂ ಯುದ್ಧವು ದಿನದಿನಕ್ಕೆ ಪ್ರಚಂಡ ರೂಪವನ್ನು ತಾಳುತ್ತ ಬಂದಿತು ಮರಾಟರ ಮುಖ್ಯಾಧಿಕಾರಿಯಾದ ಹರಿಪಂತನು ನಮ್ಮ ಸೈನ್ಯವು ಶ್ರೀರಂಗಪಟ್ಟಣವನ್ನು ಸೇರಲಾರದು ಎಂದು ನಿರ್ಧಾರ ಮಾಡಿದನು. ಇದೇ ಅಂಶವನ್ನು ಖಚಿತವಾಗಿ ಇಂಗ್ಲೀಷರ ಮುಖ್ಯಾಧಿಕಾರಿಯಾದ ಕಾರ್ನವಾಲೀಸ ನಿಗೆ ಬರೆದು ಕಳುಹಿಸಿದನು ಈ ಸಮಾಚಾರವನ್ನು ತಿಳಿದು ಕಾರ್ನವಾಲೀಸನು ನಿರಾಶ ನಾದನು ತಮ್ಮ ಸೈನ್ಯವನ್ನು ಹಿಂದಕ್ಕೆ ತಿರುಗಿಸಬೇಕೆಂದು ಸ್ಥಿರ ಮಾಡಿಕೊಂಡನು.

ಬೇಹುಕಾರರು ಈ ಸಮಾಚಾರಗಳನ್ನೆಲ್ಲಾ ಸುಲ್ತಾನರ ಸಮ್ಮುಖಕ್ಕೆ ತಂದರು.

ಮೈಸೂರಿನ ಅರ್ಧರಾಜ್ಯವನ್ನು ಶತೃಗಳಿಗೆ ಕೊಡಬೇಕು. ಯುದ್ಧದ ಖರ್ಚಿಗಾಗಿ ಮೂರುಕೋಟಿ ರೂಪಾಯಿಗಳನ್ನು ಕೊಡಬೇಕು

ಈ ಸಂಧಿಯ ಷರತ್ತುಗಳ ಪಾಲನೆಯ ಭರವಸೆಗಾಗಿ ಸುಲ್ತಾನರವರ ಇಬ್ಬರು ಗಂಡು ಮಕ್ಕಳನ್ನು ಇಂಗ್ಲೀಷರ ವಶಕ್ಕೆ ಒಪ್ಪಿಸಬೇಕು

ಈ ಸ ಿಯಿಂದ ಮರಾಟರೂ, ಇಂಗ್ಲೀಷರೂ ಹೈದರಾಬಾದಿನವರೂ ಹೆಮ್ಮೆಯಿಂದ ಮೆರೆದರು

ಈ ಷರತ್ತುಗಳು ಸುಲ್ತಾನರಿಗೆ ಅತ್ಯಂತ ಅಪಮಾನಕರವಾಗಿತ್ತು ಅವರು ಒಪ್ಪಲೇ ಇಲ್ಲ ಆದರೆ ವಿಧಿಯಿಲ್ಲ ಮಂತ್ರಿಗಳೂ ಸೇನಾಧಿಪತಿಗಳೂ ಸುಲ್ತಾನರನ್ನು ಒಪ್ಪಿಸಿದರು ಸುಲ್ತಾನರು ಕ್ರೋಧ ದುಃಖಗಳಿಂದ ಪರಿತಪಿಸುತ್ತಾ, ಆ ಸಂಧಿ ಪತ್ರಕ್ಕೆ ರುಜು ಮಾಡಿದರು ಶ್ರೀರಂಗಪಟ್ಟಣದ ಸರದಾರರು ರಾಜ ಮರ್ಯಾದೆಗಳೊಡನೆ ಸುಲ್ತಾನರವರ ಇಬ್ಬರು ಮಕ್ಕಳನ್ನು ಕರತಂದು ಕಾರ್ನವಾಲೀಸರಿಗೆ ಒಪ್ಪಿಸಿದರು ಜನರಲ್ ಕಾರ್ನವಾಲೀಸರು ಅತ್ಯಾದರದಿಂದ ಎದುರುಗೊಂಡು ಬಹಳ ಗೌರವದಿಂದ ಬರಮಾಡಿಕೊಂಡು ಆ ರಾಜಕುಮಾರರಿಬ್ಬರನ್ನೂ ತಮ್ಮ ಬಿಡಾರದಲ್ಲಿಯೇ ಇಟ್ಟುಕೊಂಡರು

ಶತೃಗಳ ದಂಡು ಮೈಸೂರಿನಿಂದ ಹೊರಟು ಹೋಯಿತು ಅವರವರ ಪಾಲಿಗೆ ಬಂದ ರಾಜ್ಯವನ್ನು ಅವರವರು ಹಂಚಿಕೊಂಡರು ಟಿಪ್ಪೂಸುಲ್ತಾನರವರ ಮಕ್ಕಳನ್ನು ಮದರಾಸಿನ ಕೋಟೆಯೊಳಗೆ ಇಟ್ಟರು ಅವರ ಏರ್ಪಾಡುಗಳೆಲ್ಲವೂ ರಾಜ ಮರ್ಯಾದೆಯಿಂದಲೇ ಮಾಡಲ್ಪಟ್ಟಿತು ಯುದ್ಧದಲ್ಲಿ ಇಂಗ್ಲೀಷರಿಗೆ ಜಯವಾಯಿತು ಜನರಲ್ ಕಾರ್ನವಾಲೀಸನು ಟಿಪ್ಪೂಸುಲ್ತಾನನು ಮಹಾಪುರುಷನೆಂಬುದನ್ನು ಕಂಡುಕೊಂಡನು

ಇಂಗ್ಲೆಂಡಿಗೆ ಟಿಪ್ಪೂಸುಲ್ತಾನನ್ನು ಪ್ರಶಂಸಿಸಿ ಎಷ್ಟೋ ಪತ್ರಗಳನ್ನು ಬರದಿದ್ದಾನೆ. ಟಿಪ್ಪೂಸುಲ್ತಾನರವರಿಗೂ ಬಹಳ ಗೌರವದಿಂದ ಪತ್ರಗಳನ್ನು ಬರೆದಿದ್ದಾನೆ. ಆದರೇನು ! ಸುಲ್ತಾನನು ಜನ್ಮತಾಳಿದಂದಿನಿಂದ ಇಂತಹ ಅಪಮಾನವನ್ನು ಎಂದೂ ಅನುಭವಿಸಿರಲಿಲ್ಲ ದಶದಿಕ್ಕುಗಳೂ ಅವನನ್ನು ಅಣಕಿಸುತ್ತಿದಂತೆ ಭಾಸವಾಗುತ್ತಿ ತ್ತು. ಸರ್ವದಾ ದುಃಖಿಯಾಗಿದ್ದನು ಯಾರೊಡನೆಯೂ ಹೆಚ್ಚಾಗಿ ಮಾತನಾಡುತ್ತಿ ಲ್ಲ ಮನಸ್ಸು ಸರ್ವದಾ ಪರಿತಪಿಸುತ್ತಿತ್ತು ತನ್ನ ಮಕ್ಕಳನ್ನು ಇಂಗ್ಲೀಷರ ಅಧೀ ನದಲ್ಲಿ ಇಟ್ಟಿರುವ ಅಪಮಾನ. ಅರ್ಧರಾಜ್ಯವನ್ನು ಶತೃಗಳಿಗೆ ಹಂಚಿಕೊಟ್ಟ ಅಪಮಾನ. ಈ ಯುದ್ಧದಲ್ಲಿ ಸೋತುಹೋದ ಅಪಮಾನ ಮತ್ತೇನು ಬೇಕು ಇಯಜ್‌ಖಾನರವರೇಕೆ ಯುದ್ಧಕ್ಕೆ ಬರಲಿಲ್ಲ ? ದೌಲತ್ ಮತ್ತು ರಾಧಾರಾಣಿಯವರೇನಾದರು ? ಈ ಸಮಾಚಾರವೇ ತಿಳಿಯಲಿಲ್ಲ. ಊಟವಿಲ್ಲ, ಉಪಚಾರವಿಲ್ಲ, ರಾಜಕಾರ್ಯಗಳನ್ನು

ಸುತರಾಂ ಗಮನಿಸುತ್ತಿರಲಿಲ್ಲ. ಮಂತ್ರಿಗಳೇ ದಕ್ಷತೆಯಿಂದ ರಾಜ್ಯಭಾರವನ್ನು ನಡೆಸು ತ್ತಿದ್ದರು

ಟಿಪ್ಪೂಸುಲ್ತಾನು ಏಕೆ ಅರ್ಧ ರಾಜ್ಯವನ್ನು ಹಂಚಿಕೊಟ್ಟನು ತನ್ನ ಮಕ್ಕಳನ್ನು ಏಕೆ ಇಂಗ್ಲೀಷರಿಗೆ ಒಪ್ಪಿಸಿದನು ಇದೆಲ್ಲಾ ಆತ್ಮಸಂರಕ್ಷಣೆಯನ್ನು ಮಾಡಿಕೊಂಡು ಸುಖವಾಗಿ ಮೈಸೂರು ರಾಜ್ಯದಲ್ಲಿ ರಾಜನೆನಿಸಿಕೊಂಡು ರಾಜವೈಭವಗಳನ್ನು ಅನುಭವಿಸುವುದಕ್ಕಲ್ಲ ಅಂಥಾ ಸುಖಭೋಗಗಳಲ್ಲಿ ಆಸಕ್ತನಾಗಿದ್ದರೆ ಎಂದೋ ಇಂಗ್ಲೀಷರೊಡನೆ ಸಖ್ಯವನ್ನು ಬೆಳೆಸಬಹುದಾಗಿತ್ತು

ಪುನಃ ಮಹತ್ತರವಾದ ಯುದ್ಧ ಸನ್ನಾಹಗಳನ್ನು ಮಾಡುತ್ತಾರೆ ಶತೃಗಳನ್ನು ಸಂಪೂರ್ಣವಾಗಿ ಜಯಿಸಿ, ದಕ್ಷಿಣ ಹಿಂದೂಸ್ಥಾನದಲ್ಲಿ ಸುಲ್ತಾನೀರಾಜ್ಯವನ್ನು ಸ್ಥಾಪಿಸುತ್ತೇನೆ ಎಂಬ ಮಹತ್ವಾಕಾಂಕ್ಷಯು ಸದಾ ಅವನ ಮನಸ್ಸಿನಲ್ಲಿ ಜಾಗರಿತವಾಗಿತ್ತು ಇಂಗ್ಲಿಷರು ಮರಾಟರೊಡನೆ ಯುದ್ಧಕ್ಕೆ ಹೋಗುವುದಿಲ್ಲವೇಕೆ ? ಹೈದರಾಬಾದು ನವಾಬರಿಗೂ ಇಂಗ್ಲಿಷರಿಗೆ ದ್ವೇಷವಿಲ್ಲವೇಕೆ ? ಆವೆರಡು ರಾಜ್ಯಗಳಿಗಿಂತಲೂ ಮೈಸೂರು ಮಹಾರಾಜ್ಯ ಸುಲ್ತಾನನು ಪರಾಕ್ರಮಿ ಸುಲ್ತಾನನನ್ನು ಜಯಿಸಿದರೆ ಸಮಗ್ರ ದಕ್ಷಿಣ ದೇಶವನ್ನು ಜಯಿಸಿದಂತಾಗುತ್ತದೆಂದು ಇಂಗ್ಲಿಷರು ಭಾವಿಸಿದ್ದರು ಈ ಮೂರನೆಯ ಮೈಸೂರು ಯುದ್ಧದಿಂದ ಇಂಗ್ಲಿಷರ ಆಶೋತ್ತರವು ಪೂರ್ಣವಾಯಿತೇನು ? ಇಲ್ಲ ! ಪುನಃ ಒಂದು ಮಹಾಯುದ್ಧವು ಬಂದೇ ಬರುತ್ತದಂದು ಅವರಿಗೆ ಖಚಿತವಾಗಿ ಗೊತ್ತು. ಈಗ ಮಾತ್ರ ಮೈಸೂರಿಗೆ ಗ್ರಹಣವು ಹಿಡಿದಂತಾಗಿದೆ

ಈ ಯುದ್ಧವು ಪೂರೈಸಿ, ಸಂಧಿಯಾಗುವ ಹೊತ್ತಿಗೆ ದೌಲತ್‌ರಾಣಿಯವರೂ, ರಾಧಾರಾಣಿಯವರೂ ಪೂರ್ಣ ಆರೋಗ್ಯವನ್ನು ಹೊಂದಿದರು ಮೈಸೂರಿನ ಸಮಾಚಾರಗಳೆಲ್ಲಾ ವಿಶದವಾಗಿ ಗೊತ್ತಾಯಿತು ಇಯಜ್‌ಖಾನರೂ, ರಾಣಿಯವರೂ ಬಹಳ ದುಃಖಪಟ್ಟರು ಮೈಸೂರಿನ ವಿದ್ಯಮಾನಗಳಿಂದ ಖಿನ್ನರಾದ ಇಯಜ್‌ಖಾನರು ಹುಚ್ಚರಂತಾದರು ಅವರು ಕನ್ನಾನೂರನ್ನು ಬಿಟ್ಟು ಕೋಬೇಬಂದರಿಗೆ ಹೊರಟು ಹೋದರು ಯಾರೂ ತಮ್ಮನ್ನು ಬಂದು ನೋಡಬಾರದೆಂದು ಬೀಬೀರಾಣಿಯವರಿಗೆ ಹೇಳಿ ಕಳುಹಿಸಿದರು. ಇಯಜ್‌ಖಾನರು ಅನ್ನಾಹಾರಗಳನ್ನು ತೊರೆದು ಸರ್ವದಾ ಚಿಂತಾಮಗ್ನರಾಗಿದ್ದರು.

ಹೀಗೆ ನಿರ್ವಿಣ್ಣಾವಸ್ಥೆಯಲ್ಲಿ ಕೆಲವು ದಿನಗಳು ಕಳೆದುಹೋದುವು ಅವರು ತಮ್ಮಷ್ಟಕ್ಕೆ ತಾವೇ ಧೈರ್ಯವನ್ನು ತಂದುಕೊಂಡು ಸುಲ್ತಾನರವರಿಗೆ ಒಂದು ಪತ್ರವನ್ನು ಬರೆದು ಕಳುಹಿಸಿದರು

ಪ್ರಿಯ ಸುಲ್ತಾನರವರೇ !

ಮೈಸೂರಿನ ದುಃಖಮಯವಾದ ಸಮಾಚಾರಗಳನ್ನು ಕೇಳಿದೆ. ನಾನು ಅಪರಾಧಿ!

ನನ್ನಿಂದ ನಿಮಗೆ ಕಿಂಚಿತ್ತಾದರೂ ಸೇವೆಯಾಗುವ ಭಾಗ್ಯವು ನನಗೆ ಇಲ್ಲದೇ ಹೋಯಿತು. ನಾನು ಆ ಸಮಯದಲ್ಲಿ ಶ್ರೀರಂಗಪಟ್ಟಣಕ್ಕೆ ಬಂದು ಆ ಯುದ್ಧದಲ್ಲಿ ಪ್ರಾಣವನ್ನೊಪ್ಪಿಸಿದ್ದರೆ ನನ್ನ ಆತ್ಮಕ್ಕೆ ಎಷ್ಟೋ ಸಂತೋಷವಾಗುತ್ತಿತ್ತು ದೊಡ್ಡ ನವಾಬರು ನನ್ನಲ್ಲಿಟ್ಟಿದ್ದ ಭರವಸೆಗೆ ಸಮಾಧಾನವಾಗುತ್ತಿತ್ತು

ಮೈಸೂರಿನ ಅರ್ಧ ರಾಜ್ಯವು ಶತ್ರುಗಳ ವಶವಾದುದು ಅಷ್ಟು ಮಹತ್ತರವಾದ ಅಂಶವಲ್ಲ ನಗರವು ತಮ್ಮ ಕೈಯಲ್ಲಿದೆ, ರಾಜಧಾನಿಯು ನಮ್ಮ ಕೈಯಲ್ಲೇ ಇದೆ ನಾವು ಮೂರು ಕೋಟಿ ರೂಪಾಯಿಗಳನ್ನು ಕೊಡಬೇಕು ಅದನ್ನೂ ನಾವು ಕೊಡ ಬಲ್ಲೆವು. ನಮ್ಮ ರಾಜಕುಮಾರರು ಇಂಗ್ಲೀಷರ ಅಧೀನದಲ್ಲಿರುವುದು ನಮಗೆ ಅತ್ಯಂತ ದುಃಖದಾಯಕವಾಗಿದೆ ನಾನು ತಮ್ಮ ಸನ್ನಿಧಾನಕ್ಕೆ ಬಂದು ಕ್ಷಮಾಪ್ರಾರ್ಥನೆ ಮಾಡಿ ಕೊಳ್ಳಬೇಕೆಂದು ನನ್ನ ಮನಸ್ಸು ಕುದಿಯುತ್ತಿದೆ ಆದರೆ ನಾನು ನಮ್ಮ ಸುಲ್ತಾನರ ಕುಮಾರರನ್ನು ರಾಜಧಾನಿಗೆ ಕರೆತರುವವರೆಗೆ ತಮ್ಮನ್ನು ಭೇಟಿ ಮಾಡುವುದಿಲ್ಲವೆಂದು ಶಪಥ ಮಾಡಿದ್ದೇನೆ

ಮೈಸೂರು ಯುದ್ಧವು ಆರಂಭವಾದ ಕ್ಷಿಪ್ರದಲ್ಲಿಯೇ ಮಲಬಾರಿನಲ್ಲಿ ದೌಲತ್ ರಾಣಿಯವರು, ರಾಧಾರಾಣಿಯವರು, ಕನ್ನಾನೂರಿನ ಬೀಬೀರಾಣಿಯವರೂ ಸಮುದ್ರ ದಲ್ಲಿ ಮುಳುಗಿಹೋದರು ಇಂಗ್ಲೀಷ್ ಸರದಾರರು ಅವರನ್ನು ಎತ್ತಿ ರಕ್ಷಿಸಿದರು ಆ ರಾಣಿಯರು ತಿಂಗಳುಗಟ್ಲೆ ಅಜ್ಞಾನಾವಸ್ಥೆಯಲ್ಲಿಯೇ ಇದ್ದರು. ವಸ್ತುತಃ ಆ ಮೂವರು ರಾಣಿಯರೂ ಇಂಗ್ಲೀಷರ ಬಂದಿಗಳಾದರು ಈ ಸಮಾಚಾರವು ನನಗೆ ಬಂತು ಅವರನ್ನು ಬಿಡಿಸಿಕೊಳ್ಳಲು ನಾನು ಮಲಬಾರಿಗೆ ಹೊರಟುಹೋದೆ

ನಾನು ಅಜ್ಞಾತವಾಸದಲ್ಲಿದ್ದೇನೆ ತಾವು ನನ್ನ ಅನ್ವೇಷಣಕ್ಕೆ ಪ್ರಯತ್ನ ಪಡ ಬೇಡಿರಿ ರಾಜಕುಮಾರರು ಗೌರವದಿಂದ ಮೈಸೂರಿಗೆ ಬಂದು, ನಾವುಗಳು ಮತ್ತೊಂದು ಮಹಾಯುದ್ಧವನ್ನು ಹೂಡಿದರೆ ನಾನು ಬಂದು ನಿಮ್ಮ ಸೇವೆ ಮಾಡುತ್ತೇನೆ

ನಾನು ಹಗಲಿರುಳೂ ತಮ್ಮ ಸೇವೆಯಲ್ಲಿಯೇ ನಿರತನಾಗಿದ್ದೇನೆ

ಇತಿ ನಿರ್ಭಾಗ್ಯ,

ಇಯಜ್‌ಖಾ.

ಈ ಪತ್ರವನ್ನು ಇಮಾಮನ ಕೈಯಲ್ಲಿ ಕೊಟ್ಟು ಶ್ರೀರಂಗಪಟ್ಟಣಕ್ಕೆ ಕಳುಹಿಸಿ ದನು

ಈ ಪತ್ರವು ಶ್ರೀರಂಗಪಟ್ಟಣದ ಸುಲ್ತಾನರವರ ಕೈಸೇರಿತು ಅವರು ಇದನ್ನೋದಿ ಕೊಂಡು ಒಂದು ದೀರ್ಘ ನಿಶ್ವಾಸವನ್ನು ಬಿಟ್ಟು, ದೈವವೇ ಪ್ರತಿಕೂಲವಾಗಿದೆ ಎಂದು ಕೊಂಡರು.

ದೌಲತ್‌ರಾಣಿಯು ಕನ್ನಾನೂರಿನಿಂದ ನಗರಕ್ಕೆ ಹೊರಡಬೇಕೆಂದು ಆಲೋಚಿಸಿ

ದಳು ಇಯಜ್‌ಖಾನರ ಜಡಾವಸ್ಥೆಯು ಅವರನ್ನು ದುಃಖ ಸಾಗರದಲ್ಲಿ ಮುಳುಗಿ ಸಿತ್ತು ದೌಲತ್ತಳೂ, ರಾಧೆಯೂ ಕೋಬೆಗೆ ಹೋಗಿ ಖಾನರನ್ನು ದರ್ಶನ ಮಾಡಿ ದರು ತಾವು ನಗರಕ್ಕೆ ಹೊರಡುವ ಪ್ರಸ್ತಾಪವನ್ನು ಮಾಡಿದರು ಇಯಜ್‌ಖಾನನು ಸರಳವಾಗಿ ಮಾತನಾಡುತ್ತಿದ್ದರೂ ಯಾವ ಅಂಶಗಳನ್ನೂ ಖಚಿತವಾಗಿ ಮಾತನಾಡ ಲಿಲ್ಲ ಖಾನನು "ರಾಣಿಯವರುಗಳೇ, ಸುಲ್ತಾನರ ಮಕ್ಕಳನ್ನು ಇಂಗ್ಲೀಷರ ವಶದಿಂದ ವಾಪಸು ಕರೆತರಬೇಕು ಮತ್ತೊಂದು ಮಹಾಯುದ್ಧವನ್ನು ಹೂಡಬೇಕು ಇವೆರಡು ಚಿಂತೆಗಳು ಸರ್ವದಾ ನನ್ನನ್ನು ಸುಡುತ್ತಿವೆ" ಎಂದು ಹೇಳಿದನು

ದೌಲತ್ತಳು—ಖಾನರವರೇ ! ಮೂರು ಕೋಟಿ ರೂಪಾಯಿಗಳನ್ನು ಸಲ್ಲಿಸಿ ಸುಲ್ತಾನರ ಕುಮಾರರನ್ನು ಇಂದೇ ಬಿಡಿಸಬಹುದು ಆದರೆ, ಶತ್ರುಗಳು ಮೂರು ವರ್ಷಗಳ ವಾಯಿದೆ ಮಾಡಿದ್ದಾರೆ ಅವರ ವಶಕ್ಕೆ ಒಪ್ಪಿಸಿರುವ ಮೈಸೂರಿನ ಅರ್ಧ ರಾಜ್ಯವನ್ನು ಸಂಪೂರ್ಣ ಸ್ವಾಧೀನಪಡಿಸಿಕೊಳ್ಳಲು ಅವರು ಆ ವಾಯಿದೆಯನ್ನು ಹೂಡಿರಬಹುದು ಮತ್ತೊಂದು ಮಹಾಯುದ್ಧದ ವಿಚಾರ ! ಅದಕ್ಕೆ ತಾವು ಯೋಚನೆ ಮಾಡಲೇಕೆ ? ರಾಧಾರಾಣಿಯವರು ನಗರದ ಪಾಳಯಗಾರರನ್ನೆಲ್ಲಾ ಯುದ್ಧಕ್ಕೆ ಎತ್ತಿ ಕಟ್ಟುತ್ತಾರೆ ಶ್ರೀರಂಗಪಟ್ಟಣದ ಸೈನ್ಯವನ್ನು ಸ್ವತಃ ಸುಲ್ತಾನರು ಸಿದ್ಧಗೊಳಿಸುತ್ತಾರೆ. ತಮ್ಮ ಇಷ್ಟಾರ್ಥವು ನೆರವೇರುತ್ತದೆ

ಇಯಜ್—ಮೂರುವರ್ಷಗಳು, ಒಂದು ಸಾವಿರ ರಾತ್ರಿಗಳನ್ನು ನಾನು ಕಳೆಯು ವುದೆಂತು ? ಈ ಅಜ್ಞಾತವಾಸವು ಬಹುದಿನ ನಡೆಯುವುದಿಲ್ಲ ಈ ದುಃಖದಲ್ಲಿ ನಾನು ಬದುಕುವುದು ಅಸಂಭವ

ದೌಲತ್—ಖಾನರವರೇ ! ತಾವು ನಗರಕ್ಕೆ ಬಂದರೆ ನಮ್ಮ ಕಾರ್ಯಗಳೆಲ್ಲವೂ ಯಶಸ್ವಿಯಾಗಿ ನಡೆಯುತ್ತವೆ.

ಇಯಜ್—ಇಲ್ಲ ! ದೌಲತ್ ! ಸುಲ್ತಾನರ ಈ ದುರವಸ್ಥೆಯಲ್ಲಿ ನಾನು ಮೈಸೂರು ರಾಜ್ಯಕ್ಕೆ ಬರಬಾರದು ಅವರದೊಂದು ಮಹತ್ಕಾರ್ಯವನ್ನು ಸಾಧಿಸಿ ಕೊಟ್ಟು ನಾನು ಮೈಸೂರಿಗೆ ಬರಬೇಕು ಅಥವಾ ಮತ್ತೊಂದು ಮಹಾಯುದ್ಧವು ಸಿದ್ಧವಾದರೆ ಮೈಸೂರಿಗೆ ಬರಬಹುದು

ಖಾಂಗವರ ಸವಾರಿಯು ಅದುವರೆಗೆ ಇಲ್ಲಿಯೇ ಇರೋಣಾಗುತ್ತದೇನು ?

ಇಲ್ಲಿಯೋ ! ಅಲ್ಲಿಯೋ ! ಎಲ್ಲಿಯೋ ಒಂದೆಡೆ ಈ ಭೂಮಿಯ ಮೇಲೆ ಇರು ವೆನು.

ನಮಗೆ ನಗರಕ್ಕೆ ಹೊರಡಲು ಅಪ್ಪಣೆ ಕೊಡಿರಿ.

ನನ್ನ ಅಪ್ಪಣೆಯ ಆಗತ್ಯವೇನು ? ತಾವೇ ಸ್ವತಂತ್ರವಾಗಿ ನಗರಕ್ಕೆ ಹೊರಡ ಬಹುದು. ಬೇಕಾದ ಸಿದ್ಧತೆಯನ್ನು ಮಾಡುವೆನು.

ರಾಣಿಯವರು ಬಲುಕಷ್ಟದಿಂದ ಬೀಬೀರಾಣಿಯ ಅಪ್ಪಣೆಯನ್ನು ಪಡೆದರು. ಸೇಟರವರು ಸಿದ್ಧಗೊಳಿಸಿದ್ದ ಸಣ್ಣ ಜಹಜಿನಲ್ಲಿ ದೌಲತ್ ಮತ್ತು ರಾಧಾರಾಣಿಯ ವರು ಮಂಗಳೂರಿಗೆ ಹೋಗಿ ತಲಪಿದರು ಅಲ್ಲಿಂದ ನಗರಕ್ಕೆ ಪ್ರಯಾಣ ಮಾಡಿದರು

## ದೌಲತ್‌ರಾಣಿಯ ಉದ್ಯೋಗಪರ್ವ

ದರಿಯಾಬಾಗಿನ ನೋನಾಮಹಲಿನಲ್ಲಿ ಪುನಃ ಅದೇ ವೈಭವ ಅದೇ ವೈಖರಿ ದಾನಧರ್ಮಗಳು ಎಲ್ಲವೂ ಮೊದಲಿನಂತೆಯೇ ನಡೆಯುತ್ತವೆ ಆದರೆ—ದರಿಯಾ ಬಾಗಿನ ಅಧಿದೇವತೆಯಾದ ದೌಲತ್ತಳು ಮೊದಲಿದ್ದ ಹಾಗೆ ಅಟ್ಟಹಾಸದಿಂದಿಲ್ಲ ಸದಾ ಕೊರಗುತ್ತಾಳೆ ಮೈಸೂರಿನ ರಾಜಕೀಯದಚಿಂತೆಯಲ್ಲಿ ಸರ್ವದಾ ಮುಳುಗಿದ್ದಾಳೆ. ಸುಲ್ತಾನರಾಗಲೀ, ಇಯಜ್‌ಖಾನರಾಗಲೀ ಯಾರೂ ಮೈಸೂರನ್ನು ಉಳಿಸಲಾಗ ಲಿಲ್ಲ ಅರ್ಧ ರಾಜ್ಯವು ಹೋಯಿತು ಮೈಸೂರಿಗೆ ಅಧೀನರಾಜ್ಯದ ಬಣ್ಣವು ಬರು ತ್ತಿದೆ ಇದನ್ನು ದೌಲತ್ತಳು ಸಹಿಸಲಾರದೇ ಹೋದಳು ಅವಳಿಗೆ ದಿಕ್ಕು ತೋಚದು. ಯುದ್ಧ-ಯುದ್ಧ ! ಎಷ್ಟು ಯುದ್ಧಗಳು. ದೊಡ್ಡ ನವಾಬರು ಪರಲೋಕಯಾತ್ರೆ ಮಾಡಿ ದಂದಿನಿಂದ ಎಡಬಿಡದೇ ಯುದ್ಧವೇನು ? ಇದರಲ್ಲಿ ಈ ಮೈಸೂರು ಉಳಿಯುವುದಿಲ್ಲ ಅದನ್ನು ಆತ್ಮೀಯರಲ್ಲಿ ಹೇಳಿಕೊಂಡರೆ ಸ್ವಲ್ಪ ಹಗುರವಾಗುತ್ತದೆ ಒಂದುದಿನ ರಾಧಾ ರಾಣಿಯೊಡನೆ ತನ್ನ ದುಃಖವನ್ನೆಲ್ಲಾ ಹೇಳಿಕೊಂಡಳು

ನೋಡು, ರಾಧೆ ! ನನ್ನ ಮನೋದುಃಖವನ್ನು ವರ್ಣಿಸಲಾರೆ ! ಈ ಮೈಸೂರು ಹೀಗೆ ಹರಿದುಹೋಗುವುದನ್ನು ನೋಡಿ ಸಹಿಸಲಾರೆ ! ಮೈಸೂರಿನ ಮೇಲೆ ಅಳಿಸ ಲಾಗದ ಅಪಮಾನದ ಮಸಿಯು ಬಳಿದಿದೆ ಈ ದುಃಖವನ್ನು ಪರಿಹರಿಸುವ ದಾರಿ ಯನ್ನೇ ಕಾಣೆ ! ಹೀಗೆಯೇ ದಿನದಿನಕ್ಕ ಉದ್ರೇಕವು ಹೆಚ್ಚಿ ಒಂದು ದಿನ ಆತ್ಮಹತ್ಯ ವನ್ನು ಮಾಡಿಕೊಳ್ಳಬಹುದು

ಹೌದು ! ನೀನು ಆತ್ಮಹತ್ಯ ಮಾಡಿಕೊಂಡರೆ ಈ ಮೈಸೂರು ರಾಜ್ಯವು ಉದ್ಧಾ ರವಾಗುವುದೇನು ?

ಇಲ್ಲ ! ನನ್ನ ದುಃಖವಾದರೂ ಶಮನವಾಗಿ ಹೋಗುವುದು, ಮತ್ತಾವ ದಾರಿ ಯನ್ನೂ ಕಾಣೆ

ರಾಧೆ—ದಾರಿ ಇದೆ ರಾಜಮಾರ್ಗವಿದೆ ಮೈಸೂರನ್ನು ಉದ್ಧಾರ ಮಾಡಲು ಇಬ್ಬರು ಮಹಾಪುರುಷರಿದ್ದಾರೆ ಸುಲ್ತಾನರೊಬ್ಬರು, ಇಯಜ್‌ಖಾನರು ಮತ್ತೊ ಬ್ಬರು. ಇವರಿಬ್ಬರನ್ನೂ ಉತ್ತೇಜಿಸುವ ಮಹಾ ಶಕ್ತಿಯು ನೀನು. ನಮ್ಮಲ್ಲಿ ಬೇಕಾ ದಷ್ಟು ಧನಕನಕವಿದೆ. ಮೈಸೂರು ರಾಜ್ಯದಲ್ಲಿ ಯುದ್ಧಮಾಡಲು ಲಕ್ಷಾಂತರ ವೀರ

ಪುರುಷರಿದ್ದಾರೆ ದೌಲತ್ ! ನೀನು ಮತ್ತೊಂದು ಮಹಾಯುದ್ಧವನ್ನು ಸಿದ್ಧಗೊಳಿಸು. ಆ ಯುದ್ಧದಲ್ಲಿ ಮೈಸೂರು ಉದ್ಧಾರವಾಗುವುದು ನಿನ್ನ ಹೆಸರು, ಕೀರ್ತಿಗಳು ಸೂರ್ಯ ಚಂದ್ರರಿರುವವರೆಗೆ ಪ್ರಕಾಶಮಾನವಾಗಿರುವುವು ಈಗ ಹೇಳು, ದೌಲತ್ ! ಆತ್ಮ ಹತ್ಯ ಮಾಡಿಕೊಂಡು ಈ ಮಣ್ಣಿನಲ್ಲಿ ಮಾಯವಾಗುವೆಯಾ ? ಆತ್ಮಶಕ್ತಿಯಿಂದ ಮೈಸೂರಿನ ಆಕಾಶದಲ್ಲಿ ಧ್ರುವನಕ್ಷತ್ರವಾಗಿ ಬೆಳಗುವೆಯಾ ?

ದೌಲತ್—ರಾಧೆ, ನೀನು ಹೇಳುವಂತೆ ನಾನು ನಡೆಯುವೆನು ಹೀಗೆ ದಿಕ್ಕು ತೋರದೇ ಕುಳಿತಿರುವುದಂತೂ ನನ್ನಿಂದ ಸಾಧ್ಯವಿಲ್ಲ ನಡೆ, ನಾವಿಬ್ಬರೂ ಸುಲ್ತಾನರ ಸಮುಖಕ್ಕೆ ಹೋಗುವ

ರಾಧೆ—ನಗುತ್ತಾ, ದೌಲತ್ ! ನೀನೂ ನಾನೂ ಸುಲ್ತಾನರವರ ಸಮ್ಮುಖಕ್ಕೆ ಹೋಗಿ ಮಾಡುವುದೇನು ? ಸುಲ್ತಾನನು ಅಪಮಾನ-ದುಃಖಗಳಿಂದ ಪರಿತಪಿಸುತ್ತಿದ್ದಾನೆ ಅಲ್ಲಿಗೆ ಹೋಗಿ ಫಲವಿಲ್ಲ ಹಳೆಯ ನೆನಪುಗಳೆಲ್ಲಾ ಬಂದು ಪುನಃ ವಿರಸವಾಗುತ್ತದ ನಾವು ಇಲ್ಲಿಂದಲೇ ಕಾರ್ಯಾರಂಭ ಮಾಡೋಣ ಮಹಾರಾಷ್ಟ್ರರ ರಾಜಧಾನಿಯಾದ ಪುಣೆಗೆ ಹೋಗೋಣ

ದೌಲತ್—ಆ ರಾಜ್ಯದಲ್ಲಿ ನಾವೇನು ಮಾಡುವುದಿದೆ ?

ರಾಧೆ—ಇದೆ ! ಬಹಳವಿದೆ ನಾವು ಸುಲ್ತಾನರು ಕೊಡಬೇಕಾದ ಒಂದು ಕೋಟಿ ರೂಪಾಯಿಗಳ ಕಂತು ಕಟ್ಟೋಣ ಮೈಸೂರಿನ ಸುಲ್ತಾನರಿಗೂ ಪೇಷ್ವೆಗಳಿಗೂ ಎಂದೆಂದಿಗೂ ಯುದ್ಧವಾಗದಂತಹ ಸಂಧಿಯನ್ನು ಮಾಡೋಣ. ಅದರಿಂದ ಸುಲ್ತಾನರಿಗೆ ಬಹಳ ಬಲಬಂದಂತಾಗುತ್ತದೆ.

ದೌಲತ್—ನಿಜ ! ರಾಧಾರಾಣಿ ! ಆ ಯೋಚನೆಯು ಸರಿಯಾಗಿಯೇ ಇದೆ. ಮೊದಲು ಮಹಾರಾಷ್ಟ್ರರೊಡನೆ ಸಂಧಿಯನ್ನು ಮಾಡಬೇಕು ಆಮೇಲೆ ಹೈದರಾಬಾದಿನವರನ್ನು ಸಮಾಧಾನ ಮಾಡಬೇಕು ಇವೆರಡು ಶತೃಕಾಟವು ತಪ್ಪಿದರೆ, ಇಂಗ್ಲೀಷರು ಮೇಲೆ ಬಿದ್ದು ಬರಲಾರರು. ಅದೇ ಸರಿ ನಾವು ಪುಣೆಗೆ ಹೋಗೋಣ.

ಪುಣೆಗೆ ಹೊರಡುವ ಸಿದ್ಧತೆಯೆಲ್ಲಾ ಆಯಿತು ರಾಧಾರಾಣಿಯು ಗುಪ್ತನಿಧಿಯಿಂದ ಒಂದು ಕೋಟಿ ರೂಪಾಯಿಗಳನ್ನು ಸಿದ್ಧಪಡಿಸಿದಳು ಸಣ್ಣ ಪರಿವಾರದೊಡನೆ ಇಬ್ಬರು ರಾಣಿಯರೂ ಪುಣೆಗೆ ಪ್ರಯಾಣ ಹೊರಟರು ಒಂದು ತಿಂಗಳ ಕಾಲದಲ್ಲಿ ಈ ಮೈಸೂರಿನ ಸ್ವಯಂನಿಯುಕ್ತ ರಾಯಭಾರಿಗಳು ಪುಣೆಯ ರಾಜಧಾನಿಯನ್ನು ಸೇರಿದರು ಪುಣೆಯ ದೊಡ್ಡ ದೊಡ್ಡ ಸರದಾರರಿಗೆ ಈ ನಗರದ ರಾಣಿಯರುಗಳ ವಿಚಾರದಲ್ಲಿ ಬಹಳ ಗೌರವವಿತ್ತು ರಾಣಿಯವರ ಆಗಮನದ ವಾರ್ತೆಯನ್ನು ಕೇಳಿ ಪೇಷ್ವೆ ದರ್ಬಾರಿನವರು ಇವರುಗಳಿಗೆ ರಾಜಯೋಗ್ಯವಾದ ಬಿಡಾರವನ್ನು ಸಿದ್ಧಗೊಳಿ

ಸಿದ್ಧರು ಈ ನಗರದ ರಾಣಿಯರಿಬ್ಬರೂ ತಮ್ಮ ಪರಿವಾರದೊಂದಿಗೆ ಈ ಬಿಡಾರದಲ್ಲಿ ಇಳಿದುಕೊಂಡರು

ಪುಣೆಯಲ್ಲಿ ಹರಿಪಂತನು ಬಲು ಗೌರವಸ್ಥನಾದ ಸರದಾರನು ಪೇಷ್ವೆ ದರಬಾರಿನ ಸರ್ವಾಧಿಕಾರಿಯಾದ ನಾನಾಫಡ್ನವೀಸನ ಬಲಗೈಯಂತೆ. ನಗರದ ರಾಣಿಯರು ಹರಿಪಂತನನ್ನು ಭೇಟಿಮಾಡಲು ಮೊದಲು ಹೇಳಿಕಳುಹಿಸಿದರು ಹರಿಪಂತನು ಬಂದು ರಾಣಿಯವರ ಭೇಟಿ ಮಾಡಿದನು ತಾವು ಶ್ರೀರಂಗಪಟ್ಟಣದ ಸುಲ್ತಾನರವರ ಕಡೆಯವರೆಂದೂ, ಪೇಶ್ವೆಯವರ ದರ್ಬಾರಿನಲ್ಲಿ ಮುಖ್ಯರಾದವರನ್ನೆಲ್ಲಾ ಭೇಟಿ ಮಾಡಲು ಬಂದಿರುವುದಾಗಿಯೂ ತಿಳಿಸಿದರು ಮೂರನೆಯ ಮೈಸೂರು ಯುದ್ಧದ ಮೊದಲನೆಯ ಕಂತು ಒಂದು ಕೋಟಿ ರೂಪಾಯಿಗಳನ್ನು ದರ್ಬಾರಿಗೆ ಒಪ್ಪಿಸಲು ತಂದಿರುವುದಾಗಿಯೂ, ಹೇಳಿದರು ತನ್ನ ಕೈಲಾದ ಸಹಾಯಗಳನ್ನೆಲ್ಲಾ ಮಾಡುವುದಾಗಿ ಒಪ್ಪಿದನು ಮಾರನೆಯ ದಿನವೇ ಪೇಶ್ವೆ ದರ್ಬಾರಿನ ಬೊಕ್ಕಸದವರು ರಾಣಿಯವರ ಬಿಡಾರಕ್ಕೆ ಬಂದು, ಒಂದು ಕೋಟಿ ರೂಪಾಯಿಗಳನ್ನು ಸ್ವೀಕರಿಸಿ ಖಜಾನೆಗೆ ಸಾಗಿಸಿದರು ರಾಣಿಯವರಿಬ್ಬರೂ ಒಬ್ಬೊಬ್ಬರಾಗಿ ಸರದಾರರನ್ನು ಭೇಟಿಮಾಡಿ ಸಂಧಾನ ಮಾಡಲು ಆರಂಭಿಸಿದರು ಈ ಸಮಾಚಾರಗಳೆಲ್ಲಾ ಆಪ್ತರಾದ ಸರದಾರರ ಮುಖಾಂತರ ನಾನಾಫಡ್ನವೀಸನಿಗೆ ತಿಳಿಯಿತು ಅವನಿಗೂ ರಾಣಿಯವರ ಭೇಟಿ ಮಾಡುವ ಕುತೂಹಲವುಂಟಾಯಿತು ಹರಿಪಂತನು ಅತ್ಯಂತ ಆಸಕ್ತಿಯಿಂದ ಈ ಭೇಟಿಯನ್ನು ಅಣಿಮಾಡಿದನು ರಾಣಿಯವರಿಬ್ಬರೂ ನಾನಾಫಡ್ನವೀಸನ ಮನೆಗೆ ಬರುವುದಾಗಿ ಹೇಳಿದರು ರಾಧೆಯೂ ದೌಲತ್ತಳೂ ಹೇಗೆ ಮಾತನಾಡಬೇಕೆಂದು ಪರಸ್ಪರ ಮಾತನಾಡಿಕೊಂಡರು ಮ್ಯಾನಾಗಳಲ್ಲಿ ಫಡ್ನಾವೀಸನ ಮನೆಗೆ ತೆರಳಿದರು ದಿವಾಣಖಾನೆಯಲ್ಲಿ ಲೋಡುದಿಂಬುಗಳನ್ನು ಒರಗಿಕೊಂಡು ಕುಳಿತಿದ್ದನು ರಾಣಿಯವರು ದಿವಾಣಖಾನೆಯನ್ನು ಪ್ರವೇಶಮಾಡುತ್ತಲೇ ನಾನಾಫಡ್ನವೀಸನೆದ್ದು ಮರ್ಯಾದೆಯಿಂದ ಅವರುಗಳಿಗೆ ಸ್ವಾಗತವನ್ನು ನೀಡಿ, ಅವರಿಗಾಗಿ ಸಿದ್ಧಗೊಳಿಸಿದ್ದ ಲೋಡುಗಳಲ್ಲಿ ಕುಳ್ಳಿರಿಸಿದನು. ಆ ರಾಣಿಯರಿಬ್ಬರೂ ತರುಣ ವಯಸ್ಸಿನವರೆಂದೂ, ಪರಮ ಸುಂದರಿಯರೆಂದೂ ಅತುಳೈಶ್ವರ್ಯವತಿಯರೆಂದೂ, ಕೇಳಿದ್ದನು. ಈಗ ಅವರನ್ನು ಪ್ರತ್ಯಕ್ಷವಾಗಿ ಕಾಣುವಾಗ ಅವರಿಬ್ಬರೂ ರಾಜಲಕ್ಷಣ ಸಂಪನ್ನರಾದ ಮಹಾರಾಣಿಯರೆಂದು ಅವನ ಮನಸ್ಸು ಭಾಸವಾಯಿತು ! ಅವರನ್ನು ಆಸನಗಳಲ್ಲಿ ಕುಳ್ಳಿರಿಸಿ ತಾನೂ ಕುಳಿತುಕೊಂಡನು. ಹರಿಪಂತನೂ ನಾನಾನ ಸಮೀಪದಲ್ಲಿಯೇ ಕುಳಿತನು. ಪರಸ್ಪರ ಕುಶಲ ಪ್ರಶ್ನೆಗಳಾದುವು ಅನಂತರ ಮಾತು ಕಥೆಗಳಿಗೆ ಆರಂಭವಾಯಿತು.

ನಾನಾ—ಮಹಾರಾಣಿಯವರೇ ! ನಮ್ಮ ರಾಜಧಾನಿಗೆ ತಾವು ಖುದ್ದಾಗಿ ದಯಮಾಡಿಸಿದ್ದು ನಮಗೆ ಅತ್ಯಂತ ಸಂತೋಷವಾಯಿತು ! ತಾವು ಬಂದ ರಾಜ

ಕಾರಣವನ್ನು ತಿಳಿಸಬಹುದು ಸುಲ್ತಾನರ ಮನೋಭಾವವು ಹೇಗಿದೆ ಎಂಬು ದನ್ನು ತಿಳಿದು ಕೊಳ್ಳಲು ಕುತೂಹಲ ಉಳ್ಳವರಾಗಿದ್ದೇವೆ

ದೌ—ಮಾನ್ಯ ಮಂತ್ರಿಗಳವರೇ! ತಮ್ಮ ರಾಜ್ಯವನ್ನೂ ರಾಜಧಾನಿಯನ್ನೂ, ನೋಡಿ ಬಹಳ ಹರ್ಷವಾಗಿದೆ ಸುಲ್ತಾನರವರು ಖಿನ್ನರಾಗಿದ್ದಾರೆ ನಾವು ತಮಗೂ ಸುಲ್ತಾನರಿಗೂ ದೃಢವಾದ ಸ್ನೇಹ ಬಾಂಧವ್ಯವನ್ನುಂಟುಮಾಡಬೇಕೆಂಬ ಹಾರೈಕೆ ಯಿಂದ ಇಲ್ಲಿಗೆ ಬಂದಿದ್ದೇವೆ ತಮಗೆ ಸಲ್ಲಬೇಕಾದ ಒಂದು ಕೋಟಿ ರೂಪಾಯಿಗಳ ಕಂತನ್ನು ತಂದು ಒಪ್ಪಿಸಿದೇವೆ

ನಾನಾ—ಬಹಳ ಸಂತೋಷ! ಸುಲ್ತಾನರವರು ಅಸಮ ಸಾಹಸಿಗಳೆಂದೂ, ಮಹಾ ಪರಾಕ್ರಮಿಶಾಲಿಗಳೆಂದು, ನಾವು ಒಪ್ಪಿದೇವೆ ನಮಗೆ ಅವರ ವಿಷಯದಲ್ಲಿ ಮೆಚ್ಚಿಕೆ ಇದೆ ಅವರಿಗೂ ಕುಂಪಣಿಯವರಿಗೂ ಹೇಗಿದೆ ?

ದೌ—ಸುಲ್ತಾನರವರ ಮತ್ತು ಕುಂಪಣಿಯವರ ಭಾಂಧವ್ಯವು ಒಂದೇ ವಿಧ ನಾಗಿದೆ ಅದನ್ನು ತಾವು ಸುಲಭವಾಗಿ ಊಹಿಸಬಹುದು. ಸುಲ್ತಾನರವರು ತಮ್ಮ ಸ್ನೇಹ ಭದ್ರವಾದರೆ ಎಲ್ಲವೂ ಸರಿಹೋಗುತ್ತದೆಂದು ಭಾವಿಸುತ್ತಾರೆ

ನಾನಾ—ರಾಣಿಯವರೇ! ನಮಗೆ ಮೈಸೂರನ್ನು ನುಂಗಿಹಾಕಬೇಕೆಂಬ ಅಭಿ ಲಾಷೆಯಿಲ್ಲ ಇಂಗ್ಲೀಷರಿಗೆ ಬೆಂಗಳೂರನ್ನು ಹಂಚಿಕೊಡಬೇಕೆಂಬ ಬಯಕೆಯೂ ಇಲ್ಲ ಆದರೆ ಪ್ರಕೃತ ಸ್ಥಿತಿಯಲ್ಲಿ ಸುಲ್ತಾನರಿಗೂ ನಮಗೂ ನಿಜವಾದ ಸ್ನೇಹ ಬಂಧವು ಬೆಳೆಯುವುದು ಅಸಂಭವವೆಂದು ತೋರುತ್ತದೆ

ದೌ—ಏಕೆ! ಮಂತ್ರಿಗಳೇ! ತಮ್ಮಂಥಾ ರಾಜನೀತಿ ವಿಶಾರದರು ಈ ಹಿಂದೂ ಸ್ಥಾನದಲ್ಲ ಬೇರೊಬ್ಬರಿಲ್ಲವೆಂದು ಜಗದ್ವಿಖ್ಯಾತವಾಗಿದೆ ತಮಗೆ ಹೊಳೆಯದಿರುವುದು ಆಶ್ಚರ್ಯವಾಗಿದೆ ಮೈಸೂರಿನವರೂ, ನೀವೂ ವೈರವನ್ನು ಬೆಳೆಸುತ್ತಿದ್ದರೆ ಕುಂಪಣಿ ಯವರಿಗೆ ರಾಜ್ಯಕಟ್ಟಲು ಅನುಕೂಲವಲ್ಲವೇ ?

ನಾನಾ—(ಅರ್ಥಗರ್ಭಿತವಾದ ನಗುವನ್ನು ನಕ್ಕು) ರಾಣಿಯವರೇ! ತಾವು ಮಹಮ್ಮದೀಯರು, ನಿಮಗೆ ಅರ್ಥವಾಗುವುದಿಲ್ಲ ಮಹಾರಾಷ್ಟ್ರ ಹಿಂದೂ ರಾಜ್ಯ! ನಮಗೆ ರಾಜ್ಯವಾಗಲೀ, ಐಶ್ವರ್ಯವಾಗಲಿ ಮುಖ್ಯವಲ್ಲ ಹಿಂದೂ ರಾಜ್ಯಗಳಲ್ಲಿ ಮುಸಲ್ಮಾನರು ರಾಜರಾದರೆ ನಮ್ಮ ಅಸ್ತಿಭಾರವೇ ಒಡದು ಹೋದಂತೆ, ಕುಂಪಣಿ ಯವರು ಮತದ ಗೋಜಿಗೆ ಬರುವುದಿಲ್ಲ!

ದೌ—ನಿಮ್ಮ ಮಾತು ನನಗೆ ಅರ್ಥವಾಗುತ್ತದೆ. ಮೈಸೂರಿಗೆ ಸುಲ್ತಾನರನ್ನು ಬಿಟ್ಟರೆ ಬೇರೆ ರಾಜರಿಲ್ಲ ಅದು ದೇವರ ಇಚ್ಛೆ.

ಹರಿಪಂತ್—ರಾಣಿಯವರೇ! ಈ ಸಮಸ್ಯೆಯು ಅಗಾಧವಾದುದೆಂದು ತಿಳಿದೇ ಮಂತ್ರಿಗಳು ಸುಲ್ತಾನರ ಸ್ನೇಹ ಶಾಶ್ವತವಾಗಿರಲಾರದೆಂದು ಮೊದಲೇ ಹೇಳಿದರು.

ಕೇಳಿರಿ! ಮೈಸೂರು ರಾಜ್ಯವು ಮೈಸೂರರಸರದು ಹೈದರಾಲಿಯವರು ಸೇನಾನಾಯಕರಾಗಿದ್ದು ರಾಜ್ಯವನ್ನು ವಿಸ್ತರಿಸಿದರು. ರಾಜ್ಯಭಾರವನ್ನೇ ತಮ್ಮ ಕೈಲಿಟ್ಟುಕೊಂಡು ನಡೆಸಿದರು ಆದರೆ ನಿಮ್ಮ ಸುಲ್ತಾನರಂತೆ ನಾವೇ ರಾಜರೆಂದು ಹೇಳಿಕೊಂಡರೇನು ? ಅದನ್ನು ಸ್ಥಾಪಿಸಲು ಹೋರಾಡಿದರೇನು ?

ನಾನಾ—ರಾಣಿಯವರೇ ! ನಿಮ್ಮ ಸುಲ್ತಾನರು ಹಿಂದೂ ರಾಜ್ಯದಲ್ಲಿ ಹಿಂದೂ ರಾಜರನ್ನು ಪಟ್ಟಕಟ್ಟಲಿ ಅವರು ಸರ್ವಾಧಿಕಾರವನ್ನು ನಿರ್ವಹಿಸಲಿ ನಾನಾಗಿ ಬಡ ಬ್ರಾಹ್ಮಣನಂತೆ ಮೈಸೂರಿಗೆ ಬಂದು ಸುಲ್ತಾನರ ಸ್ನೇಹವನ್ನು ಮಾಡುತ್ತೇನೆ ಸುಲ್ತಾನರಂಥಾ ಮಹಾ ಪರಾಕ್ರಮಿಗಳೊಡನೆ ಸ್ನೇಹಮಾಡುವುದೆಂದರೆ ಹೆಮ್ಮೆಯ ಮಾತೇ ಸರಿ !

ದೌ—ತಾವು ಹೇಳುವುದು ನ್ಯಾಯವಾಗಿದೆ ಆದರೆ ಅದು ಇಂದು ಸಾಧ್ಯವಾಗದ ಮಾತು ! ಸುಲ್ತಾನರ ಪೇಶ್ವೆಯವರ ಈ ವೈಮನಸ್ಯದಿಂದ ಇಂಗ್ಲೀಷರು ಸ್ಥಿರವಾಗಿ ರಾಜ್ಯವನ್ನು ಕಟ್ಟುತ್ತಾರೆ

ನಾನಾ—ಮಹಾರಾಷ್ಟ್ರಕ್ಕೆ ಆ ಭಯವೆಂದಿಗೂ ಇಲ್ಲ ! ನಾವು ಉತ್ತರದಲ್ಲಿ ಡಿಲ್ಲಿಯವರೆಗೆ ಮುಂದೆ ನುಗ್ಗಿದ್ದೇವೆ ಇನ್ನು ಕೆಲವು ಕಾಲದಲ್ಲಿ ನಮ್ಮ ಕಾವಿಯ ಧ್ವಜವು ಡೆಲ್ಲಿಯ ಕೋಟೆಯ ಮೇಲೆ ವಿರಾಜಿಸುತ್ತದೆ ಬಂಗಾಳದಲ್ಲಿಯೂ, ಮದರಾಸಿನಲ್ಲಿಯೂ ಕುಂಪಣಿಯವರು ತಮ್ಮ ರಾಜ್ಯವನ್ನು ಕಟ್ಟಿಕೊಂಡಿದ್ದಾರೆ ಹಿಂದೂಸ್ಥಾನದಲ್ಲಿ ಹಿಂದೂ ಚಕ್ರಾಧಿಪತ್ಯವು ಸ್ಥಾಪಿತವಾದಮೇಲೆ ಪರದೇಶೀಯರಾದ ಕುಂಪಣಿಯವರು ರಾಜ್ಯವನ್ನು ಸ್ಥಾಪಿಸಲಾದೀತೆ ?

ಒಳ್ಳೆಯದು ! ಮಹಾಮಂತ್ರಿಗಳೇ ! ನಾನು ತಮ್ಮಂಥಾ ರಾಜನೀತಿ ನಿಪುಣರಲ್ಲಿ ವಾದಿಸುವುದಿಲ್ಲ ತಾವು ಯೋಚನೆ ಮಾಡಿರಿ ! ನಾವು ಸುಲ್ತಾನರ ಪರವಾಗಿ ಸ್ನೇಹಭಿಕ್ಷೆಯನ್ನು ಬೇಡಲು ಬಂದಿದೇವೆ

ತಾವು ಏನು ಹೇಳುತ್ತೀರೋ ಹೇಳಿರಿ ! ಮಹಾರಾಣಿಯವರೇ ! ತಾವು ಶುದ್ಧ ಮುಸಲ್ಮಾನ ರಾಣಿಯವರು. ಇವರು ಶುದ್ಧ ಹಿಂದೂರಾಣಿಯವರು. ತಮ್ಮಿಬ್ಬರ ಈ ದೃಢಸ್ನೇಹಕ್ಕೆ ಕಾರಣವೇನು ? ಮತ್ತು ತಮಗೂ ಸುಲ್ತಾನರವರಿಗೂ ಏನು ಸಂಬಂಧ? ತಮಗೆ ಮನಸ್ಸಿಗೆ ಆಯಾಸವಿಲ್ಲದಿದ್ದರೆ ತಿಳಿಸಿದರೆ ಬಹಳ ಸಂತೋಷ !

ಮಂತ್ರಿವರ್ಯರೇ ! ನಾನು ಶುದ್ಧ ಮುಸಲ್ಮಾನಳೇನೋ ಹೌದು ! ಆದರೆ ನಾನು ರಾಣಿಯಲ್ಲ ! ಯಾವ ರಾಜಕುಲದಲ್ಲಿಯೂ ಹುಟ್ಟಿದವಳಲ್ಲ, ಅನಾಥ ಬಾಲೆಯನ್ನು ತಂದು ಹೈದರಾಲಿಯವರು ಕಾಪಾಡಿದರು ನಾನು ಆ ದೊಡ್ಡ ನವಾಬರ ಪಾಲಿತ ಪುತ್ರಿ ! ಈ ನನ್ನ ಜೊತೆಯಲ್ಲಿ ಬಂದಿರುವವರು ನಿಜವಾದ ರಾಣಿಯವರು. ನಗರದ ರಾಜ್ಯದಲ್ಲಿ ದೊಡ್ಡ ಪಾಳಯಗಾರರ ಮಗಳು ! ಇವರು ನಿಜವಾಗಿಯೂ ನಗರದ

ರಾಜ್ಯದ ಮಹಾರಾಣಿಯವರು ಇವರ ಆಶ್ರಯದಲ್ಲಿ ನಾನಿದ್ದೇನೆ. ಇವರ ಸಹವಾಸ ದಿಂದ ನಾನೂ ರಾಣಿಯಾಗಿದೇನೆ, ಅಷ್ಟೇ !

ನಾನಾ—ಬಹಳ ಸಂತೋಷ ! ದೇವಿಯವರೇ ! ತಾವು ರಾಜಕುಲದಲ್ಲಿ ಹುಟ್ಟಿದ್ದರೇನು ? ಬಡವರ ಹೊಟ್ಟೆಯಲ್ಲಿ ಜನ್ಮವೆತ್ತಿದ್ದರೇನು ? ರಾಜಲಕ್ಷಣಗಳಿಂದ ವಿರಾಜಿಸುತ್ತಿದ್ದೀರಿ ! ರಾಜವೈಭವಗಳೆಲ್ಲಾ ತಮಗಿದೆ. ನಗರದ ರಾಜ್ಯದ ರಾಜಕೀಯವೆಲ್ಲಾ ತಮ್ಮದೇ ಎಂದು ಕೇಳಿದ್ದೇವೆ

ರಾಣಿಯವರೇ ! ಮಹಾ ಪರಾಕ್ರಮಶಾಲಿಗಳಾದ ಇಯಜ್‌ಖಾನರವರೇಕೆ ರಾಜ್ಯ ಪರಿತ್ಯಾಗ ಮಾಡಿದರು ?

ಸುಲ್ತಾನರೊಡನೆ ಯುದ್ಧ ಮಾಡಬಾರದೆಂದು ರಾಜ್ಯ ಪರಿತ್ಯಾಗ ಮಾಡಿದರು.

ಅವರವರಿಗೆ ಭಿನ್ನಾಭಿಪ್ರಾಯವೇಕೆ ಬಂತು ? ಯುದ್ಧದ ಪ್ರಮೇಯವೇನು?

ತಮಗೂ ಅವರಿಗೂ ಏಕಾಭಿಸಂಧಿ ಇದೆ ಅವರೂ—ಟಿಪ್ಪೂಸುಲ್ತಾನರವರು ಸಿಂಹಾಸನವನ್ನೇರಿದ್ದು ಸರಿಯಲ್ಲವೆಂದು ಹೇಳುತ್ತಾರೆ ಮೈಸೂರು ಹಿಂದುಗಳ ರಾಜ್ಯವೆಂದು ಹೇಳುತ್ತಾರೆ.

ನಾನಾ—ನಾವೂ ಅದರ ವಿಷಯದಲ್ಲಿ ಬಹಳವಾಗಿ ಕೇಳಿದ್ದೇವೆ ನಮಗೆ ಅವರ ಭೇಟಿಯಾಗಿದ್ದರೆ ಎಷ್ಟೋ ಚೆನ್ನಾಗಿತ್ತು

ದೌ—ದೇವರ ಇಚ್ಛೆಯಿಂದ ನೀವೂ, ಇಯಜ್‌ಖಾನರವರೂ ಒಂದು ದಿನ ಸಂಧಿಸುವಿರಿ

ಮಂತ್ರಿಗಳೇ ! ನಮಗೆ ಅಪ್ಪಣೆ ಕೊಡಿರಿ ! ತಮ್ಮನ್ನು ಪ್ರತ್ಯಕ್ಷ ನೋಡಿದ್ದು ಬಹಳ ಸಂತೋಷ ! ನಾವು ಬಂದ ಕಾರ್ಯವೇನೋ ಫಲಿಸಲಿಲ್ಲ, ಅದು ದೇವರ ಇಚ್ಛೆ !

ರಾಣಿಯವರೇ ! ತಮ್ಮ ರಾಯಭಾರವು ಫಲಿಸಿದೆ ಎಂದು ನಾನು ಹೇಳುತ್ತೇನೆ. ನಮ್ಮ ದರಬಾರಿನಲ್ಲಿ ಎಲ್ಲರೂ ತಮ್ಮಗಳಲ್ಲಿ ಬಹಳ ಗೌರವವುಳ್ಳವರಾಗಿದ್ದಾರೆ. ತಮ್ಮ ಸುಲ್ತಾನರಲ್ಲಿ ನಮಗೆ ನಿಜವಾಗಿಯೂ ಬಹಳ ಗೌರವಭಾವವಿದೆಯೆಂಬುದನ್ನು ತಾವು ಪ್ರತ್ಯಕ್ಷ ಅರಿತಿದ್ದೀರಿ. ಅಷ್ಟೇ ಅಲ್ಲ ನಾವು ಸರ್ವಥಾ ಕುಂಪಣಿಯವರ ಸ್ನೇಹಿತರಲ್ಲ. ದೇವರ ಇಷ್ಟವಿದ್ದರೆ ನಾವು ಎಂದೆಂದಿಗೂ ಸುಲ್ತಾನರ ಮೇಲೆ ಯುದ್ಧ ಮಾಡುವಂಥಾ ಪ್ರಮೇಯವು ಒದಗಲಾರದೆಂದು ಭರವಸೆಯಿಂದ ಹೇಳಬಲ್ಲೆ.

ಮಂತ್ರಿಗಳವರೇ ! ನಮ್ಮ ಕೋರಿಕೆಯನ್ನು ನಾನು ಸ್ಪಷ್ಟವಾಗಿ ಹೇಳುತ್ತೇನೆ. ತಾವು ಕುಂಪಣಿಯವರ ಮೇಲೆ ಯುದ್ಧವನ್ನು ಹೂಡಿರಿ ತಮ್ಮ ಕಡೆ ಯುದ್ಧ ಮಾಡಲು ಸುಲ್ತಾನರವರನ್ನೂ, ಇಯಜ್‌ಖಾನರನ್ನೂ ನಾವು ತಂದು ರಣಕ್ಷೇತ್ರದಲ್ಲಿ

ನಿಲ್ಲಿಸುತ್ತೀವೆ. ಇಲ್ಲವೇ ! ಸುಲ್ತಾನರು ಇಂಗ್ಲಿಷರ ಮೇಲೆ ಪ್ರಚಂಡ ಯುದ್ಧ ಹೂಡು ತ್ತಾರೆ. ಮಹಾರಾಷ್ಟ್ರ ವೀರರೆಲ್ಲರೂ ನಮಗೆ ಬೆಂಬಲವಾಗಿ ನಿಲ್ಲಬೇಕು

ರಾಣಿಯವರೇ ! ತಾವು ರಾಜನೀತಿಜ್ಞರು ಅಂಥಾ ಪ್ರಮೇಯವು ಈಗ ಪ್ರಾಪ್ತ ವಾಗಿಲ್ಲ ! ಹಾಗೆ ಕಾಲಕರ್ಮ ಸಂಯೋಗವು ಬಂದಾಗ ಈಶ್ವರನ ಇಚ್ಛೆಯು ಹೇಗಿ ದೆಯೋ ನೋಡೋಣ !

ರಾಣಿಯವರಿಬ್ಬರೂ ಬೀಳ್ಕೊಂಡು ತಮ್ಮ ಬಿಡಾರಕ್ಕೆ ತೆರಳಿದರು ನಾನಾಫಡ್ನ ವೀಸನು ರಾಣಿಯ ಸಾಮರ್ಥ್ಯವನ್ನು ನೋಡಿ ಬೆರಗಾಗಿ ಹೋದನು ಇಂತಹ ರಾಣಿ ಯನ್ನು ನಾನು ಎಲ್ಲಿಯೂ ನೋಡಲೇ ಇಲ್ಲ ದೌಲತ್‌ರವರ ಮಾತಿಗೆ ಬೆರಗಾಗಿ ಇಂದೇ ಇಂಗ್ಲಿಷರ ಮೇಲೆ ಯುದ್ಧ ಹೂಡಬೇಕೆಂದು ನನ್ನ ಮನಸ್ಸು ತಲ್ಲಣಿಸಿತು ಇನ್ನು ಸಾಮಾನ್ಯ ಮನುಷ್ಯರ ಪಾಡೇನು ಎಂದುಕೊಂಡನು ರಾಣಿಯವರಿಬ್ಬರೂ ಎಲ್ಲ ಸರದಾರರ ಅಪ್ಪಣೆಯನ್ನು ಪಡೆದು ನಗರಕ್ಕೆ ಹಿಂತಿರುಗಿದರು

ಹೈದರಾಬಾದಿಗೆ ಸಲ್ಲಬೇಕಾದ ಒಂದು ಕೋಟಿ ರೂಪಾಯಿಗಳ ಕಂತನ್ನು ಹೈದ ರಾಬಾದಿಗೆ ತಲಪಿಸಿದ್ದಾಯಿತು ರಾಧಾರಾಣಿಯವರು ನಗರದ ಶೀಮೆಯಲ್ಲಿರುವ ಪಾಳಯಗಾರರನ್ನೆಲ್ಲಾ ಒಬ್ಬೊಬ್ಬರಾಗಿ ಸಂಧಿಸಿ ಬಲವಾದ ಸೈನ್ಯಗಳನ್ನು ಕಟ್ಟುವಂತೆ ಪ್ರೇರೇಪಿಸಿದರು ಎಲ್ಲೆಲ್ಲಿಯೂ ಸೈನ್ಯ ಸನ್ನಾಹಗಳು ನಡೆಯಲಾರಂಭಿಸಿದುವು ಈ ಸಮಾಚಾರಗಳೆಲ್ಲಾ ಸುಲ್ತಾನರವರಿಗೆ ವರದಿಯಾಗುತ್ತಿತ್ತ ಮರಾಟರಿಗೂ, ಹೈದರಾ ಬಾದಿನವರಿಗೂ ಸಲ್ಲಬೇಕಾದ ಕಂತುಗಳನ್ನು ರಾಧೆಯವರು ಪಾವತಿ ಮಾಡಿದ್ದರಿಂದ ಸುಲ್ತಾನರಿಗೆ ವರದಿಯಾಗುತ್ತಲೇ ಅವಳು ಅಪ್ರತಿಭರಾದರು ಈ ರಾಧೆಯವರಿಗೆ ತನ್ನ ಕೃತಜ್ಞತೆಯನ್ನು ಹೇಗೆ ತಿಳಿಸಬೇಕೆಂಬುದು ಸುಲ್ತಾನನಿಗೆ ತೋರದಾಯಿತು

ಸುಲ್ತಾನನು ಚಾರರ ಮುಖಾಂತರ ರಾಧಾರಾಣಿಯವರಿಗೂ ದೌಲತ್‌ರಾಣಿ ಯವರಿಗೂ ರಾಜಧಾನಿಗೆ ಬರಬೇಕೆಂದು ರಾಯಸಗಳನ್ನು ಬರೆದು ಕಳಿಸಿದನು ರಾಣಿ ಯವರಿಬ್ಬರೂ ತಾವಾಗಿಯೇ ಶ್ರೀರಂಗಪಟ್ಟಣಕ್ಕೆ ಹೋಗಬೇಕೆಂದು ನಿಶ್ಚಯಿಸಿದರು ಸುಲ್ತಾನರ ಪ್ರಾರ್ಥನೆಯು ಬಂದ ಮೇಲಂತೂ ತ್ವರಿತವಾಗಿ ರಾಣಿಯವರಿಬ್ಬರೂ ರಾಜ ಧಾನಿಗೆ ಪ್ರಯಾಣ ಮಾಡಿದರು ರಾಣಿಯರು ಎರಡು ಕೋಟಿ ರೂಪಾಯಿಗಳ ಸ್ವರ್ಣವರಹಾಗಳನ್ನು ತಮ್ಮ ಜೊತೆಯಲ್ಲಿ ತೆಗೆಸಿಕೊಂಡು ಹೋದರು ದರಿಯಾ ದೌಲತ್‌ನಲ್ಲಿ ಇವರ ಬಿಡಾರವು ಸಜ್ಜುಗೊಳಿಸಲ್ಪಟ್ಟಿತ್ತು

ರಾಣಿಯವರು ರಾಜಧಾನಿಯನ್ನು ತಲಪಿದ ದಿನವೇ, ಸುಲ್ತಾನರವರು ಬಂದು ಭೇಟಿಮಾಡಿದರು ಸುಲ್ತಾನರವರು ಕಳೆಗುಂದಿದವರಾಗಿದ್ದರು. ಅಂತಹ ನಿರ್ವಿಣ್ಣಾ ವಸ್ಥೆಯಲ್ಲಿದ್ದ ಸುಲ್ತಾನರವರು ಗಾಂಭೀರ್ಯದಿಂದ ಮರಾಟರಿಗೂ ನೈಜಾಮರಿಗೂ ಕಂತು ಗಳನ್ನು ತಲಪಿಸಿದ್ದಕ್ಕೋಸ್ಕರ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ರಾಣಿಯವರು

ತಾವುಗಳು ಪುಣೆಗೆ ಹೋಗಿದ್ದ ಕಥೆಯನ್ನೆಲ್ಲಾ ಸುಲ್ತಾನರಿಗೆ ವಿವರವಾಗಿ ತಿಳಿಸಿದರು. ನಾನಾಫಡ್ನಾವೀಸನು ಬಹಳ ಘಟ್ಟಿಗನೆಂದೂ ರಾಜನೀತಿ ನೈಪುಣ್ಯ ಉಳ್ಳವನೆಂದೂ ಹೂಗಳಿದರು ಫಡ್ನಾವೀಸನು ಅಂತಃ ಇಂಗ್ಲಿಷರಿಗೆ ಪರಮವಿರೋಧಿಯೆಂದೂ, ಮತ್ತೊಂದು ಪ್ರಯತ್ನ ಮಾಡಿದರ ಫಡ್ನಾವೀಸನನ್ನು ಯುದ್ಧಕ್ಕೆ ಎತ್ತಿ ಕಟ್ಟಬಹು ದೆಂದೂ ಹೇಳಿದರು. ಸುಲ್ತಾನನು ತಿರಸ್ಕಾರ ಪೂರ್ಣವಾದ ನಗುವನ್ನು ನಕ್ಕು ರಾಣಿ ಯವರೇ! ಕುಂಪಣಿಯವರ ರಾಜ್ಯವು ಹಿಂದೂಸ್ಥಾನದಲ್ಲಿ ನೆಲೆನಿಲ್ಲದು. ಹಿಂದುಗಳ ರಾಜ್ಯ, ಸುಲ್ತಾನೀರಾಜ್ಯ ಇವೆರಡೇ ಈಗ ಹಿಂದೂಸ್ಥಾನದಲ್ಲಿ ಶಾಶ್ವತವಾಗಿ ಸ್ಥಾಪನೆ ಯಾಗುವುವು. ಇವೆರಡಕ್ಕೂ ಘರ್ಷಣೆಯು ತಪ್ಪಿದ್ದೇ ಅಲ್ಲ? ಯಾವುದಾದರೂ ಒಂದು ರಾಜ್ಯವು ಮಾತ್ರ ನಿಲ್ಲಬಲ್ಲುದು. ನಾವು ಪೇಷ್ವೆಗಳನ್ನು ಮಟ್ಟ ಹಾಕುತ್ತೇ ವೆಂದು ಅವರಿಗೆ ಭಯ ಆದ್ದರಿಂದಲೇ ಅವರು ಇಂಗ್ಲೀಷರ ಬೆಂಬಲವನ್ನು ಯಾವಾ ಗಲೂ ಕೋರುತ್ತಾರೆ ಎಂದು ಹೇಳಿದನು

ಸುಲ್ತಾನನು ಪ್ರತಿದಿನವೂ ರಾಣಿಯವರ ಭೇಟಿಯನ್ನು ಮಾಡುತ್ತಿದ್ದನು. ರಾಣಿಯವರ ಸಾನ್ನಿಧ್ಯದಿಂದ ಸುಲ್ತಾನನು ದಿನದಿನವೂ ಹರ್ಷಚಿತ್ತನಾಗುತ್ತ ಬಂದನು ರಾಜಕೀಯದಲ್ಲಿ ಆಸಕ್ತಿಯು ಹೆಚ್ಚಾಗುತ್ತ ಬಂದಿತು ಸುಲ್ತಾನನು ಬಹಳ ಅಭಿ ಮಾನಿ ಒಂದು ಬಾರಿಯಾದರೂ ತನ್ನ ಮಕ್ಕಳನ್ನು ಇಂಗ್ಲೀಷರ ವಶಕ್ಕೆ ಒಪ್ಪಿಸಿ ರುವ ವಿಚಾರವನ್ನೇ ರಾಣಿಯವರೊಡನೆ ಮಾತನಾಡಲಿಲ್ಲ ಆದರೂ ಇಂಗ್ಲೀಷ್ ಅಧಿ ಕಾರಿಗಳಿಂದ ಅವರಿಗೆ ಸಲ್ಲಬೇಕಾದ ಒಂದು ಕೋಟಿ ರೂಪಾಯಿಗಳ ಕಂತಿನ ವಿಚಾರ ದಲ್ಲಿ ತಗಾದೆಯ ಪತ್ರಗಳು ಬರುತ್ತಲೇ ಇದ್ದುವು ಲಾರ್ಡ್ ಕಾರ್ನವಾಲೀಸನು ಆ ಅಂಶವನ್ನು ಉಲ್ಲೇಖಿಸಿ ಅನೇಕ ಪತ್ರಗಳನ್ನು ಬರೆದಿದ್ದನು ಆ ಕಾಗದಕಳಲ್ಲೆಲ್ಲಾ ಸುಲ್ತಾನರಲ್ಲಿ ಬಹಳ ವಿಶ್ವಾಸ ಗೌರವಗಳನ್ನು ವ್ಯಕ್ತಪಡಿಸಿದ್ದನು

ಸುಲ್ತಾನರು ಆ ಹಣವನ್ನು ಪಾವತೀ ಮಾಡದೇ ಇದ್ದಾಗ್ಯೂ ಅವರ ಕುಮಾ ರರುಗಳನ್ನು ಶ್ರೀರಂಗಪಟ್ಟಣಕ್ಕೆ ಕಳುಹಿಸಬಿಡಬೇಕೆಂದು ಕಂಪನಿ ಸರ್ಕಾರಕ್ಕೆ ಅನೇಕ ಬಾರಿ ಕಾಗದಗಳನ್ನು ಬರೆದಿದ್ದನು ಕಾರ್ನವಾಲೀಸನು ಇಂಗ್ಲೆಂಡಿಗೆ ಹೊರಟುಹೋಗಿ ಬೇರೊಬ್ಬ ಅಧಿಕಾರಿಯು ಬರುವುದೆಂದು ಗೊತ್ತಾಗಿ ಹೋಗಿದ್ದಿತು ಆಗ ಆತನು ಸುಲ್ತಾನರಿಗೆ ಒಂದು ಪತ್ರವನ್ನು ಬರೆಸಿದನು ತಾನು ಕ್ಷಿಪ್ರದಲ್ಲಿಯೇ ಇಂಗ್ಲೆಂಡಿಗೆ ಹೊರಟು ಹೋಗುವುದಾಗಿಯೂ, ಮುಂದೆ ಬರುವ ಅಧಿಕಾರಿಯು ಸುಲ್ತಾನರೊಡನೆ ಬಹಳ ಸೌಜನ್ಯಭಾವದಿಂದ ನಡೆದುಕೊಳ್ಳುತ್ತಾರೆಂದೂ, ಸುಲ್ತಾನರ ಕುಮಾರರನ್ನು ತಾನೇ ಕರೆತಂದು ಶ್ರೀರಂಗಪಟ್ಟಣಕ್ಕೆ ಬಿಟ್ಟುಬರಬೇಕೆಂದು ತನಗೆ ಬಹಳ ಆಶೆ ಯಿತ್ತೆಂದೂ, ಅದು ಸಾಧ್ಯವಾಗದ್ದರಿಂದ ತಾನು ಖಿನ್ನನಾಗಿ ಇಂಗ್ಲೆಂಡಿಗೆ ಹೊರಟು ಹೋಗುವುದಾಗಿಯೂ, ಮಕ್ಕಳು ಬಂದು ಸುಖವಾಗಿ ರಾಜಧಾನಿಗೆ ತಲಪಿದ್ದ ಕಣ್ಣು

ಸುಲ್ತಾನರವರ ಕ್ಷೇಮಲಾಭಗಳಿಗೂ ತನಗೆ ಇಂಗ್ಲೆಂಡಿಗೆ ಪತ್ರ ಬರೆಸಬೇಕೆಂದೂ ಬರೆದಿದ್ದನು

ಈ ಪತ್ರದ ಸಮಾಚಾರವು ರಾಣಿಯವರಿಗೆ ತಿಳಿಯಿತು ದೌಲತ್ ರಾಣಿಯವರು ಸುಲ್ತಾನರನ್ನು ಕಂಡು ತಾವು ಒಂದು ಕೋಟಿ ರೂಪಾಯಿಗಳನ್ನು ತಂದಿರುವುದಾಗಿಯೂ, ಅದನ್ನು ಕಂಪ್ಪನಿಯವರಿಗೆ ಕಳುಹಿಸಬಿಡಬೇಕೆಂದೂ ಪ್ರಾರ್ಥಿಸಿದರು ಸುಲ್ತಾನರು ಆ ಹಣವನ್ನು ಮದರಾಸಿಗೆ ತಲಪಿಸಿದರು ಇಂಗ್ಲೀಷ್ ಅಧಿಕಾರಿಗಳು ಸರಿಯಾದ ಏರ್ಪಾಡುಗಳನ್ನು ಮಾಡಿ ಸುಲ್ತಾನರವರ ಇಬ್ಬರು ಕುಮಾರರುಗಳನ್ನು ರಾಜಧಾನಿಗೆ ಕಳುಹಿಸಿದರು

ಸುಲ್ತಾನರ ಕುಮಾರರು ಶ್ರೀರಂಗಪಟ್ಟಣಕ್ಕೆ ಬಂದುದು, ರಾಜಧಾನಿಯೆಲ್ಲವೂ ಬೆಳಕಾದಂತಾಯಿತು ಮಂತ್ರಿಗಳು, ಸರದಾರರು ಎಲ್ಲರ ಮುಖಗಳಲ್ಲಿಯೂ ಹೊಸ ಕಳೆ ಇಂಗ್ಲೀಷ್ ಅಧಿಕಾರಿಗಳು ಕುಮಾರರನ್ನು ಸುಲ್ತಾನರ ಸಮ್ಮುಖಕ್ಕೆ ಕರೆದುಕೊಂಡು ಹೋಗಿ ಒಪ್ಪಿಸಿದರು ಸುಲ್ತಾನರು ಆ ಅಧಿಕಾರಿಗಳನ್ನು ಬಹಳ ಗೌರವಪಡಿಸಿದರು ಕುಮಾರರನ್ನು ಹಸನ್ಮುಖದಿಂದ ನೋಡಿ ವಿಶ್ವಾಸದಿಂದ ತಲೆ ಸವರಿದರು ಅನಂತರ ಅವರನ್ನು ದರಿಯಾದೌಲತ್ತಿಗೆ ಕಳುಹಿಸಿದರು ರಾಣಿಯರಿಬ್ಬರೂ ಕುಮಾರರನ್ನು ಆಲಂಗಿಸಿ ಮುದ್ದಾಡಿದರು ಕಳೆದುಹೋಗಿದ್ದ ಮೈಸೂರಿನ ಕೀರ್ತಿಯು ಪುನಃ ಬಂದಂತೆ ಅವರ ಹೃದಯಗಳು ಉಬ್ಬಿ ಆನಂದಪಟ್ಟರು

ದೌಲತ್‌ರಾಣಿಯವರು ಸುಲ್ತಾನರ ಸಮಯವನ್ನು ನೋಡಿ, ಅವರನ್ನು ಯುದ್ಧಕ್ಕೆ ಪ್ರೇರೇಪಿಸಲು ಆರಂಭಿಸಿದರು ಸೈನ್ಯವನ್ನು ಕಟ್ಟುವುದಕ್ಕಾಗಿ ಮೈಸೂರು ಬೊಕ್ಕಸಕ್ಕೆ ಮತ್ತೊಂದು ಕೋಟಿ ರೂಪಾಯಿಗಳನ್ನು ಕೊಡುವುದಾಗಿ ವಾಗ್ದಾನವಿತ್ತರು. ಯುದ್ಧದ ಸಿದ್ಧತೆಗಳೆಲ್ಲಾ ಒಂದರಮೇಲೊಂದರಂತೆ ಆರಂಭವಾದವು. ಎಲ್ಲ ಸರಹದ್ದುಗಳಲ್ಲಿಯೂ ದೊಡ್ಡದೊಡ್ಡ ಸೈನ್ಯದ ಠಾಣ್ಯಗಳು ಸ್ಥಾಪಿಸಲ್ಪಟ್ಟವು ಕಾರ್ನ್‌ವಾಲೀಸನು ಹೊರಟುಹೋಗಿದ್ದನು ಹೊಸಇಂಗ್ಲೀಷ್ ಅಧಿಕಾರಿಗಳು ಬಂದಿದ್ದರು ಇಂಗ್ಲೀಷರ ಮೇಲೆ ಯುದ್ಧಕ್ಕೆ ನೆಪವನ್ನು ತೆಗೆಯುವುದೇನೂ ಕಷ್ಟವಾಗಿರಲಿಲ್ಲ, ಅಲ್ಲಲ್ಲಿ ಸರಹದ್ದುಗಳಲ್ಲಿ ಮೈಸೂರು ಅಧಿಕಾರಿಗಳು ಇಂಗ್ಲೀಷರ ವಶದಲ್ಲಿದ್ದ ರಾಜ್ಯದ ಮೇಲೆ ನುಗ್ಗಿ ಲೂಟಿಗಳನ್ನು ಮಾಡಲಾರಂಭಿಸಿದರು ಇಂಗ್ಲೀಷ್ ಅಧಿಕಾರಿಗಳಿಂದ ಪತ್ರಗಳು ಬರಲಾರಂಭಿಸಿದುವು ಒಂದಕ್ಕೂ ಉತ್ತರವಿಲ್ಲ ಇದರಿಂದ ಸುಲ್ತಾನರವರು ಯುದ್ಧಕ್ಕೆ ಸಿದ್ಧರಾದಂತೆಯೇ ಆಯಿತು

ಸುಲ್ತಾನರ ಸಮರ ನೈಪುಣ್ಯದಲ್ಲಾಗಲೀ, ರಣೋತ್ಸಾಹದಲ್ಲಾಗಲೀ ಯಾವಾಗಲೂ ಕೊರತೆ ಇಲ್ಲ ಇದು ಇಡೀ ಹಿಂದೂಸ್ಥಾನದಲ್ಲಿ ಎಲ್ಲ ರಾಜ್ಯಾಂಗಗಳಲ್ಲಿಯೂ ಪ್ರಸಿದ್ಧವಾಗಿತ್ತು. ಯಾವಾಗಲೂ ಸುಲ್ತಾನರವರಿಗೆ ಇದ್ದುದು ಹಣದ ಕೊರತೆ

ಈ ಬಾರಿ ರಾಣಿಯವರು ಸ್ವಲ್ಪ ಹಣವನ್ನು ಸರಬರಾಜು ಮಾಡಿದ್ದಾರೆ ಆದಾಗ್ಯೂ ಮಹಾಯುದ್ಧಕ್ಕೆ ಹಣವು ಸಾಲದೆಂದು ಸುಲ್ತಾನರು ಒಳಗೊಳಗೇ ಯೋಚನೆ ಮಾಡುತ್ತಿದ್ದರು ನಗರದ ರಾಣಿಯವರಿಬ್ಬರೂ ನಗರಕ್ಕೆ ಹಿಂದಿರುಗುವುದಾಗಿಯೂ ಅಲ್ಲಿ ಪಾಳೆಯಗಾರರ ಸೇನೆಯನ್ನು ಸಿದ್ಧಪಡಿಸುವುದಾಗಿಯೂ ಸುಲ್ತಾನರಲ್ಲಿ ತಿಳಿಸಿದರು ಸುಲ್ತಾನರವರಿಗೆ ದೌಲತ್ ಮತ್ತು ರಾಧಾರಾಣಿಯರು ರಾಜಧಾನಿಯಲ್ಲಿಯೆ ಇದ್ದರೆ ತಮಗೆ ಬಹಳ ಬೆಂಬಲವೆಂಬ ಭಾವನೆಯಿತ್ತು ರಾಣಿಯವರ ಪ್ರಯಾಣವನ್ನು ಕಾರಣಾಂತರಗಳಿಂದ ಮುಂದೆ ಹಾಕುತ್ತಲೇ ಬಂದರು

ಒಂದು ದಿನ ಸುಲ್ತಾನರು ರಾಣಿಯವರೊಡನೆ ಮಾತನಾಡುತ್ತಿರುವಾಗ ಸುಲ್ತಾನರು ಪೂರ್ಣ ಉತ್ಸಾಹಶಾಲಿಗಳಾಗಿದ್ದಾರೆಂದು ಅರಿತುಕೊಂಡು ರಾಣಿಯವರು ತಮ್ಮ ಪ್ರಯಾಣದ ಮಾತನ್ನೆತ್ತಿದ್ದರು

ಸು—ಈಗ ಯುದ್ಧವು ಸನ್ನಿಹಿತವಾಗುತ್ತಿದೆ ನಿಮ್ಮ ಸಲಹೆಯ ಮೇಲೆಯೇ ನಾನು ಈ ಯುದ್ಧದಲ್ಲಿ ತೊಡಗಿದೇನೆ ನೀವೇಕೆ ರಾಜಧಾನಿಯನ್ನು ಬಿಟ್ಟು ದೂರ ಹೋಗಲು ತವಕಪಡುತ್ತಿದ್ದೀರಿ ?

ದೌ—ನಾವು ಈ ಸಮಯದಲ್ಲಿ ನಗರದಲ್ಲಿರಬೇಕಾದುದು ಬಲು ಮುಖ್ಯ! ಪಾಳೆಯಗಾರರ ದಂಡುಗಳನ್ನು ಕಟ್ಟಿ ಯುದ್ಧಕ್ಕೆ ಸಿಲ್ಲಿಸಬೇಕು ಅದಕ್ಕೆ ರಾಧಾರಾಣಿಯವರು ಅಲ್ಲೇ ಇರಬೇಕು ಇಂಗ್ಲಿಷರ ದಂಡು ಮಲಬಾರಿನಿಂದ ನಗರದ ಕಡೆ ನುಗ್ಗಿ ಬರುವ ಸಂಭವವಿದೆ ಅದನ್ನು ಶಕ್ತಿವಂತರಾಗಿ ತಡೆಯಲು ನಾವಿರಬೇಕು. ಉತ್ತರದ ಕಡೆಯಿಂದ ಮಹಾರಾಷ್ಟ್ರರ ದಂಡು ಬರುತ್ತದೆ ಮಹಾರಾಷ್ಟ್ರ ಸರದಾರರೆಲ್ಲರೂ ನಮಗೆ ಪರಿಚಿತರಾಗಿರುವುದರಿಂದ ಅವರಿಗೆ ಅಪಾರವಾದ ಹಣವನ್ನು ಕೊಟ್ಟೋ ಇಲ್ಲದಿದ್ದರೆ ಎದುರಿಸಿ ಯುದ್ಧಮಾಡಿಯೋ ಅವರನ್ನು ಅಲ್ಲೇ ತಡೆಯಬೇಕು ಅದಕ್ಕೆ ನಾವು ನಗರದಲ್ಲಿರಬೇಕು

ಸು—ದೌಲತ್ ನೀನೂ ರಾಧಾರಾಣಿ, ನಿಮ್ಮ ಸ್ನೇಹವು ದೈವೀ ಪ್ರೇಮದಂತಿದೆ ನೀವಿಬ್ಬರೂ ನಮಗೆ ಐದು ಕೋಟಿ ರೂಪಾಯಿಗಳವರಿಗೆ ಸಾಲಕೊಟ್ಟದ್ದೀರಿ. ಇಷ್ಟೊಂದು ಹಣ ನಿಮಗೆ ಎಲ್ಲಿಯದು ?

ದೌ—ಸುಲ್ತಾನರವರೇ, ಅದು ಸಾಲವಲ್ಲ ಅದು ತಮಗೆ ಅರ್ಪಿಸಿರುವ ಕಾಣಿಕೆ. ಅದು ನಮ್ಮ ಹಣವೂ ಅಲ್ಲ ಇಯಜ್‌ಖಾನರವರು ತಮಗೆ ಇತ್ತಿರುವ ಹಣ.

ಸು—ಇಯಜ್‌ಖಾನರವರೇ ! ಅವರದೇ ಈ ಹಣ ! ನಿಮಗೆ ಇಯಜ್‌ಖಾನರವರ ಅಜ್ಞಾತಸ್ಥಾನವು ಗೊತ್ತಿದೆ ಇಯಜ್‌ಖಾನರಲ್ಲಿರುವ ಹಣವೆಲ್ಲವೂ ಪೈಸೂರಿನ

ಹಣವೇ ! ಆದರೂ ಅವರು ಸಮಯದಲ್ಲಿ ಈ ಹಣವನ್ನು ನಮಗೆ ಕೊಟ್ಟದ್ದು ಮಹದುಪಕಾರವೇ ಸರಿ.

ದೌ—(ಖತಿಗೊಂಡು] ಸುಲ್ತಾನರೇ, ಇಯಜ್‌ಖಾನರಲ್ಲಿರುವ ಹಣವೆಲ್ಲವೂ ಅವರ ಸ್ವಂತ ಹಣ ಮೈಸೂರಿನ ಒಂದು ಕುರುಡುಕಾಸೂ ಅವರಲ್ಲಿಲ್ಲ, ಅವರಲ್ಲಿ ಇನ್ನೂ [illegible]ವಾದ ಹಣವಿದೆ. ನಿಮ್ಮ ಅಂತರಂಗದಲ್ಲಿ ಖರ್ಾರವರ ಮೇಲಿನ ದ್ವೇಷ ಬುದ್ಧಿಯು ಇನ್ನೂ ಜಾಗರಿತವಾಗಿಯೇ ಇದೆ

ಸು–ದೌಲತ್, ಸುಳ್ಳು, ನನಗೆ ಖಾನರಲ್ಲಿ ಮಹತ್ತರವಾದ ಗೌರವವಿದ ಅದನ್ನು ನೀನು ನಂಬಲಾರದಿದ್ದರೆ ಇನ್ನು ನನ್ನನ್ನು ನಂಬುವವರಾರು ? ರಾಜ್ಯತ್ಯಾಗ ಮಾಡಿರುವ ಖರ್ಾರವರಲ್ಲಿ ಇಷ್ಟು ಹಣವೆಲ್ಲಿ ಬಂತು ?

ದೌ–ಅದು ಇದುವರೆಗೆ ಗುಪ್ತವಾದ ವಿಚಾರ ಇನ್ನು ನಿಮ್ಮಲ್ಲಿ ಆ ಗುಟ್ಟು ಬೇಕಾಗಿಲ್ಲ ಮೈಸೂರಿನ ಮಹಾ ಯುದ್ಧವು ಸಿದ್ಧವಾಗುವವರೆಗೆ ಆ ಗುಟ್ಟು ರಕ್ಷಿಸಲ್ಪಡಬೇಕೆಂದು ಖಾನರ ಆಶಯವಿತ್ತು ಅದು ಸಿದ್ಧಿಸಿತು ಪಶ್ಚಿಮ ಕರಾವಳಿಯಲ್ಲಿ ಅಲ್ಲೀಸೇಟರ ವ್ಯಾಪಾರವು ಕುಂಪಣಿಯವರ ವ್ಯಾಪಾರಕ್ಕಿಂತಲೂ ಮಿಗಿಲಾದುದು. ಸೇಟರ ಕೋಠಿಗಳು ಬಹಳ ಭಾರೀ ಕೋಠಿಗಳು ಅವರ ಜವಾಹಿರಿ ವ್ಯಾಪಾರವು ಇಂಗ್ಲೆಂಡು ಫ್ರಾನ್ಸು, ಟರ್ಕಿ ರಾಜ್ಯಗಳವರೆಗೆ ವ್ಯಾಪಿಸಿದೆ ಆ ಅಜ್ಞಾತವಾಸದಲ್ಲಿರುವ ಅಲ್ಲೀಸೇಟರೇ ಇಯಜ್‌ಖಾನರು.

ಸು—[ನಕ್ಕು] ದೌಲತ್, ಇಯಜ್‌ಖಾನರು ರಾಜ್ಯಭಾರದಲ್ಲಿ ಅದ್ವಿತೀಯರು ಯುದ್ಧದಲ್ಲಿ ಅಪ್ರತಿಮ ಪರಾಕ್ರಮಿಗಳು ವ್ಯಾಪಾರದಲ್ಲಿ ನಿಸ್ಸೀಮರು ಮತ್ತೇನು ಬೇಕು ಅವರು ಕುಂಪಣಿಯವರಿಗೆ ಸಮಜೋಡಿಯು ಪ್ರತಿದ್ವಂದ್ವಿಗಳು ರಾಣಿಯವರೇ ನೀವಿಬ್ಬರೂ ನಗರಕ್ಕೆ ಹೊರಡಿರಿ, ಇಯಜ್‌ಖಾನರನ್ನು ಭೇಟಿಮಾಡಿರಿ ಅವರನ್ನು ಈ ರಾಜಧಾನಿಗೆ ಕರತನ್ನಿರಿ ನಮ್ಮ ಸರ್ವಸ್ವವನ್ನೂ ನಾನು ಅವರ ಕೈಯಲ್ಲಿ ಒಪ್ಪಿಸುತ್ತೇನೆ. ಮೈಸೂರಿಗೆ ಜಯ ಸಿದ್ಧ ಸುಲ್ತಾನರು ಸ್ವದಸ್ತರು ಇಯಜ್ ಖಾನರಿಗೆ ಒಂದು ಪತ್ರವನ್ನು ಬರೆದು ದೌಲತ್‌ರಾಣಿಯವರಿಗೆ ಒಪ್ಪಿಸಿದರು. ಆ ಪತ್ರವು ಈ ಪರಿಯಾದುದು

ಪರಮಪ್ರಿಯರಾದ ನಗರದ ನವಾಬರವರೇ !

ದೊಡ್ಡ ನವಾಬರು ಕಾಲವಾದಂದಿನಿಂದ ನಮ್ಮಿಬ್ಬರ ಭೇಟಿಯಾಗದಿದ್ದುದು ಪರಮ ದೌರ್ಭಾಗ್ಯ ನಾನು ಪ್ರತಿಯೊಂದು ಘಟ್ಟದಲ್ಲಿಯೂ ತಪ್ಪುಭಾವನೆಯಿಂದ ತಮ್ಮಲ್ಲಿ ಅಪರಾಧವನ್ನು ಮಾಡುತ್ತಲೇ ಇದ್ದೇನೆ. ತಾವು ಪ್ರತಿಯೊಂದು ಸಂದರ್ಭದಲ್ಲಿಯೂ ನನ್ನನ್ನು ಕ್ಷಮಿಸುತ್ತಾ ಪರಮಾನುಗ್ರಹ ಮಾಡುತ್ತಲೇ ಬಂದಿದ್ದೀರಿ ಈಗ ತಮ್ಮ ಇಷ್ಟದಂತೆ ಕಂಪನಿಯವರ ಮೇಲೆ ಯುದ್ಧವನ್ನು ಸಿದ್ಧ ಮಾಡಿದ್ದೇವೆ. ಈ

ಯುದ್ಧದಲ್ಲಿ ನಮಗೆ ಸಂಪೂರ್ಣ ಜಯವಾಗಿ ಇಂಗ್ಲೀಷರು ರಾಜ್ಯದಾಶೆಯನ್ನು ತೊರೆ ದುಬಿಡಬೇಕು, ಇಲ್ಲವೇ ನಾವು ನಿಶ್ಶೇಷವಾಗಿ ಹೋಗಬೇಕು ನಾನು ನನ್ನ ಸರ್ವಸ್ವ ವನ್ನೂ ತಮ್ಮಲ್ಲಿ ಅರ್ಪಿಸುತ್ತೇನೆ ತಾವು ಪ್ರತ್ಯಕ್ಷವಾಗಿ ಸರ್ವಾಧಿಕಾರವನ್ನು ವಹಿಸಿ, ಈ ಮೈಸೂರು ರಾಜ್ಯವನ್ನು ರಕ್ಷಿಸಬೇಕು. ಇದೇ ನನ್ನಹೃತ್ಪೂರ್ವಕವಾದ ಪ್ರಾರ್ಥನೆ"

ದೌಲತ್ ಮತ್ತು ರಾಧಾರಾಣಿಯವರು ಈ ಪತ್ರವನ್ನು ತೆಗೆದುಕೊಂಡು, ಸುಲ್ತಾನರ ಅಪ್ಪಣೆಯನ್ನು ಪಡೆದು ನಗರಕ್ಕೆ ಪ್ರಯಾಣ ಮಾಡಿದರು ರಾಧಾರಾಣಿ ಯವರು ನಗರದಲ್ಲಿಯೇ ಇರತಕ್ಕದ್ದೆಂದೂ, ಅಲ್ಲಿ ಸೈನ್ಯವನ್ನು ಜೊತೆಗೂಳಿಸಬೇ ಕೆಂದೂ, ದೌಲತ್‌ರಾಣಿಯವರು ಕನ್ನಾನೂರಿಗೆಹೋಗಿ ಹೇಗಾದರೂಮಾಡಿ ಇಯಜ್ ಖಾನರನ್ನು ರಾಜಧಾನಿಗೆ ಕರೆತರಬೇಕೆಂದೂ ಮಾತನಾಡಿಕೊಂಡರು ದೌಲತ್‌ರಾಣಿ ಯವರು ಮಲಬಾರಿಗೆ ಪ್ರಯಾಣ ಮಾಡಿದರು ಇಷ್ಟರಲ್ಲಿ ಮೈಸೂರಿನವರು ಯುದ್ಧ ವನ್ನು ಹೂಡುತ್ತಾರೆಂದು ಇಂಗ್ಲೀಷರಿಗೆ ವರ್ತಮಾನ ತಿಳಿದಿತ್ತು ಅವರೂ ಬಲವಾದ ಸಿದ್ಧತೆಯನ್ನು ಮಾಡಲಾರಂಭಿಸಿದರು ಪುಣೆಗೆ ರಾಯಭಾರಿಗಳನ್ನು ಕಳಿಸಿದರು

ದೌಲತ್‌ರಾಣಿಯವರು ಕನ್ನಾನೂರಿಗೆ ತಲಪಿದರು ಅಲ್ಲಿ ಬೀಬೀರಾಣಿಯ ವರು ಅತ್ಯಾದರದಿಂದ ದೌಲತ್‌ರಾಣಿಯವರನ್ನು ಸ್ವಾಗತಿಸಿದರು. ಮೈಸೂರಿನ ಸಮಾ ಚಾರವನ್ನೆಲ್ಲಾ ಸಮಗ್ರವಾಗಿ ಬೀಬೀರಾಣಿಗೆ ತಿಳಿಸಿದರು ದೌಲತ್‌ರಾಣಿಯು ಇಯಜ್‌ಖಾನರ ಗುಪ್ತ ಆವಾಸಸ್ಥಾನಕ್ಕೆ ಹೋಗಿ ಅವರನ್ನು ಭೇಟಿ ಮಾಡಿದಳು. ಖಾನರಿಗೆ ದೌಲತ್ತಳನ್ನು ನೋಡಿ ಬಹಳ ಸಂತೋಷವಾಯಿತು ಟಿಪ್ಪೂಸುಲ್ತಾನರ ಕುಮಾರರು ರಾಜಧಾನಿಗೆ ಬಂದದ್ದು ಕೇಳಿ ಖಾನರು ಅತ್ಯಂತ ಹರ್ಷಿತರಾದರು. ಸುಲ್ತಾನರು ಹರ್ಷಚಿತ್ತರಾಗಿದ್ದಾರೆಂದು ತಿಳಿದು ಖಾನನಿಗೆ ಸಮಾಧಾನವಾಯಿತು. ದೌಲತ್ತಳು ಸಮಯವನ್ನುನೋಡಿ, ಯುದ್ಧದ ಮಾತು ತೆಗೆದಳು. ಇಯಜ್‌ಖಾನನು ಉತ್ಸಾಹಭರಿತನಾಗಿ—

ಹೌದು! ನಗರದ ರಾಣಿಯವರೇ ಈಗ ಯುದ್ಧವು ಆರಂಭವಾದರೆ ಅದುಸಾಮಾ ನ್ಯವಾದುದೆಂದು ಭಾವಿಸಬೇಡಿರಿ. ಅದು ನಾಲ್ಕಾರು ವರ್ಷಗಳ ಮಹಾಯುದ್ಧ. ಇಂಗ್ಲೀಷರನ್ನು ಯುದ್ಧದಲ್ಲಿ ಸೋಲಿಸುವುದು ಕಷ್ಟವಲ್ಲ ಅವರೊಡನೆ ಯುದ್ಧಮಾಡಿ ದರೆ ಪ್ರತಿಯೊಂದು ಯುದ್ಧದಲ್ಲಿಯೂ ನಾವೇ ಗೆಲ್ಲಬಲ್ಲೆವು ಆದರೆ ಮಹಾರಾಷ್ಟ್ರರ ಮಾತು ಹಾಗಲ್ಲ ಅವರು ಬಹಳ ಪ್ರಬಲರಾಗಿದ್ದಾರೆ ಶಕ್ತಿವಂತರಾಗಿದ್ದಾರೆ. ಅವ ರಿಗೆ ಶತ್ರುಗಳಿಲ್ಲ ನಮಗೆ ಶತ್ರುಗಳು ಹೆಚ್ಚು ಹೈದರಾಬಾದನ್ನು ನಾನು ಲೆಕ್ಕಿಸು ವುದಿಲ್ಲ. ಈಗ ನಾವು ಎರಡು ರಣಕ್ಷೇತ್ರಗಳನ್ನು ಹೂಡಬೇಕು. ಉತ್ತರದಲ್ಲಿ ಮಹಾ ರಾಷ್ಟ್ರರೊಡನೆ, ದಕ್ಷಿಣದಲ್ಲಿ ಇಂಗ್ಲೀಷರೊಡನೆ.

ದೌಲತ್— ನೀವು ಹೇಳುವುದೆಲ್ಲಾ ಯುಕ್ತವಾಗಿಯೇ ಇದೆ ಸುಲ್ತಾನರು ಏಕಾಕಿಗಳಾಗಿದ್ದಾರೆ. ಅವರಲ್ಲಿ ಎಷ್ಟೇ ಪರಾಕ್ರಮವಿದ್ದರೂ ಉತ್ಸಾಹವಿಲ್ಲ. ನೀವು ಅವರ ಜೊತೆಯಲ್ಲಿ ಹೋಗಿ ನಿಂತರೆ ಉತ್ಸಾಹವು ಇಮ್ಮಡಿಯಾಗುವುದು ನಿಮ್ಮ ಈ ಅಜ್ಞಾತವಾಸಕ್ಕೆ ಕಾರಣವಿಲ್ಲ. ನೀವು ಎದುರಿಗೆ ಬಂದು ನಿಂತರೆ ಮೈಸೂರು ಉತ್ತೇಜಿತವಾಗುತ್ತ

ಖಾ—( ನಗುತ್ತಾ ) ಮೈಸೂರನ್ನು ಉತ್ತೇಜನಗೊಳಿಸುವುದಕ್ಕೆ ಸ್ವಯಂ ದೌಲತ್‌ರಾಣಿಯವರೇ ಇದ್ದಾರೆ

ದೌ— ಮೈಸೂರಿನ ರಾಜ್ಯಭಾರವು ನನ್ನ ಮೇಲೆ ಇದೆಯೇನು ? ಈ ದೌಲತ್ತಳು ನಿಮ್ಮ ಅಧೀನ. ದೊಡ್ಡ ನವಾಬರು ಈ ಮೈಸೂರಿನ ರಾಜ್ಯಸೂತ್ರಗಳನ್ನು ಅಬಲೆಯರಿಗೆ ಒಪ್ಪಿಸಲಿಲ್ಲ ಇಬ್ಬರು ಮಹಾಪುರುಷರಲ್ಲಿ ಭರವಸೆಯಿಂದ ಒಪ್ಪಿಸಿದರು. ಒಬ್ಬರು ಯುದ್ಧದಲ್ಲಿ ಸೋತು ಕುಳಿತಿದ್ದಾರೆ ಮತ್ತೊಬ್ಬರು ಅಜ್ಞಾತವಾಸದಲ್ಲಿ ಮರೆಯಲ್ಲಿದ್ದಾರೆ

ಖಾ—ಪ್ರಿಯೆ ! ದೌಲತ್ ! ನಾನು ನಿನಗಾಗಿ ಈ ರಾಜ್ಯದ ಆಶೆಯನ್ನು ಎಂದೋ ತೊರೆದುಬಿಟ್ಟೆ ಈ ಅಜ್ಞಾತವಾಸವು ನನಗೂ ಸಮಾಧಾನಕರವಾಗಿಲ್ಲ ನಾನು ಯುದ್ಧಕ್ಕೆ ಸಿದ್ಧ ಈ ಯುದ್ಧವನ್ನು ಹೂಡಿರುವವಳು ನೀನು ಇದನ್ನು ಎತ್ತಿ ಕಟ್ಟುತ್ತಿರುವವಳೂ ನೀನು ಆದರೆ ರಾಜಧಾನಿಗೆ ಈಗ ನಾನು ಹೋಗುವುದಿಲ್ಲ ಇಲ್ಲಿಂದ ಇಂದೇ ಯುದ್ಧಕ್ಕೆ ಸಿದ್ಧನಾಗಿ ಹೊರಡುತ್ತೇನೆ ಈ ಯುದ್ಧದಲ್ಲಿ ನಮಗೇ ಜಯವಾಗುತ್ತದೆ

ಖಾನನು ಸುಲ್ತಾನರವರಿಗೆ ಒಂದು ಉತ್ತರವನ್ನು ಬರೆದನು ಅಂದಿನ ದಿನವೇ ಬೀಬೀರಾಣಿಯವರನ್ನು ಕಂಡು ತಾನು ಮೈಸೂರಿನ ಯುದ್ಧಕ್ಕೆ ಹೊರಡುವುದಾಗಿ ಹೇಳಿದನು. ವೀರರಮಣಿಯಾದ ಬೀಬೀಯು ಸಂತೋಷದಿಂದ ಖಾನನ ಪ್ರಯಾಣವನ್ನು ಒಪ್ಪಿಕೊಂಡಳು ಖಾನನೂ ದೌಲತ್ತಳೂ ನಗರಕ್ಕೆ ಪ್ರಯಾಣ ಮಾಡಿದರು

## ಯುದ್ಧ ಸನ್ನಾಹ

ದರಿಯಾಬಾಗಿನ ಸೋನಾಮಹಲು ಪುನಃ ರಾಜವೈಭವದಿಂದ ಪ್ರಕಾಶಮಾನವಾಯಿತು. ಖಾನರವರು ಬಂದ ಸಮಾಚಾರವು ತಿಳಿಯುತ್ತಲೇ ದಿವಾನರವರು ಬಂದು ಖಾನರನ್ನು ಭೇಟಿ ಮಾಡಿದರು ಒಬ್ಬೊಬ್ಬರಾಗಿ ಪಾಳಯಗಾರರು ಬಂದು ಭೇಟಿ ಮಾಡಲಾರಂಭಿಸಿದರು ಖಾನರು ಮೈಸೂರಿನ ಯುದ್ಧದ ಏರ್ಪಾಡುಗಳನ್ನೆಲ್ಲಾ ಪಾಳೆಯಗಾರರಲ್ಲಿ ಆಲೋಚಿಸತೊಡಗಿದರು. ಪಾಳೆಯಗಾರರು ಯುದ್ಧಕ್ಕೆ ಬೇಕಾದ ಸಹಾಯಗಳನ್ನು ಕೊಡುವುದಾಗಿ ಹೇಳಿದರು. ಖಾನನು ಮಹಾರಾಷ್ಟ್ರರು ಮೈಸೂರು

ಮೇಲೆ ದಂಡೆತ್ತಿ ಬರುವುದನ್ನು ತಡೆಯುವುದಕ್ಕಾಗಿ ಸೈನ್ಯದ ಏರ್ಪಾಡುಗಳನ್ನು ಮಾಡಿದನು ಮಲಬಾರಿನ ಕಡೆಯಿಂದ, ಮಂಗಳೂರಿನ ಕಡೆಯಿಂದ ಇಂಗ್ಲಿಷ್ ಸೈನ್ಯಗಳು ಬರುವುದನ್ನು ತಡೆಗಟ್ಟಲು ಸೈನ್ಯದ ಬಂದೋಬಸ್ತು ಮಾಡಿದನು ಈ ಸಮಾಚಾರಗಳೆಲ್ಲಾ ಸುಲ್ತಾನರಿಗ ತಿಳಿಯಿತು ಅವರಿಗೆ ಇದರಿಂದ ಅತ್ಯಂತ ಸಂತೋಷವಾಯಿತು.

ಸುಲ್ತಾನರಿಗೆ ಇಯಜ್ ಖಾನರವರು ಕಳುಹಿಸಿದ ಪತ್ರವು ತಲುಪಿತು ಅವರು ಆ ಪತ್ರವನ್ನು ಓದಿದರು ಪುನಃ ಓದಿದರು ಮೈಸೂರು ಯುದ್ಧದಲ್ಲಿ ಜಯವಾದಂತೆಯೇ ಸಂತೋಷಪಟ್ಟರು ಆ ಪತ್ರವು ಈ ಪರಿಯಾಗಿತ್ತು

ಷಹರ್ಷ-ಷಹಾ ಸುಲ್ತಾನರವರೇ, ಮೈಸೂರಿನ ಯುದ್ಧವು ಪ್ರಾಪ್ತವಾಗುವ ಸಂಭವವು ಬಂದಿದ್ದು ನ:ಗೆ ಮಹತ್ತರ ಹರ್ಷದಾಯಕವಾಗಿದೆ ಎಂದಾದರೊಂದುದಿನ ನಮ್ಮಗಳ ಅದೃಷ್ಟ ಪರೀಕ್ಷೆಯು ರಣಭೂಮಿಯಲ್ಲೇ ಆಗಬೇಕು ಅದು ಮೈಸೂರಿಗೆ ಶ್ರೇಯಸ್ಕರ ಈ ಯುದ್ಧವು ಕೆಲವು ದಿವಸಗಳಲ್ಲಿ ಪೂರೈಸುವ ಯುದ್ಧವಲ್ಲ ಇಂಗ್ಲಿಷರೊಡನೆ ಮರಾಟರೊಡನೆ ಹೈದರಾಬಾದಿನೊಡನೆ ನಾವು ಕೊನೆಮುಟ್ಟುವವರೆಗೆ ಯುದ್ಧ ಮಾಡಿಯೇ ಬಿಡಬೇಕು ಇದಕ್ಕೆ ಅಪಾರವಾದ ಹಣಬೇಕು ಎಷ್ಟು ಹಣವನ್ನಾದರೂ ನಾನು ಒದಗಿಸುತ್ತೇನೆ ನಮಗೆ ಹಣದ ಕೊರತೆಯು ಇಲ್ಲವೇ ಇಲ್ಲ ನಗರದ ಕಡೆಯ ಸೈನ್ಯವನ್ನೆಲ್ಲಾ ಒಂದುಗೂಡಿಸಿ ತರಬೇತು ಮಾಡಿಸಿ ಶತೃಗಳನ್ನು ತಡೆಗಟ್ಟುವ ಏರ್ಪಾಡು ಮಾಡುತ್ತೇನೆ ಶ್ರೀರಂಗಪಟ್ಟಣದ ಸೈನ್ಯವನ್ನು ಮೂರು ಭಾಗ ಮಾಡಬೇಕು ಕೊಯಮತ್ತೂರಿನ ಕಡೆಯಿಂದ ಸೇಲಂ ಕಡೆಯಿಂದ ಇಂಗ್ಲಿಷರ ಸೈನ್ಯಗಳು ಭರದಿಂದ ಬರುತ್ತವೆ ಶ್ರೀರಂಗಪಟ್ಟಣದ ಎರಡುಸೈನ್ಯಗಳು ಎರಡುಕಡೆಗಳಲ್ಲಿ ಹೋಗಿ ನಿಲ್ಲಲಿ ಒಂದು ಸೈನ್ಯವು ಶ್ರೀರಂಗಪಟ್ಟಣದಲ್ಲಿ ರಾಜಧಾನಿಯ ರಕ್ಷಣೆಗೆ ಇರಲಿ. ಯುದ್ಧವು ಸಿದ್ಧವಾದಂತೆಯೇ ! ಇಂಗ್ಲಿಷರಿಗೆ ರಣವೀಳಯವನ್ನು ಕಳಿಸಿರಿ ಮೈಸೂರಿನ ಶಕ್ತಿಯನ್ನು ಒಂದು ಬಾರಿ ಅವರು ನೋಡಲಿ ನಗರವು ಯುದ್ಧಕ್ಕೆ ಸಿದ್ಧವಾಗಿದೆ.

ಇತಿ ತಮ್ಮ ಸೇವಕ,

ಇಯಜ್ ಖಾನ್

ಟಿಪ್ಪೂಸುಲ್ತಾನನು ಮಂತ್ರಿಗಳೊಡನೆಯೂ, ಸೇನಾನಾಯಕರೊಡನೆಯೂ, ಆಲೋಚನೆ ನಡೆಸಿದನು ಅವರುಗಳೆಲ್ಲರೂ ಮೈಸೂರು ರಾಜ್ಯದಲ್ಲಿ ಶತೃಗಳು ಎಷ್ಟು ರಾಜ್ಯವನ್ನು ಅಕ್ರಮಿಸಿದ್ದಾರಯೋ ಅದೆಲ್ಲವೂ ನಮ್ಮ ವಶಕ್ಕೆ ಹಿಂದಿರುಗಿ ಬರಲೇಬೇಕು ಮೂರನೆಯ ಯುದ್ಧದಲ್ಲಿ ನಮಗಾದ ಅಪಮಾನವು ಅಳಿಸಿ ಹೋಗಬೇಕು. ಈ ಯುದ್ಧವು ಕೊನೆಯ ಯುದ್ಧ ನಾವು ಈಗ ಯುದ್ಧಕ್ಕೆ ಹಿಂದೆಗೆದರೆ ಇಷ್ಟು ದಿನ ತಮ್ಮ ಉಪ್ಪು ತಿಂದಿದ್ದು ವ್ಯರ್ಥ ಎಂದು ಏಕವಾಕ್ಯತೆಯಿಂದ ನುಡಿದರು ಸುಲ್ತಾನನಿಗೆ ಬಹಳ ಸಂತೋಷವಾಯಿತು ಸುಲ್ತಾನನು ಯುದ್ಧವನ್ನು ನಿಶ್ಚಯಿಸಿದನು.

ಕುಂಪಣಿಯ ಅಧಿಕಾರಿಗಳಿಗೆ ರಾಯಭಾರಿಗಳ ಮೂಲಕ ಹೇಳಿಕಳುಹಿಸಿದನು. ರಾಯಭಾರಿಗಳು ಮದರಾಸಿಗೆ ಹೋಗಿ ಕುಂಪಣಿಯ ಅಧಿಕಾರಿಗಳನ್ನು ಸಂಧಿಸಿದರು ಮೈಸೂರಿನ ಸುಲ್ತಾನರು ಮೂರು ಕೋಟಿ ರೂಪಾಯಿಗಳನ್ನು ಸಲ್ಲಿಸಿದಾರೆಂದು ಅವರ ಶೀಮೆಯನ್ನು ಅವರಿಗೆ ಬಿಟ್ಟುಕೊಡಬೇಕೆಂದೂ ವಾದಿಸಿದರು ಇಂಗ್ಲೀಷ್ ಅಧಿಕಾರಿಗಳಿಗೆ ಈ ರಾಯಭಾರವು ಅಶ್ಚರ್ಯವನ್ನುಂಟುಮಾಡಿತು ಅವರು ಸಂಧಿ ಪತ್ರದಲ್ಲಿ ಆ ಷರತ್ತಿಲ್ಲವೆಂದೂ, ಮಹಾರಾಷ್ಟ್ರದವರೂ, ಹೈದರಾಬಾದಿನವರೂ, ತಮಗೆ ಸೇರಿದ ರಾಜ್ಯಗಳು ತಮ್ಮದೆಂದೇ ಹೇಳುತ್ತಾರೆಂದೂ, ಹೇಗೇ ಇರಲಿ, ಕೈಗೆ ಬಂದ ರಾಜ್ಯವನ್ನು ತಾವು ಬಿಡಲಾಗುವುದಿಲ್ಲವೆಂದೂ ಖಚಿತವಾಗಿ ತಿಳಿಸಿದರು ಸುಲ್ತಾನರ ರಾಯಭಾರದ ಉದ್ದೇಶವೂ ಇಷ್ಟೆ ಅವರಿಗೆ ರಾಜಿಯು ಬೇಕಾಗಿರಲಿಲ್ಲ ಯುದ್ಧದ ಸಿದ್ಧತೆಗಳೆಲ್ಲಾ ಆಗಿಯೇ ಇತ್ತು

ಶ್ರೀರಂಗಪಟ್ಟಣದ ಸರದಾರರು ಒಂದೊಂದಾಗಿ ಇಂಗ್ಲೀಷರ ವಶದಲ್ಲಿದ್ದ ಊರುಗಳನ್ನು ಆಕ್ರಮಣ ಮಾಡಲಾರಂಭಿಸಿದರು ಉತ್ತರದ ಕಡೆಗೆ ಮಾತ್ರ ಇಯಜ್ ಖಾನನು ತನ್ನ ಗಡಿಯನ್ನು ಬಿಟ್ಟು ಮುಂದೆ ಹೋಗಲಿಲ್ಲ ಯುದ್ಧವಾದರೆ ಚಿತ್ರದುರ್ಗ ನಗರದ ಸ್ಥಾನಗಳೇ ತಮ್ಮ ಕೋಟೆಗಳೆಂದು ಅವರ ಅಭಿಪ್ರಾಯವಿತ್ತು ಮರಾಠರ ವಶದಲ್ಲಿದ್ದ ಒಂದು ಊರನ್ನೂ ಅವರು ಆಕ್ರಮಿಸಲಿಲ್ಲ

ನಾನಾಫಡ್ನವೀಸನಿಗೆ ಈ ಸಮಾಚಾರಗಳೆಲ್ಲಾ ಬಂತು. ಶ್ರೀರಂಗಪಟ್ಟಣದವರು ಇಂಗ್ಲೀಷರನ್ನು ಯುದ್ಧಕ್ಕೆ ಕೆಣಕಿದ್ದಾರೆ ಆದರೆ ನಮ್ಮ ಮೇಲೆ ಕೈಯೆತ್ತಲಿಲ್ಲ ನಾವು ಆಕ್ರಮಿಸಿಕೊಂಡ ಮೈಸೂರು ರಾಜ್ಯದ ಪ್ರದೇಶಗಳನ್ನು ಹಿಂದಕ್ಕೆ ಕೊಡಬೇಕೆಂದು ಕೇಳಲಿಲ್ಲ ಇದೆಲ್ಲಾ ದೌಲತ್‌ರಾಣಿಯವರ ಚಾತುರ್ಯವಿರಬೇಕು ಎಂದು ಆಲೋಚಿಸಿದನು ಹರಿಪಂತನನ್ನು ಕರೆಸಿ ಎಲ್ಲಾ ವಿದ್ಯಮಾನಗಳನ್ನು ಅರುಹಿದನು

ಹರಿಪಂತನು ಸ್ವಾಮಿ, ಇದರಲ್ಲಿ ಆಶ್ಚರ್ಯವೇನಿದೆ. ಮೈಸೂರಿನವರು ಯಾವಾಗಲೂ ನಮ್ಮ ಮೇಲೆ ಕತ್ತಿ ಕಟ್ಟಲೇ ಇಲ್ಲ ಇಂಗ್ಲೀಷರಿಗೆ ನಾವು ಪದೇ ಪದೇ ಏಕೆ ಸಹಾಯ ಮಾಡಬೇಕು. ಎಂದಾದರೊಂದು ದಿನ ಅವರು ನಮ್ಮ ಮೇಲೆ ಯುದ್ಧ ಮಾಡತಕ್ಕವರೇ

ನಾನಾ—ಪಂತರವರೇ, ನಿಮ್ಮ ಮೇಲೆ ದೌಲತ್‌ರವರ ರಾಯಭಾರದ ಪ್ರಭಾವವು ಚೆನ್ನಾಗಿಯೇ, ಆಗಿದೆ ನಮಗೂ-ಇಂಗ್ಲೀಷರಿಗೂ ಒಬ್ಬರಿಗೊಬ್ಬರು ಸಹಾಯ ಕೊಡಬೇಕೆಂದು ಕರಾರಾಗಿರುವುದು ನಿಮಗೆ ಗೊತ್ತಿಲ್ಲವೆ ?

ಹರಿಪಂತ್—ಗೊತ್ತಿದೆ, ಮಹಾಸ್ವಾಮಿ. ಅವರ ಸಹಾಯವು ನಮಗೆ ಏಕ ಬೇಕು ? ಇಂಗ್ಲೀಷರು ನಮ್ಮನ್ನು ಅಣಗಿಸಬೇಕೆಂದಿದಾರೆ ಕಲ್ಕತ್ತೆಯಿಂದ ಉತ್ತರ ಮಾಡನೆ ಯುದ್ಧಕ್ಕೆ ನಿಲ್ಲಲು ಅವರಿಗೆ ಧೈರ್ಯವಿಲ್ಲ. ದಕ್ಷಿಣದ ಕಡೆ ಮದ

ರಾಸಿನಿಂದ ಅವರು ಇಲ್ಲಿಗೆ ಬರಬೇಕು ಮಧ್ಯ ಮೈಸೂರಿದ್ದರೆ ನಮಗೆ ಎಷ್ಟೋ ಒಳ್ಳೆಯದು ಅವರಿಗೆ ಮೈಸೂರನ್ನು ಹಾದು ಬರುವುದು ಕಷ್ಟವಾಗುತ್ತೆ

ನಾನಾ—ನಾವು ಅಷ್ಟು ಸುಲಭವಾಗಿ ಮೈಸೂರು ಯುದ್ಧವನ್ನು ಬಿಟ್ಟು ಬಿಡಲು ಸಾಧ್ಯವಿಲ್ಲ

ಪಂತ—ಈ ಬಾರಿ ನಿಷ್ಕಾರಣವಾಗಿ ಯುದ್ಧಕ್ಕೆ ಹೊರಡಬೇಕಾದರೆ ತಾವೇ ಖುದ್ದು ಹೊರಡಬೇಕು ಮೈಸೂರು ದೇಶದ ಹಬ್ಬಾಗಿಲಿನಲ್ಲಿಯೇ ಇಯಜ್‌ಖಾನರೊಡನೆ ಯುದ್ಧ ಮಾಡಬೇಕಾಗುತ್ತದೆ

ನಾನಾ—ಪಂತರವರು ಇಯಜ್‌ಖಾನನೊಡನೆ ಯುದ್ಧ ಮಾಡಲು ಭಯಪಡುವಂತಿದೆ

ಪಂತ—ಭಯವೆಲ್ಲಿ ಬಂತು ? ಶಸ್ತ್ರ ಹಿಡಿದ ಬ್ರಾಹ್ಮಣನಿಗೆ ಭಯವೆಂದರೇನು? "ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ" ಆದರೆ,

ನಾನಾ—(ನಗುತ್ತಾ) ಆದರೇನು ?

ಪಂತ—ಇಯಜ್‌ಖಾನನ ಸೈನ್ಯವೆಲ್ಲ ಪಾಳಯಗಾರರ ದಂಡು, ಹಿಂದೂಜನರ ಸೈನ್ಯ. ಆ ಹಿಂದೂ ದಂಡಿನೊಡನೆ ಹಿಂದೂ ಧರ್ಮಾಭಿಮಾನಿಗಳಾದ ಮರಾಟರು ಯುದ್ಧ ಮಾಡುವುದೇ ? ಅಷ್ಟೇ ಅಲ್ಲ, ಆ ದೌಲತ್ ಮತ್ತು ರಾಧೆಯವರು

ನಾನಾ—ಆ ರಾಣಿಯವರಿಗೆ ಪಂತರು ಭಯಪಡುವರೇನು ?

ಪಂತ—ಭಯವಲ್ಲ, ಅವರಿಬ್ಬರೂ ಸಾಮಾನ್ಯ ಹೆಂಗಸರಲ್ಲ. ರಣಭೂಮಿಯಲ್ಲಿ ನಿಂತು ಖಡಾಖಡಿ ಯುದ್ಧ ಮಾಡುತ್ತಾರೆ

ನಾನಾ—ಯುದ್ಧಭೂಮಿಯಲ್ಲಿ ಆ ರಾಣಿಯವರುಗಳ ನೇತ್ರಬಾಣಗಳು ಬಿದ್ದರೆ, ಪಂತರವರು ಭೀಷ್ಮಾಚಾರ್ಯರಂತೆ ಶಸ್ತ್ರಸನ್ಯಾಸ ಮಾಡೋಣಾಗುತ್ತದೇನು?

ಪಂತ—(ಕೋಪದಿಂದ) ಆ ರಾಣಿಯವರೊಡನೆ ಯುದ್ಧಕ್ಕೆ ಸ್ವಯಂ ತಾವೇ ದಯಮಾಡಿಸಬಹುದು

ನಾನಾ—ನಾನೇ ಹೋದರೆ !

ಪಂತ—ತಾವೇ ಹೋದರೆ, ಲೋಕವು ನಗುತ್ತದೆ ಜಯಾಪಜಯಗಳು ಯಾರಿಗೂ ಸ್ಥಿರವಲ್ಲ. ಜಗದ್ವಿಖ್ಯಾತರಾದ ಮಂತ್ರಿಗಳು ಸೋತುಹೋದರೆ ಮಹಾರಾಷ್ಟ್ರಕ್ಕೆ ಅಚ್ಚಳಿಯದ ಕಳಂಕ ಗೆದ್ದರೆ, ಹೆಂಗಸರೊಡನೆ ಯುದ್ಧ ಮಾಡಿದರು ಎಂಬ ಅಪಖ್ಯಾತಿ.

ನಾನಾ—ಸರಿ, ಪಂತರವರೇ ! ದೌಲತ್‌ರವರ ರಾಯಭಾರವು ಸಂಪೂರ್ಣ ಜಯವಾದಂತೆಯೇ ಆದರೆ ರಾಜನೀತಿಯು ಬೇರೆವಿಧವಾಗಿದೆ. ನಾವು ಸೈನ್ಯವನ್ನು ತೆಗೆದುಕೊಂಡು ಹೈದರಾಬಾದಿನ ಮಾರ್ಗವಾಗಿ ಮೈಸೂರಿಗೆ ಪ್ರವೇಶ ಮಾಡೋಣ.

ಅಲ್ಲಿ ಏನಾಗುತ್ತದೆಯೋ ನೋಡೋಣ. ಸಂದರ್ಭವು ಹೇಗೆ ಬಂದರೆ ಹಾಗೆ ನಡೆದುಕೊಳ್ಳೋಣ.

ಈ ಯುಕ್ತಿಯು ಪಂತರಿಗೂ ಒಪ್ಪಿತು ಮರಾಟರ ಸೈನ್ಯವೂ ಯುದ್ಧಕ್ಕೆ ಅಣಿ ಮಾಡಿ ಹೊರಟಿತು

ಶ್ರೀರಂಗಪಟ್ಟಣದಲ್ಲಿ ಯುದ್ಧ ಸನ್ನಾಹವು ಅಸಾಧಾರಣವಾದುದು ಏನೋ ಒಂದು ವಿಧವಾದ ಹೊಸ ಹುರುಪು ಎಲ್ಲರೂ ಯುದ್ಧಕ್ಕೆ ಹೊರಡುವವರೇ ! ಸುಲ್ತಾನರು ಬ್ರಹ್ಮಾಂಡವಾದ ಸಿದ್ಧತೆಯನ್ನು ಮಾಡಿದ್ದರು ನಗರದಿಂದ ಅಪಾರವಾದ ಹಣವು ಬಂದಿತ್ತು ಹಣಕ್ಕೆ ಕೊರತೆಯಿಲ್ಲ ಸೈನ್ಯಕ್ಕ ಕುಂದಿಲ್ಲ. ಉತ್ಸಾಹಕ್ಕೆ ಮಿತಿಯಿಲ್ಲ ಈ ಯುದ್ಧದಲ್ಲಿ ಜಯವು ಸಿದ್ಧ ಯುದ್ಧವು ಪೂರೈಸಿದ ಮೇಲೆ ದಕ್ಷಿಣದಲ್ಲಿ ರಾಮೇಶ್ವರದ ವರೆಗೆ ಮೈಸೂರುರಾಜ್ಯ ಜಯಶೀಲರಾದ ಸೇನಾಧಿಪತಿಗಳಿಗೆಲ್ಲಾ ಶಾಲ್ಯದಲ್ಲಿ, ಕೊಯಮತ್ತೂರಿನಲ್ಲಿ, ಮದ್ರಾಸಿನಲ್ಲಿ, ತಿರುಚನಾಪಲ್ಲಿಯಲ್ಲಿ, ಮಲಬಾರಿನಲ್ಲಿ ನವಾಬರುಗಳಾಗಬಹುದೆಂಬ ಮಹತ್ವಾಕಾಂಕ್ಷ ! ಇಂಥಾ ಮಹದುತ್ಸಾಹದಲ್ಲಿ ಮೈಸೂರಿನ ಸೇನಾಪ್ರವಾಹವು ಕೊಯಮತ್ತೂರು ಕಡೆ, ಮದ್ರಾಸಿನ ಕಡೆಗೆ ಹೊರಟಿತು ಪ್ರತಿದಿನವೂ ಜಯದ ಮೇಲೆ ಜಯದ ಸುದ್ದಿಗಳೇ ಬರುತ್ತಿದ್ದವು

ಕಂಪನಿಯವರಿಗೂ ಈ ಸಮಾಚಾರಗಳೆಲ್ಲಾ ತಲಪಿತು ಅವರು ಪ್ರಬಲವಾದ ಸೈನ್ಯವನ್ನು ಹೊರಡಿಸಿಕೊಂಡು ಮೈಸೂರಿನ ಕಡೆ ಹೊರಟರು ಈ ಯುದ್ಧದಲ್ಲಿ ಶ್ರೀರಂಗಪಟ್ಟಣವನ್ನು ಸಂಪೂರ್ಣವಾಗಿ ನಾಶಮಾಡಬೇಕೆಂದೂ, ಟಿಪ್ಪೂಸುಲ್ತಾನನನ್ನು ಸೆರೆಹಿಡಿದು ಆಮರಣಾಂತ ಬಂಧನದಲ್ಲಿಡಬೇಕೆಂದೂ ಹಠ ತೊಟ್ಟರು ಆದರೆ ಇದು ಸಾಮಾನ್ಯವಾದ ಯುದ್ಧವಲ್ಲವೆಂದು ಅವರಿಗೆ ಗೊತ್ತಾಗಿತ್ತು ಟಿಪ್ಪೂಸುಲ್ತಾನನು ಬಹಳ ಸಿದ್ಧತೆಯನ್ನು ಮಾಡಿದ್ದಾನೆಂದೂ ಅವರಿಗೆ ಸಮಾಚಾರ ಬಂದಿತ್ತು! ಪೇಷ್ವೆಯವರಿಗೂ, ಹೈದರಾಬಾದಿನ ನಿಜಾಮರವರಿಗೂ ಟಿಪ್ಪೂಸುಲ್ತಾನರವರೇ ಯುದ್ಧವನ್ನು ಎತ್ತಿದ್ದಾರೆಂದೂ, ತಮ್ಮ ಸಹಾಯಕ್ಕೆ ಬರಬೇಕೆಂದೂ ಪತ್ರಗಳನ್ನು ಬರೆದು ರಾಯಭಾರಿಗಳನ್ನು ಕಳಿಸಿದರು ಇಂಗ್ಲೀಷರು ಮೈಸೂರಿನ ಮೇಲೆ ಮಹತ್ತರವಾದ ದಂಡನ್ನು ಎತ್ತಿ ಹೊರಟರು

ಮೈಸೂರಿನ ಸೇನಾನಾಯಕರು ವಾಣಿಯಂಬಾಡಿ, ವೇಲೂರವರಿಗೆ ಮುಂದ ನುಗ್ಗಿದರು. ಕಂಪನಿಯ ದಂಡು ಮದ್ರಾಸಿನ ಕಡೆಯಿಂದ ಬಂದಿತು ಪರಸ್ಪರ ಹೋರಾಟಗಳೇನೋ ನಡೆದುವು ಎಲ್ಲಿಯೂ ದೊಡ್ಡ ಯುದ್ಧವಾಗಲಿಲ್ಲ ಕ್ರಮಕ್ರಮವಾಗಿ ಮೈಸೂರಿನ ದಂಡು ಹಿನ್ನೆಟ್ಟುತ್ತ ಬಂದಿತು ಪ್ರತಿದಿನವೂ ಕುದುರೆಯ ಸವಾರರು ರಾಜಧಾನಿಗೆ ಸಮಾಚಾರಗಳನ್ನು ತರುತ್ತಿದ್ದರು. ಆ ಸಮಾಚಾರಗಳು ಒಂದಕ್ಕೊಂದು ತಾಳೆ ಇಲ್ಲ.

ಸುಲ್ತಾನನ ಮನಸ್ಸಿನಲ್ಲಿ ಚಿಂತೆಯು ಮೂಡಿತು ಆಲೋಚಿಸತೊಡಗಿದನು ಈ ಸಮಯಕ್ಕೆ ಸರಿಯಾಗಿ ಮಿರ್ ಸಾದಕನು ಬಂದನು ಮಿರ್ ಸಾದಕನಿಗೆ ಸುಲ್ತಾನರಲ್ಲಿ ಮೊದಲಿದ್ದ ಸಲಿಗೆಯು ಈಗಿಲ್ಲ ಆದರೂ ಹಳೆಯ ಸ್ನೇಹದ ಮೇಲೆ ಬಂದು ಸುಲ್ತಾನರಲ್ಲಿ ಧೈರ್ಯವಾಗಿ ಮಾತನಾಡುತ್ತಿದ್ದನು ಅವನಿಗೆ ಅಪೇಕ್ಷಣೀಯವಾದುದೇನೂ ಇಲ್ಲ ಸುಲ್ತಾನೀ ರಾಜ್ಯದ ವಿಚಾರ ಅವನಿಗೆ ಅತ್ಯಂತ ಹಗುರವಾದ ವಿಚಾರ ರಾಜ್ಯವು ಇದ್ದರೇನು ? ಹೋದರೇನು ? ಟಿಪ್ಪೂಸುಲ್ತಾನನ ರಾಜ್ಯಭಾರಕ್ರಮಗಳೊಂದೂ ಅವನಿಗೆ ಒಪ್ಪಿಗೆ ಇಲ್ಲ ಕಂಪನಿಯವರೊಂದಿಗೆ ಯುದ್ಧ ಮಾಡಕೂಡದೆಂದೇ ಅವನ ನಿರ್ಧಾರ ! ಸದಾ ಸರ್ವಕಾಲದಲ್ಲಯೂ ರಣೋತ್ಸಾಹಿಯಾದ ಸುಲ್ತಾನನಿಗೆ ಇದು ಹೇಗೆತಾನೇ ಸರಿಹೋಗಬೇಕು ಮಿರ್ ಸಾದಕನು ಸುಲ್ತಾನನ ಮನವರಿತು ಮಾತಿಗೆ ಮೊದಲು ಮಾಡಿದನು

"ಖಾವಂದರವರೇ ! ಇಂದು ತಮ್ಮ ಚಿತ್ತವು ಇಷ್ಟೊಂದು ಚಿಂತಾಮಗ್ನವಾಗಿರುವುದೇಕೆ ?"

ಸುಲ್ತಾನರು ಮಾತನಾಡಲಿಲ್ಲ. ಬಿರುಗಣ್ಣು ಬಿಟ್ಟು ನೋಡುತ್ತಿದ್ದರು

"ಹುಜೂರು. ಯುದ್ಧವು ದಿನದಿನವೂ ಹತ್ತಿರ ಬರುತ್ತಿದೆ"

"ಹೌದು ! ಹತ್ತಿರ ಹತ್ತಿರ ಬರುತ್ತಿದೆ. ಇದು ಸಾಮಾನ್ಯ ಯುದ್ಧವಲ್ಲ ! ಭಯಂಕರ ಘೋರಯುದ್ಧ ! ನೀನು ಕತ್ತಿಯನ್ನು ಹಿಡಿಯಲರಿಯದ ಹೇಡಿ! ಗುಂಡಿನ ಶಬ್ದವನ್ನು ತಡೆಯಲಾರದ ಹೆಣ್ಣು ಹೃದಯ, ಶ್ರೀರಂಗಪಟ್ಟಣವನ್ನು ಬಿಟ್ಟು ಹೊರಡು, ಇಂದೇ ಎಲ್ಲಿಗಾದರೂ ಹೋಗಿಬಿಡು

ಹುಜೂರು ನಾನೇಕೆ ಹೋಗಬೇಕು ? ಎಲ್ಲಿಗೆ ಹೋಗಬೇಕು ? ನಾನು ಈ ಯುದ್ಧದಲ್ಲಿ ತಮಗೆ ಏನಾದರೂ ಸೇವೆ ಮಾಡಬೇಕೆಂದು ನಿಶ್ಚಯಿಸಿದ್ದೇನೆ. ಅಪ್ಪಣೆ ಕೊಡಿರಿ !

ನೀನು ಈ ಯುದ್ಧದಲ್ಲಿ ಏನು ಸಹಾಯ ಮಾಡಬಲ್ಲೆ ಮಿರ್ ಸಾದಕ್ !

ಖಾವಿಂದ್ ! ನನ್ನ ಸಾಹಸವನ್ನು ನೋಡಿರಿ ನಾನು ಶತೃಗಳ ಶಿಬಿರಕ್ಕೆ ಹೋಗುತ್ತೇನೆ ಅಲ್ಲಿ ಮರಾಟರಿಗೂ ಇಂಗ್ಲಿಷರಿಗೂ ವಿರೋಧವನ್ನು ತಂದಿಕ್ಕುತ್ತೇನೆ. ಹೇಗಾದರೂ ತಂತ್ರದಿಂದ ಕುಂಪಣಿಯವರು ಹೆದರಿಕೊಂಡು ಓಡಿಹೋಗುವಂತೆ ಮಾಡುತ್ತೇನೆ

ಒಳ್ಳೆಯದು ಹೋಗು ! ಮರಾಟರಲ್ಲಿ ಮಾತ್ರ ಬಹಳ ಹುಷಾರಾಗಿರಬೇಕು ಅವರ ಸಹವಾಸ ಹಾವಿನ ಸಹವಾಸದಂತೆ. ನೀನು ಅವರ ಕೈಗೆ ಸಿಕ್ಕಿಕೊಂಡರೆ, ಸಾಯಲೂ ಬಿಡುವುದಿಲ್ಲ, ಉಳಿಯುವುದಕ್ಕೂ ಎಡೆಗೂಡುವುದಿಲ್ಲ, ಎಚ್ಚರಿಕೆ !

ಜಹಾಪನಾ ! ನನ್ನ ಸಾಮರ್ಥ್ಯವನ್ನು ಹೇಳಿಕೊಂಡು, ಸನ್ನಿಧಾನದಲ್ಲಿ ವೃಥಾ

ಜಂಭ ಕೊಚ್ಚುವುದಿಲ್ಲ. ಮರಾಟರಾದರೇನು ? ಇಂಗ್ಲೀಷರೇ ಆದರೇನು ಒಂದುಬಾರಿ ಯಾರನ್ನಾದರೂ ಚೆನ್ನಾಗಿ ಮೋಸಮಾಡಬಲ್ಲೆ ! ಅದರ ಸುಳಿವು ಯಾರಿಗೂ ಗೋಚರ ವಾಗುವುದಿಲ್ಲ ಅದು ದೇವರು ನನಗೆ ಅನುಗ್ರಹಿಸಿರುವ ವರ !

ಸಂತೋಷ ! ನಿನ್ನ ಸಾಹಸವನ್ನು ತೋರು ! ಆದರೆ ಇಂತಹ ತಂತ್ರಗಳಿಂದ ಮೈಸೂರಿಗೆ ಜಯವಾಗುವುದಿಲ್ಲ ಪರಾಕ್ರಮದಿಂದಲೇ ನಮಗೆ ಜಯವಾಗಬೇಕು

ಹುಜೂರು, ಮಾಫ್ ಮಾಡಬೇಕು ನನ್ನದೊಂದು ಪ್ರಶ್ನೆ ಇದೆ ನಮ್ಮ ಪರಾಕ್ರಮಕ್ಕೇನೂ ಕೊರತೆಯಿಲ್ಲ ಅಪಾರ ಸೈನ್ಯವಿದೆ ಪ್ರತಿಷ್ಠಿತರಾದ ಸೇನಾನಾಯಕರಿದ್ದಾರೆ ಇಷ್ಟು ಸಂಪತ್ತು ಇದ್ದರೂ ನಮ್ಮ ಸೈನ್ಯಗಳು ದಿನದಿನಕ್ಕೆ ಹಿಮ್ಮೆಟ್ಟುತ್ತಿರುವುದು ಸನ್ನಿಧಾನಕ್ಕೆ ವೇದ್ಯವಿರಬಹುದು! ಇದಕ್ಕ ಕಾರಣವೇನು ?

ನಾನೂ ಅದನ್ನೇ ಚಿಂತಿಸುತ್ತಿದ್ದೇನೆ ಇದರಲ್ಲಿ ಏನೋ ತಂತ್ರವಿರಬಹುದು ಆದರೆ ಅದರಲ್ಲಿ ಒಂದು ರಣಕೌಶಲವನ್ನು ಆಲೋಚಿಸಿದ್ದೇನೆ ಶತ್ರುಗಳು ಮುಂದೆ ಮುಂದೆ ಬಂದರೆ ನಮ್ಮ ಸೈನ್ಯಗಳು ಶತ್ರು ಸೈನ್ಯದ ಹಿಂದೆ ಇದೆ ಹಿಂದುಗಡೆಯಲ್ಲಿ ನಮ್ಮ ಸೈನ್ಯ, ಮುಂದುಗಡೆ ನಮ್ಮ ಸೈನ್ಯ ಮಧ್ಯೆ ಇಂಗ್ಲೀಷರ ಸೈನ್ಯ ಸಿಕ್ಕಿಕೊಂಡರೆ ನಾವು ಅವರನ್ನು ಹುಟ್ಟಡಗಿಸಬಹುದು.

ಈ ರಣವ್ಯೂಹಕೌಶಲವು ಅಮೋಘವಾದುದೇ ಹೌದು ಆದರೆ ನಮ್ಮವರೇ ತಂತ್ರಕ್ಕೆ ಒಳಗಾಗಿದ್ದಾರೆ ಈ ಆಲೋಚನೆಗಳೆಲ್ಲವೂ ವ್ಯರ್ಥವಾಗುತ್ತವೆ

ಬೇಕೂಫ್, ನೀನು ಯಾವಾಗಲೂ ಕುತಂತ್ರಿ ಮಸಲತ್ತುಗಾರ ! ನೀಚಬುದ್ಧಿಯವ ! ನಿನ್ನ ಪ್ರಶ್ನೆಗೆ ನೀನೇ ಉತ್ತರ ಹೇಳು

ಖಾವಿಂದ್ ! ಎಂದಾದರೊಂದು ದಿನ ಪ್ರಶ್ನೆಗೆ ನಾನೇ ಉತ್ತರ ಹೇಳುತ್ತೇನೆ ಖಾವಂದರವರೇ ನಾನು ಹೋಗುವ ಕಾರ್ಯವು ಅಸಾಧ್ಯ ಸಾಹಸ ಬದುಕಿಬರುತ್ತೇನೊ ಇಲ್ಲವೋ ನನಗೆ ಸಂಶಯ. ನಾನು ಸನ್ನಿಧಾನದಿಂದ ಹೊರಡುವಾಗ ಮನಬಿಚ್ಚಿ ಎರಡ ಮಾತನಾಡಿ ಹೋಗಬೇಕೆಂದು ಆಶೆ ! ಅಪ್ಪಣೆಯಾದರೆ ನನ್ನ ಹೃದಯದ ಯಾತನೆಯನ್ನು ಹೇಳಿಕೊಳ್ಳುತ್ತೇನೆ

ಹೇಳು ಮಿರ್‌ಸಾದಕ್ ! ನಿನ್ನ ಮನಸ್ಸಿನಲ್ಲಿ ಏನಿದೆಯೋ ಅದನ್ನು ಪೂರ್ಣ ಮಾಡುತ್ತೇನೆ.

ಹುಜೂರು, ನಾನು ಬಾಲ್ಯದಿಂದ ತಮ್ಮ ಸ್ನೇಹಿತ ನಾನೆಷ್ಟೋ ತಪ್ಪುಗಳನ್ನು ಮಾಡಿದ್ದೇನೆ ತಾವು ಕ್ಷಮಿಸಿದ್ದೀರಿ. ಈಚೆಗೆ ದೌಲತ್‌ರಾಣಿಯವರ ಸಹವಾಸವು ತಮಗೆ ಬೆಳೆದು ನನ್ನಲ್ಲಿ ಅಹಿತವಾಗಿದೆ ನನ್ನನ್ನು ಕಂಡರೆ ತಮಗೆ ಆಗುವುದೇ ಇಲ್ಲ ಈ ದುಃಖವು ಎಷ್ಟೋ ಬಾರಿ ನನ್ನ ಹೃದಯದಲ್ಲಿ ಎದ್ದುಬಂದಿದೆ ಆತ್ಮಹತ್ಯ ಮಾಡಿಕೊಳ್ಳಬೇಕೆಂದು ಎಷ್ಟೋ ಸಾರಿ ಪ್ರಯತ್ನಪಟ್ಟಿದ್ದೇನೆ ಅದು

ಹೇಡಿಯ ಕೆಲಸವೆಂದು ಅಂತರಾತ್ಮವು ಹಿಂದಕ್ಕೆ ಸೆಳೆಯುತ್ತದೆ ಅದಕ್ಕಾಗಿಯೇ ಈಗ ಶತ್ರುಸೈನ್ಯಕ್ಕೆ ಹೋಗಿ, ಯಾವುದಾದರೊಂದು ಅದ್ಭುತ ಸಾಹಸ ಮಾಡಿ, ಪ್ರಾಣ ಬಿಡಬೇಕೆಂದು ಸಂಕಲ್ಪ ಮಾಡಿದ್ದೇನೆ

ನೀನು ಹುಚ್ಚ ! ಭಾವನಾತರಂಗಗಳಿಂದ ಭ್ರಾಂತನಾಗಿದ್ದೀಯೇ ! ದೌಲತ್ ರಾಣಿಯವರು ನಿನಗೇನು ಅಪಕಾರ ಮಾಡಿದರು ?

ಖಾವಿಂದ್, ಅವರ ಮಾತನಾಡಲು ನನಗೆ ಶಕ್ತಿಯಿಲ್ಲ. ಅಧಿಕಾರವಿಲ್ಲ ಅವರ ಹೆಸರೆತ್ತುವುದಕ್ಕೂ ನನಗೆ ಅರ್ಹತೆ ಇಲ್ಲ ಅವರು ಇಂದಲ್ಲ ನಾಳೆ ಮಹಾರಾಣಿಯಾಗಿ ಈ ಸಿಂಹಾಸನವನ್ನೇರುವವರು ಆದರೆ, ಅವರಿಗೆ ನನ್ನ ಮೇಲೆ ಅತ್ಯಂತ ದ್ವೇಷವಿದೆ

ದ್ವೇಷವೇಕೆ ?

ನಗರದ ಯುದ್ಧಕ್ಕೆ ನಾನೇ ಕಾರಣಕರ್ತನೆಂದು ಅವರು ತಿಳಿದಿದ್ದಾರೆ

ನೀನು ಹೇಗೆ ಕಾರಣಕರ್ತ ?

ಹುಜೂರು, ತಮ್ಮ ಪ್ರಣಯಪತ್ರವನ್ನು ನಾನೇ ಅಲ್ಲವೇ ಮೊದಲು ದೌಲತ್ ರಾಣಿಯವರ ಸನ್ನಿಧಾನಕ್ಕೆ ಕೊಂಡು ಹೋದವನು

ಆ ಪತ್ರದಲ್ಲಿ ದೋಷವೇನಿದೆ ಅಂದು ಆ ಪತ್ರವನ್ನು ನೀನು ಕೊಂಡುಹೋಗದಿದ್ದರೂ, ನಾನೇ ಸಾಕ್ಷಾತ್ತಾಗಿ ಹೋಗಿ ಅವರಲ್ಲಿ ಪ್ರಣಯ ಭಿಕ್ಷೆಯನ್ನು ಬೇಡುತ್ತಿದ್ದೆ. ಅದನ್ನು ಅವರು ಚೆನ್ನಾಗಿ ಬಲ್ಲರು

ಹುಜೂರು ! ನಾನೊಂದು ಅಂತರಂಗದ ಮಾತು ಕೇಳುತ್ತೇನೆ. ತಾವು ಇತ್ತೀಚೆಗೆ ಬಹಳ ಸಂತೋಷದಿಂದ ಇದ್ದೀರಿ ಉತ್ಸಾಹಿತರಾಗಿದ್ದೀರಿ ಉತ್ತೇಜಿತರಾಗಿದ್ದೀರಿ ! ಇದಕ್ಕೊಂದು ವಿಶೇಷ ಕಾರಣವಿರಬೇಕು ಅದನ್ನು ನಾನೊಬ್ಬನಲ್ಲದೇ ಬೇರೆ ಯಾರೂ ಅರ್ಥಮಾಡಿಕೊಳ್ಳಲಾರರು ಕೊಡಗಿನ ವಿಜಯೋತ್ಸವದಿಂದೀಚೆಗೆ ದೌಲತ್ ರಾಣಿಯವರು ತಮ್ಮನ್ನು ವರಿಸಿದ್ದಾರೆಂದು ನಾನು ಊಹಿಸಿದ್ದೇನೆ. ವಿವಾಹವೇ ಆಗಿದೆಯೆಂದು ನಂಬಿದ್ದೇನೆ

ಸುಲ್ತಾನ್—(ದೀರ್ಘ ನಿಶ್ವಾಸವನ್ನು ಬಿಟ್ಟು) ಮೀರ್ ಸಾದಕ್, ಅಲ್ಲಿಗೆ ನಿಲ್ಲಿಸು! ಅದೆಲ್ಲಾ ಸುಳ್ಳು ! ದೇವರ ಇಷ್ಟವು ಅದಕ್ಕೆ ವ್ಯತಿರಿಕ್ತವಾಗಿರುವಂತಿದೆ. ನಿನ್ನ ಸಂದೇಹಕ್ಕಿಂತಲೂ ಪ್ರಬಲವಾದ ಸಂದೇಹವು ನನಗಿದೆ, ದೌಲತ್ ರಾಣಿಯವರು ಇಯಜ್ ಖಾನರನ್ನೇ ಮದುವೆಯಾಗಿದ್ದಾರೆಂದು ! ಮೀರ್ ಸಾದಕ್ ! ಆ ದೌಲತ್ತಳು ಮೈಸೂರಿನ ಮಹಾರಾಣಿಯಾಗುವುದಿಲ್ಲ ಅದಕ್ಕಿಂತಲೂ ಮಹತ್ತರವಾದ ಶಕ್ತಿ ಅವಳದು ದೌಲತ್ತಳು ಮೈಸೂರಿನ ಅಧಿಷ್ಠಾತ್ರಿಯಾಗುವಳು ಅವಳ ಹೃದಯವು ಅಮೃತದಂತಹುದು ಈ ಯುದ್ಧದಲ್ಲಿ ನಾನು ನಿನಗೆ ದೌಲತ್ತಳ ಅನುಗ್ರಹವನ್ನು ತೆಗೆದು

ಕೊಡುತ್ತೇನೆ. ಹೋಗು, ಇನ್ನು ಹೊರಟುಹೋಗು. ನನ್ನನ್ನು ಏಕಾಂತದಲ್ಲಿ ಬಿಟ್ಟು ಹೋಗು. ಈ ಯುದ್ಧವನ್ನು ಒಂದು ಕ್ಷಣ ಮರೆತು, ಈ ರಾಜ್ಯಾಧಿಕಾರವನ್ನು ಒಂದು ಕಡೆಗಿಟ್ಟು ನನ್ನ ಮನಸ್ಸನ್ನು ಸುಖಸಾಗರದಲ್ಲಿ ತೇಲಿಬಿಡುತ್ತೇನೆ

ಮಿರ್‌ಸಾದಕನು ನೆಲಮುಟ್ಟಿ ಸಲಾಂ ಮಾಡಿ ಹೊರಟುಹೋದನು

ದೌಲತ್ ! ನೀನು ಎಂತಹ ರಮಣಿ ನಿನ್ನ ಕಣ್ಣುಗಳು ಎಂಥಾ ತೇಜೋಮಯವಾದ ಕಣ್ಣುಗಳು. ನಿನ್ನ ಮಂದಹಾಸವು ಎಂತಹ ಮನೋಹರವಾದುದು, ನಿನ್ನ ಮಾತುಗಳು ಹೇಗೆ ಅಮೃತವನ್ನು ಚೆಲ್ಲುತ್ತವೆ, ನೀನು ನನ್ನನ್ನು ಹುಚ್ಚನನ್ನಾಗಿ ಮಾಡಿರುವೆ. ಇಯಜ್‌ಖಾನನಿಗೂ ಹುಚ್ಚು ಹಿಡಿಸಿರುವೆ, ನೀನು ನಮ್ಮಿಬ್ಬರನ್ನೂ ಅಡಿಗಡಿಗೆ ಮೋಸಮಾಡುತ್ತಿರುವೆ, ಇಲ್ಲ ! ನಾವೇ ನಿನ್ನ ಮೋಹದ ಮಾಯೆಯಲ್ಲಿ ಸಿಕ್ಕಿ ಅಡಿಗಡಿಗೆ ಮೋಸಹೋಗುತ್ತಿದ್ದೇವೆ ನೀನು ರಾಣಿಯಾಗಿದ್ದರೆ ಈ ಮೈಸೂರಿಗೆ ಇಷ್ಟೊಂದು ಕಷ್ಟಗಳು ಬರುತ್ತಲೆ ಇರಲಿಲ್ಲ ನೀನು ಬುದ್ಧಿಯಲ್ಲಿ ಚತುರೆ, ಶೃಂಗಾರದಲ್ಲಿ ಚತುರೆ, ರಾಜಕೀಯದಲ್ಲಿ ಚತುರ, ಯುದ್ಧವಿಗ್ರಹಗಳಲ್ಲಿ ಚತುರ, ಆ ಭಗವಂತನು ನಿನ್ನ ಸೃಷ್ಟಿಯಲ್ಲಿ ಎಷ್ಟೊಂದು ಚಮತ್ಕಾರವನ್ನು ತೋರಿದ್ದಾನೆ ತಪ್ಪು ನಿನ್ನದಲ್ಲ, ನನ್ನದೂ ಅಲ್ಲ, ಅದು ದೊಡ್ಡ ನವಾಬರ ತಪ್ಪು ಅವರು ಅಂದೇ ನಿನ್ನನ್ನು ಮದುವೆ ಮಾಡಿ ಕೊಟ್ಟಿದ್ದರೆ ಎಷ್ಟು ಚೆನ್ನಾಗಿತ್ತು ಈ ಸುಲ್ತಾನೀರಾಜ್ಯಕ್ಕಿಂತಲೂ ಅದು ಮಿಗಿಲಾದ ವರಪ್ರದಾನವೆಂದು ಭಾವಿಸುತ್ತಿದ್ದೆ ದೌಲತ್ತಳು ದೊಡ್ಡ ನವಾಬರಿಗೆ ಪ್ರಮಾಣವಚನವನ್ನು ಕೊಟ್ಟಿರಬಹುದು ಆದರೇನು ? ಅದಕ್ಕೂ ಕಾಲವು ಬಂದೇಬಿಟ್ಟಿದೆ ಈ ಯುದ್ಧವು ಪೂರೈಸುತ್ತಲೇ ಅವಳು ನನ್ನನ್ನು ಮದುವೆಯಾಗಲೇಬೇಕು. ಇದೇನು ? ಈ ದೌಲತ್ತಳನ್ನು ವಿವಾಹ ಮಾಡಿಕೊಳ್ಳುವುದು, ಭಗವಂತ ನನ್ನ ತಪಸ್ಸು ಮಾಡಿದಂತಾಗಿದೆ ಹೌದು, ಅವಳು ಅಂತಹ ದೇವೀ ಮೂರ್ತಿ, ಎಂತಹ ಸೌಂದರ್ಯ, ಎಂತಹ ಬುದ್ಧಿ, ಅದೆಂತಹ ತೇಜಸ್ಸು ನಿಜವಾಗಿ ಈ ದಕ್ಷಿಣಾವರ್ತದ ಮಹಾರಾಣಿಯಾಗುವ ಹೆಣ್ಣೇ ಅವಳು ಎಂದು ಆಲೋಚಿಸುತ್ತಿದ್ದನು ಅವನ ಮನಸ್ಸಿನ ಮೇಲೆ ಪ್ರೇಮತರಂಗಗಳು ಎದ್ದುಬರುತ್ತಿದ್ದವು ಅವನ ಕಣ್ಣುಗಳ ಮುಂದೆ ದೌಲತ್ತಳು ಬಂದು ನಿಂತಂತೆ ಆಗಿತ್ತು ಥಟ್ಟನೆ ಯುದ್ಧದ ಜ್ಞಾಪಕ ಬಂತು ಈ ಯುದ್ಧವು ದೌಲತ್ತಳಿಗಾಗಿ, ಈ ರಾಜ್ಯವು ದೌಲತ್ತಳಿಗಾಗಿ, ನಾನು ದೌಲತ್ತಳಿಗಾಗಿ, ನನ್ನ ಸರ್ವಸ್ವವೂ ದೌಲತ್ತಳಿಗಾಗಿ, ದೌಲತ್ತಳೇ ನನ್ನ ಸರ್ವಸ್ವ ಎಂದು ನುಡಿಯುತ್ತಿದ್ದನು.

ಅಷ್ಟರಲ್ಲಿ ಸೇವಕನು ಮುಂದೆ ಬಂದು ಮುಜರೆ ಮಾಡಿದನು "ಖಾವಿಂದ್ ! ಶತ್ರುಗಳ ಪಾಳಯದಿಂದ ಗುಪ್ತಚಾರರು ಬಂದಿದ್ದಾರೆ"ಂದು ಅರಿಕೆ ಮಾಡಿದನು ಅವರನ್ನು ಒಳಗೆ ಕರೆತರುವಂತೆ ಸುಲ್ತಾನನ ಅಪ್ಪಣೆಯಾಯಿತು. ಗುಪ್ತಚಾರರು

ಬಂದು ಕೈ ಮುಗಿದು ನಿಂತುಕೊಂಡರು ಸುಲ್ತಾನನು ಮುಗುಳುನಗುವನ್ನು ನಕ್ಕು ಅವರ ಕ್ಷೇಮಲಾಭವನ್ನು ವಿಚಾರಿಸಿದನು ಅವರನ್ನು ಆಸನದಮೇಲೆ ಕುಳಿತು ಕೊಳ್ಳು ವಂತೆ ಸನ್ನೆಮಾಡಿದನು ಅನಂತರ ವಿಶೇಷ ಸಮಾಚಾರನೇನೆಂದು ಪ್ರಶ್ನೆ ಮಾಡಿದನು. ಗೂಢಚಾರರು 'ಹುಜೂರು ! ಶತ್ರುಪಾಳಯದ ಸಮಾಚಾರವು ಅಷ್ಟು ಸಂತೋಷಕರ ವಾಗಿಲ್ಲ ನಾವುಗಳು ಸನ್ನಿಧಾನದಿಂದ ಶತ್ರುಪಾಳಯಕ್ಕೆ ಹೋಗಿ ಸೇರಿ ಎರಡುತಿಂಗಳು ಗಳಾದುವು ಅಲ್ಲಿ ನಾರಣಪ್ಪನು ಉಪ್ಪುಕಡಲೆ, ಹುರಿದವಲಕ್ಕಿ ಮಾರುವವನು, ನಾನು ಜ್ಯೋತಿಷ್ಯವನ್ನು ಹೇಳುವವನು ಕಂಪನಿಯ ಸೈನಿಕರೆಲ್ಲಾ ಬಹಳ ಖುಷಿಯಿಂದ ಇದ್ದಾರೆ. ಅತ್ಯಂತ ಉತ್ಸಾಹದಿಂದ ಇದ್ದಾರೆ. ಒಂದು ಯುದ್ಧದಲ್ಲಾದರೂ ಅವರಿಗೆ ಸೋಲಾಗಲಿಲ್ಲ ಅವರು ಸುಸೂತ್ರವಾಗಿ ಬರುತ್ತಿದ್ದಾರೆ ಈ ಬಾರಿ ಶ್ರೀರಂಗಪಟ್ಟಣ ವನ್ನು ನೆಲಸಮಮಾಡದೆ ಬಿಡುವುದಿಲ್ಲವೆಂದು ಹೇಳುತ್ತಾರೆ. ಅವರ ಸೈನ್ಯದಲ್ಲಿ ಹಿಂದೂ ಸೈನಿಕರಿದ್ದಾರೆ ಮಲಬಾರಿಗಳಿದ್ದಾರೆ, ಬ್ರಾಹ್ಮಣ ಮುತ್ಸದ್ದಿಗಳಿದ್ದಾರೆ. ಮಹಾರಾಷ್ಟ್ರ ರಾಯಭಾರಿಗಳಿದ್ದಾರೆ ಅನ್ಯಸೈನ್ಯವು ಬೇಗ ಬೇಗ ರಾಜ್ಯದ ಮೇಲೆ ಬರುತ್ತಿದೆ.

ಒಳ್ಳೆಯದು ಅನೇಕ ಕಡೆಗಳಲ್ಲಿ ನಮ್ಮ ಕಡೆಯುವರಿಗೆ ಜಯವಾಗಿದೆಯೆಂದು ಸರ್ಕಾರಿ ಸುದ್ದಿಗಳು ಬಂದಿವೆಯಲ್ಲ, ಅದಕ್ಕೇನು ಹೇಳುವಿರಿ ?

ಏನೂ, ಇಲ್ಲ ಪ್ರಭು ! ಒಂದೊಂದು ವೇಳೆ ಮಧ್ಯೆ ಮಧ್ಯೆ ನಮ್ಮವರು ಬಲ ವಾಗಿ ಎದುರಿಸಿದ್ದಾರೆ ಅದು ನಮ್ಮ ಸೈನ್ಯಿಕರು ಧಣಿಯಲ್ಲಿಟ್ಟಿರುವ ಭಕ್ತಿ ಕಂಪ ನಿಯ ಸೈನ್ಯವು ಆ ಮಾರ್ಗವನ್ನು ಬಿಟ್ಟು ಬೇರೆ ಮಾರ್ಗದಿಂದ ಮುಂದೆ ಮುಂದೆ ಬಂದಿದೆ ನಮ್ಮ ಫೌಜುದಾರರುಗಳು ಅತ್ತಕಡೆ ನಮ್ಮ ಸೈನ್ಯವನ್ನು ತಿರುಗಿಸಿ ಪುನಃ ಶತ್ರು ಸೈನ್ಯವನ್ನು ಎದುರಿಸಿ ಯುದ್ಧ ಮಾಡಲೇ ಇಲ್ಲ

ನಮ್ಮ ಸೇನಾಧಿಪತಿಗಳು ಹಿಂದುಗಡೆಯಿಂದ ಬಂದು ಶತ್ರು ಸೈನ್ಯದ ಮೇಲೆ ಬಿದ್ದು ಅವನ್ನು ನಾಶಮಾಡಬಹುದು

ಖಾವಿಂದ್ ! ಅದು ಭ್ರಾಂತಿ. ಶತ್ರುಗಳು ನೂರಾರು ಮೈಲಿಗಳು ಮುಂದು ವರಿದು ಬಂದಿದ್ದಾರೆ ಒಂದು ಬಾರಿಯಾದರೂ, ನಮ್ಮ ಸೈನ್ಯಗಳು ಹಿಂದಿನಿಂದ ಬಂದು ಶತ್ರು ಸೈನ್ಯವನ್ನು ಮುತ್ತಲಿಲ್ಲ.

ಹಾಗಾದರೆ, ನಮ್ಮ ಸೈನ್ಯಗಳು ಏನಾದುವು ? ಸುಲ್ತಾನೀ ಸೈನ್ಯವೆಲ್ಲವೂ ಬೇರೆ ಬೇರೆ ಮಾರ್ಗಗಳಿಂದ ತಿರೋಗಮನ ಮಾಡಿ ರಾಜಧಾನಿಯ ಕಡೆಗೆ ಬರುತ್ತಿವೆ.

ಸುಲ್ತಾನನು ಸ್ವಲ್ಪ ಹೊತ್ತು ಮೌನವಾಗಿದ್ದನು ಅನಂತರ, ರಾಮಣ್ಣನ ಕಡೆ ದೃಷ್ಟಿಸಿ ನೋಡಿ, ಹೀಗಾಗಲು ಕಾರಣವೇನು ? ತಪ್ಪು ಎಲ್ಲಿದೆ ?' ಎಂದನು.

ಖಾವಂದರವರೇ! ಮಾಫ್ ಮಾಡಬೇಕು ಸನ್ನಿಧಾನದಲ್ಲಿ ಅರಿಕೆ ಮಾಡಲು ಭಯವಾಗುತ್ತದೆ

ಭಯವೇಕೆ? ಹೇಳಿರಿ! ಗೂಢಚಾರರ ಕೆಲಸವೇ ಅದು ನೀವು ಹೇಳುವುದೆಲ್ಲಾ ಹದಿನಾರಾಣೆ ಕೂಡ ಸತ್ಯವೆಂದು ನಾವು ಭಾವಿಸುವುದೇ ಇಲ್ಲ!

ಖಾವಂದರವರು ಅಪ್ಪಣೆ ಕೊಡಿಸುವುದೇನೋ ನಿಜ! ಈಗ ನಾವು ಹೇಳುವುದನ್ನು ಸೂರ್ಯಚಂದ್ರರಷ್ಟು ಸತ್ಯವೆಂದು ನಂಬೋಣವಾಗಲಿ! ನಮ್ಮ ಜವಾಬ್ದಾರಿಯು ಎಂತಹುದೆಂದು ನಮಗೆ ಗೊತ್ತು ನಾವು ಹೇಳುವುದು ಸನ್ನಿಧಾನಕ್ಕೆ ನಿಜವೆಂದು ತೋರಲಿ, ಸುಳ್ಳೇ ಎಂದು ತೋರಲಿ, ಸುಳ್ಳೇ ಎಂದು ಸಾಬೀತಾಗಲೀ ಈ ಸಮಾಚಾರವು ಹೇಗೋ ಹೊರಪಟ್ಟು ಯಾವನೋ ನಮ್ಮ ತಲೆಯನ್ನು ಹಾರಿಸಿಬಿಡುತ್ತಾನೆಂದು ನಿರ್ಧರ ಮಾಡಿದ್ದೇವೆ ಆದರೂ, ಸನ್ನಿಧಾನದಲ್ಲಿ ಇದನ್ನು ಬಿಚ್ಚಿಡಕೂಡದೆಂದು ನಿಶ್ಚಯ ಮಾಡಿದ್ದೇವೆ

ಅಂತಹ ವಿಷಯವೇನು? ಏನಾದರೂ ಪಿತೂರಿ ನಡೆದಿದೆಯೋ?

ಹೌದು! ಪಿತೂರಿ! ಭಯಂಕರವಾದ ಪಿತೂರಿ! ಉಪ್ಪು ಉಂಡ ಮನೆಗೆ ದ್ರೋಹವೆಣಿಸಿರುವ ಪಿತೂರಿ!

ರಾಮಣ್ಣ, ನಮ್ಮ ಸರ್ಕಾರದಲ್ಲಿ ಹಿಂದೂ ಸರದಾರರು ಯಾರಾದರೂ ಈ ಪಿತೂರಿಯನ್ನು ನಡೆಸಿದ್ದಾರೆಯೋ?

ಛೆ! ಛೆ! ಎಲ್ಲರೂ ಮುಸಲ್ಮಾನ ಸರದಾರರು! ಸನ್ನಿಧಾನಕ್ಕೆ ಆಪ್ತರಂತೆ ನಡೆದುಕೊಳ್ಳುತ್ತಿರುವ ಸೇನಾನಾಯಕರುಗಳು! ಮೈಸೂರು ಯುದ್ಧದಲ್ಲಿ ಗೆಲ್ಲಲಿ ಸೋಲಲಿ ಕಂಪನಿಯವರು ಅವರಿಗೆಲ್ಲಾ ಕಂಪನಿ ರಾಜ್ಯದಲ್ಲಿ ನವಾಬಗಿರಿಯನ್ನು ಕೊಡುವುದಾಗಿ ಭರವಸೆ ಕೊಟ್ಟಿದ್ದಾರೆ, ಬರೆದು ಕೊಟ್ಟಿದ್ದಾರೆ ಹೈದರಲ್ಲೀಖಾನ್, ಟಿಪ್ಪೂಸುಲ್ತಾನರಂತೆ ನಾವೂ 'ನವಾಬರಾಗಬಾರದೇಕೆ? ಎಂದು ಅವರು ದುರಾಶೆ ಪಟ್ಟಿದ್ದಾರೆ. ಅಲ್ಲಿದೆ ನಮ್ಮ ಸೋಲಿನ ಗುಟ್ಟು! ಹುಜೂರು ಮಾಫ್ ಮಾಡಬೇಕು ಇನ್ನು ಒಂದು ವಾರದಲ್ಲಿ ಶತ್ರು ಸೈನ್ಯವು ಮೇಲುಗೋಟೆಯ ಹತ್ತಿರ ಬರುತ್ತದೆ ಇದು ಸತ್ಯ! ತಾವು ಇದನ್ನು ನಂಬಬೇಕು.

ನೀವು ಹೇಳುವುದು ಬಲು ದೊಡ್ಡ ಸಮಾಚಾರ. ನಾವು ವಿಚಾರಣೆ ನಡೆಸುತ್ತೇವೆ. ಸುಳ್ಳಾದರೆ—

ನಮ್ಮನ್ನು ಶೂಲಕ್ಕೆ ಹಾಕಿಸಬಹುದು

ಗೂಢಚಾರರಿಬ್ಬರೂ ಅಪ್ಪಣೆ ಬೇಡಿದರು. ಅವರಿಗೆ ಸಾವಿರ ಸಾವಿರ ವರಹಗಳನ್ನು ಕೊಡುವಂತೆ ಸುಲ್ತಾನರ ಅಪ್ಪಣೆಯಾಯಿತು! ಈ ಸಂಗತಿಯನ್ನು ಎಲ್ಲಿಯಾ

ದರೂ ಬಾಯಿ ಬಿಟ್ಟೀರಿ ! ಇದು ಯಾವರೀತಿಯಲ್ಲಾದರೂ ಹೊರಗೆ ಬಂದರೆ ನಾಲಿಗೆಯನ್ನು ಸೀಳಿಸುತ್ತೇನೆ.

ಹುಕ್ಕುಂ ! ಮಹಾಸ್ವಾಮಿ ! ಅವರಿಬ್ಬರೂ ಹೊರಟು ಹೋದರು.

ಸುಲ್ತಾನನು ಚಿಂತಿಸ ತೊಡಗಿದನು ಇದು ನಿಜವಿರಬಹುದೇ ! ನಿಜವೇ ಇರಬೇಕು ಆ ಬ್ರಾಹ್ಮಣರ ಮಾತು ಯುಕ್ತಿ ಯುಕ್ತವಾಗಿದೆ ಆಹಾ ! ಈ ಸೇನಾಧಿಪತಿಗಳು ಎಂತಹ ನೀಚರು ಈಗ ನಾವೇನು ಮಾಡಬೇಕು ? ಹೀಗೆ ಸ್ವಲ್ಪ ಹೊತ್ತು ಚಿಂತಾಕ್ರಾಂತನಾಗಿದ್ದನು ಆದರೆ ಸುಲ್ತಾನನು ಇದರಿಂದ ಸ್ವಲ್ಪವೂ ಭಯಭ್ರಾಂತನಾಗಲಿಲ್ಲ ಇರಲಿ ! ಭಯವಿಲ್ಲ ! ರಾಜಧಾನಿಯ ಸಮೀಪದಲ್ಲಿಯೇ ಯುದ್ಧವಾಗಲಿ ರಾಜಧಾನಿಯಲ್ಲಿ ಹತ್ತರಷ್ಟು ಸಿದ್ಧತೆ ಇದೆ ಇಯಜ್‌ಖಾನರನ್ನು ಹೇಗಾದರೂ ಈಗ ರಾಜಧಾನಿಗೆ ಕರೆಸಬೇಕು ನಾನು ಅವರು ಇಬ್ಬರೇ ಈ ರಣರಂಗದಲ್ಲಿ ನಿಂತು ಈ ಇಂಗ್ಲೀಷರ ಸರ್ವಸೇನೆಯನ್ನು ಸದೆಬಡಿಯ ಬಲ್ಲೆವು ಎಂದು ಘೋಷ್ಟಿ ಮಾಡಿದನು ಪುನಃ ಗೂಢಚಾರರನ್ನು ಕರೆಸಿದನು ರಾಮಣ್ಣ ಮತ್ತು ನಾರಾಣಪ್ಪ ಇವರಿಬ್ಬರೂ ಬಂದು ನಿಂತರು.

ಸುಲ್ತಾನ್—ನೋಡಿರಿ ! ಜೋಯಿಸರೆ ! ನೀವು ಈ ಸಮಯದಲ್ಲಿ ಇಲ್ಲಿ ಇರುವುದಕ್ಕಿಂತಲೂ ಪರಸ್ಥಳದಲ್ಲಿರುವುದು ಮೇಲು ನೀವುಗಳು ನಗರಕ್ಕೆ ಹೋಗಿರಿ ಈ ಸಮಾಚಾರಗಳನ್ನೆಲ್ಲಾ ಇಯಜ್‌ಖಾನರವರಿಗೆ ತಿಳಿಸಿರಿ ನಾವು ಒಂದು ಗುಪ್ತಪತ್ರವನ್ನು ಕೊಡುತ್ತೇವೆ. ಅದನ್ನು ಅವರಿಗೆ ತಲಪಿಸಿರಿ ! ಹೇಗಾದರೂ ಅವರನ್ನು ಇಲ್ಲಿಗೆ ಬರುವಂತೆ ಮಾಡಬೇಕು

ಹುಜೂರಿನ ಆಜ್ಞೆಯನ್ನು ಶಿರಸಾ ಪಾಲಿಸುತ್ತೇವೆ.

## ಸೋನಾಮಹಲಿನ ಅಂತಃಪುರದಲ್ಲಿ

ದೌಲತ್ತಳು ಯಾವಾಗಲೂ ವಿಲಾಸಮಯಿ ! ರಾಗಮಯಿ ! ರಸಮಯಿ ! ಉತ್ಸಾಹಮಯಿ ! ಭಗವಂತನ ಸೃಷ್ಟಿಯೇ ಅಂತಹ ವಿಚಿತ್ರವಾದುದು ಜಗತ್ತಿನಲ್ಲಿ ಬ್ರಹ್ಮತ್ವವನ್ನು ಬಲ್ಲವರಿದಾರೆ ಆ ಬ್ರಹ್ಮ ಸೃಷ್ಟಿಯ ರಹಸ್ಯವನ್ನು ಕಂಡುಹಿಡಿದವರಿಲ್ಲ ಎಲ್ಲಿಯೋ ಒಂದು, ಲಕ್ಷಕ್ಕೊಂದು ಕೋಟಿಗೊಂದು. ದೌಲತ್ತಳಂತಹ ರತ್ನಗಳನ್ನು ಸೃಜಿಸುತ್ತಾನೆ ಈ ರತ್ನಕ್ಕೆ ಸಕಲ ಕಲೆಗಳ ಕುಂದಣವನ್ನು ಹಚ್ಚುತ್ತಾನೆ ಆ ಜೀವಕಮಲಗಳನ್ನು ಈ ಜಗತ್ಸಾಗರದಲ್ಲಿ ತೇಲಿಬಿಟ್ಟು ಆ ಆನಂದವನ್ನು ನೋಡುತ್ತಾನೆ. ಆ ರತ್ನಗಳನ್ನು ನನ್ನದು ನನ್ನದು ಎಂದುಕೊಳ್ಳುವವರು ಕೆಲವರು

ನನಗೆ ಬೇಕು ನನಗೆ ಬೇಕೆಂದು ಹಂಬಲಿಸುವವರು ಹಲವರು. ಅದನ್ನು ತಮ್ಮದೇ ಎಂದು ಧರಿಸುವವರು ಒಬ್ಬಿಬ್ಬರು. ನಿಜವಾಗಿ ಆ ಸಂತೋಷವನ್ನನುಭವಿಸುವವನು ಆ ದೇವರೊಬ್ಬನೇ ಇದನ್ನು ಕಂಡು ಪುರಾಣ ಕವಿಗಳು ಬ್ರಹ್ಮದೇವನು ತಾನೇ ಸೃಷ್ಟಿಸಿದ ಮಗಳನ್ನು ಮದುವೆಯಾದನು ಎಂದು ಕಥೆಯನ್ನು ಕಟ್ಟಿದ್ದಾರೆ. ದೌಲತ್ತಳಂತಹ ಜಗನ್ಮೋಹನ ಸ್ವರೂಪವು ಎಲ್ಲ ಕಾಲಗಳಲ್ಲಿಯೂ ಬರುವುದಿಲ್ಲ, ಎಲ್ಲ ದೇಶಗಳಲ್ಲಿಯೂ ಇರುವುದಿಲ್ಲ ! ಆ ರೂಪ ಸೌಭಾಗ್ಯವು ಮಿಂಚಿನಂತೆ ಲಗಾಗ ಮಾಯ ತನು ತಂದೊಡ್ಡಿ ಎತ್ತಿಕೊಂಡು ಹೋಗುವ ಪುಷ್ಪ ಸೌರಭದಂತೆ ! ಆಕಾಶದಲ್ಲಿ ಕಂಡು ಮಾಯವಾಗುವ ಕಾಮನ ಬಿಲ್ಲಿನಂತೆ ! ಸ್ವಪ್ನದಲ್ಲಿ ಕ್ಷಣಹೊತ್ತು ಕಂಡ ದಿವ್ಯ ಸಾಮ್ರಾಜ್ಯದಂತೆ ಅದನ್ನು ಎಲ್ಲರೂ ನೋಡುವುದು ಹೇಗೆ ? ಬ್ರಹ್ಮನು ಆ ಜೀವ ರತ್ನಗಳನ್ನು ವರ್ಣಿಸುವ ಶಕ್ತಿಯನ್ನು ಕವಿಗಳಿಗೆ ಕೊಟ್ಟಿದ್ದಾನ ನನಗೆ ಅಂತಹ ದಿವ್ಯ ಸೌಂದರ್ಯವನ್ನು ವರ್ಣಿಸುವ ಶಕ್ತಿ ಇಲ್ಲ ! ಕಾಳಿದಾಸನು ಶಕುಂತಲೆಯನ್ನು ಬಣ್ಣಿಸಿದ್ದಾನೆ. ಭಾಸನು ವಾಸವದತ್ತೆಯನ್ನು ವರ್ಣಿಸಿದ್ದಾನೆ ಬಾಣಭಟ್ಟನು ಕಾದಂಬರಿಯನ್ನು ಚಿತ್ರಿಸಿದ್ದಾನೆ ಜಯದೇವನು ರಾಧೆಯನ್ನು ಎರಕ ಹೊಯ್ದಿದ್ದಾನೆ ಮಾಘ ಕವಿಯು ನೂರಾರು ಅಮೃತ ಪುತ್ಥಳಿಗಳನ್ನು ನಿರ್ಮಿಸಿದ್ದಾನೆ ಅಲ್ಲಿದೆ ಆ ವರ್ಣನಾ ಚಮತ್ಕಾರ. ನಮ್ಮಂತಹ ಕತೆಗಾರರಿಗೇಕೆ ಆ ಹಂಬಲ ! ನಾವು ಕತೆಯನ್ನು ಮುಂದುವರಿಸೋಣ.

ಸೋನಾಮಹಲಿನ ಮೇಲು ಅಂತಸ್ತಿನಲ್ಲಿ ಎಡಪಾರ್ಶ್ವದ ಕೋಣೆ ದೌಲತ್ತಳ ಅಂತಃಪುರ ! ಆ ಕೋಣೆಗೆ ಕೇಸರೀಬಣ್ಣದ ರತ್ನಕಂಬಳಿಯನ್ನು ಹಾಕಿದೆ ಗೋಡೆಗಳೆಲ್ಲವೂ ಎಳೆಗೆಂಪುಬಣ್ಣ ಮೇಲುಗಡೆ ಚಿನ್ನದ ವರಕುಗಳಿಂದ ಕೆತ್ತಲ್ಪಟ್ಟ ಹಂಪ್ಪಿನ ಬಳ್ಳಿಗಳಪಿತಾನ, ನಾಲ್ಕುಮೂಲೆಗಳಲ್ಲಿಯೂ ಮೇಲಿನಿಂದ ತೂಗುಹಾಕುವ ಕಂದೀಲು ದೀಪಗಳು. ಬಾಗಿಲುಗಳಿಗೂ ವಾತಾಯನಗಳಿಗೂ ತೆಳುವಾದ ಕಲಾಪತ್ತಿನ ಫರದೆಗಳನ್ನು ಕಟ್ಟಿಬಿಟ್ಟಿದೆ ಗೋಡೆಯ ಪಕ್ಕದಲ್ಲಿ ಅಣಿಮಾಡಿಟ್ಟ ರಜತಪೀಠಗಳು ಆ ರಜತಪೀಠಗಳ ಮುಂದುಗಡೆ ಗಂಧದ ಮರದ ಕೆತ್ತನೆಯ ಕೆಲಸ ಮಾಡಿದ ಕಾಲುಮಣೆಗಳು. ಆ ಕಾಲುಮಣೆಗಳ ಮೇಲೆ ಸ್ವರ್ಣಪುತ್ಥಳಿಗಳು, ಪುತ್ಥಳಿಗಳ ಮುಕುಳಿತ ಹಸ್ತದಲ್ಲಿ ಪುಷ್ಪಗುಚ್ಛಗಳು, ಇಂತಹ ಭವ್ಯವಾದ ಅಂತಃಪುರದಲ್ಲಿ ವಿಶಾಲವಾದ ರಮಣೀಯವಾದ ದಂತದ ಕೆತ್ತನೆಯ ಕೆಲಸ ಮಾಡಿದ ಪರ್ಯಂಕ ಆ ಪರ್ಯಂಕದ ಮೇಲೆ ಹಂಸತೂಲಿಕಾತಲ್ಪ, ಕುತ್ತಣಿಗೆ ದಿಂಬುಗಳು ಆ ದಿಂಬುಗಳ ಮೇಲೆ ದೌಲತ್ತಳು ಅರ್ಧಶಾಯಿತಾವಸ್ಥೆಯಲ್ಲಿ ಮಲಗಿದ್ದಳು ! ಚಂದ್ರಗಾವಿಬಣ್ಣದ ಶೀರೆಯನ್ನುಟ್ಟಿದ್ದಳು. ಕಪ್ಪುಬಣ್ಣದ ರೇಶಿಮೆಯ ಕುಪ್ಪಸವನ್ನು ತೊಟ್ಟಿದ್ದಳು ಆ ಕಂಚುಕವು ದೌಲತ್ತಳ ಬಿಳಿಯ ಕಂಠವನ್ನು ಎತ್ತಿ ತೋರುತ್ತಾ ಬಿಗಿಯುತ್ತಿತ್ತು ಆ ಕಂಠದಲ್ಲಿ

ಮುಕ್ತಾಹಾರವು ರಂಜಿಸುತ್ತಿತ್ತು ಕಿವಿಗಳಲ್ಲಿ ನೇರಳೆಯಹಣ್ಣಿನಂತಹ ನೀಲಮಣಿಗಳು ಕಂಗೊಳಿಸುತ್ತಿದ್ದವು. ಬಿಚ್ಚಿದ ಕಚವು ಮೈಮೇಲೆ ಹಾರಾಡುತ್ತಿದ್ದಿತು. ದೌಲತ್ತಳು ದಿಂಬಿನ ಮೇಲೆ ಕೈಯಿಟ್ಟುಕೊಂಡು ಆ ಕೈಮೇಲೆ ತಲೆಯನ್ನೊರಗಿಸಿ ಆಲೋಚನಾ ಮಗ್ನಳಾಗಿದ್ದಳು

ಇಯಜ್ ಖಾನನು ಮೆಲ್ಲಡಿಯಿಡುತ್ತಾ ಆ ಅಂತಃಪುರವನ್ನು ಪ್ರವೇಶಿಸಿದನು. ಪರ್ಯಂಕದಲ್ಲಿ ಅರ್ಧಶಾಯಿತಾವಸ್ಥೆಯಲ್ಲಿರುವ ದೌಲತ್ತಳನ್ನು ಕಂಡನು ಸ್ವಲ್ಪ ಹೊತ್ತು ನಿಂತಲ್ಲಿಯೇ ನಿಂತು ದೌಲತ್ತಳ ಸೌಂದರ್ಯವನ್ನು ನೋಡುತ್ತಿದ್ದನು. ಹಾಗೆಯೇ ಮುಂದುವರಿದು ಪರ್ಯಂಕದ ಸಮೀಪದಲ್ಲಿ ಹೋಗಿ ನಿಂತನು. ದೌಲತ್ತಳ ದೃಷ್ಟಿಯು ಖಾನನ ಕಡೆ ಬೀಳಲೇ ಇಲ್ಲ. ಪರ್ಯಂಕದ ಮೇಲೆ ಕುಳಿತು ದೌಲತ್ತಳ ಭುಜವನ್ನು ಮೃದುವಾಗಿ ತಟ್ಟಿದನು ದೌಲತ್ತಳು ಗಾಬರಿಯಿಂದ ಜಗ್ಗನೆದ್ದಳು ಸಮೀಪದಲ್ಲಿ ಕುಳಿತಿದ್ದ ಖಾನನ ಮುಖವನ್ನು ನೋಡಿ ನಕ್ಕಳು

ರಾಣಿಯವರು ಇಷ್ಟೊಂದು ಯೋಚನಾಕ್ರಾಂತರಾಗಿರುವುದೇತಕ್ಕೆ ?

ಏತಕ್ಕೆ ! ತಿಳಿಯುವುದಿಲ್ಲವೇ ? ಯುದ್ಧದ ಸಮಾಚಾರವನ್ನು ಕೇಳುತ್ತಿಲ್ಲವೇ? ಈ ದಿನ ರಾಜಧಾನಿಯಿಂದ ಬಂದಿರುವ ಗೂಢಚಾರರು ನಿಮಗೆ ಎಲ್ಲವನ್ನೂ ತಿಳಿಸ ಲಿಲ್ಲವೆ ?

ತಿಳಿಸಿದರು ! ತಿಳಿದುಕೊಂಡೆ !

ಸರಿ ಮತ್ತೇನು ಬೇಕು ಈಗ ಯುದ್ಧವು ರಾಜಧಾನಿಯನ್ನು ಸಮೀಪಿಸುತ್ತಿದೆ. ಈ ಯುದ್ಧದಲ್ಲಿ ಶ್ರೀರಂಗಪಟ್ಟಣವು ಹಾರಿಹೋಗುತ್ತದ ಸುಲ್ತಾನರು ಕಂಪನಿಯು ವರ ಬಂದಿಗಳಾಗಿ ಆಮರಣಾಂತ ಕಾರಾಗೃಹದಲ್ಲಿ ಕೊಳೆಯಬೇಕಾಗುತ್ತದೆ

ಖಾನನು ನಗುವನ್ನು ನಕ್ಕು, ವೀರರಮಣಿಯಾದ ನೀನು ಇಷ್ಟೊಂದು ಭಯ ಪಡುವ ಹೆಂಗಸೆಂದು ನಾನೆಂದೂ ಭಾವಿಸಿರಲಿಲ್ಲ ! ದೌಲತ್ ! ಯುದ್ಧಶಾಸ್ತ್ರವನ್ನರಿ ಯೆಯಾ ನೀನು ! ಶ್ರೀರಂಗಪಟ್ಟಣದಲ್ಲಿ ಎಷ್ಟು ಸೈನ್ಯವಿದೆ ಎಷ್ಟು ತೋಪುಗಳಿವೆ. ನಮ್ಮ ನಗರದ ಸೈನ್ಯದ ಬಲವೆಷ್ಟು ? ಯುದ್ಧವು ಆರಣಿಯಲ್ಲಿ ಆದರೇನು ? ಶ್ರೀರಂಗ ಪಟ್ಟಣದಲ್ಲಿಯೇ ಆದರೇನು ? ಕಂಪನಿಯವರ ಸೈನ್ಯ ನಮ್ಮ ಸೈನ್ಯದ ಅರ್ಧದಷ್ಟಿಲ್ಲ ! ಮರಾಟರ ಸೈನ್ಯವು ಬಂದುಬಿಡುತ್ತೆಂದು ಕಂಪನಿಯವರು ಆಶೆ ಇಟ್ಟುಕೊಂಡಿದ್ದಾರೆ. ಮರಾಟರ ಸೈನ್ಯವು ಬರುವುದೇ ಇಲ್ಲ ! ಬಂದರೂ ಯುದ್ಧಮಾಡುವುದಿಲ್ಲ ! ಯುದ್ಧಕ್ಕೆ ನಿಂತರೂ ಈ ಬಾರಿ ಅವರು ನಮ್ಮ ಸೈನ್ಯಕ್ಕೆ ಎಣೆಯಲ್ಲ

ದೌಲತ್ — (ನಗುತ್ತಾ) ನಿಮ್ಮ ಆಕಾಶಪುರಾಣವೆಲ್ಲವೂ ಸರಿಯಾಗಿಯೇ ಇದೆ. ನೀವು ಎಲ್ಲಿ ? ನಿಮ್ಮ ಸೈನ್ಯವೆಲ್ಲಿ ? ರಾಜಧಾನಿಯಿರುವುದೆಲ್ಲಿ ? ಯುದ್ಧವೆಲ್ಲಿ ? ನನ ಗೊಂದೂ ಅರ್ಥವಾಗುವುದಿಲ್ಲ.

ರಾಣಿಯವರೇ ! ಇದೆಲ್ಲಾ ನನಗೆ ಹದಿನೈದು ದಿನಗಳ ಹಿಂದೆಯೇ ತಿಳಿದಿತ್ತು. ರಾಜಧಾನಿಯ ಗೂಢಚಾರರು ಇಲ್ಲಿಗೆ ಓಡುವ ಮುಂಚೆಯೇ ನಮ್ಮ ಗೂಢಚಾರರು ಸಮಾಚಾರಗಳನ್ನು ಬೇಧಿಸಿ ತಿಳಿದುಕೊಂಡು ಬಂದು ತಿಳಿಸಿದ್ದರು ನಮ್ಮ ಸೈನ್ಯಗಳು ರಾಜಧಾನಿಯ ಕಡೆ ಹೊರಟು ಹತ್ತು ದಿನಗಳಾಯಿತು ನಾವು ಒಳ ಮಾರ್ಗದಿಂದ ವೇಗವಾಗಿ ಪ್ರಯಾಣ ಮಾಡಿ ಆ ಸೈನ್ಯಕ್ಕೆ ಸೇರುತ್ತೇವೆ.

ಖಾನರವರೇ, ಸುಲ್ತಾನರವರು ನಿಂತು ಯುದ್ಧ ಮಾಡಿದರೆ ಶ್ರೀರಂಗಪಟ್ಟಣಕ್ಕೆ ಏನೇನೂ ಭಯವಿಲ್ಲ

ದೌಲತ್ ! ಎಲ್ಲವೂ ನಿನ್ನ ಪ್ರಭಾವ ! ನಿನ್ನ ಪರಮಾನುಗ್ರಹವು ಸುಲ್ತಾನರ ಮೇಲಿರುವಾಗ ಭಯವೆಂದರೇನು ?

ದೌಲತ್ತಳು ನಾಚಿಕೆಯಿಂದ ಮುಖವನ್ನು ತಗ್ಗಿಸಿ, ಖಾನರವರೇ ! ನನ್ನ ಅನುಗ್ರಹವೆಂದರೇನು ? ತಮ್ಮ ಭುಜಬಲ ಪರಾಕ್ರಮ, ಸುಲ್ತಾನೀ ರಾಜ್ಯವು ಉಳಿಯುವುದು, ಅಳಿಯುವುದು, ತಮ್ಮ ಪ್ರಭಾವದಿಂದ ಆದರೂ ನನಗೇಕೋ ಭಯವಾಗುತ್ತದೆ ಮನಸ್ಸು ಅಳುಕುತ್ತದೆ

ದೌಲತ್, ಅಳುಕುವುದೇಕೆ ? ಈ ಯುದ್ಧದಲ್ಲಿ ನಮಗೆ ಜಯವಾಗುವುದು ಖಂಡಿತ, ನಾನು ಮಹತ್ತರವಾದ ಸೈನ್ಯವನ್ನು ರಾಜಧಾನಿಯ ಕಡೆಗೆ ಹೊರಡಿಸಿದೇನೆ.

ಈ ಯುದ್ಧವನ್ನು ಎತ್ತಿ ಕಟ್ಟಿದವಳು ನೀನು, ಇಂಥದೊಂದು ಮಹಾಯುದ್ಧವಾಗಬೇಕೆಂದು ನನ್ನ ಸಂಕಲ್ಪವಿತ್ತು ಈ ಯುದ್ಧವಾಗದಿದ್ದರೆ ನಮ್ಮ ರಾಜ್ಯವು ಸ್ಥಿರವಿಲ್ಲ. ಅಂಥಾ ಯುದ್ಧವು ನಮಗೀಗ ಸಂಭವಿಸಿದೆ ಇದಕ್ಕಿಂತ ಸಂತೋಷಕರವಾದುದು ಬೇರಾವುದೂ ಇಲ್ಲ ನಾನು ನಾಳೆಯದಿನ ಯುದ್ಧಕ್ಕೆ ಹೊರಡುವುದನ್ನು ನಿಶ್ಚಯ ಮಾಡಿದೇನೆ ಅದನ್ನು ನಿನಗೆ ಹೇಳಿ ಹೋಗೋಣವೆಂದು ಇಲ್ಲಿಗೆ ಬಂದೆ.

ಖಾನರವರೇ ! ತಾವು ಯುದ್ಧಕ್ಕೆ ಹೊರಟುದು ಬಲು ಆನಂದದ ಸುದ್ದಿ ನಮಗೆ ಹೇಳಿ ಹೋಗುವುದೆಂದರೇನು ? ನಾನೂ, ರಾಧಾರಾಣಿಯೂ ತಮ್ಮ ಜೊತೆಯಲ್ಲೇ ಯುದ್ಧಕ್ಕೆ ಹೊರಡುವವರು ನಾವು ಸಿದ್ಧರಾಗಿದ್ದೇವೆ

ದೌಲತ್, ನೀನು ಯುದ್ಧಕ್ಕೆ ಬರುವುದೆಂದರೇನು ! ಈ ಯುದ್ಧವು ಸಾಮಾನ್ಯವಾದುದೆಂದು ಭಾವಿಸಿರುವೆಯಾ ?

ಖಾನರವರೇ ! ಇದು ಸಾಮಾನ್ಯ ಯುದ್ಧವೆಂದು ನಾನು ಬಗೆದಿಲ್ಲ. ಸಾಮಾನ್ಯ ಯುದ್ಧವಾಗಿದ್ದರೆ ನಾನು ಇಷ್ಟು ಚಿಂತಿಸುತ್ತಲೇ ಇರಲಿಲ್ಲ ಇದು ಮಹಾಯುದ್ಧವೆಂದು ನಾನು ಬಲ್ಲೆ. ಅದರಿಂದಲೇ ನಾನು ಈ ಯುದ್ಧಕ್ಕೆ ಬರಲು ಇಷ್ಟು ಉತ್ಸಾಹ

ನಿಂದಿರುವುದು ಈ ಯುದ್ಧದಲ್ಲಿ ಮೈಸೂರು ಉಳಿಯಬೇಕು, ಇಲ್ಲವೇ ಅಳಿಯ ಬೇಕು ನೀವೂ ಸುಲ್ತಾನರವರು ಎಷ್ಟು ಪೌರುಷದಿಂದ ಯುದ್ಧಮಾಡಬಲ್ಲಿರೋ ನಾನೂ ರಾಧಾರಾಣಿಯೂ, ಅಷ್ಟೇ ಪರಾಕ್ರಮದಿಂದ ಯುದ್ಧ ಮಾಡಬಲ್ಲೆವು ನಾನು ಬದುಕಿರುವುದೇ ಈ ಕಡೆಯ ಯುದ್ಧಕ್ಕಾಗಿ ನಾನು ನಿಮಗೆಷ್ಟು ಕಷ್ಟಗಳನ್ನು ತಂದೊಡ್ಡಿದೇನೆ ಆ ಸುಲ್ತಾನರಿಗೆಷ್ಟು ಮನ ನೋಯಿಸಿದೇನೆ ಅದೆಲ್ಲವೂ ಈ ಯುದ್ಧಕ್ಕಾಗಿಯೇ. ನೀವು ಇಷ್ಟು ದಿನ ವನವಾಸಮಾಡಿದ್ದು ನನ್ನ ಈ ಮಹತ್ವಾಕಾಂಕ್ಷೆಗಾಗಿಯೇ ಅಲ್ಲವೇ ? ಈ ನಗರದ ಮಹಾ ಸೈನ್ಯವು ಜೀವದ ಮೇಲೆ ಹಂಗು ತೊರೆದು ಯುದ್ಧಕ್ಕೆ ಹೊರಟಿರುವುದು ನನ್ನ ಉದ್ರೇಕದಿಂದಲೇ ಅಲ್ಲವೇ ? ನಾನು ಈ ಯುದ್ಧ ಭೂಮಿಯಲ್ಲಿ ನಿಂತು ನನ್ನ ಶರೀರದಲ್ಲಿ ಕಡೆಯ ರಕ್ತಬಿಂದುವಿರುವವರೆಗೆ ಹೋರಾಡುತ್ತೇನೆ ನೀವು ಎಷ್ಟು ಪ್ರಯತ್ನಮಾಡಿದರೂ ನನ್ನನ್ನು ಈ ಯುದ್ಧದಿಂದ ತಪ್ಪಿಸಲಾರಿರಿ, ನನ್ನ ಮನಸ್ಸೆಲ್ಲವೂ ಯುದ್ಧದಲ್ಲಿಯೇ ಇದೆ ಫರಂಗಿಯವರು ನೋಡಲಿ ಮಹಾರಾಷ್ಟ್ರರು ಪ್ರತ್ಯಕ್ಷವಾಗಿ ನೋಡಲಿ, ಈ ನವಾಬರ ಮಗಳು ಎಂತಹ ಭೈರವಿ ಎಂಬುದನ್ನು

ಖಾನನು ನಗುತ್ತಾ ದೌಲತ್ ರಾಣಿಯವರು ಇಷ್ಟು ಉದ್ರೇಕ ಗೊಳ್ಳುವ ಕಾರಣ ವಿಲ್ಲ ನೀವು ಯುದ್ಧಭೂಮಿಯಲ್ಲಿದ್ದರೆ ನನಗೆ ಎಷ್ಟೋ ಬಲ ಮಹಾರಾಣಿಯವರು ಯುದ್ಧಕ್ಕೆ ಹೊರಡಬಹುದು. ನಾನು ತಮ್ಮ ಜೊತೆಯಲ್ಲಿ ಬರುತ್ತೇನೆ ಆ ವಿಜಯ ಕೀರ್ತಿಯು ದೌಲತ್ ರಾಣಿಯವರಿಗೇ ಬರಲಿ

ದೌಲತ್‌ರಾಣಿಯು ಇಯಜ್‌ಖಾನನು ಅಂತಃಪುರದಲ್ಲಿ ಬಲು ಹೊತ್ತು ಮಾತನಾಡುತ್ತಿದ್ದರು ಮರುದಿನ ಪ್ರಾತಃಕಾಲ ಖಾನನೂ ದೌಲತ್ ಮತ್ತು ರಾಧಾರಾಣಿಯವರೂ ಯುದ್ಧಕ್ಕೆ ಹೊರಡುವುದು ನಿಶ್ಚಯವಾಯಿತು

## ವಿಚಿತ್ರ ಗೂಢಚಾರರು

ಮೇಲುಕೋಟೆಯ ಸಮೀಪದಲ್ಲಿ ಕುಂಪಣಿಯವರ ದಂಡು ಬಿಟ್ಟಿದೆ. ಈ ಪಾಳಯವು ಅಗಾಧವಾಗಿದೆ ಪೂರ್ವ ಪಶ್ಚಿಮ ಏಳು ಮೈಲಿಗಳು ದಕ್ಷಿಣೋತ್ತರ ಆರು ಮೈಲಿಗಳು. ಈ ಪಾಳಯವು ಅಷ್ಟು ವಿಸ್ತಾರವಾಗಿದೆ ಸುತ್ತಲೂ ಫಿರಂಗಿಗಳು ಇಡಲ್ಪಟ್ಟಿವೆ ಒಳಗಡೆ ಸಾವಿರಾರು ಗುಡಾರಗಳು ಒಳಗಡೆ ಫಿರಂಗಿ ಸೈನಿಕರು, ದೇಶೀ ಸೈನಿಕರು, ಬೇರೆ ಬೇರೆ ಬಿಡದಿಗಳನ್ನು ಮಾಡಿಕೊಂಡಿದ್ದಾರೆ ಶಿಬಿರದ ಮಧ್ಯಭಾಗದಲ್ಲಿ ಸರದಾರರ ವಿಶಾಲವಾದ ಗುಡಾರಗಳು ಆ ಗುಡಾರಗಳ ಮೇಲೆ ಬ್ರಿಟಿಷ್ ಬಾವುಟಗಳು ಹಾರಾಡುತ್ತಿವೆ ಈ ಪಾಳಯದ ಹೊರವಲಯದಲ್ಲಿ ಕುದುರೆ ಶಿಪಾಯಿಗಳು ಸುತ್ತುವರಿಯುತ್ತಾ ಪಹರೆ ಕೊಡುತ್ತಿದ್ದಾರೆ. ಶಿಬಿರದ ಹೊರಗಡೆ ಅಂಗಡಿಗಳು, ಖಾನ

ಗೃಹಗಳು, ಮಿಠಾಯಿ ಅಂಗಡಿಗಳು ಎಲ್ಲವೂ ಜಗಜಗಿಸುತ್ತಿವೆ ಸೈನಿಕರು ಅಲ್ಲಿ ಬಂದು ತಿಂದುಂಡು ಮೆರೆಯುತ್ತಾರೆ. ಅಲ್ಲಲ್ಲಿ ಆಟಪಾಟಪವರು ತಮ್ಮ ಚಾತುರ್ಯ ವನ್ನು ತೋರಿ ಕಾಸು ಕಿತ್ತುಕೊಳ್ಳುತ್ತಿದ್ದಾರೆ ಮಹಾರಾಷ್ಟ್ರದೇಶದ ದೊಂಬರಾಟದ ಗುಂಪೊಂದು ದೂರದಲ್ಲಿ ಗಣೆಕಟ್ಟಿ ಸಾಹಸವನ್ನು ತೋರುತ್ತಿದೆ ಇಂಗ್ಲೀಷ್ ಸೈನಿಕರು ಸುತ್ತಲು ನೆರೆದು ಆ ಸಾಹಸವನ್ನು ನೋಡಿ ಆಶ್ಚರ್ಯಪಡುತ್ತಿದ್ದಾರೆ ಆಟವು ಮುಗಿಯುವ ಹೊತ್ತಿನಲ್ಲಿ ನರ್ತಕಿಯೊಬ್ಬಳು ದೊಂಬರ ಗುಡಾರದಿಂದ ಕುಣಿಯುತ್ತ ಕುಣಿಯುತ್ತ ಬಂದಳು. ಎಲ್ಲರ ದೃಷ್ಟಿಯೂ ಅವಳ ಕಡೆ ತಿರುಗಿತು, ಅಮೋಘವಾದ ನರ್ತನ ! ಬಿಳಿಯ ಶೀರೆಯನ್ನುಟ್ಟು ವೀರ ಕಚ್ಚೆಯನ್ನು ಕಟ್ಟಿದಾಳೆ ಕಪ್ಪು ಬಣ್ಣದ ರೇಶಿಮೆಯ ಕಂಚುಕವು ಎದೆಯನ್ನು ಬಿಗಿಯುತ್ತಿದೆ ಕೆಂಪು ಬಣ್ಣದ ನಡುಕಟ್ಟು ಕಟಿಪ್ರದೇಶದಲ್ಲಿ ಬಿಗಿದು ಕಟ್ಟಲ್ಪಟ್ಟಿದೆ ತಲೆಯ ಮೇಲೆ ನವಿಲುಗರಿಯಿಂದ ತಯಾರಿಸಲ್ಪಟ್ಟ ಕಿರೀಟ. ಕೇಶಧಾಮವು ಬೆನ್ನಿನ ಮೇಲೆ ಹಾರಾಡುತ್ತಿದೆ ಕೊರಳಲ್ಲಿ ದೊಡ್ಡ ಮುತ್ತುಗಳ ಶರಡು ಕಂಠವನ್ನು ಸುತ್ತಿಕೊಂಡಿದೆ ಮುಂಗೈಯಲ್ಲಿ ಹವಳದ ಕರಬಂಧ. ಕಾಲುಗಳಲ್ಲಿ ಗೆಜ್ಜೆಗಳ ಕಿಂಕಿಣಿ ಕೈಯಲ್ಲಿ ಖಂಜರಿ ಹಣೆಯಲ್ಲಿ ದೊಡ್ಡ ಕುಂಕುಮದ ಬೊಟ್ಟು ಗೋರಂಟಿಯ ಬಣ್ಣದಿಂದ ರಂಜಿಸುವ ಹಸ್ತ ಪಾದಗಳು ಉಜ್ವಲವಾದ ಕಣ್ಣುಗಳು. ಕುಣಿಕುಣಿಯುತ್ತ ಬಂದ ಆ ನರ್ತಕಿಯ ಆ ಚಂಚಲ ನೇತ್ರಗಳು ಪ್ರೇಕ್ಷಕರ ಕಣ್ಣುಗಳನ್ನು ಸೆಳೆಯುತ್ತಿವೆ ಆ ಕುಣಿತವನ್ನು ನೋಡಿ ಸೈನಿಕರೆಲ್ಲರೂ ಮೈಮರೆತಿದಾರೆ ಕೊನೆಯಲ್ಲಿ ಆ ನರ್ತಕಿಯು ಒಂದುಹೂಜಿಯನ್ನು ಅಂಗೈ ಮೇಲಿಟ್ಟುಕೊಂಡು ಕುಣಿಯತೊಡಗಿದಳು ಆ ಹೂಜಿಯು ಅವಳ ಕೈಯಲ್ಲಿ ಚೆಂಡಿನಂತೆ ಆಡುತ್ತಿದ್ದಿತು. ಹೂಜಿಯು ಭಾರವಾಗಿದ್ದಂತೆ ಭಾಸವಾಗುತ್ತಿತ್ತು ಅದರಲ್ಲಿ ಏನಿದೆ ? ಏನಿದೆ ಎಂದು ಎಲ್ಲರೂ ಕುತೂಹಲಾವಿಷ್ಟರಾಗಿದ್ದರು ಸುತ್ತಲೂ ನಿಂತಿದ್ದ ಆ ಸೈನಿಕರು ಅವಳ ಮೇಲೆ ನಾಣ್ಯಗಳನ್ನು ಎಸೆಯುತ್ತಿದ್ದರು ಕೊನೆಯಲ್ಲಿ ಆ ನರ್ತಕಿಯು ಒಂದೇ ಒಂದು ಚರಣವನ್ನು ಹಾಡಿದಳು

ಮಧು ಮಧುಕರ ಮನಕಿದು ಸುಖಕರ ಮಧುವ ನೀಡುವೆ

ಈ ಚರಣವನ್ನು ಹಾಡುತ್ತಾ ಆ ಜಾಜ್ವಲ್ಯಮಾನವಾದ ನೇತ್ರಗಳನ್ನು ತಾಗಿಸುತ್ತಾ, ಸುತ್ತಲೂ ಒಂದು ಸುತ್ತು ತಿರುಗಿ ಶಿಲಾಪ್ರತಿಮೆಯಂತೆ ನಿಂತಳು

ಎಲ್ಲರೂ ಆ ಹೂಜಿಯನ್ನು ಕೊಡಿರಿ ! ಕೊಡಿರಿ ! ಎಂದು ಸಮೀಪಕ್ಕೆ ಬಂದು ಕೇಳಿದರು. ಆ ದೊಂಬರಾಟದ ವಸ್ತಾದನು ಮುಂದೆ ನಿಂತು ಪರಾಜು ಹಾಕಿದನು ಆ ಜನ ಮಧ್ಯದಿಂದ ತರುಣನೊಬ್ಬನು ನುಗ್ಗಿಬಂದು ಹತ್ತು ವರಹಗಳನ್ನು ಆ ನರ್ತಕಿಯ ಕೈಯಲ್ಲಿ ಕೊಡುವುದಕ್ಕೆ ಹೋದನು. ಆ ನರ್ತಕಿಯು ಮುಗುಳು ನಗು ನಗುತ್ತಾ ಎಡಗೈಯನ್ನುನೀಡಿದಳು. ಅವನು ಆ ವರಹಗಳನ್ನುಅವಳ ಕೈಯಲ್ಲಿಟ್ಟನು.

ಬಲಗೈಯ್ಯಲ್ಲಿದ್ದ ಮಧು ಪಾತ್ರೆಯನ್ನು ಅವನ ಕೈಗೆ ಕೊಟ್ಟು ಹಾರಿಹೋಗಿ ದೊಂಬರ ಗುಡಾರದಲ್ಲಿ ಸೇರಿಕೊಂಡಳು.

ಎಲ್ಲರೂ ಚಪ್ಪಾಳೆ ತಟ್ಟಿ ಹೊರಟು ಹೋದರು ಆ ಯುವಕನು ಆ ಹೂಜಿಯಲ್ಲಿದ್ದ ಮದ್ಯವನ್ನು ರುಚಿ ನೋಡಿದನು ಚಪ್ಪರಿಸುತ್ತಾ ತನ್ನ ಬಿಡಾರಕ್ಕೆ ಹೊರಟು ಹೋದನು

ಕಂಪನಿಯವರ ಶಿಬಿರದಲ್ಲಿ ಆ ರಾತ್ರಿ ಸೈನಿಕರೆಲ್ಲರೂ ಅವಳ ಮಾತನಾಡುವವರೇ. ಆ ನರ್ತನವನ್ನು ನೋಡದೆ ಇದ್ದ ತಮ್ಮ ಸ್ನೇಹಿತರುಗಳಲ್ಲಿ ಆ ನರ್ತಕಿಯ ವರ್ಣನೆ ಅವಳ ರೂಪಿನ ವರ್ಣನೆ ಅವಳ ಮೈ ಕಟ್ಟಿನ ವರ್ಣನೆ, ಅವಳ ವೇಷದ ವರ್ಣನೆ, ಅವಳ ಗಾನದ ವರ್ಣನೆ, ಅವಳ ಕಣ್ಣು ಮುಖ ಕೈ ಕಾಲುಗಳ ವರ್ಣನೆ, ಆ ಹೂಜಿಯ ವರ್ಣನೆ, ಅದರ ಬೆಲೆ ಹತ್ತು ವರಹಗಳಾದರೆ ಆ ನರ್ತಕಿಯ ಬೆಲೆ ಎಷ್ಟು ? ಎಂದು ಮಾತನಾಡಿಕೊಳ್ಳುವರು ಅಂತೂ ಶಿಬಿರದಲ್ಲೆಲ್ಲಾ ನರ್ತಕಿಯ ಮಾತೇ ಮಾತು ಅವಳ ಹೆಸರು ! ದುರ್ಗಾಬಾಯಿ ! ಅಂದು ಎಲ್ಲರ ಕನಸು ಮನಸಿನಲ್ಲಿಯೂ ದುರ್ಗಾ !

ಹೂಜಿಯನ್ನು ಕೊಂಡವನ ಹೆಸರು ಡೇವಿಡ್ ಅವನು ಮಲಬಾರಿನ ಕಡೆಯವನು ಒಳ್ಳೆಯ ಸುಂದರ ಪುರುಷ ಬುದ್ಧಿವಂತ ಆ ಯುವಕನು ಆ ದುರ್ಗೆಯ ರೂಪನ್ನು ನೆನೆಯುತ್ತಾ, ಅವಳ ಕುಣಿತವನ್ನು ಸ್ಮರಿಸುತ್ತಾ ಆ ಹೂಜಿಯ ಮದ್ಯವನ್ನೆಲ್ಲಾ ಕುಡಿದು ಬಿಟ್ಟನು ಆ ನರ್ತಕಿಯು ಅವನ ಸಮೀಪದಲ್ಲಿ ನಿಂತಿರುವಂತೆಯೇ ಭಾವಿಸುತ್ತಿದ್ದನು ಹತ್ತು ವರಹಗಳನ್ನು ಕೊಟ್ಟು ಹೂಜಿಯನ್ನು ಕೊಂಡದ್ದು ಅವನಿಗೆ ಜ್ಞಾಪಕವೇ ಇಲ್ಲ. ಹತ್ತು ವರಹಗಳನ್ನು ಕೊಟ್ಟು ಆ ದುರ್ಗೆಯನ್ನೇ ಕೊಂಡುಕೊಂಡಂತೆ ಭಾವಿಸಿದ್ದನು ಅವನ ಆನಂದಕ್ಕೆ ಪಾರವೇ ಇಲ್ಲ

ಬೆಳಗಾಯಿತು ! ಸೈನಿಕರೆಲ್ಲಾ ದಿರಸುಗಳನ್ನು ಹಾಕಿಕೊಂಡು ತಮ್ಮ ತಮ್ಮ ಕೆಲಸಗಳಿಗೆ ಹೋದರು ಮಧ್ಯಾಹ್ನ ಸಮಯಕ್ಕೆ ಎಲ್ಲರೂ ಊಟ ಮಾಡಿದರು. ಸೈನಿಕರು ಶಿಬಿರದ ಹೊರವಳಯಕ್ಕೆ ಹೊರಟರು ಅಲ್ಲಿ ಒಂದು ಚಿಕ್ಕ ಗುಡಾರವನ್ನು ಹಾಕಿಕೊಂಡು ಬ್ರಾಹ್ಮಣನೊಬ್ಬನು ಕುಳಿತು ಜ್ಯೋತಿಷವನ್ನು ಹೇಳುತ್ತಿದ್ದನು. ಸಾಮುದ್ರಿಕವನ್ನು ನೋಡಿ ಕುರುತೇಟ್ ಹೇಳುತ್ತಿದ್ದನು ಎಲ್ಲರೂ ಅವನಿಗೆ ಕಾಸು ಕೊಟ್ಟು ಕೈ ತೋರಿಸುತ್ತಿದ್ದರು ಸ್ವಲ್ಪ ಗದ್ದಲವು ಕಡಿಮೆಯಾಗುತ್ತಲೇ ಡೇವಿಡ್ಡನು ಆ ಜೋಯ್ಸರ ಬಳಿಗೆ ಹೋದನು

ಒಂದೆರಡು ಪ್ರಶ್ನೆಗಳನ್ನು ಕೇಳಿದನು ತನ್ನ ಕೈ ತೋರಿಸಿದನು

ನನಗೆ ಹೆಣ್ಣು ಸಿಕ್ಕುತ್ತದೆಯೇ ? ಹೇಳಿ.

ಹೌದು, ಸಿಕ್ಕುತ್ತದೆ ಕ್ಷಿಪ್ರದಲ್ಲಿಯೇ ಮದುವೆಯಾಗುತ್ತದೆ

ಎಂತಹ ಹೆಣ್ಣು ?

ಕಲಾವತಿಯಾದ ಸುಂದರಿ.

ಹೇಗೆ ಮದುವೆಯಾಗುತ್ತದೆ ?

ಮದುವೆಯು ಹೇಗಾಗುತ್ತದೆಂದು ಕೇಳಬೇಡ.

ಏಕೆ ? ಹೇಳಿರಿ !

ಬಲು ಗಂಡಾತರದ ಪ್ರಶ್ನೆ

ಏನು ಗಂಡಾಂತರ ?

ಪ್ರಾಣದ ಮೇಲೆ ಹಂಗು ತೊರೆದು ಹೋರಾಡಿದರೆ ಮದುವೆ ಆದರೆ ಆ ಹೆಣ್ಣು ಸಿಕ್ಕಿದರೆ ಐಶ್ವರ್ಯವು ಸಿಕ್ಕುತ್ತದೆ

ಜೇಬಿನಿಂದ ದೆಗೆದು ಆ ಬ್ರಾಹ್ಮಣನಿಗೆ ಒಂದು ವರಹವನ್ನು ಕೊಟ್ಟನು

ಬ್ರಾಹ್ಮಣನು ಸಂತುಷ್ಟನಾಗಿ ತನ್ನ ಕಕ್ಷವಾಳದಿಂದ ಒಂದು ಮಣಿಯನ್ನು ಕೊಟ್ಟು ಇದನ್ನು ದಾರದಲ್ಲಿ ಸರಿದು ಕೈಗೆ ಕಟ್ಟಿಕೋ ಗಂಡಾತರಗಳೆಲ್ಲಾ ಪರಿಹಾರ ವಾಗುತ್ತೆ ಎಂದು ಹೇಳಿದನು.

ಡೇವಿಡ್ಡನು ಜೋಯಿಸರೇ ! ಪುನಃ ನಾಳೆ ಬರುತ್ತೇನೆ, ಎಂದು ಹೇಳಿ ಹೊರ ಟನು

ಡೇವಿಡ್ಡನಿಗೆ ದುರ್ಗಾಬಾಯಿಯ ಹುಚ್ಚು ಹತ್ತಿತ್ತು ಹೇಗಾದರೂ ಮಾಡಿ ದುರ್ಗಾಬಾಯಿಯ ಅನುಗ್ರಹವನ್ನು ಸಂಪಾದಿಸಬೇಕೆಂದು ಮನಸ್ಸು ಮಿಡಿಯಲಾರಂ ಭಿಸಿತು ಅದು ಕಷ್ಟ ಸಾಧ್ಯವೆಂದು ಅವನಿಗೆ ಅನ್ನಿಸಲಿಲ್ಲ ದೊಂಬರ ಗುಡಾರದ ಹತ್ತಿರ ಹೋದನು ಅಲ್ಲಿ ಯಾರೂ ಇರಲಿಲ್ಲ ಬಾಗಿಲಿನಲ್ಲಿ ದೊಂಬರ ಯಜಮಾ ನನು ಕುಳಿತಿದ್ದನು ಒಂದು ಕಂಬಳಿಯನ್ನು ಹಾಸಿಕೊಂಡು ದಿಂಬು ಒರಗಿಕೊಂಡು ಕುಳಿತಿದ್ದನು ಮೈ ಮೇಲೆಲ್ಲಾ ಬಣ್ಣ ಬಣ್ಣದ ಹರುಕು ಬಟ್ಟೆಗಳು ಒಂದು ಹುಕ್ಕಾ ವನ್ನು ಪಕ್ಕದಲ್ಲಿಟ್ಟುಕೊಂಡು ಶೀಧು ಪಾನವನ್ನು ಮಾಡುತ್ತಾ ಕುಳಿತಿದ್ದನು ಡೇವಿ ಡ್ಡನು ಅವನ ಪಕ್ಕದಲ್ಲಿ ಹೋಗಿ ಕುಳಿತನು ಮೆತ್ತಗ ಅವನನ್ನು ಮಾತನಾಡಿಸ ತೊಡಗಿದನು ಅವನ ಹೆಸರು ಪರಶುರಾಂ ! ಅವನ ದೇಶವಾವುದೆಂದು ಕೇಳಿದನು ಅವನ ಕಡೆ ಡೊಂಬರ ಸಹವಾಸವನ್ನು ಹೊಗಳಿದನು ದುರ್ಗಾಬಾಯಿಯ ನರ್ತನ ಚಾತುರ್ಯವನ್ನು ಪ್ರಶಂಸಿಸಿದನು

ಪರಶುರಾಂಭಾವಾನು–ಅಯ್ಯಾ ನೀನಾರು ? ಏನು ಕೆಲಸ ಮಾಡುವೆ ? ನೀನೆ ಅಲ್ಲವೆ ನಿನ್ನೆಯ ದಿನ ಹತ್ತು ವರಹಗಳನ್ನು ಕೊಟ್ಟ ಮಹರಾಯ ಎಂದು ಕೇಳಿದನು

ಹೌದು ! ವಸ್ತಾದರೇ ! ನಾನೇ ನಿನ್ನೆ ಹತ್ತು ವರಹಗಳನ್ನು ಕೊಟ್ಟವನು ಅದೇನು ಸಾಮಾನ್ಯ ಹತ್ತಲ್ಲ ನೂರು ವರಹಗಳನ್ನಾದರೂ ಕೊಡಬಹುದು ಆ ದುರ್ಗಾಬಾಯಿ ಯಾರು ? ನಿಮ್ಮ ಕುಟುಂಬವೊ ಸಹೋದರಿಯೋ ?

ಪರಶುರಾಮನು ಗಹಗಹಿಸಿ ನಕ್ಕನು ಅಯ್ಯಾ ಯುವಕನೇ ನೀನು ಗೌರವಸ್ಥನಂತೆ ಕಾಣುವಿ ಆದರೆ ಪ್ರಪಂಚವನ್ನರಿಯೆ ಈ ದುರ್ಗಾಬಾಯಿಯಂಥವರನ್ನು ಮದುವೆಯಾದರೆ ನಾನು ಮಣ್ಣು ತಿನ್ನಬೇಕು ಇವರೆಲ್ಲರೂ ಒಬ್ಬರಲ್ಲಿ ಮರ್ಯಾದೆಯಾಗಿ ಸಂಸಾರಮಾಡತಕ್ಕವರೇ! ಹುಲಿ ಕರಡಿಗಳನ್ನು ಹಿಡಿತಂದು ಆಟವಾಡಿಸುವಂತೆ ನಾವು ಈ ತರುಣಿಯರನ್ನು ಪಳಗಿಸಿ ಕುಣಿಸಿ ಆಟವಾಡಿಸಿ ನಾಲ್ಕು ಕಾಸು ಸಂಪಾದಿಸುತ್ತೇವೆ ನಾಲ್ಕು ದಿನವಾದರೆ ಅವಳೆಲ್ಲಿಯೋ ಓಡಿ ಹೋಗುತ್ತಾಳೆ ಅಷ್ಟೆ! ಎಂದನು ನೀನಾರು ಹೇಳು! ನಿನಗೆ ಆ ದುರ್ಗೆಯ ಹುಚ್ಚು ಹತ್ತಿರುವಂತಿದೆ ಎಂದು ನಕ್ಕನು

ವಸ್ತಾದರೇ ನಾನು ಸಾಮಾನ್ಯನೆಂದು ತಿಳಿಯಬೇಡಿರಿ ಗವರ್ನರ್ ಜನರಲ್ ವೆಲ್ಲೆಸ್ಲಿ ದೊರೆಗಳೇ ನನ್ನನ್ನು ಚುನಾಯಿಸಿ ಕಳಿಸಿದಾರೆ ಈ ಸೈನ್ಯದ ಸರ್ವಾಧಿಕಾರಿಗಳಾದ ಜನರಲ್ ಹ್ಯಾರಿಸ್ ಸಾಹೇಬರ ಮುಖ್ಯ ರಾಯಸದವನು ನಾನು ನಿಮಗೆ ಸೇನಾಧಿಪತಿಗಳಿಂದ ಏನು ಸಹಾಯವನ್ನು ಬೇಕಾದರೂ ಮಾಡಿಸಬಲ್ಲೆ!

ನನಗೇನು ಬೇಕು! ಸೇನಾಧಿಪತಿಗಳ ಮುಂದೆ ನಮ್ಮದೊಂದು ಏರ್ಪಾಟು ಮಾಡಿದರೆ ಎಷ್ಟೋ ಉಪಕಾರ

ಹೋ! ಭೇಷಾಗಿ ಮಾಡಿಸುತ್ತೇನೆ

ಮುತ್ಸದ್ದಿಗಳೇ! ನಾವು ಬಡವರು ನೀವು ನಮ್ಮ ಬಿಡಾರದಲ್ಲಿ ಸ್ವಲ್ಪ ಚಹಾ ಸ್ವೀಕರಿಸಬೇಕು

ಡೇವಿಡ್ಡನು ಸಂತೋಷದಿಂದ ಅಂಗೀಕಾರಮಾಡಿದನು

ಪರಶುರಾಮನು ಎದ್ದು ಡೇವಿಡ್ಡನನ್ನು ಕೈ ಹಿಡಿದು ತನ್ನ ಗುಡಾರದೊಳಗೆ ಕರೆದೊಯ್ದನು. ಅಲ್ಲಿ ಒಂದು ಪಟ್ಟಿಗೆಯ ಮೇಲೆ ದುರ್ಗಾ ಕುಳಿತಿದ್ದಳು ಅವಳನ್ನು ನೋಡುತ್ತಲೇ ಡೇವಿಡ್ಡನಿಗೆ ರೋಮಾಂಚವಾಯಿತು ಪರಶುರಾಮನು ಒಳಗೆ ಹೋಗಿ "ನೋಡು ದುರ್ಗಾ! ಕುಂಫಣಿಯವರ ಶಿಬಿರದಲ್ಲಿ ಇವರ ಮಾತು ಬಹಳ ನಡೆಯುತ್ತದೆ. ಇವರಿಗೂ ನಮಗೂ ಸ್ನೇಹವಾಗಿದೆ ಇವರೇ ನಿನ್ನೆ ದಿನ ನಮಗೆ ಹತ್ತು ವರಹಗಳನ್ನು ಕೊಟ್ಟವರು ಇವರಿಗೆ ಚಹಾ ತಂದುಕೊಡು" ಎಂದನು ದುರ್ಗಾ ಜಗ್ಗನೆದ್ದು ಓರೆನೋಟದಿಂದ ಡೇವಿಡ್ಡನನ್ನು ನೋಡಿದಳು ಮುಗುಳು ನಗೆಯನ್ನೂ ಬೀರಿದಳು ಡೇವಿಡ್ಡನು ಧನ್ಯನಾದನು ದುರ್ಗಾ ಒಳಗೆ ಹೋಗಿ ಒಂದು ಬಟ್ಟಲು 'ಚಹಾತಂದು ಒಯ್ಯಾರದಿಂದ ಡೇವಿಡ್ಡನ ಕೈಗೆ ಕೊಟ್ಟಳು ವಸ್ತಾದರಿಗೂ ಚಹಾ'ತಂದು ಒಪ್ಪಿಸಿದಳು. ಅವರಿಬ್ಬರೂ ಚಹಾ ಪಾನಮಾಡಿದರು ದುರ್ಗಾ ತಾಂಬೂಲದ ತಟ್ಟೆಯನ್ನು ತಂದಿಟ್ಟಳು ತಾಂಬೂಲವಾದ ಮೇಲೆ ಹುಕ್ಕಾವನ್ನು ತಂದು ಮುಂದಿಟ್ಟು ನಳಿಗೆಯನ್ನು ಡೇವಿಡ್ಡನ ಕೈಗೆ ಕೊಟ್ಟಳು ಡೇವಿಡ್ಡನಿಗೆ ಅಭ್ಯಾಸವಿಲ್ಲದಿದ್ದರೂ ಹುಕ್ಕಾ ಸೇವನೆಗೆ

ಆರಂಭಿಸಿದನು. ಏನಾದರೂ ಮಾತನಾಡಬೇಕಲ್ಲ. ಜೋಯಿಸನ ಅದ್ಭುತ ಸಾಮರ್ಥ್ಯ ವನ್ನು ವರ್ಣಿಸ ತೊಡಗಿದನು ದುರ್ಗಾದೇವಿಯು ಮಾತು ಪೋಣಿಸಿ ಸಂಭಾಷಣೆಗೆ ಆರಂಭಿಸಿದಳು ವಸ್ತಾದರ ಕಡೆಗೆ ತಿರುಗಿ ತಾನೂ ಜೋಯಿಸರಿಗೆ ಕೈ ತೋರಿಸಬೇಕೆಂದು ಹೇಳಿದಳು

ವಸ್ತಾದರು "ದುರ್ಗಾ! ನಿನಗೇನು ಮದುವೆಯಾಗಬೇಕಾಗಿದೆಯೇನು?" ಎಂದರು

ದುರ್ಗಾ ನಗುತ್ತಾ, "ಏಕೆ ಆಗಬಾರದು? ನಾನು ಸರಿಯಾದ ಗಂಡನನ್ನು ಮದುವೆಯಾದರೆ ನಿಮಗೂ ಸಂತೋಷವಲ್ಲವೇನು?"

"ಹೌದು! ದುರ್ಗಾ! ನಾನು ನಿನ್ನನ್ನು ಕುಣಿಸಿ ದುಡ್ಡು ಸಂಪಾದಿಸುತ್ತೇನೆ ನೀನು ಆ ಗಂಡನನ್ನು ಮಾರಿ ದುಡ್ಡು ಸಂಪಾದಿಸಿ ದೊಡ್ಡ ವಸ್ತಾದಳಾಗುತ್ತಿ"

"ಇಲ್ಲ! ವಸ್ತಾದರೇ! ನಾನು ಮದುವೆಯಾದರೂ ನಿಮ್ಮನ್ನೇ ಮದುವೆಯಾಗುತ್ತೇನೆ" ಎಂದು ಹೇಳಿ ನಕ್ಕಳು.

"ದುರ್ಗಾ, ನನಗೆ ಮದುವೆ ಬೇಡಮ್ಮಾ! ನಾನು ಈ ದೊಂಬರಾಟವನ್ನು ಕಟ್ಟಿಟ್ಟು ಸಂಸಾರದಾಟವನ್ನು ಹೂಡಬೇಕಾಗುತ್ತೆ ನಿನಗೂ ನನಗೂ ಇಬ್ಬರಿಗೂ ಉಪವಾಸ"

"ಇಲ್ಲ, ವಸ್ತಾದರೇ, ನನಗೆ ಮದುವೆಬೇಡ ಮದುವೆ ಆಶೆ ಇದ್ದರೆ ನಮ್ಮೂರಿನಲ್ಲೇ ಇರುತ್ತಿದ್ದೆ ಅಲ್ಲೇ ನನಗೊಬ್ಬ ಗಂಡನು ಸಿಕ್ಕುತ್ತಿರಲಿಲ್ಲವೇ? ಆದರೂ ಜೋಯಿಸರಿಗೆ ಕೈ ತೋರಿಸಲೇ ಬೇಕು"

"ಒಳ್ಳೆಯದು! ಹೋಗಿ ಬಾ!

"ವಸ್ತಾದರೇ! ನೀವೂ ನನ್ನ ಜೊತೆಗೆ ಬರಬೇಕು"

"ನಾನು ಬರಬಾರದು! ವಸ್ತಾದರು ಯಾರ ಹತ್ತಿರಲೂ ಹೋಗಬಾರದು ನಮ್ಮ ಖರಾಮತ್ತು ಹೋಗಿಬಿಡುತ್ತೆ"

"ಹಾಗಾದರೆ ನನ್ನ ಜೊತೆಗಾರು?"

"ಈ ಮುತ್ಸದ್ದಿಗಳನ್ನು ಕೇಳಿಕೋ"

ದುರ್ಗಾ ಮುತ್ಸದ್ದಿಯ ಕಡೆ ತಿರುಗಿ ಕಟಾಕ್ಷಬಾಣವನ್ನು ಬೀರಿದಳು ಡೇವಿಡ್ಡನು ಹರ್ಷದಿಂದ ದುರ್ಗಾಬಾಯಿಯನ್ನು ಕರೆದುಕೊಂಡು ಹೋಗಲು ಒಪ್ಪಿದನು

ದುರ್ಗಾಬಾಯಿಯು ಮೇಲು ಹೊದ್ದಿಕೆಯನ್ನು ಹೊದ್ದು ಹೊರಟಳು ಡೇವಿಡ್ಡನು ವಸ್ತಾದರ ಅಪ್ಪಣೆ ಪಡೆದು ದುರ್ಗಾಬಾಯಿಯ ಹಿಂದು ಹಿಂದು ಹೊರಟನು

ಡೇವಿಡ್ಡನಿಗೆ ಬಲು ಹೆಮ್ಮೆ! ಸೈನ್ಯದವರು ನೋಡುತ್ತಾರೆ, ದುರ್ಗಾಬಾಯಿಯ ಸಾನ್ನಿಧ್ಯವು ಡೇವಿಡ್ಡನಿಗೆ ದೊರೆತಿರುವುದನ್ನು! ದುರ್ಗಾಬಾಯಿಯ ಜೊತೆಯಲ್ಲಿ

ಮಾತನಾಡುತ್ತಾ ಹೊರಟನು ಜೋಯಿಸರ ಗದ್ದುಗೆಗೆ ದುರ್ಗಾಬಾಯಿಯನ್ನು ಕರದುಕೊಂಡು ಹೋದನು

ಜೋಯಿಸನು ದೇವಿಡ್ಡನನ್ನು ನೋಡಿ ನಕ್ಕನು

ಜೋಯಿಸರೇ ! ಈ ತರುಣಿಯನ್ನು ನೋಡಿ

ಜೋಯಿಸನು ದುರ್ಗಾಬಾಯಿಯ ಎಡಗೈ ನೋಡಿದನು ಬಲ ಹಸ್ತವನ್ನು ನೋಡಿದನು ಹಣೆಯ ಮೇಲಿನ ಗೆರೆಗಳನ್ನು ಪರೀಕ್ಷಿಸಿ ನೋಡಿದನು

ಮಗಳೇ, ನಿನಗೇನು ಬೇಕು ?

ದುರ್ಗಾ ಮಾತನಾಡದೆ ನಕ್ಕಳು

ದೇವಿಡ್ಡನು ಜೋಯಿಸರೇ, ಇವಳಿಗೆ ಯಾವಾಗ ಮದುವೆಯಾಗುವುದು ಹೇಳಿರಿ

ಜೋಯಿಸನು ನಕ್ಕನು ಇವಳು ವಿಧವೆ ಎಂದನು

ಹಾಗಾದರೆ ಮದುವೆಯಾಗಕೂಡದೇ ?

ಹಿಂದೂ ಹೆಂಗಸು ಗಂಡ ಸತ್ತಮೇಲೆ ಮದುವೆಯಾಗುವುದಕ್ಕೆ ಶಾಸ್ತ್ರವನ್ನೇಕೆ ಕೇಳಬೇಕು

ಅದೆಲ್ಲಾ ಬಿಡಿ, ಮದುವೆ ಯೋಗ ಹೇಗಿದೆ ಹೇಳಿ

ಚೆನ್ನಾಗಿದೆ !

ಇಂತಹ ಅಡ್ಡಗೋಡೆಯ ಮೇಲಿನ ಮಾತು ಹೇಳಬೇಡಿ ಖಚಿತವಾಗಿ ಹೇಳಿ.

ಖಚಿತವಾಗಿ ಹೇಳಬೇಕೆ? ಮುತ್ಸದ್ದಿಗಳೇ, ನಿಮಗೇಕೆ ಈ ಮಾತು ಇವಳನ್ನು ಮದುವೆಯಾಗುವವನು ರಾಜನಾಗಬೇಕು

ಮುತ್ಸದ್ದಿಯು, ಹಾ ! ಎಂದು ಮೂಗಿನ ಮೇಲೆ ಬೆರಳಿಟ್ಟನು

ದುರ್ಗಾ—ಜೋಯಿಸರೇ, ಈ ಯುದ್ಧದಲ್ಲಿ ಯಾರಿಗೆ ಜಯವಾಗುವುದು ? ಹೇಳಿರಿ

ಜೋಯಿಸನು ರೇಗಿಕೊಂಡು, ಅಲ್ಲ ಕಾಣೆ ! ಬೆಡಗುಗಾತಿ, ಈ ಯುದ್ಧಕ್ಕೂ ನಿನಗೂ ಏನು ಸಂಬಂಧ ? ಈ ಪ್ರಶ್ನೆಯನ್ನು ನಿನ್ನ ಕೈ ನೋಡಿ ಹೇಳುವುದು ಹೇಗೆ? ಈ ರಣಕ್ಷೇತ್ರದಲ್ಲಿ ಯಾರಿಗೆ ಜಯವಾಗುವುದೆಂದು ಹೇಳಿದರೆ ನನ್ನ ತಲೆಯು ಹಾರಿ ಹೋಗುವುದಿಲ್ಲವೇನೇ ?

ಜೋಯಿಸರೇ, ಕೋಪಿಸಿಕೊಳ್ಳಬೇಡಿರಿ. ನನ್ನ ಕಾರ್ಯವು ಜಯವಾಗುತ್ತದೊ ಇಲ್ಲವೋ ಹೇಳಿರಿ ?

ನಿಜವಾಗಿಯೂ ಜಯವಾಗುತ್ತದೆ.

ಇನ್ನು ಒಂದೇ ಒಂದು ಪ್ರಶ್ನೆ !

ಕೇಳು !

ನಮ್ಮ ವಸ್ತಾದರಿಂದ ನನಗೆ ಯಾವಾಗ ಬಿಡುಗಡೆಯಾಗುತ್ತದೆ ?

ಜೋಯಿಸನು ಸ್ವಲ್ಪಹೊತ್ತು ಹಿಂದೆ ಮುಂದೆ ನೋಡಿದನು ಲೆಖ್ಖ ಹಾಕಿದನು ಹೇಳಲೇಬೇಕೇನು ?

ಹೇಳಿಬಿಡಿ, ಜೋಯಿಸರೇ ! ನಿಮಗೆ ಎರಡು ವರಹಾ ಕೊಡುತ್ತೇನೆ

ಇನ್ನು ಮೂರೇ ದಿನ, ಮುಂದಿನ ಸೋಮವಾರ ಇನ್ನು ಪ್ರಶ್ನೆ ಕೇಳಬೇಡ, ಹೊರಡು ಎಂದನು

ದುರ್ಗಾಬಾಯಿಯು ಎದ್ದಳು ಜೋಯಿಸನು ಡೇವಿಡ್ಡನ ಕಡೆ ನೋಡಿ ಕಣ್ಣು ಹಾರಿಸಿದನು ಡೇವಿಡ್ಡನು ನಗುತ್ತಾ ಜೋಯಿಸರಿಗೆ ಎರಡು ವರಹಾ ಕೊಟ್ಟನು

ದುರ್ಗಾಬಾಯಿಯು ಮುತ್ಸದ್ದಿಗಳೇ, ಜೋಯಿಸರಿಗೆ ಕಾಣಿಕೆ ನಾನು ಕೊಡುತ್ತೇನೆ ನೀವು ಕೊಡಬೇಡಿರಿ ಎಂದು ಕೈ ಹಿಡಿದಳು

ಇಲ್ಲ ದುರ್ಗಾ, ನಾನು ಕೊಡುತ್ತೇನೆ ಅದರ ಫಲವು ನನಗೆ ಬರಲಿ ನೀನು ಕೊಡುವುದಾದರೆ ನನಗೇ ಕೊಡು

ದುರ್ಗಾ ನಕ್ಕಳು ಅವರಿಬ್ಬರೂ ಹೊರಟುಹೋದರು

ಅಲ್ಲಿ ಒಂದು ವಾಳು ಮಂಟಪವಿತ್ತು ಇಬ್ಬರೂ ಹೋಗಿ ಅಲ್ಲಿ ಕುಳಿತರು ದುರ್ಗಾ ಡೇವಿಡ್ಡನ ಮೇಲೆ ತನ್ನ ಮೋಹಜಾಲವನ್ನು ಚೆನ್ನಾಗಿ ಬೀರಿದಳು

ಡೇವಿಡ್ಡನು ದುರ್ಗಾದೇವಿಯ ಕೈಹಿಡಿದುಕೊಂಡು ನೋಡು ದುರ್ಗಾ, ನೀನು ನನ್ನನ್ನು ಮದುವೆಯಾಗು ನಾವಿಬ್ಬರೂ ಸುಖವಾಗಿರೋಣ

ಮುತ್ಸದ್ದಿಗಳೇ, ನಿಮ್ಮ ಹತ್ತಿರ ಎಷ್ಟು ಹಣವಿದೆ

ನೂರು ಗಟ್ಟಿ ವರಹಗಳಿವೆ

ದುರ್ಗಾ ನಕ್ಕಳು ಇದರಲ್ಲಿ ನಾವಿಬ್ಬರೂ ಸಂಸಾರ ಮಾಡುವುದು ಹೇಗೆ ?

ದುರ್ಗಾ ! ನಮ್ಮ ಸಾಹೇಬರು ನನಗೆ ಸಾವಿರ ವರಹಗಳನ್ನಾದರೂ ಕೊಡುತ್ತಾರೆ

ಮುತ್ಸದ್ದಿಗಳೇ, ಕೈ ಬಿಡಿರಿ, ನನ್ನನ್ನು ಮುಟ್ಟಬೇಡಿ ನೀವು ಬುದ್ಧಿವಂತರೆಂದುಕೊಂಡಿದ್ದೆ. ನೀವೆಲ್ಲಿ ? ನಿಮ್ಮ ಸಾಹೇಬರೆಲ್ಲಿ? ಈ ಯುದ್ಧದಲ್ಲಿ ಮೈಸೂರಿನವರು ನಿಮ್ಮನ್ನು ಧೂಳೀಪಟ ಮಾಡಿಬಿಡುತ್ತಾರೆ ನಾವು ಮದುವೆಯಾಗಬೇಕಾದರೆ ಇಂದೆ ಈ ಶಿಬಿರವನ್ನು ಬಿಟ್ಟು ಓಡಿಹೋಗಬೇಕು

ದುರ್ಗಾ, ಯುದ್ಧದ ವಿಚಾರವು ನಿನಗೇನು ಗೊತ್ತು ಈ ಯುದ್ಧದಲ್ಲಿ ಸುಲ್ತಾನರಿಗೆ ಪರಾಜಯವಾಗುತ್ತೆ ಅವರನ್ನು ಸೆರೆ ಹಿಡಿಯುತ್ತಾರೆ, ಇಲ್ಲವೇ ಕೊಂದುಹಾಕುತ್ತಾರೆ.

ಅಯ್ಯೋ ಹುಚ್ಚ, ನನಗೆ ನಿನ್ನ ತಂಟೆ ಬೇಡ ಸುಲ್ತಾನರ ಸೈನ್ಯವೆಷ್ಟಿದೆ ಬಲ್ಲೆಯಾ ? ಅವರ ಸಿರಂಗಿಗಳೆಷ್ಟಿವೆ ಬಲ್ಲೆಯಾ ? ನಿಮ್ಮ ಸೈನ್ಯವು ಒಂದು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದೆ

ದುರ್ಗಾ, ನಾನು ನಿನ್ನನ್ನು ನನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತೇನೆ ನಾನು ನಿನ್ನನ್ನು ನೋಡಿದಾಗಿಸಿಂದಲೂ ಹುಚ್ಚನೇ ಆಗಿದ್ದೇನೆ ನೀನು ನನ್ನನ್ನು ಅನುಗ್ರಹಿಸು ಈ ಯುದ್ಧದಲ್ಲಿ ನಮಗೆ ಜಯವು ಸಿದ್ಧ

ಅದು ಹೇಗೆ ?

ನೋಡು ದುರ್ಗಾ, ಶ್ರೀರಂಗಪಟ್ಟಣದ ಸೇನಾಧಿಪತಿಗಳೆಲ್ಲಾ ಕುಂಪಣಿಯವರಿಗೆ ಒಳಗೊಳಗೇ ಸಹಾಯ, ಅವರಿಗೆಲ್ಲಾ ನನ್ನ ಕೈಯಿಂದಲೇ ದಕ್ಷಿಣ ಹಿಂದೂಸ್ಥಾನದ ನಾನಾ ಜಿಲ್ಲೆಗಳ ನವಾಬ್‌ಗಿರಿಯನ್ನು ಕೊಡುವುದಾಗಿ ಬರೆದುಕೊಟ್ಟಿದೆ

ಅದಕ್ಕೆ ಅವರೇನು ಮಾಡುತ್ತಾರೆ

ಅವರು ಕುಂಪಣಿಯವರಿಗೆ ಎಲ್ಲ ವಿಧದಿಂದಲೂ ಸಹಾಯ ಮಾಡುವುದಾಗಿ ಬರೆದು ಕೊಟ್ಟಿದ್ದಾರ

ಈ ರಾಜಕೀಯವೆಲ್ಲಾ ನನಗೇಕೆ ? ನನ್ನನ್ನು ಕರೆದುಕೊಂಡು ಹೋಗಿ ನಮ್ಮ ಬಿಡಾರಕ್ಕೆ ಬಿಡು, ವಸ್ತಾದರು ಸಂದೇಹಪಡುತ್ತಾರೆ

ದುರ್ಗಾ, ನೀನು ನನಗೆ ವಾಗ್ದಾನ ಕೊಡು, ಇಲ್ಲದಿದ್ದರೆ ನಾನು ನಿನ್ನ ಕಾಲು ಬುಡದಲ್ಲಿ ಪ್ರಾಣ ಬಿಡುತ್ತೇನೆ

ನೋಡು ಪೇಸಡ್ ! ಇಂದು ನೀನು ನಮ್ಮ ಆಟಕ್ಕೆ ಬಾ, ನಿನ್ನಲ್ಲಿರುವ ನೂರು ವರಹಗಳನ್ನು ನಮ್ಮ ವಸ್ತಾದರಿಗೆ ಇನಾಂ ಕೊಟ್ಟುಬಿಡು ನಾಳೆ ಭಾನುವಾರ ನಿಮ್ಮ ಸೇನಾಪತಿಗಳ ಸಮ್ಮುಖ ಆಟವಾಡಿಸುವುದಾಗಿ ಹೇಳು, ವಸ್ತಾದನು ನಮ್ಮ ತಂದೆಗೆ ಒಂದು ನೂರು ವರಹಾಗಳನ್ನು ಕೊಟ್ಟು ನನ್ನನ್ನು ಕೊಂಡುಕೊಂಡು ಬಂದಿದ್ದಾನೆ ಅವನ ಋಣ ತೀರಿಸಿಬಿಡು, ಈ ರಾತ್ರಿ ನಮ್ಮ ಆಟ ಆಗುವವರೆಗೆ ಕಾದಿರು ನಾನು ನಿನ್ನ ಜೊತೆಯಲ್ಲಿ ಇಲ್ಲಿಗೆ ಬರುತ್ತೇನೆ ನಮ್ಮ ಮದುವೆಯಾಗಬೇಕಾದರೆ ನನ್ನದೊಂದು ಷರತ್ತಿದೆ ನೀನು ಅದಕ್ಕೆ ಒಪ್ಪಿಕೊಂಡು ಕಾರ್ಯಸಾಧಿಸಿದರೆ ನಾನು ನಿನ್ನನ್ನು ಮದುವೆಯಾಗುತ್ತೇನೆ ಆಮರಣಾಂತ ನಾನು ನಿನಗೆ ಪತ್ನಿ

ಡೇವಿಡ್ಸನ ಶರೀರವೆಲ್ಲಾ ಕಂಪಿಸತೊಡಗಿತು. ಅವನು ಅವಳ ಎರಡು ಕೈಗಳನ್ನೂ ಹಿಡಿದುಕೊಂಡು, ನೋಡು ದುರ್ಗಾ, ಎಂತಹ ಸಾಹಸ ಕಾರ್ಯವನ್ನಾದರೂ ಮಾಡುತ್ತೇನೆ ಬೆಂಕಿಯಲ್ಲಿ ಹಾರಬೇಕಾದರೂ ಹಾರುತ್ತೇನೆ ನಿನ್ನ ಪ್ರಣಯಕ್ಕೆ ಯಾವ ಪಣವನ್ನಾದರೂ ಕೊಡುತ್ತೇನೆ ಎಂದು ಹೇಳಿದನು. ದುರ್ಗಾ ನಕ್ಕಳು ಮುತ್ತಿನಂತಿದ್ದ ಡೇವಿಡ್ಸನ ಆ ನಗುವಿನಲ್ಲಿ ಮುಳುಗಿಹೋಗಿ ದುರ್ಗಾಬಾಯಿಯ ಕಪೋಲವನ್ನು

ಚುಂಬಿಸಿದನು. ಅವಳನ್ನು ಬಲವಾಗಿ ಆಲಂಗಿಸಿದನು, ದುರ್ಗಾಬಾಯಿಯು ಅವನು ಬಾಹು ಬಂಧನದಿಂದ ಬಿಡಿಸಿಕೊಂಡು ದೂರದಲ್ಲಿ ನಿಂತಳು

ದುರ್ಗಾ—ಮುತ್ಸದ್ದಿಯನ್ನು ತನ್ನ ದೃಷ್ಟಿಯಲ್ಲಿ ಮುಳಗಿಸಿದಳು ಆ ದೃಷ್ಟಿಯು ಡೇವಿಡ್ಡನನ್ನು ಹುಚ್ಚನನ್ನಾಗಿ ಮಾಡಿತು ಡೇವಿಡ್ಡನು ದುರ್ಗಾದೇವಿಯನ್ನು ಕರೆದು ಕೊಂಡುಹೋಗಿ ದೊಂಬರ ಗುಡಾರಕ್ಕೆ ಬಿಟ್ಟನು ವಸ್ತಾದನು ಮುತ್ಸದ್ದಿಯನ್ನು ದುರುದುರನೆ ನೋಡಿದನು ಮೌನ, ಡೇವಿಡ್ಡನು ಹೊರಟುಹೋದನು

ವಸ್ತಾದನು—ಸಾವಿತ್ರಿ ಏನು ಮಾಡಿದೆ ? ನಮ್ಮ ಕಾರ್ಯವೇನಾದರೂ ಮುಂದು ವರಿಯಿತೋ ?

ದುರ್ಗಾ—ವಸ್ತಾದರೇ ! ಕಾರ್ಯವು ಬಹುದೂರ ಬಂದಿವೆ, ಜೋಯಿಸನು ತನ್ನ ಕೆಲಸವನ್ನು ಚೆನ್ನಾಗಿ ಮಾಡಿದಾನೆ ಮುತ್ಸದ್ದಿಗೆ ಮದುವೆಯ ಹುಚ್ಚು ಹಿಡಿಸಿದಾನೆ, ನಾನೇ ಮದುವೆ ಮದವಣಗಿತ್ತಿ, ಇನ್ನೇನು ಬೇಕು

ವಸ್ತಾ—ಮುತ್ಸದ್ದಿಯು ಏನು ಹೇಳಿದನು

ದುರ್ಗಾ—ಸುಲ್ತಾನರ ಸೇನಾನಾಯಕರೆಲ್ಲಾ ಒಳಸಂಚು ಮಾಡಿದಾರೆಂದು ಹೇಳಿದನು ಅದಕ್ಕೆಲ್ಲಾ ತನ್ನಲ್ಲಿ ದಾಖಲೆಗಳಿವೆಯೆಂದು ಹೇಳಿದನು

ವಸ್ತಾ—ಸಾವಿತ್ರಿ, ಈಗ ನಾವು ಮುಂದೇನು ಮಾಡಬೇಕು

ದುರ್ಗಾ—ಆ ಹಾಳು ಸಾವಿತ್ರಿ ! ಆ ಹೆಸರನ್ನು ಮರೆಯುಲಾರೆಯ ! ನನ್ನ ಹೆಸರು ದುರ್ಗಾ, ದುರ್ಗಾಬಾಯಿ, ದುರ್ಗಾದೇವಿ, ಬಾಯಿ ತಿರುಗುವುದಿಲ್ಲವೆ ?

ವಸ್ತಾ—ದುರ್ಗಾ, ನಿನ್ನ ಆಜ್ಞಾಧಾರಕನು ನಾನು, ಮುಂದೇನು ಮಾಡಬೇಕು ?

ದುರ್ಗಾ—ಆ ದಾಖಲೆಗಳನ್ನು ನಾವು ಪ್ರತ್ಯಕ್ಷವಾಗಿ ನೋಡಬೇಕು ಅವು ನಿಜವಾದುವುಗಳಾದರೆ ನಾವು ಅದನ್ನು ವಶಪಡಿಸಿಕೊಳ್ಳಬೇಕು

ವಸ್ತಾ—ಮುತ್ಸದ್ದಿಗೆ ಏನು ಪ್ರಲೋಭನನ್ನುಂಟುಮಾಡಿರುವೆ ?

ದುರ್ಗಾ—ಪ್ರಲೋಭನೇ ! ಈ ಜಗತ್ತಿನಲ್ಲಿ ಮತ್ತೇನು ಪ್ರಲೋಭವಿದೆ ? ನಾನು ಅವನನ್ನು ಮದುವೆಯಾಗುವುದಾಗಿ ವಾಗ್ದಾನ ಮಾಡಿದ್ದೇನೆ

ವಸ್ತಾ—ಆ ವಾಗ್ದಾನವನ್ನು ಅವನು ನಂಬಿದನೆ ?

ದುರ್ಗಾ—ಮಾಂತ್ರಿಕನ ಮಂತ್ರವನ್ನು ಹಾವು ನಂಬುವುದೋ, ಇಲ್ಲವೋ ? ನನ್ನ ನಗು, ನನ್ನ ನೋಟ, ಒಂದೇ ಒಂದು ಚುಂಬನ, ಇನ್ನೇನು ಬೇಕು, ಆ ಮುಟ್ಠಾಳನಿಗೆ ಎಂದು ನಕ್ಕಳು

ವಸ್ತಾ—ಸಾವಿತ್ರಿ ! ಅವನ ಚಾತುರ್ಯದಲ್ಲಿ ನಾನೇ ಮೋಸ ಹೋಗುವೆನೋ? ಏನೋ ?

ದುರ್ಗಾ—ಅಯ್ಯೋ ಹುಚ್ಚ ! ಎಷ್ಟು ಅಸೂಯೆ ! ಅರಣ್ಯದಲ್ಲಿ ಸಿಂಹವು ಹರಿಣ

ವನ್ನು ಮುದ್ದಿಸಿದರೆ ಗಂಡುಸಿಂಹವು ಅಸೂಯೆ ಪಡುವುದೆ ? ಈ ದುರ್ಗೆ, ಹುಚ್ಚು ಸಾವಿತ್ರಿ ಮಿಾರ್‌ಸಾದಕನಿಗೊಬ್ಬನಿಗಲ್ಲದೇ ಬೇರೆ ಪುರುಷನಿಗೆ ವಶವಾಗುವುದುಂಟೆ ! ನನ್ನನ್ನು ಗೆಲ್ಲುವಂಥಾ ಬೇರೊಬ್ಬ ಪುರುಷನು ಹುಟ್ಟಿಯೇ ಇಲ್ಲ. ನೀನೊಬ್ಬನೇ ಈ ಜಗತ್ತಿನಲ್ಲಿ ನನ್ನ ಸರ್ವಸ್ವ.

ವಸ್ತಾದನು ದುರ್ಗೆಯನ್ನು ಆಲಿಂಗಿಸಿ ಚುಂಬಿಸಿದನು

ವಸ್ತಾದನು ಮಿಾರ್‌ಸಾದಕನೆಂಬುದನ್ನು ವಾಚಕರೇ ಬಲ್ಲರು

ರಾತ್ರಿ ಪುನಃ ಅಂಗಡಿಗಳು, ಆಟವವರು, ಪಾನಗೃಹಗಳು ಎಲ್ಲವೂ ಜಗಜಗಿಸ ತೊಡಗಿದವು ದೊಂಬರಾಟವು ಪುನಃ ಆರಂಭವಾಯಿತು ಇಂದು ಆಟವನ್ನು ನೋಡು ವುದಕ್ಕೆ ದೊಡ್ಡ ದೊಡ್ಡ ಸರದಾರರು ಬಂದಿದ್ದಾರೆ ಡೇವಿಡ್ಡನೂ ಹೊಸ ಅಂಗರೇಕು ಗಳನ್ನು ಧರಿಸಿ ಬಂದಿದ್ದಾನೆ ಆಟವೆಲ್ಲವೂ ಪೂರೈಸಿ ನರ್ತನವಾಗುವವರೆಗೆ ಆ ಪ್ರೇಕ್ಷ ಕರಿಗೆ ಸಮಾಧಾನವಿಲ್ಲ ವಸ್ತಾದನ ಮುಂದೆ ನಿಂತು, ಉಮೇದುವಾರರು, "ವಸ್ತಾದರೆ, ಮೊದಲು ನರ್ತನವೇ ಆಗಲಿ" ಎಂದು ಕೇಳುತ್ತಿದ್ದರು. ಅಷ್ಟರಲ್ಲಿ ಗಣೆಯ ಮೇಲಿನಿಂದ ಝರ್ ಎಂದು ಖಂಜರಿಯ ಸದ್ದಾಯಿತು ಎಲ್ಲರೂ ಗಣೆಯ ಕಡೆ ತಿರುಗಿ ನೋಡಿದರು ದುರ್ಗಾಬಾಯಿಯು ಗಣೆಯಮೇಲೆ ನಿಂತಿದ್ದಳು ಎಲ್ಲರಿಗೂ ಆಶ್ಚರ್ಯವಾಯಿತು ಹಗ್ಗವನ್ನು ಹಿಡಿದು ಮೇಲೆ ಲಾಗಗಳನ್ನು ಹಾಕಿದಳು ಗಣೆಯಮೇಲೆ ಹಾರುತ್ತಿರುವ ದುರ್ಗೆಯನ್ನು ನೋಡಿ ಎಲ್ಲರೂ ಇವಳು ಗಂಧರ್ವಕನ್ಯೆ ಎಂದುಕೊಳ್ಳುತ್ತಿದ್ದರು ವಸ್ತಾ ದನು ಪಟ್ಟಾ ಕತ್ತಿಯನ್ನು ಒರೆಯಿಂದ ಸೆಳೆದು ಗಣೆಯಮೇಲೆಸೆದನು ದುರ್ಗಾ ಬಾಯಿಯು ಆ ಹಾರಿಬರುತ್ತಿರುವ ಕತ್ತಿಯನ್ನು ಕೈಯಿಂದ ಹಿಡಿದಳು ಆ ಕತ್ತಿಯನ್ನು ಬೀಸುತ್ತಾ ಭೂಮಿಗೆ ಹಾರಿದಳು ಎಲ್ಲರೂ ಚಪ್ಪಾಳೆ ಹೊಡೆದರು ನಾಣ್ಯಗಳನ್ನು ಎಸೆದರು ಒಂದು ಹಾಡನ್ನು ಹಾಡಬೇಕೆಂದು ಹಲ್ಲು ಗಿಂಜಿದರು ದುರ್ಗೆಯು ದಿವ್ಯ ಕಂಠದಿಂದ ಹಾಡಿದಳು ಎಲ್ಲರೂ ಬೆರಗಾಗಿ ಹೊಗಳುತ್ತಾ ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು ಗುರ್ಗೆಯು ಗುಡಾರದೊಳಗೆ ಹೊರಟುಹೋದಳು ವಸ್ತಾದನು ಒಳಗೆ ಹೋದನು ಮುತ್ಸದ್ದಿಯು ಮೆಲ್ಲಮೆಲ್ಲಗೆ ಹೆಜ್ಜೆ ಇಡುತ್ತಾ ಒಳಹೊಕ್ಕನು. ವಸ್ತಾದನು ಬಿರುಗಣ್ಣು ಬಿಟ್ಟು ಅವನ ಕಡೆ ನೋಡುತ್ತಾ ಏನು ಮುತ್ಸದ್ದಿಗಳೇ ? ಏನು ಬಂದಿರಿ? ಆಟಗಾರರ ಅಂತಃಗೃಹದೊಳಗೆ ಬರಬಾರದೆಂಬುದನ್ನು ಅರಿಯಿರೋ ಎಂದು ಗದ್ದರಿಸಿ ದನು ಡೇವಿಡ್ಡನಿಗೆ ಭಯವಾಯಿತು, ದುರ್ಗೆಯು ಓರೆಗಣ್ಣಿನಿಂದ ನೋಡುತ್ತಾ ನಕ್ಕಳು ಮುತ್ಸದ್ದಿಗೆ ಧೈರ್ಯವಾಯಿತು, ವಸ್ತಾದರೆ ತಮ್ಮ ಆಟವನ್ನು ಭಾನುವಾರ ಸೇನಾಧಿಪತಿಗಳ ಮುಂದೆ ಏರ್ಪಾಡು ಮಾಡಿದೇನೆ ಎಂದನು ವಸ್ತಾದನು ಮೆಹ ರ್ಬಾನ್ ಎಂದನು ವಸ್ತಾದರೆ ಈ ದುರ್ಗಾದೇವಿಗೆ ಇನಾಂ ಕೊಡಲು ನಾನು ಸ್ವಲ್ಪ

ಹಣ ತಂದಿರ್ದೇನೆ, ತೆಗೆದುಕೊಳ್ಳಿರಿ, ಎಂದು ಹಣದ ಚೀಲವನ್ನು ವಸ್ತಾದರ ಕೈಗೆ ಕೊಡುವುದಕ್ಕೆ ಹೋದನು

ಇಲ್ಲಾ, ದುರ್ಗಾಬಾಯಿಗೇ ಕೊಡಿರಿ ಎಂದು ಹೇಳಿದನು ದುರ್ಗಾಬಾಯಿಯು ನಗುತ್ತಾ ಹಾರಿಬಂದು ಆ ಹಣದ ಚೀಲವನ್ನು ಕಿತ್ತುಕೊಂಡು ವಸ್ತಾದರೇ, ಈ ಹಣವನ್ನು ತೆಗೆದುಕೊಳ್ಳಿರಿ, ಒಂದುನೂರು ವರಹಗಳಿವೆ, ತಮ್ಮ ಸಾಲ ಹರಿಯಿತು ನಾನು ಇನ್ನು ಸ್ವತಂತ್ರಳು

ವಸ್ತಾ—ದುರ್ಗಾಬಾಯಿ, ನೀನು ನಮ್ಮ ಆಟವನ್ನು ಬಿಟ್ಟು ಹೋಗುವಿಯೇನು ?

ಇಲ್ಲ, ವಸ್ತಾದರೆ, ನಿಮ್ಮನ್ನು ಬಿಟ್ಟು ನಾನೆಲ್ಲಿಗೆ ಹೋಗಲಿ. ನಿಮ್ಮ ಸಾಲವನ್ನು ಹರಿಸಿಬಿಟ್ಟೆ, ಇನ್ನು ಮೇಲೆ ನೀವು ನನಗೆ ಸಾಲಗಾರರು, ಅಷ್ಟೆ

ಆಗಲಿ ತಾಯಿ ನೀನೇ ಯಜಮಾನಿಯಾಗು ಈ ಆಟ ನಡೆಸುವುದಕ್ಕೆ ಒಬ್ಬ ದಡುತಿ ಆಸಾಮಿ ಬೇಕಲ್ಲ

ಹೌದು ವಸ್ತಾದರೇ, ನೀವೇ ವಸ್ತಾದರು, ನೀವೇ ಯಜಮಾನರು, ನಾನು ನಿಮ್ಮ ಆಟದ ನರ್ತಕಿ, ಆದರೆ ನನಗೆ ಅಡ್ಡಿ ಆತಂಕಗಳಿರಕೂಡದು, ನಾನು ಸ್ವತಂತ್ರಳು

ದುರ್ಗಾದೇವಿಯು ಮುತ್ಸದ್ದಿಯನ್ನು ದರದರನೆ ಕೈ ಹಿಡಿದುಕೊಂಡು ಗುಡಾರದಿಂದ ಹೊರಗೆ ಹೋದಳು, ಇಬ್ಬರೂ ಓಡಿಹೋದರು, ಪ್ರಾತಃಕಾಲ ಮಾತನಾಡುತ್ತಿದ್ದ ಪಾಳುಮಂಟಪಕ್ಕೆ ಹೋದರು

ಅಲ್ಲಿ ಇಬ್ಬರೂ ಕುಳಿತುಕೊಂಡರು

ದುರ್ಗಾ—ಮುತ್ಸದ್ದಿಗಳೇ ನನ್ನ ಷರತ್ತಿಗೆ ಒಪ್ಪುವಿರೋ ?

ಖಂಡಿತವಾಗಿಯೂ ಒಪ್ಪುವೆನು

ನನ್ನನ್ನು ಮದುವೆಯಾಗುವಿರೋ ?

ದೇವರ ಸತ್ಯವಾಗಿಯೂ ಮದುವೆಯಾಗುವೆನು ?

ಈ ಪಾಳಯವನ್ನು ಬಿಟ್ಟು ನಾವಿಬ್ಬರೂ ಓಡಿಹೋಗುವುದಕ್ಕೆ ಒಪ್ಪುವಿರೋ ?

ನೀನು ಹಾಗೆಯೇ ಮಾಡಬೇಕಂದರೆ ಅದಕ್ಕೂ ಸಿದ್ಧ

ನನ್ನ ಷರತ್ತನ್ನು ಹೇಳುವೆನು ಕೇಳಿರಿ

ಹೇಳು, ಎಂದು ಕೈಹಿಡಿದುಕೊಂಡನು

ನೋಡಿ ! ಮುತ್ಸದ್ದಿಗಳೆ, ಶ್ರೀರಂಗಪಟ್ಟಣದ ಸೇನಾನಾಯಕರು ನಿಮ್ಮ ಅಧಿಕಾರಿಗಳಿಗೆ ಒಪ್ಪಂದ ಬರೆದು ಕೊಟ್ಟಿದ್ದಾರೆಂದು ಹೇಳಿದಿರಲ್ಲವೇ. ಅದನ್ನು ತಂದು ನನಗೆ ತೋರಿಸಬೇಕು ಮುತ್ಸದ್ದಿಯು ಅವಾಕ್ಕಾದನು ಸ್ವಲ್ಪ ಹೊತ್ತು ಕಲ್ಲು ಪ್ರತಿಮೆಯಂತೆ ಕುಳಿತಿದ್ದನು.

ದುರ್ಗಾ—ಡೇವಿಡ್ಡ ನನ್ನು ಆಲಿಂಗಿಸಿ ಚುಂಬಿಸಿ ಪ್ರಿಯನೇ ಮಾಡಲಾರೆಯಾ? ನ್ನಲ್ಲಿ ಸುಳ್ಳು ಹೇಳಿದೆಯಾ ?

ಇಲ್ಲ ! ದುರ್ಗೆ, ನಾನೊಂದು ಪ್ರಶ್ನೆ ಕೇಳುತ್ತೇನೆ

ಕೇಳು

ನೀನು ಆಟದವಳಲ್ಲ, ನೀನು ಯಾರೋ ಗುಪ್ತಚಾರಳಿರಬೇಕು

ಹೌದು, ಗುಪ್ತಚಾರಳೇ ಎಂದುಕೋ.

ಡೇ—ನನಗೆ ಭಯವಾಗುತ್ತದೆ. ನಾನು ಸೇನಾಧಿಪತಿಗಳಲ್ಲಿ ಇದೆಲ್ಲವನ್ನು ತಿಳಿಸಿ ಬಿಡುತ್ತೇನೆ

ದುರ್ಗೆಯು ಅವನ ಗಲ್ಲವನ್ನು ಹಿಡಿದು ಅಲ್ಲಾಡಿಸುತ್ತಾ, ಹೇಡಿಯೇ ಅಂಜು ಬುರುಕನೆ ! ತಿಳಿಸಿಬಿಡು ನಿನ್ನ ಸೇನಾಧಿಪತಿಗಳೇನು ಮೂರ್ಖರೇನು ? ಈ ಕಥೆ ಯನ್ನೆಲ್ಲಾ ನೀನೇ ನನಗೆ ಹೇಳಿದವನೆಂದು ಅವರಿಗೆ ಅರ್ಥವಾಗುವುದಿಲ್ಲವೇನು ? ಅವರು ಈ ಯುದ್ಧ ಸಮಯವಲ್ಲಿ ನಿನ್ನ ತಲೆಯನ್ನು ಮೊದಲು ಹಾರಿಸಿ ನನ್ನ ವಿಚಾ ರಣೆ ಮಾಡುತ್ತಾರೆ

ದುರ್ಗಾ, ನೀನು ಗುಪ್ತಚಾರಳಲ್ಲದಿದ್ದರೆ ಆ ಕಾಗದಗಳು ನಿನಗೇಕೆ ?

ಪ್ರಿಯನೆ ನೋಡು! ರಣದುಲ್ಲಾಖಾನನೆಂಬ ಸೇನಾಧಿಪತಿಯು ನನ್ನನ್ನು ಮದುವೆ ಯಾಗಬೇಕೆಂದು ಬಹಳ ಆಶೆಪಟ್ಟಿದಾನೆ ನಮ್ಮ ವಸ್ತಾದರಿಂದ ವಾಗ್ದಾನಪಡೆದಿದಾನೆ. ನನಗೆ ಅವನನ್ನು ಮದುವೆಯಾಗಲು ಇಷ್ಟವಿಲ್ಲ ಆದ್ದರಿಂದಲೇ ನಾನು ಈ ಬೆಳಿಗ್ಯೆ— ಈ ವಸ್ತಾದರ ಆಧೀನ ಯಾವಾಗ ತಪ್ಪುತ್ತದೆಂದು ಜೋಯಿಸನನ್ನು ಪ್ರಶ್ನೆ ಕೇಳಿದ್ದು! ಈ ಕಾಗದವು ನನ್ನ ಕೈಲಿದ್ದರೆ—ಈ ಯುದ್ಧವು ಪೂರೈಸುವವರೆಗೆ ಆ ಸೇನಾಧಿಪತಿಯು ನ್ನ ತಂಟೆಗೆ ಬರುವುದಿಲ್ಲ ಆದ್ದರಿಂದ ಆ ಪತ್ರವು ನನಗೆ ಬೇಕು ನೀನು ನನ್ನನ್ನು ಮದುವೆಯಾಗಬೇಕಾದರೆ ಆ ಪತ್ರವನ್ನು ತಂದು ಕೊಡಬೇಕು ಇಲ್ಲದಿದ್ದರೆ ನಿನ್ನ ದಾರಿ ನಿನಗೆ ನನ್ನ ದಾರಿ ನನಗೆ ಎಂದು ಹೇಳಿ ಹೊರಟೇಬಿಟ್ಟಳು. ಹಿಂತಿರುಗಿ ನೋಡಲೇ ಇಲ್ಲ ಡೇವಿಡ್ಡನಿಗೆ ತಲೆ ತಿರುಗಿತು, ಕಣ್ಣು ಕತ್ತಲೆ ಕಟ್ಟಿಕೊಂಡು ಬಂತು, ಓಡಿಬಂದು ದುರ್ಗೆಯ ಕೈ ಹಿಡಿದುಕೊಂಡು ಅವಳನ್ನು ನಿಲ್ಲಿಸಿದನು.

ದುರ್ಗೆ, ನಾನು ನಿನ್ನನ್ನು ಬಿಡಲಾರೆ ! ನಾನು ಆ ಕಾಗದಗಳನ್ನೆಲ್ಲಾ ನಿನಗೆ ತಂದು ಕೊಡುತ್ತೇನೆ ಎಂದು ಹೇಳಿದನು ದುರ್ಗೆಯು ಪಕಪಕನೆ ನಕ್ಕಳು ಆ ಮುತ್ಸ ದ್ದಿಯನ್ನು ಬಿಗಿಯಾಗಿ ಆಲಿಂಗಿಸಿಕೊಂಡು ಎಡಬಿಡದೇ ಮುತ್ತಿಟ್ಟಳು ಮುತ್ಸದ್ದಿಯು ಕರಣಶೂನ್ಯನಾಗಿ ಹೋದನು ದುರ್ಗೆಯು ತನ್ನ ದೊಂಬರ ಗುಡಾರದ ಕಡೆಗೆ ಹೋದಳು. ಡೇವಿಡ್ಡನು ತನ್ನ ಬಿಡಾರಕ್ಕೆ ತೆರಳಿದನು.

ಮೂರನೆಯ ದಿನ ಬೆಳಗಾಗುತ್ತಲೇ ಡೇವಿಡ್ಡನು ಯೋಚನೆ ಮಾಡತೊಡ ದನು. ಕೊನೆಯಲ್ಲಿ ಕಾಗದಗಳನ್ನು ದುರ್ಗಾದೇವಿಗೆ ಕೊಟ್ಟೇಬಿಡಬಿಡಬೇಕೆಂದು ನಿ ಯಿಸಿದನು ಆ ಕಾಗದಗಳು ಭದ್ರವಾದ ಸಂದೂಕದಲ್ಲಿತ್ತು ಆ ಸಂದೂಕದ ಬೀಗದ ಜನರಲ್ ಹ್ಯಾರಿಸ್ ಸಾಹೇಬರ ಕೈ ಪೆಟ್ಟಿಗೆಯಲ್ಲಿತ್ತು ಹ್ಯಾರಿಸ್ ಸಾಹೇಬರು ಸೈನ್ಯ ವ್ಯವಸ್ಥೆ ಮಾಡುವುದಕ್ಕೆ ಹೋಗಿದ್ದರು ಡೇವಿಡ್ಡನು ಅವರ ಕೈ ಪೆಟ್ಟಿಗೆಯನ್ನು ತಗದ ಬೀಗದ ಕೈಗಳನ್ನು ತೆಗೆದುಕೊಂಡನು ಸಂಧ್ಯಾಕಾಲದವರಗೆ ಕಣ್ಣಿನಲ್ಲಿ ಕಣ್ಣಿಟ್ಟ ಕೊಂಡು ಪ್ರಾಣವನ್ನು ಬಲವಾಗಿ ಹಿಡಿದುಕೊಂಡು ಕಾದಿದ್ದನು ಅಸ್ತಮಾನವ ಯಿತು ಸಂದೂಕನ್ನು ತೆಗೆದನು ಆ ಕಾಗದಗಳನ್ನು ಹೊರಕ್ಕೆ ತೆಗೆದನು ಎಲ್ಲ ಕೆಂಪು ಕಾಗದಗಳು, ಹದಿನಾಲ್ಕು ಕಾಗದಗಳಿದ್ದುವು ಅವುಗಳನ್ನೆಲ್ಲಾ ತೆಗ ಕೊಂಡನು ಎಲ್ಲವನ್ನು ಒಂದು ಬಾರಿ ನೋಡಿದನು ದುರ್ಗೆಯು ಕೇಳಿದ್ದು ಒಂದ ಒಂದು ಕಾಗದ ಈ ಹದಿನಾಲ್ಕು ಕಾಗದಗಳೇಕ ? ಎಂದು ತೋರಿತು ಅವನಿಗ ಉರ್ದುಅಕ್ಷರಗಳ ಪರಿಚಯವಿಲ್ಲ, ಯಾವ ಕಾಗದವೋ ಗುರ್ತಿಸಲಾರದೇ ಹೋಗನು ಅಷ್ಟು ಮನಸ್ಸಿನ ವ್ಯವಧಾನವೂ ಇಲ್ಲ, ಎಲ್ಲ ಕಾಗದಗಳನ್ನ ಸುತ್ತಿ ತನ್ನ ಜೋಬಿ ಕಿಸೆಯಲ್ಲಿಟ್ಟುಕೊಂಡನು ಸಂದೂಕದ ಬಾಗಿಲುಗಳನ್ನು ಹಾಗೆಯೇ ಭದ್ರಗೊಳಿಸಿದನು ಬೀಗದಕೈಗಳನ್ನೆಲ್ಲಾ ಯಥಾಸ್ಥಾನದಲ್ಲಿ ಇಟ್ಟನು ಆ ಗುಡಾರವನ್ನು ಬಿಟ್ಟು ಹೊ ಟನು

ಸೈನ್ಯದ ಹೊರವಳಯಕ್ಕೆ ಬಂದನು ದೊಂಬರಾಟವು ಇನ್ನೂ ಆರಂಭವಾಗಿ ಲಿಲ್ಲ ದೂರದಲ್ಲಿ ಕಾದುನಿರೀಕ್ಷಿಸುತ್ತಿದ್ದನು, ಎದೆಯು ಬಡಿದುಕೊಳ್ಳುತ್ತಿತ್ತು ದೊಂಬ ರಾಟವು ಆರಂಭವಾಯಿತು ಯಥಾಪ್ರಕಾರ ಸೈನ್ಯದವರೆಲ್ಲರೂ ಸೇರಿದ್ದರು ಆಟ ಳೆಲ್ಲಾ ಪೂರೈಸಿದಮೇಲೆ ದುರ್ಗಾದೇವಿಯ ನರ್ತನವಾಯಿತು ಎಲ್ಲವೂ ಪೂರೈಸಿ ಮೇಲೆ ಗುಂಪು ಹೊರಟುಹೋಯಿತು ಡೇವಿಡ್ಡನು ನೋಡುತ್ತ ದೂರದಲ್ಲಿ ದ್ದನು ಸ್ವಲ್ಪ ಹೊತ್ತಾದಮೇಲೆ ಆ ಕತ್ತಲೆಯಲ್ಲಿ ಯಾರೋ ಸಿಳ್ಳು ಹಾಕುವುದು ಕೇ ಸಿತು. ಡೇವಿಡ್ಡನು ಅತ್ತ ಕಡೆ ಹೋದನು ಅಲ್ಲಿ ದುರ್ಗಾದೇವಿಯು ನಿಂತಿದ್ದ ಮುತ್ಸದ್ದಿಯು ಲಗುಬಗೆಯಿಂದ ಅವಳ ಹತ್ತಿರ ಹೋಗಿ ನಿಂತನು ಅವಳು ಪಿಸು ಮಾತಿನಲ್ಲಿ ಮಾತನಾಡಬೇಡ, ನನ್ನ ಹಿಂದೆ ಬಾ ! ಎಂದು ಹೇಳಿದಳು ಅವರಿಬ್ಬರೂ ಹಾಗೆ ಮೌನವಾಗಿ ನಡೆಯುತ್ತಾ ನಾಲ್ಕು ಮೈಲಿ ದೂರ ಹೋದರು ಅಲ್ಲಿ ಒಂದ ಪಾಳು ಮಂದಿರ ! ಇಬ್ಬರೂ ಹೋಗಿ ಆ ಮಂದಿರದಲ್ಲಿ ಕುಳಿತರು ದುರ್ಗೆಯು ಮುತ್ಸ ದ್ದಿಯ ಕೊರಳಿಗೆ ತನ್ನ ತೋಳನ್ನು ಸುತ್ತುಗಟ್ಟಿ ಆಲಂಗಿಸಿ— ಪ್ರಾಣನಾಥ ಕೊನೆ ನೀನೇ ಗೆದ್ದೆಯಾ ?

ದುರ್ಗೆ! ಇವೇ ಆ ಸೇನಾಧಿಪತಿಗಳ ಕಾಗದಗಳು ತೆಗೆದುಕೋ ಎಂದು ...ರ್ಗೆಯ ಕೈಗೆ ಕೊಟ್ಟು ಅವಳನ್ನು ಆಲಿಂಗಿಸಿ ಚುಂಬಿಸಿದನು

ದುರ್ಗೆಯು, ಪ್ರಿಯ! ನಿನ್ನೆಯ ದಿನ ನನ್ನನ್ನು ಗೂಢಚಾರಳೆಂದು ಸಂಶಯ ...ಟ್ಟಿ ನೀನು ಬುದ್ಧಿವಂತನೇ ಹೌದು ಒಂದು ಪಕ್ಷ ನಾನು ಗೂಢಚಾರಳಾದರೂ ...ನ್ನನ್ನು ನಂಬುವೆಯಾ? ಈ ಕಾಗದಗಳನ್ನು ನನಗೆ ಕೊಡುವೆಯಾ?

ದುರ್ಗೇ! ನೀನು ಯಾರಾದರೂ ನಾನು ಲಕ್ಷ್ಯಮಾಡುವುದಿಲ್ಲ ನಿನ್ನ ಪ್ರೇಮವು ಚಂಚಲವಾಗಿದ್ದು ನೀನು ನನ್ನನ್ನು ಬಿಡುವುದಿಲ್ಲವೆಂದು ಪ್ರಮಾಣ ಮಾಡಿದರೆ ...ಾಕು

ದುರ್ಗೆಯು ಮಂದಹಾಸವನ್ನು ಬೀರುತ್ತಾ, ನಾನು ಆಮರಣಾಂತ ನಿನ್ನನ್ನು ...ಗಲುವುದಿಲ್ಲ ಎಂದು ಹೇಳಿ ಮುತ್ಸದ್ದಿಯನ್ನು ಆಲಿಂಗಿಸಿದಳು

ಮುತ್ಸದ್ದಿಯು, ದುರ್ಗೆ! ನಾನು ಎಷ್ಟೋ ಸಾಹಸ ಮಾಡಿ ಆ ಕಾಗದಗಳನ್ನು ...ಂದಿದ್ದೇನೆ ಈಗ ಕಡುಗತ್ತಲೆ ನೀನು ಅವುಗಳನ್ನು ನೋಡಲೇ ಇಲ್ಲ ಒಂದು ...ಕ್ಷ ಅವು ನೀನು ಅಪೇಕ್ಷಿಸಿದ ಕಾಗದಗಳಲ್ಲದಿದ್ದರೆ ನಿನ್ನ ಇಷ್ಟಾರ್ಥವು ಫಲಿಸಿದಂತೆ ...ಗುವುದಿಲ್ಲ

ಡೇವಿಡ್, ನೀನು ನನ್ನನ್ನು ಪೂರ್ಣವಾಗಿ ಪ್ರೀತಿಸುತ್ತಿ ಎಂದು ನಾನು ಬಲ್ಲೆ ...ೀನು ನನ್ನ ಪ್ರೀತಿಗೆ ತಕ್ಕ ಪುರಸ್ಕಾರವನ್ನು ತಂದಿದ್ದಿ ಎಂದು ನಾನು ಪೂರ್ಣವಾಗಿ ...ಂಬಿದ್ದೇನೆ ಅದನ್ನು ನೋಡಿ ಪರೀಕ್ಷಿಸುವ ಕಾರಣವಿಲ್ಲ ನಾವಿಬ್ಬರೂ ದೂರ ...ೇಶಕ್ಕೆ ಹೊರಟುಹೋಗೋಣ ಈ ಪ್ರಾಂತ್ಯದಲ್ಲಿದ್ದರೆ ನೀನು ಎಂದಾದರೂ ಸಿಕ್ಕಿ ...ೀಳುವೆ ಸೇನಾಧಿಪತಿಗಳು ನಿನ್ನನ್ನು ಗುಂಡಿನ ಬಾಯಿಗೆ ಕಟ್ಟಿಸುವರು

ಹೌದು! ಹೊರಟುಹೋಗೋಣ ಆದರೆ, ನನಗೆ ಬಹಳ ಶ್ರಮವಾಗಿದೆ ಇಲ್ಲಿ ...ಲ್ಪ ವಿಶ್ರಮಿಸಿಕೊಂಡು ಹೋಗೋಣ ಒಂದು ಮಾತು ನೀನು ವಸ್ತಾದರಿಂದ ...ೇಗೆ ತಪ್ಪಿಸಿಕೊಂಡು ಬಂದೆ?

ನಾನು ಅವನಿಗೆ ಚೆನ್ನಾಗಿ ಮಂಕುಬೂದಿಯನ್ನು ಚೆಲ್ಲಿದ್ದೇನೆ ಅವನ ಚಿಂತೆ ...ನಗೆ ಬೇಡ ನಿನಗಾಗಿ ಒಳ್ಳೆಯ ಮದ್ಯವನ್ನು ತಂದಿದ್ದೇನೆ ಸ್ವಲ್ಪ ಪಾನಮಾಡು ...ನು ಪರಿಹಾರವಾಗುತ್ತದೆ ಎಂದು ಹೇಳಿ ತನ್ನ ಜೋಳಿಗೆಯಿಂದ ಒಂದು ಸೀಸೆಯನ್ನು ...ಗೆದು ಸ್ವಲ್ಪ ಕುಡಿದು ಮುತ್ಸದ್ದಿಯ ಕೈಗೆ ಕೊಟ್ಟಳು ಮುತ್ಸದ್ದಿಯು ಅದನ್ನು ...ಡಿದು ದುರ್ಗಾ, ಬಹಳ ರುಚಿಯಾಗಿದೆ ಎಂದನು ಹಾಗೆಯೇ ಕಲ್ಲುಚಪ್ಪಡಿಯ ...ೇಲೆ ಮಲಗಿದನು ದುರ್ಗೆಯ ಕೈ ಹಿಡಿದುಕೊಂಡು ಏನೇನೋ ಮಾತನಾಡ ...ಡಗಿದನು

ದುರ್ಗೆ, ಇನ್ನು ಸ್ವಲ್ಪ ಮಧುವಿದ್ದರೆ ಕೊಡು ಮನದಣಿಯೆ ಕುಡಿದುಬಿಡುತ್ತೇ

ಡೇವಿಡ್, ನಿನಗಾಗಿ ಇಂದು ಯಥೇಚ್ಛವಾಗಿ ಮದ್ಯವನ್ನು ತಂದಿದ್ದೇನೆ ಕು ಕುಡಿ ! ಬೇಕಾದಷ್ಟು ಕುಡಿ

ದುರ್ಗೆ, ಅಂದು ನೀನ ಕೊಟ್ಟ ಹೂಜಿಯ ಮದ್ಯಕ್ಕಿಂತ ಇದು ರುಚಿಯಾಗಿ

ಅಂದು ದುಡ್ಡಿಗಾಗಿ ಮಾಡಿದ ಮದ್ಯ, ಇಂದು ಪ್ರಣಯಕ್ಕಾಗಿ ತಂದಿದ್ದ ಅಮೃತ ಎಂದು ಹೇಳಿ ಮತ್ತೊಂದು ಸೀಸೆಯನ್ನು ತೆಗೆದುಕೊಟ್ಟಳು ಡೇವಿಡ್ಡ ಸ್ವಲ್ಪ ಸ್ವಲ್ಪವಾಗಿ ಎಲ್ಲವನ್ನೂ ಕುಡಿದುಬಿಟ್ಟನು ದುರ್ಗೆಯು ನಕ್ಕಳು, ಗಟ್ಟಿಯಾ ನಕ್ಕಳು, ಪಿಶಾಚಿಯ ನಗುವನ್ನು ನಕ್ಕಳು

ಡೇವಿಡ್ಡನು ಕಣ್ಣು ಬಿಟ್ಟು ನೋಡಿದನು ದುರ್ಗೆಯನ್ನು ಸಮೀಪಕ್ಕೆ ಬ ವಂತೆ ಕರೆದನು ಹೃದಯದಲ್ಲಿ ಏನೋ ಯಾತನೆಯಾಗಿ ಡೇವಿಡ್ಡನು ಹೊರ ತೊಡಗಿದನು. ದುರ್ಗೆಯು ತರಂಗ ತರಂಗವಾಗಿ ನಗುತ್ತಲೇ ಇದ್ದಳು ಯಾ ಬಾಗಿಲು ತೆಗೆದುಕೊಂಡು ಒಳಗೆ ಬಂದರು ಆ ಕತ್ತಲೆಯಲ್ಲಿಯೂ ಅವನು ವಸ್ತಾ ನೆಂದು ದುರ್ಗೆಯು ಗುರ್ತಿಸಿದಳು

ವಸ್ತಾದರೇ ! ನೀವೆಲ್ಲಿ ಬಂದಿರಿ !

ದುರ್ಗೆ, ನಿನ್ನ ಹಿಂದೆಯೇ ಬಂದೆ, ಎಲ್ಲವನ್ನೂ ತಿಳಿದುಕೊಂಡೆ ಆದರೆ ಕಾ ಗಳು ದೊರೆತಿವೆಯೇನು ?

ಅವು ಅದೇ ಕಾಗದಗಳೆಂದು ಹೇಗೆ ಹೇಳುತ್ತೀ-

ವಸ್ತಾದರೆ, ದುರ್ಗೆಯು ಅಷ್ಟು ಮುರ್ಖಳೆಂದು ಭಾವಿಸಿದಿರಾ ? ಅವು ಸ್ಪರ್ಶದಿಂದಲೇ ತಿಳಿದುಕೊಂಡೆ ಅವೆಲ್ಲಾ ಒರಟಾದ ಕಾಗದಗಳು

ಅಷ್ಟರಲ್ಲಿ ಡೇವಿಡ್ಡನು ಬಹಳ ಸಂಕಟಪಡುತ್ತಿದ್ದನು ಅವನ ಕಡೆಗ ತಿರು ದುರ್ಗೆಯು ಮತ್ತೊಮ್ಮೆ ನಕ್ಕಳು ಮುತ್ಸದ್ದಿಯ ಪ್ರಾಣವು ಹಾರಿಹೋಯಿತು

ವಸ್ತಾದನೂ-ದುರ್ಗೆಯೂ ಸಮೀಪದಲ್ಲಿದ್ದ ಒಂದು ಹಳ್ಳಿಯ ಸಮೀಪ ಹೋದರು ಅಲ್ಲಿ ಊರು ಬಾಗಿಲಿನಲ್ಲಿ ಒಂದು ಮಾರಿಯ ಗುಡಿ ಮಾರಮ್ಮ ಮುಂದೆ ದೊಡ್ಡ ಕಕ್ಕಡವು ಉರಿಯುತ್ತಿತ್ತು ಮೀರ್‌ಸಾದಕನು ಆ ಬೆಳಕಿನಲ್ಲಿ ಕಾಗದಗಳನ್ನು ಬಿಚ್ಚಿ ಓದಿದನು ಹದಿನಾಲ್ಕು ಕಾಗದಗಳು ಹದಿನಾಲ್ಕು ಮು ಮುಖ್ಯ ಸೇನಾಧಿಪತಿಗಳು ಬರೆದಿರುವುದು ಎಲ್ಲವೂ ಅವರವರ ಸ್ವದಸ್ತೂರು ಸೂ ಅವನ ಆನಂದಕ್ಕೆ ಪಾರವಿಲ್ಲ ಅವುಗಳನ್ನೆಲ್ಲಾ ಒಂದು ಚೀಲದಲ್ಲಿ ಹಾಕಿ ಜನ ಕಟ್ಟಿಕೊಂಡನು ಇಬ್ಬರೂ ಮುಂದಕ್ಕೆ ಹೊರಟರು

ಮೀರ್‌ಸಾದಕ್ ಮತ್ತು ಸಾವಿತ್ರಿ ಇಬ್ಬರೂ ವೇಷಗಳನ್ನು ಮರೆಸಿಕೊಂ ರಾಜಧಾನಿಯ ಕಡೆ ಪ್ರಯಾಣ ಮಾಡಿದರು

# ರಣಕ್ಷೇತ್ರದಲ್ಲಿ

ಸುಲ್ತಾನನು ಶ್ರೀರಂಗಪಟ್ಟಣದ ದರಿಯಾ ದೌಲತ್ತಿನಲ್ಲಿ ಚಿಂತಾಕ್ರಾಂತನಾಗಿ ಕುಳಿತಿದ್ದಾನೆ ಅವನ ಮುಖವು ಕೋಪದಿಂದ ಕೆಂಪೇರಿದೆ ಮಳವಳ್ಳಿಯ ಸಮೀಪದಲ್ಲಿ ತಾನೇ ಸ್ವತಃ ನಿಂತು ಯುದ್ಧಕ್ಕೆ ಹೋದನು ಇಂಗ್ಲೀಷರ ದಂಡಿನೊಂದಿಗೆ ಕಡು ಪರಾಕ್ರಮದಿಂದ ಹೋರಾಡಿದನು ಆದರೇನು ? ಸುಲ್ತಾನೀ ಸೈನ್ಯಕ್ಕೆ ಜಯವಾಗಲಿಲ್ಲ ಇದು ಸುಲ್ತಾನನ ಖೇದಕ್ಕೆ ಕಾರಣವಾಗಿತ್ತು ಸುಲ್ತಾನೀ ಸೈನ್ಯವು ದಿನದಿನಕ್ಕೆ ಹಿಂದಕ್ಕೆ ಸರಿಯುತ್ತಿದ. ಇಂಗ್ಲೀಷರು ದಂಡೆತ್ತಿ ಬಂದಾಗಿನಿಂದಲೂ, ಎಲ್ಲಿಯೂ ಸುಲ್ತಾನೀ ಸೈನ್ಯಕ್ಕ ಜಯವೇ ಇಲ್ಲ ಎಲ್ಲಿಯೂ ತೊಡ್ಡ ದೊಡ್ಡ ಯುದ್ಧಗಳಾಗಲೇ ಇಲ್ಲ ಪಶ್ಚಿಮದ ಕಡೆ ಸಿದ್ದೇಶ್ವರದಲ್ಲಿ ಸುಲ್ತಾನೀ ಸೈನ್ಯಕ್ಕೂ, ಇಂಗ್ಲೀಷರ ಸೈನ್ಯಕ್ಕೂ ಬಲವಾದ ಯುದ್ಧವಾಯಿತು ಅಲ್ಲಿಯೂ ಸುಲ್ತಾನರಿಗೆ ಸೋಲೇ ಮಳವಳ್ಳಿಯ ಸಮೀಪವಂತೂ ಸ್ವಯಂ ಸುಲ್ತಾನರೇ ಯುದ್ಧ ಮಾಡಿದರು, ಜಯವಾಗಲಿಲ್ಲ ಗೂಢಚಾರರು ಹೇಳಿದ ವರ್ತಮಾನ ನಿಜವಿರಬಹುದೇ ಎಂಬ ಸಂದೇಹವು ಬಾಧಿಸುತ್ತಿದೆ

ಹೀಗೆಯೇ ಏಕಾಂತದಲ್ಲಿ ಸುಲ್ತಾನನು ಆಲೋಚಿಸುತ್ತಾ ಕುಳಿತಿರುವಾಗ ದೂರದಲ್ಲಿ ಫಿರಂಗಿಯ ಶಬ್ದಗಳು ಕೇಳಲಾರಂಭಿಸಿದುವು ಮೇಲು ಛಾವಣಿಗೆ ಹೋಗಿ ನಿಂತು ಸುತ್ತಲೂ ನೋಡಿದನು ದೂರದಲ್ಲಿ ಧೂಳು ಆಕಾಶದವರೆಗೆ ವ್ಯಾಪಿಸಿದ್ದಿತು. ಇದು ಸೈನ್ಯವು ಬರುತ್ತಿರುವ ಚಿಹ್ನೆಯಲ್ಲವೆಂದೂ, ಎಲ್ಲಿಯೋ ಬಲವಾದ ಯುದ್ಧವಾಗುತ್ತಿದಯೆಂದೂ ನಿಶ್ಚಯಿಸಿದನು ಬೇಹುಗಾರರು ಬಂದು ಯಾವ ವರ್ತಮಾನವನ್ನೂ ತಿಳಿಸಲಿಲ್ಲ ಅಷ್ಟು ಹೊತ್ತಿಗೆ ಮಧ್ಯಾಹ್ನದ ವೇಳೆಯಾಯಿತು ಆರೋಗಣೆಯನ್ನು ಪೂರೈಸಿ ಹೊರಗೆ ಬಂದನು. ಬೇಹುಗಾರರು ಬಂದು ಸುಲ್ತಾನರಿಗೆ ಮುಜರೆ ಮಾಡಿದರು ಸಮಾಚಾರವೇನೆಂದು ವಿಚಾರಿಸಿದನು

ಹುಜೂರು ! ಕರೀಘಟ್ಟದ ಆಚೆ ಫರಂಗಿಯವರ ದಂಡಿಗೂ, ದೇಶೀ ಸೈನ್ಯಕ್ಕೂ ಬಲವಾದ ಯುದ್ಧವಾಗುತ್ತಿದ ಎರಡು ಕಡೆಗೂ ಸಮಸಮ ಬಲವಿದೆ ಎರಡು ಕಡೆಯೂ ಫಿರಂಗಿಗಳಿವೆ ಬಂದೂಕಗಳ ಸದ್ದು ಎಡೆಬಿಡದೆ ಕೇಳುತ್ತಿದೆ- ದೇಶೀಯ ಸೈನ್ಯದ ಕೈಯೇ ಗಂಟೆಗಂಟೆಗೂ ಮೇಲಾಗುತ್ತಿರುವಂತೆ ಕಾಣುತ್ತದೆ ಎಂದು ಹೇಳಿದರು

ಸುಲ್ತಾನ್—ಸುಲ್ತಾನೀ ಸೈನ್ಯವು ಈವತ್ತು ಯುದ್ಧಕ್ಕೆ ಹೊರಟೇ ಇಲ್ಲವಲ್ಲವೇ ?

ಚಾರರು—ಇಲ್ಲ ! ಖಾವಿಂದ ನಮ್ಮ ಸೈನ್ಯ ಯುದ್ಧಕ್ಕೆ ಹೊರಟಿಲ್ಲ. ಈಗ

ಮಧ್ಯಾಹ್ನದ ಮೇಲೆ ಸೇನಾಧಿಪತಿಗಳು ಯುದ್ಧವು ಸಂಭವಿಸಬಹುದೆಂದು ಸೈನ್ಯ ಸನ್ನಾಹ ಮಾಡುತ್ತಿದ್ದಾರೆ.

ಸುಲ್ತಾನ್ — ಇಂಗ್ಲೀಷರ ದಂಡಿನೊಡನೆ ಯುದ್ಧ ಮಾಡುತ್ತಿರುವುದು ಯಾವ ದಂಡೆಂಬುದು ನಿಮಗೆ ಗೊತ್ತಾಗಲಿಲ್ಲವೋ ? ಬಹುಶಃ ಫ್ರೆಂಚರ ದಂಡು ಇರಬಹುದು ನಾವು ವಿಚಾರಿಸುತ್ತೇವೆ.

ಚಾರರು—ಮಹಾಸ್ವಾಮಿ ! ನಾವೇ ಬಹಳ ವಿಚಾರ ಮಾಡಿದ್ದೇವೆ ಅದು ಫ್ರೆಂಚರ ದಂಡಲ್ಲ ಆ ದಂಡೆಲ್ಲವೂ ಪೂರ್ತಿಯಾಗಿ ಹಿಂದೂಗಳ ದಂಡು ಕೊಂಬು ಕಹಳೆಗಳು ಕೇಳುತ್ತವೆ ಪಾಳಯಗಾರರ ದಂಡೆಂದು ಊಹಿಸಿದ್ದೇವೆ

ಸುಲ್ತಾನರು ನಕ್ಕರು ! ಓಹೋ ! ಅದು ಹಿಂದುಗಳ ದಂಡಾದರೆ, ಪಾಳಯಗಾರರ ದಂಡಾದರೆ ಅದು ನಗರದ ಸೈನ್ಯವೇ ಇರಬೇಕು ಇಷ್ಟು ತುಮುಲ ಯುದ್ಧವಾಗಬೇಕಾದರೆ ಆ ಸೈನ್ಯದ ನಾಯಕರು ಸ್ವಯಂ ಇಯಜ್ ಖಾನರವರೇ ಇರಬೇಕು ಎಂದು ಹೇಳಿ, ಆ ಬೇಹುಗಾರರನ್ನು ಕಳುಹಿಸಿಕೊಟ್ಟು ದಲಾಯಿತರನ್ನು ಕರೆದು ಮಂತ್ರಿ ಪೂರ್ಣಯ್ಯನವರನ್ನು ಕರೆತರುವಂತೆ ಅಪ್ಪಣೆ ಮಾಡಿದರು

ಮಂತ್ರಿ ಪೂರ್ಣಯ್ಯನವರು ಬಂದು ಸುಲ್ತಾನರ ಭೇಟಿ ಮಾಡಿದರು ಸುಲ್ತಾನರ ಮುಖವು ಇಷ್ಟು ಪ್ರಸನ್ನವಾಗಿರುವುದನ್ನು ನೋಡಿ ಅವರು ಸಂತೋಷಪಟ್ಟರು ಸುಲ್ತಾನರು ಪೂರ್ಣಯ್ಯನವರನ್ನು ಮೇಲಿನ ಛಾವಣಿಗೆ ಕರೆದುಕೊಂಡು ಹೋಗಿ ದುರ್ಬೀನಿನಿಂದ ಆ ಯುದ್ಧವಾಗುತ್ತಿರುವ ಕಡೆಗೆ ತೋರಿಸಿದರು ಮಹಾಮಂತ್ರಿಗಳವರೇ! ಆಯುದ್ಧವು ಯಾರದೆಂಬುದನ್ನು ಬಲ್ಲಿರಾ? ಅದು ನಗರದ ಸೈನ್ಯಕ್ಕೂ, ಇಂಗ್ಲೀಷರ ಸೈನ್ಯಕ್ಕೂ ಆಗುತ್ತಿರುವ ಯುದ್ಧ ನಗರದ ಸೈನ್ಯವನ್ನು ಸ್ವಯಂ ನಗರದ ನವಾಬರಾದ ಇಯಜ್ ಖಾನರವರೇ ನಡೆಸುತ್ತಿದ್ದಾರೆಂಬುದಕ್ಕೆ ಸಂದೇಹವೇ ಇಲ್ಲ ಇಯಜ್ ಖಾನರವರು ರಣರಂಗಕ್ಕೆ ಬಂದ ಮೇಲೆ ನಮ್ಮ ಜಯವು ಸಿದ್ಧ ನಾನು ಈಗಲೇ ಆ ರಣರಂಗಕ್ಕೆ ಹೊರಡುತ್ತೇನೆ ಎಂದು ಹೇಳಿದರು.

ಪೂರ್ಣಯ್ಯ—ಹುಜೂರು, ಇಯಜ್ ಖಾನರು ಯುದ್ಧಭೂಮಿಗೆ ಬಂದು ಯುದ್ಧ ಮಾಡುತ್ತಿದ್ದಾರೆಂಬ ಸುದ್ದಿಯನ್ನು ತಂದವರಾರು ?

ಸ್ಪಷ್ಟವಾಗಿ ನಮಗೆ ಸುದ್ದಿಯು ಬಂದಿಲ್ಲ ಬೇಹುಗಾರರು ತಂದ ಸಮಾಚಾರಗಳಿಂದ ನಾನೇ ಊಹಾಪೋಹ ಮಾಡಿದ್ದೇನೆ.

ಹುಜೂರು, ಆ ಊಹೆಯು ನಿಜವಾದರೆ ಬಹು ಸಂತೋಷ ಆದರೆ ಖಚಿತವಾಗಿ ತಿಳಿದ ಹೊರತು ಈ ಮಹಾಯುದ್ಧದ ಮಧ್ಯದಲ್ಲಿ ಸ್ವಯಂ ಸುಲ್ತಾನರು ಪ್ರವೇಶ ಮಾಡಕೂಡದು ಹಾಗೆ ನುಗ್ಗುವುದರಲ್ಲಿ ಅಪಾಯವಿದೆ

ಸುಲ್ತಾನರಿಗೂ ಮಂತ್ರಿಗಳಿಗೂ ಬಹಳ ಚರ್ಚೆಯಾಯಿತು. ಮಂತ್ರಿಗಳು

ಸುಲ್ತಾನರನ್ನು ಯುದ್ಧರಂಗಕ್ಕೆ ಹೋಗಲು ಬಿಡಲೇ ಇಲ್ಲ ಅಸ್ತಮಾನವಾಗಿ ಹೋಯಿತು ರಾತ್ರಿ ಒಂಬತ್ತು ಗಂಟೆಯಾಯಿತು ನಭೋಮಂಡಲವು ಭೇದಿಸುವಂತೆ ಕೊಂಬು ಕಹಳೆಗಳ ಸದ್ದಾಯಿತು ಅದು ಸುಲ್ತಾನರ ಮತ್ತು ಮಂತ್ರಿಗಳ ಕಿವಿಗೂ ಅಸ್ಪಷ್ಟವಾಗಿ ಕೇಳಿಸಿತು ಸ್ವಲ್ಪ ಹೊತ್ತಿನಲ್ಲಿ ಸದ್ದು ಅಡಗಿ ಹೋಯಿತು

ಸುಲ್ತಾನರ ಊಹೆಯು ಬರೀ ಊಹೆಯಲ್ಲ, ನಿಜವೇ ಆಗಿದ್ದಿತು ಅತ್ತಕಡೆ ರಣರಂಗದಲ್ಲಿ ಆದಿನ ಪ್ರಾತಃಕಾಲ ನಗರದ ಸೈನ್ಯವು ಇಂಗ್ಲೀಷರ ದಂಡಿನ ಮೇಲೆ ಹಠಾತ್ತಾಗಿ ಬಿದ್ದಿತು ಸ್ವಯಂ ಇಯಜ್‌ಖಾನನೇ ಸೇನಾಧಿಪತ್ಯವನ್ನು ವಹಿಸಿದ್ದನು ಸುತ್ತಲೂ ಹದಿಮೂರು ಮಂದಿ ಪಾಳಯಗಾರರು ಸುತ್ತುವರಿದು ಯುದ್ಧ ಮಾಡುತ್ತಿದ್ದರು ಎರಡು ಗಂಟೆಗಳ ಕಾಲದಲ್ಲಿ ಇಂಗ್ಲೀಷರ ದಂಡು ಧ್ವಂಸವಾಗಿ ಹೋಯಿತು ಅಷ್ಟರಲ್ಲಿ ಜನರಲ್ ಹಾರಿಸ್ಸನು ದೊಡ್ಡ ದಂಡು ತೆಗೆದುಕೊಂಡು ಬಂದು ರಣಕ್ಷೇತ್ರದಲ್ಲಿ ನಿಂತನು ಇಯಜ್‌ಖಾನರ ಯುದ್ಧ ವೈಖರಿಯನ್ನು ನೋಡಿ ಸ್ವಯಂ ಸುಲ್ತಾನರೇ ಯುದ್ಧಕ್ಕೆ ಬಂದು ನಿಂತಿದ್ದಾರೆಂದು ಅವನು ಭಾವಿಸಿದನು ಸುಲ್ತಾನರು ಬಹು ಪರಾಕ್ರಮಶಾಲಿಗಳೆಂದು ಅವನು ಕೇಳಿದ್ದನು ಇಂದು ಸುಲ್ತಾನರೊಡನೆ ಪ್ರತ್ಯಕ್ಷ ಯುದ್ಧವು ಬಂದಿತೆಂದು ಸಂತೋಷಪಟ್ಟನು ಯುದ್ಧ ಭೂಮಿಯಲ್ಲಿ ನೋಡಿದರೆ ಹಿಂದೂ ಸೈನ್ಯ ! ಅವನಿಗೆ ಆಶ್ಚರ್ಯವಾಯಿತು ಒಂದೆರಡು ಗಂಟೆಗಳಲ್ಲಿಯೇ ಅದು ಪಾಳಯಗಾರರ ದಂಡೆಂದು ಇಂಗ್ಲೀಷರ ಸೇನೆಗೆ ಗೊತ್ತಾಯಿತು ಆದರೂ ಆ ಮಹಾ ಸೈನ್ಯದ ಸರ್ವಸೇನಾನಾಯಕನಾರೆಂದು ಅವನಿಗೆ ತಿಳಿಯಲಿಲ್ಲ ಯುದ್ಧವೇನೋ ಬಹಳ ಘೋರವಾಗಿತ್ತು ಇಂಗ್ಲೀಷ್ ಸೈನ್ಯವು ಗಂಟೆಗಂಟೆಗೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ನಾಶವಾಗುತ್ತಿತ್ತು ಹಾರಿಸ್ಸನು ಇಂಗ್ಲೀಷ್ ಸೈನ್ಯವನ್ನು ಹಿಂದಕ್ಕೆ ಸರಿಸಬೇಕೆಂದು ಪ್ರಯತ್ನ ಮಾಡಿದನು ಸ್ವಲ್ಪ ಹೊತ್ತು ಇಂಗ್ಲೀಷ್ ಸೈನ್ಯವು ಜನರಲ್ಲನ ಅಪ್ಪಣೆಯಂತೆ ಹಿಂದಕ್ಕ ಸರಿಯಿತು ಆದರೂ ನಗರದ ಸೈನ್ಯವು ಬಹಳ ಭರದಿಂದ ಮುಂದೆ ಮುಂದೆ ನುಗ್ಗುತ್ತಲೇ ಇತ್ತು ಇಂಗ್ಲೀಷ್ ಸೇನಾನಾಯಕನು ಹಿಂದಕ್ಕೆ ಸರಿಯುವುದು ಉಪಯೋಗವಿಲ್ಲವೆಂದು, ಶತೃಗಳ ಸೈನ್ಯವು ಭರದಿಂದ ಮುಂದೆ ನುಗ್ಗುತ್ತಿರುವುದರಿಂದ ಎಷ್ಟು ಮುಂದಕ್ಕಾದರೂ ಅವರು ಬರುತ್ತಾರೆಂದು ನಿಶ್ಚಯ ಮಾಡಿ ಇಂಗ್ಲೀಷ್ ಸೈನ್ಯವನ್ನು ಪುನಃ ಮುಂದಕ್ಕೆ ನುಗ್ಗಿಸಿದನು ಫಿರಂಗಿಗಳನ್ನಿಟ್ಟು ಉಡಾಯಿಸುತ್ತಾ ಬಂದರು ಆದರೂ ದೇಶೀಯ ಸೈನ್ಯದ ಪ್ರಚಂಡ ಶಕ್ತಿಯು ಹೆಚ್ಚುತ್ತಲೇ ಬಂದಿತು. ಸಂಧ್ಯಾಕಾಲದ ಹೊತ್ತಿಗೆ ಇಂಗ್ಲೀಷರ ಅರ್ಧ ಸೈನ್ಯವು ನಾಶವಾಗಿ ಹೋಗಿತ್ತು ಜನರಲ್ ಹ್ಯಾರಿಸ್ಸನು ಇಂದು ತಮಗೆ ಜಯವಿಲ್ಲವೆಂದು ನಿಶ್ಚಯಿಸಿದನು.

ಇಯಜ್‌ಖಾನನು ಬಹು ಪರಾಕ್ರಮದಿಂದ ಯುದ್ಧ ಮಾಡಿದನು ಪಾಳಯಗಾರರೆಲ್ಲರೂ ಪ್ರಾಣದ ಹಂಗೂ ತೊರೆದು ಯುದ್ಧ ಮಾಡಿದರು. ಮಧ್ಯಾಹ್ನದವರೆಗೆ

ದೌಲತ್ತಳೂ, ರಾಧೆಯೂ ಇಯಜ್‌ಖಾನನ ಸಮೀಪದಲ್ಲಿಯೇ ಕುದುರೆಗಳನ್ನೇರಿ ಯುದ್ಧ ಮಾಡುತ್ತಿದ್ದರು ಮಧ್ಯಾಹ್ನತ್ಸರ ಆ ರಣಸಾಗರದಲ್ಲಿ ಇಯಜ್‌ಖಾನನಿಗೂ, ಅವರಿಗೂ ಬಹುದೂರವಾಗಿ ಹೋಯಿತು ಎಲ್ಲಿ ಯುದ್ಧದ ವೇಗವು ತೀವ್ರವಾಗಿದೆಯೋ ಅಲ್ಲಿ ಇಯಜ್‌ಖಾನನಿದ್ದಾನೆಂದು ಅವರು ಗುರ್ತಿಸುತ್ತಿದ್ದರು ಸಂಧ್ಯಾ ಕಾಲವಾಗು ತ್ತಲೇ ಯುದ್ಧದ ವೇಗವು ಹತ್ತರಷ್ಟು ಹೆಚ್ಚಿತು. ರಾತ್ರಿ ಕತ್ತಲಾದ ಮೇಲೆ ಇಂಗ್ಲೀಷ್ ಸೈನ್ಯವು ಹಿಂದಕ್ಕೆ ಓಡಿಹೋಯಿತು ರಣಕ್ಷೇತ್ರದಲ್ಲಿ ಒಬ್ಬ ಇಂಗ್ಲೀಷ್ ಸೈನಿಕನಾದರೂ ಇರಲಿಲ್ಲ ಆರ್ತನಾದ ಕೇಳುತ್ತಿದ್ದಿತು ನಾಲ್ಕಾರು ಪಾಳಯಗಾರರು ಇಯಜ್‌ಖಾನನ ಸಮೀಪದಲ್ಲಿಯೇ ಇದ್ದರು ಇಂಗ್ಲೀಷ್ ಸೈನ್ಯವು ಓಡಿಹೊಗುತ್ತಲೇ ನಗರದ ಸೈನ್ಯ ದವರು ಬಲವಾದ ಕೊಂಬು ಕಹಳೆಗಳನ್ನು ಊದಿದರು ಆ ಶಬ್ದವನ್ನು ಕೇಳುತ್ತ ಇಯಜ್‌ಖಾನನು ನಗುತ್ತಾ ಹಿಂದಕ್ಕೆ ತಿರುಗಿದನು. ಅನುಸರಿಸಿ ನಿಂತಿದ್ದ ಪಾಳಯ ಗಾರರನ್ನು ಕುರಿತು, "ನಗರದ ವೀರರೇ! ಇಂದಿನ ಜಯವು ನಿಮ್ಮದು" ಎಂದು ಉಚ್ಚಕಂಠದಿಂದ ಹೇಳಿದನು ರಣಭೂಮಿಯಲ್ಲೆಲ್ಲಾ ಕತ್ತಲೆ ಕವಿದಿತ್ತು ಆರ್ತನಾದ ಗಳು ಕೇಳುತ್ತಿದ್ದವು ಖಾನನು ಮನನೊಂದ ಸೈನಿಕರನ್ನೆಲ್ಲಾ ಡೋಲಿಗಳಲ್ಲಿ ಶಿಬಿರಕ್ಕೆ ಸಾಗಿಸಬೇಕೆಂದು ಅಪ್ಪಣೆ ಮಾಡಿದನು ದೌಲತ್ ಮತ್ತು ರಾಧಾರಾಣಿಯವರು ಆ ರಣಕ್ಷೇತ್ರದಲ್ಲಿ ಯಾವ ಭಾಗದಲ್ಲಿದ್ದಾರೆಯೋ ಇಯಜ್‌ಖಾನನು ಅರಸತೊಡಗಿದನು ಸ್ವಲ್ಪ ಹೊತ್ತಿನಲ್ಲಿಯೇ ಎರಡು ಕುದುರಗಳು ಬಂದು ಇಯಜ್‌ಖಾನನ ಗುಂಪನ್ನು ಸೇರಿಕೊಂಡವು ಆ ಮಶಾಲು ಬೆಳಕಿನಲ್ಲಿ ಖಾನನು ಆ ಇಬ್ಬರು ರಾಣಿಯವರನ್ನೂ ನೋಡಿದನು ರಾಣಿಯರ ಮುಖವು ಮಸಿಯು ಕೂಡದಂತೆ ಕಪ್ಪಾಗಿದ್ದುವು ಅಂಗ ರೇಕುಗಳೆಲ್ಲಾ ಹರುಕಲು ಛಿದ್ರವಾಗಿದ್ದುವು. ಇಯಜ್‌ಖಾನನು ನಗುತ್ತಾ "ರಾಣಿಯು ವರೇ! ಯುದ್ಧವು ಹೇಗಿದೆ? ಹಸಿವು ಬಾಯಾರಿಕೆಗಳಿಂದ ರಾಣಿಯವರು ಬಳಲಿರು ವಂತಿದೆ" ಎಂದನು ದೌಲತ್ತಳು ನಗುತ್ತಾ ಇಂಥದೊಂದು ಯುದ್ಧವನ್ನು ನೋಡ ಬೇಕೆಂದು ಹತ್ತು ವರ್ಷಗಳಿಂದಲೂ ಹಂಬಲಿಸುತ್ತಿದ್ದೆ ಈ ರಣಕ್ಷೇತ್ರದಲ್ಲಿ ನಿಮ್ಮನ್ನು ಹೀಗೆ ದರ್ಶನ ಮಾಡಬೇಕೆಂದು ಆಶೆಪಡುತ್ತಿದ್ದೆ ಈ ದಿನದ ಯುದ್ಧದಂತಹ ಯುದ್ಧವು ದಕ್ಷಿಣಾವರ್ತದಲ್ಲಿ ಎಂದೂ ನಡೆದೇ ಇಲ್ಲ! ಇಂದಿನ ಅಖಂಡ ಜಯವು ನಮ್ಮದು ಸುಲ್ತಾನರು ನಮ್ಮ ಪಕ್ಕದಲ್ಲಿದ್ದು ಈ ಯುದ್ಧವನ್ನು ನೋಡಿದರೆ ಎಷ್ಟೋ ಚೆನ್ನಾ ಗಿತ್ತು. ಇಯಜ್‌ಖಾನನು ನಕ್ಕನು ಎಲ್ಲರೂ ಶಿಬಿರಾಭಿಮುಖವಾಗಿ ತೆರಳಿದರು

ಮಂಡ್ಯಕ್ಕೂ ಹಿರೋಡೆಗೂ ಮಧ್ಯದಲ್ಲಿ ನಗರದ ಶಿಬಿರವು ಬೀಡುಬಿಟ್ಟಿತು ನಾಲ್ಕು ಕಡೆ ಹೋಗಿದ್ದ ಸೈನ್ಯಗಳೆಲ್ಲಾ ಶಿಬಿರಕ್ಕೆ ಹಿಂದಿರುಗಿದ್ದವು ಖಾನರವರೂ ಸುಮಾರು ರಾತ್ರಿ ೧೧ ಗಂಟೆಯ ಸಮಯಕ್ಕೆ ಶಿಬಿರಕ್ಕೆ ಹೋಗಿ ತಲಪಿದರು ಶಿಬಿರವು ಬಹಳ ಶಿಸ್ತಿನಿಂದ ಸಜ್ಜಾಗಿದ್ದಿತು. ರಾತ್ರಿ ಸೈನಿಕರೆಲ್ಲರಿಗೂ ಭೋಜನಕ್ಕೆ ಸಿದ್ಧವಾಗುತ್ತಿ

ದ್ದಿತು ಇಯಜ್‌ಖಾನನು ತನ್ನ ಗುಡಾರಕ್ಕೆ ಹೋಗಿ ಸೇನಾಧಿಪತಿಗಳನ್ನು ಕರೆಸಿ ಭೋಜನೋತ್ತರ ಸೈನ್ಯಗಳೆಲ್ಲವೂ ಸಜ್ಜಾಗಿರಬೇಕು ಯಾರೂ ಪ್ರಮತ್ತರಾಗಿರಕೂಡದು ಎಂದು ಕಟ್ಟಾಜ್ಞೆ ಮಾಡಿ ದಿರಸನ್ನು ಬಿಚ್ಚಿದನು ರಾಣಿಯವರೂ ತಮ್ಮ ತಮ್ಮ ಗುಡಾರಗಳಿಗೆ ತೆರಳಿದರು ಪಾಳಯಗಾರರೆಲ್ಲರೂ ತಮ್ಮ ಬಿಡಾರಗಳನ್ನು ಸೇರಿದರು

ಕೋಟೆಯೊಳಗೆ ರಾತ್ರಿ ಒಂಭತ್ತು ಗಂಟೆಯಾಗುತ್ತಲೇ ಸುಲ್ತಾನನು ಚಡಪಡಿಸಹತ್ತಿದನು ಈ ದಿನ ನಡೆದ ಯುದ್ಧದ ಪೂರ್ವಾಪರಗಳನ್ನು ತಿಳಿದುಕೊಳ್ಳಬೇಕೆಂದು ಹಾತೊರೆಯುತ್ತಿದ್ದನು ಕ್ಷಣಕ್ಷಣಕ್ಕೂ ಆ ಯುದ್ಧವು • ಇಯಜ್‌ಖಾನರದೆಂದು ಸುಲ್ತಾನನ ಮನಸ್ಸಿನಲ್ಲಿ ಮಿಡಿಯುತ್ತಿತ್ತು ಸುಲ್ತಾನನು ಅಂಗರೇಕುಗಳನ್ನು ಧರಿಸಿ ಕುದುರೆಯನ್ನು ಹತ್ತಿ ಅಂಗರಕ್ಷಕರೊಡನೆ ರಣಕ್ಷೇತ್ರಕ್ಕೆ ಹೊರಟನು. ವಿಶಾಲವಾದ ರಣಕ್ಷೇತ್ರವು ಬರಿದಾಗಿತ್ತು ಎಲ್ಲೆಲ್ಲಿಯೂ ಸೈನಿಕರ ಶವಗಳು ! ಸತ್ತುಬಿದ್ದಿದ್ದ ಕುದುರೆಗಳು ಪೆಟ್ಟು ತಿಂದು ಮರಣೋನ್ಮುಖರಾದ ಸೈನಿಕರ ಆರ್ತನಾದ, ನಾಯಿ ನರಿಗಳ ಕೂಗು ಎಲ್ಲ ಕಡೆಯೂ ಕೇಳಿಬರುತ್ತಿದ್ದಿತು ಸುಲ್ತಾನನು ಆ ರಣಕ್ಷೇತ್ರವನ್ನು ಕಷ್ಟದಿಂದ ದಾಟಿ ನಗರದ ಸೈನ್ಯ ಶಿಬಿರವನ್ನು ಹುಡುಕುತ್ತ ಹೊರಟನು ಹಾಗೆಯೇ ಶಿಬಿರವು ಸಮೀಪಿಸುತ್ತ ಬಂದಿತು. ಶಿಬಿರದ ಮಹಾದ್ವಾರಕ್ಕೆ ತಲಪುತ್ತಲೇ ಆ ಅಗಾಧ ಶಿಬಿರವನ್ನು ನೋಡಿ ಸುಲ್ತಾನನು ಉಬ್ಬಿಹೋದನು ಶಿಬಿರದ ಮಹಾದ್ವಾರದಲ್ಲಿ ಕಾವಲು ಕಾಯುತ್ತಿದ್ದ ಫೌಜುದಾರನು ಬಂದು ಆ ಮಧ್ಯರಾತ್ರಿಯಲ್ಲಿ ಬಂದವರಾರೆಂದು ವಿಚಾರಣೆ ಮಾಡಿದನು ಸುಲ್ತಾನನು ಆಧ್ಯತೆಯಿಂದ ನಾವು ಶ್ರೀರಂಗಪಟ್ಟಣದವರು ಸುಲ್ತಾನರ ಕಡೆಯಿಂದ ಬಂದಿದ್ದೇವೆ ಈ ಶಿಬಿರವು ನಗರದ ನವಾಬರವರದೇ ? ಎಂದು ಕೇಳಿದನು

ಹೌದು ಇದು ನಗರದ ನವಾಬ್ ಇಯಜ್‌ಖಾನರ ಶಿಬಿರ ! ಈ ಅವೇಳೆಯಲ್ಲಿ ಯಾರನ್ನೂ ಒಳಗೆ ಬಿಡಲು ಹುಕ್ಕುಂ ಇಲ್ಲ ನಮ್ಮ ಫೌಜುದಾರೀ ಹುಕ್ಕುಂ ಪ್ರಕಾರ ನೀವುಗಳು ವಾಪಸು ಹೋಗುವಂತೆಯೂ ಇಲ್ಲ ಬೆಳಕು ಹರಿಯುವವರೆಗೆ ಬಂಧನದಲ್ಲಿರಬೇಕು ಪ್ರಾತಃಕಾಲ ಖಾನರವರ ಸಮ್ಮುಖದಲ್ಲಿ ಹಾಜರ್ಮಾಡುತ್ತೇವೆ

ಸುಲ್ತಾನನು "ಸರಿ! ಪಾಳೆಯಗಾರರೇ, ನಿಮ್ಮ ಸೈನ್ಯದ ಶಿಸ್ತಿಗೆ ನಾವು ತಲೆಬಾಗುತ್ತೇವೆ. ಆದರೆ ನಮ್ಮನ್ನು ಈಗಲೇ ನಿಮ್ಮ ನವಾಬರವರ ಸಮ್ಮುಖ ಹಾಜರ್ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

ಸರಿ ಸರದಾರರೇ ! ಅದಕ್ಕೆ ಹುಕ್ಕುಂ ಇಲ್ಲ ನಾವು ನವಾಬರ ಸಮ್ಮುಖಕ್ಕೆ ಹೇಳಿಕಳಿಸುತ್ತೇವೆ. ಅಲ್ಲಿಂದ ಹುಕ್ಕುಂ ದೊರೆತರ ಒಳಗೆ ಕರೆದೊಯ್ಯುತ್ತೇವೆ ಎಂದು ಹೇಳಿ ತನ್ನ ಕಡೆ ಕಾವಲುಗಾರರಿಗೆ ಈ ಹೊಸಬರನ್ನೆಲ್ಲಾ ಜಾಗ್ರತೆಯಾಗಿ ನೋಡಿಕೊಳ್ಳುವಂತೆ ತಾಕೀತು ಮಾಡಿ ಕುದುರೆಯನ್ನು ಹತ್ತಿ ಇಯಜ್‌ಖಾನರವರ ಗುಡಾ

ರದ ಬಳಿ ಹೋಗಿ ಒಳಗೆ ಹೇಳಿಕಳುಹಿಸಿದನು. ಇಯಜ್‌ಖಾನನು ಒಳಗೆ ಬರುವಂತೆ ಅಪ್ಪಣೆ ಮಾಡಿದನು ಮಹಾದ್ವಾರರಕ್ಷಕರ ನಾಯಕನು ಡೇರೆಯೊಳಗೆ ಹೋಗಿ ಶ್ರೀರಂಗಪಟ್ಟಣದ ಸುಲ್ತಾನರವರ ಕಡೆಯಿಂದ ಸರದಾರರೊಬ್ಬರು ಬಂದು ಈಗಲೇ ನವಾಬರ ಭೇಟಿ ಮಾಡಬೇಕೆಂದು ಹೇಳುತ್ತಾರೆ ನಾವು ಎಷ್ಟು ಹೇಳಿದರೂ ಅವರು ಕೇಳುವಂತಿಲ್ಲ ಸುಲ್ತಾನರವರ ಕಟ್ಟಪ್ಪಣೆಯಾಗಿದೆಯೆಂದೂ ಹೇಳುತ್ತಾರೆ ನವಾಬರವರನ್ನೇ ಭೇಟಿ ಮಾಡಬೇಕೆನ್ನುತ್ತಾರೆ

ಇಯಜ್‌ಖಾನನು ಸುಲ್ತಾನರವರ ಕಡೆಯ ಸರದಾರರಾದರೆ ಮರ್ಯಾದೆಯಿಂದ ಶಿಬಿರದೊಳಗೆ ಕರೆದುತರಬೇಕೆಂದು ಅಪ್ಪಣೆ ಮಾಡಿದನು

ನಾಯಕನು ಮಹಾದ್ವಾರಕ್ಕೆ ವೇಗವಾಗಿ ಬಂದು ಶ್ರೀರಂಗಪಟ್ಟಣದ ಸರದಾರರನ್ನು ಶಿಬಿರದೊಳಗೆ ಕರೆತರುವಂತೆ ಅಪ್ಪಣೆಯಾಗಿದೆ ಎಂದು ಸುಲ್ತಾನರಿಗೆ ತಿಳಿಸಿದನು ಸುಲ್ತಾನನು ತನ್ನ ಅಂಗರಕ್ಷಕರನ್ನೆಲ್ಲಾ ಮಹಾದ್ವಾರದಲ್ಲಿಯೇ ಇರುವಂತೆ ಕಣ್ಣುಸನ್ನೆ ಮಾಡಿ ಆ ನಾಯಕನ ಜೊತೆಯಲ್ಲಿ ಒಬ್ಬನೇ ಆ ಮಹಾ ಶಿಬಿರವನ್ನು ಪ್ರವೇಶಮಾಡಿದನು ಮಾರ್ಗದಲ್ಲಿ ಆ ಮಹಾ ಶಿಬಿರದ ವ್ಯವಸ್ಥೆಯನ್ನೂ, ಉತ್ಸಾಹವನ್ನೂ ನೋಡುತ್ತ ಆನಂದಿಸುತ್ತ ಹೋದನು ನವಾಬರ ಡೇರೆಯ ಮುಂದೆ ಕುದುರೆಯಿಂದ ಇಳಿದನು. ನವಾಬರ ವಾಸಭವನದ ಜಮಾದಾರರು ಶ್ರೀರಂಗಪಟ್ಟಣದ ಸರದಾರನನ್ನು ಒಳಗೆ ಕರೆದೊಯ್ದನು

ಆ ಪಟಭವನದಲ್ಲಿ ಇಯಜ್‌ಖಾನನು ಏಕಾಂತವಾಗಿ ಶೀಧುಪಾನಾಸಕ್ತನಾಗಿ ಸುಖಾಸನದಲ್ಲಿ ಕುಳಿತಿದ್ದನು ಶ್ರೀರಂಗಪಟ್ಟಣದ ಸರದಾರನು ಒಳಗೆ ಪ್ರವೇಶ ಮಾಡುತ್ತಲೇ ಖಾನನ ದೃಷ್ಟಿಯು ಅತ್ತಕಡೆಗೆ ತಿರುಗಿತು ಖಾನನು ಆ ಭವ್ಯ ಮೂರ್ತಿಯನ್ನುಕಂಡು ಅಪ್ರತಿಭನಾಗಿ ಆಸನದಿಂದ ಜಗ್ಗನೆದ್ದು ಸುಲ್ತಾನನ ಮುಂದೆ ಹೋಗಿ ನಿಂತು ಮುಜರೆ ಮಾಡಿದನು ಸುಲ್ತಾನನ ಶರೀರವು ಕಂಪಿಸುತ್ತಿತ್ತು ಸುಲ್ತಾನನು ಆನಂದದಿಂದ ಆವೇಶದಿಂದ ಖಾನನನ್ನು ಬಿಗಿದಪ್ಪಿದನು ಇಬ್ಬರ ಬಾಯಿಯಲ್ಲಿಯೂ ಮಾತುಗಳು ಹೊರಡದಾದುವು ಖಾನನು ಸುಲ್ತಾನನ ಎರಡು ಕೈಗಳನ್ನು ಹಿಡಿದು ತಾನು ಕುಳಿತಿದ್ದ ಆಸನದಲ್ಲಿ ಕುಳ್ಳಿರಿಸಿದನು

ಸುಲ್ತಾನನು ಗದ್ಗದ ಕಂಠದಿಂದ "ಖಾನರವರೇ, ನಾನು ಪ್ರಾತಃಕಾಲವೇ ತಾವು ರಣಕ್ಷೇತ್ರಕ್ಕೆ ಬಂದಿದ್ದೀರೆಂದು ಕಂಡುಹಿಡಿದೆ ಆಗಿನಿಂದಲೂ ತಮ್ಮ ಸನ್ನಿಧಾನದಲ್ಲಿ ಬಂದು ಸೇರಿಕೊಳ್ಳಬೇಕೆಂದು ಮನವು ಹಾತೊರೆಯುತ್ತಿತ್ತು ಎಷ್ಟೋ ದಿನಗಳಿಂದ ತಮ್ಮ ದರ್ಶನಕ್ಕಾಗಿ ಹಂಬಲಿಸುತ್ತಿದ್ದೆ ಇಂದು ತಮ್ಮ ದರ್ಶನವು ದೊರೆಯಿತು

ಇಯಜ್—ಸುಲ್ತಾನರವರೇ, ಈ ಯುದ್ಧದಲ್ಲಿ ಕಂಪನಿಯವರನ್ನು ಓಡಿಸಿ

ಬಂದು ತಮ್ಮ ದರ್ಶನ ತೆಗೆದುಕೊಳ್ಳಬೇಕೆಂದು ಸಂಕಲ್ಪಿಸಿದ್ದೆ ತಾವು ಅಪ್ಪಣೆ ಮಾಡಿದ್ದರೆ ನಾನೇ ಕೋಟೆಯೊಳಗೆ ಬಂದು ಭೇಟಿ ಮಾಡುತ್ತಿದ್ದೆ ಈ ಫಿದವಿಯ ಮೇಲೆ ಇಷ್ಟೊಂದು ಅನುಗ್ರಹದಿಂದ ಖುದ್ದು ಸವಾರಿಯೇ ದಯಮಾಡಿಸೋಣವಾಯಿತು ಇದು ನನ್ನ ಭಾಗ್ಯ

ಸುಲ್ತಾನ್—ಖಾನರವರೇ, ಈ ಯುದ್ಧದಲ್ಲಿಯೂ ಇದುವರೆಗೆ ನಮಗೆ ಪರಾಜಯುವೇ ಆಗಿದೆ ಮನಸ್ಸು ತಲ್ಲಣಿಸುತ್ತಿತ್ತು ಇಂದು ತಾವು ಅಖಂಡ ಜಯುವನ್ನು ಹೊಂದಿದ್ದೀರಿ

ಇಯಜ್—ಸುಲ್ತಾನರವರೇ, ಈ ಯುದ್ಧವು ನಮ್ಮದು ಜಯವು ನಮ್ಮದು ಈ ಜಯವನ್ನು ಸಂಪಾದಿಸುವುದಕ್ಕಾಗಿಯೇ ನಾವು ಜನ್ಮವೆತ್ತಿರುವುದು ನಾನು ತಮ್ಮ ಸೇವಕ ನೀವು ಈ ಯುದ್ಧದ ಆಲೋಚನೆಯನ್ನು ಬಿಟ್ಟು ರಾಜಧಾನಿಯಲ್ಲಿ ಇರೋಣವಾಗಲಿ ನಾನು ವಿಜಯವನ್ನು ತಂದು ತಮ್ಮ ಪಾದದಲ್ಲಿ ಅರ್ಪಿಸುತ್ತೇನೆ

ಖಾನರವರೇ, ತಾವು ಅಂತಹ ಅಪ್ರತಿಮ ವೀರರೆಂಬುದಕ್ಕೆ ಸಂದೇಹವೇ ಇಲ್ಲ ಆದರೆ ಈ ಯುದ್ಧದಲ್ಲಿ ತಮ್ಮ ಜೊತೆಯಲ್ಲಿಯೇ ಇರಲು ನನಗೆ ತಾವು ಅಪ್ಪಣೆಯನ್ನು ಕೊಡಬೇಕು

ಖಾನನು ನಕ್ಕನು ಅವರಿಬ್ಬರೂ ಯುದ್ಧದ ಸನ್ನಿವೇಶಗಳನ್ನು ಪರಸ್ಪರ ಮಾತನಾಡತೊಡಗಿದರು ಅಷ್ಟರೊಳಗೆ ಸುಲ್ತಾನರವರು ಶಿಬಿರಕ್ಕೆ ಬಂದಿರುವ ಸುದ್ದಿಯು ಶಿಬಿರದಲ್ಲೆಲ್ಲಾ ವ್ಯಾಪಿಸಿತು ಶಿಬಿರದಲ್ಲಿ ಉತ್ಸಾಹವು ವಿದ್ಯುದ್ವೇಗದಿಂದ ಪ್ರವಹಿಸತೊಡಗಿತು ಸೈನಿಕರು, ಸೇನಾನಾಯಕರು, ಪಾಳಯಗಾರರು ಎಲ್ಲರಿಗೂ ಸುಲ್ತಾನರನ್ನು ದರ್ಶನಮಾಡುವ ಆಕಾಂಕ್ಷೆ ಸೈನ್ಯದಲ್ಲೆಲ್ಲಾ ಹೊಸ ಆತುರ ಹೊಸಉತ್ಸಾಹ. ಸುಲ್ತಾನರ ಮತ್ತು ಖಾನರವರ ಸಮಾಗಮದ ಸುದ್ದಿಯು ರಾಣಿಯವರ ಗುಡಾರಕ್ಕೆ ತಲುಪಿತು ದೌಲತ್‌ರಾಣಿಯೂ ರಾಧಾರಾಣಿಯೂ ಭವ್ಯವಾದ ಉಡುಪನ್ನು ಧರಿಸಿ ಲಗುಬಗೆಯಿಂದ ನವಾಬರ ಪಟಭವನಕ್ಕೆ ಬಂದರು ದೌಲತ್ತಳು ಏಕಾಸನದಲ್ಲಿ ಟಿಪ್ಪುವನ್ನು, ಖಾನನನ್ನು ನೋಡಿ ಆನಂದಾತಿರೇಕದಿಂದ ಬಾಲಕಿಯಂತೆ ಓಡಿ ಹೋಗಿ ಎರಡು ತೋಳುಗಳಿಂದ ಇಬ್ಬರನ್ನೂ ಆಲಿಂಗಿಸಿದಳು ಖಾನನು ಆದರದಿಂದ ದೌಲತ್ತಳನ್ನೆತ್ತಿ ಪರ್ಯಂಕದ ಮೇಲೆ ಕುಳ್ಳಿರಿಸಿದನು ರಾಧೆಯು ಅವರುಗಳ ಆನಂದಾತಿಶಯವನ್ನು ನೋಡಿ ಮನಸ್ಸಿನಲ್ಲಿಯೇ ಸಂತಸಪಡುತ್ತಾ ಹಸನ್ಮುಖದಿಂದ ಸ್ವಾಗತಿಸಿ ಖಾನನ ಕಡೆ ಅರ್ಥಗರ್ಭಿತ ದೃಷ್ಟಿಯನ್ನು ಬೀರಿ ದೌಲತ್ತಳ ಪಕ್ಕದಲ್ಲಿ ಕುಳಿತುಕೊಂಡಳು

ದೌಲತ್ತಳು ಉತ್ಕಂಠಿತಳಾಗಿ ಸುಲ್ತಾನರವರೇ ನಮ್ಮನ್ನು ತಾವು ಹೇಗೆ ಪತ್ತೆ

ಮಾಡಿದಿರಿ ? ಈ ಅವೇಳೆ ರಾತ್ರಿಯಲ್ಲಿ ಈ ಅಜ್ಞಾತ ಶಿಬಿರಕ್ಕೆ ಏಕಾಂಗಿಯಾಗಿ ಹೇಗೆ ಬಂದಿರಿ ಎಂದು ಕೇಳಿದಳು

ಸುಲ್ತಾನನು—ದೌಲತ್ ಆ ಯುದ್ಧ ವೈಖರಿಯನ್ನು ದೂರದಿಂದಲೇ ನೋಡಿ ಈ ರಣ ವೈಖರಿಯು ಖಾನರವರದೆಂದೇ ಗೊತ್ತು ಹಚ್ಚುವುದು ಪ್ರಯಾಸವಾಗಲಿಲ್ಲ ಖಾನರವರ ದರ್ಶನಕ್ಕಾಗಿ ಬಹುಕಾಲದಿಂದ ಕಾತುರನಾಗಿದ್ದ ನಾನು ಅವರ ದರ್ಶನ ಮಾಡುವುದಕ್ಕೆ ಇದು ಅಕಾಲವೆಂದು ಭಾವಿಸಲಿಲ್ಲ.

ದೌಲತ್ತಳು ನಗುತ್ತಾ ಸುಲ್ತಾನರವರೇ ! ತಮ್ಮ ಖಾನರನ್ನು ತಮಗೆ ತಂದು ಅರ್ಪಿಸಿದ್ದೇನೆ ನನ್ನ ಸಂಕಲ್ಪವು ಈಡೇರಿದಂತಾಯಿತು

ಸುಲ್ತಾನನು—ರಾಣಿಯವರೇ ತಾವು ಖಾನರ ಸಮಾಗಮವನ್ನು ಮಾಡಿಸಿದ್ದು ಮಾತ್ರವಲ್ಲ ಕೈ ಕಳಚಿಹೋಗಿದ್ದ ಸುಲ್ತಾನೀ ರಾಜ್ಯವನ್ನೇ ಪುನರುದ್ಧಾರ ಮಾಡಿದ್ದೀರಿ ಈ ರಾಥಾರಾಣಿಯವರಿಗೂ ನಿಮಗೂ ನಾವು ಎಷ್ಟು ಋಣಿಗಳಾಗಿದ್ದರೂ ತೀರದು ಎಂದು ಹೇಳಿದನು ಸುಲ್ತಾನನ ಕಂಠವು ರುದ್ಧವಾಯಿತು ಕಣ್ಣುಗಳಲ್ಲಿ ಜಲಬಿಂದುಗಳು ಉದುರುತ್ತಿದ್ದುವು

ದೌಲತ್‌ರಾಣಿಯವರ ಉಪಚಾರಕ್ಕೆ ಒಪ್ಪಿ ಸುಲ್ತಾನರವರು ಆ ರಾತ್ರಿ ಇಯಜ್ ಖಾನರವರ ಗುಡಾರದಲ್ಲಿಯೇ ಭೋಜನಕ್ಕೆ ಎದ್ದರು ಪರಿಚಾರಕರು ರಾಜಯೋಗ್ಯವಾದ ಭೋಜನವನ್ನು ತಂದು ಆ ವಾಸಭವನದಲ್ಲಿಯೇ ಸಿದ್ಧ ಮಾಡಿದರು ಖಾನರವರೂ ಟಿಪ್ಪೂಸುಲ್ತಾನನು ಒಂದೇ ತಟ್ಟೆಯಲ್ಲಿ ಭೋಜನ ಮಾಡಿದರು ದೌಲತ್ತಳು ಸ್ವತಃ ಆದರದಿಂದ ಬಡಿಸಿದಳು. ಭೋಜನೋತ್ತರ ಸುಖಾಸನದಲ್ಲಿ ಕುಳಿತುಕೊಂಡರು ದೌಲತ್ತಳೂ ತನ್ನ ಕೈಯ್ಯಿಂದಲೇ ಸಿದ್ಧಗೊಳಿಸಿದ ತಂಬಾಕನ್ನು ಹಾಕಿ ಹುಕ್ಕಾವನ್ನು ತಂದಿಟ್ಟು ಚಿನ್ನದ ನಳಿಗೆಯನ್ನು ಟಿಪ್ಪೂಸುಲ್ತಾನನ ಕೈಯ್ಯಲ್ಲಿ ಕೊಟ್ಟಳು ಸುಲ್ತಾನನೂ ಖಾನನೂ ಆದರದಿಂದ ಹುಕ್ಕಾ ಸೇವನೆ ಮಾಡಿದರು ಸುಲ್ತಾನನು ಇಯಜ್ ಖಾನನನ್ನು ರಾಣಿಯವರುಗಳನ್ನು ಕೋಟೆಯೊಳಗೆ ಅಗಲೇ ಬರಬೇಕೆಂದೂ ಅರಮನೆಯಲ್ಲಿಯೇ ಬಿಡಾರ ಮಾಡಬೇಕೆಂದೂ ವಿಧವಾಗಿ ಪ್ರಾರ್ಥಿಸಿದನು

ಖಾನನು–ಸುಲ್ತಾನರವರೇ! ಅರಮನೆಗೆ ಬರುವುದಕ್ಕೆ ನನಗೆಷ್ಟೋ ಸಂತೋಷ ಆದರೆ ಈ ರಣಕ್ಷೇತ್ರದಲ್ಲಿ ಶಿಬಿರದಲ್ಲಿಯೇ ನಾನಿದ್ದರೆ ಈ ಸೈನಿಕರಿಗೆ ಈ ಪಾಳಯಗಾರರಿಗೆ ಹತ್ತರಷ್ಟು ಉತ್ಸಾಹ ಹೆಚ್ಚುತ್ತದೆ. ಸಂಗ್ರಾಮದ ಗುಟ್ಟನ್ನು ಅರಿತ ತಮಗೆ ನಾನು ವಿಶೇಷ ಅರಿಕೆ ಮಾಡುವುದೇನಿದೆ ತಾವು ನನಗೆ ಈ ಸೈನ್ಯ ಮಧ್ಯದಲ್ಲಿಯೇ ಯುದ್ಧವು ಪೂರೈಸುವವರೆಗೆ ಇರಲು ಅಪ್ಪಣೆ ಕೊಡಬೇಕು ಎಂದು ಪ್ರಾರ್ಥಿಸಿದನು.

ಸುಲ್ತಾನನು ತಲೆದೂಗುತ್ತಾ ನವಾಬರ ಅಪ್ಪಣೆಯಾದರೆ ಈ ರಾಣಿಯವರು ದ್ದರಿಯಾ ದೌಲತ್ತಿನಲ್ಲಿ ಬಿಡದಿ ಮಾಡಬಹುದಲ್ಲಾ ಎಂದು ಹೇಳಿದನು.

ಇಯುಜ್‌ಖಾನನು ಹೌದು ! ಅದು ಅವರಿಗೆ ಒಪ್ಪುವ ವಸತಿ, ದೌಲತ್ ಮತ್ತು ರಾಧಾರಾಣಿಯವರು ಅಂತಃಪುರದಲ್ಲಿರುವ ರಾಣಿಯವರ ಹಾಗಿಲ್ಲ, ಪರಾಕ್ರಮಶಾಲಿಗಳಾದ ಸೇನಾನಾಯಕರಂತೆ ರಣಕ್ಷೇತ್ರದಲ್ಲಿ ಶತೃಗಳಿಗ ಸರಿಸಿಂತು ಯುದ್ಧಮಾಡುತ್ತಾರೆ ದೌಲತ್ತಳು ನಗುತ್ತಾ, ಹೌದು ಸುಲ್ತಾನರೇ ಹೌದು ಈ ಯುದ್ಧವು ಪೂರೈಸುವವರೆಗೆ ಕಟ್ಟಕಡೆಯ ವಿಜಯ ದುಂದುಭಿಯು ಆಕಾಶವನ್ನು ಮುಟ್ಟುವವರೆಗೆ ನಾವು ರಣಕ್ಷೇತ್ರದಲ್ಲಿ ಹೋರಾಡುತ್ತೇವೆ ಇಂಥದೊಂದು ಮಹಾಯುದ್ಧವನ್ನು ನಾವು ಮಾಡಬೇಕಂದೇ ನಾವು ಇಷ್ಟು ದಿನಗಳು ತಪಸ್ಸು ಮಾಡುತ್ತಿದ್ದುದು ನಾವು ವಿಜಯಲಕ್ಷ್ಮಿಯೊಡನೆ ರಾಜಧಾನಿಯನ್ನು ಪ್ರವೇಶಿಸುತ್ತೇನೆ

ಸುಲ್ತಾನನು ಮೌನದಿಂದ ತಲೆದೂಗಿ ಒಪ್ಪಿದನು ಎಲ್ಲರನ್ನೂ ಬೀಳ್ಕೊಂಡು ಹೊರಟನು ಇಯುಜ್‌ಖಾನನು ಸುಲ್ತಾನರನ್ನು ಶಿಬಿರದಲ್ಲೆಲ್ಲಾ ಕರೆದುಕೊಂಡು ಹೋಗಿ ಪಾಳಯಗಾರರಿಗೂ, ಸೇನಾನಾಯಕರಿಗೂ ಭೇಟಿ ಮಾಡಿಸಿದನು. ಶಿಬಿರದಲ್ಲೆಲ್ಲಾ ಜಯಧ್ವನಿಯಾಯಿತು ಉತ್ಸಾಹದಿಂದ ಕೊಂಬು ಕಹಳೆಗಳನ್ನು ಊದಿದರು ಸುಲ್ತಾನನು ರಾತ್ರಿ ಹಗಲು ಎಂಬ ಭೇದವಿಲ್ಲದೇ ೬ ಸ್ಯನ್ಯಸಾಗರವು ಉಕ್ಕುತ್ತಿರುವುದನ್ನು ಕಂಡು ಹರ್ಷಚಿತ್ತನಾದನು ಎಲ್ಲರನ್ನೂ ಉತ್ಸಾಹ ಪೂರ್ವಕವಾಗಿ ಅಭಿನಂದಿಸಿ ರಾಜಧಾನಿಗೆ ಹೊರಟನು ಇಯುಜ್‌ಖಾನನು, ದೌಲತ್, ರಾಧಾರಾಣಿಯರು ಕುದುರೆಗಳ ಮೇಲೆ ಕುಳಿತು ಸುಲ್ತಾನರನ್ನು ಬಹುದೂರ ಸಾಗಕಳುಹಿಸಿ ಬಿಡಾರಕ್ಕೆ ಬಂದು ಸೇರಿದರು ಅವರು ಶಿಬಿರಕ್ಕೆ ಹಿಂತಿರುಗಿ ಬರುವ ಹೊತ್ತಿಗೆ ಅರುಣೋದಯ ಕಾಲದ ಪಕ್ಷಿಯ ಕಲಕಲಗಳು ಕೇಳಿಬರುತ್ತಿದ್ದುವು

ಇಯುಜ್‌ಖಾನನು ಸ್ವಲ್ಪ ವಿಶ್ರಮಿಸಿಕೊಂಡು ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು ಶಿಬಿರ ಮಧ್ಯಕ್ಕೆ ಬಂದನು ಪಾಳಯಗಾರರೂ ಸೇನಾನಾಯಕರೂ ಎಲ್ಲರೂ ಸಿದ್ಧರಾಗಿದ್ದರು ಸೇನಾನಾಯಕರೆಲ್ಲರೂ ಯುದ್ಧಕ್ಕೆ ಹೊರಡಬೇಕೆಂದು ಅಪ್ಪಣೆ ಕೇಳಿದರು ರಣನೀತಿಯನ್ನರಿತ ಖಾನನು ಇನ್ನು ಎರಡು ದಿನಗಳು ಯುದ್ಧಕ್ಕೆ ಹೋಗಬಾರದೆಂದೂ, ಶತೃಗಳ ಚಲನ ವಲನಗಳನ್ನರಿತು ಮುಂದಿನ ವ್ಯೂಹವನ್ನು ಸಿದ್ಧಗೊಳಿಸಬೇಕೆಂದು ಹೇಳಿದನು ಅಷ್ಟರಲ್ಲಿ ಗೂಢಚಾರರು ಬಂದು ಇಂಗ್ಲೀಷ್ ದಂಡು ಆ ದಿನ ಯುದ್ಧಕ್ಕೆ ಬರುವ ಸೂಚನೆಗಳಿಲ್ಲವೆಂದು ಅರುಹಿದರು. ಇಯುಜ್‌ಖಾನನು ಸಮಸ್ತರೂ ಜಾಗರೂಕರಾಗಿರಬೇಕೆಂದು ಎಚ್ಚರಿಸಿ ತನ್ನ ಗುಡಾರವನ್ನು ಪ್ರವೇಶಿಸಿದನು ಮಧ್ಯಾಹ್ನ ಆರೋಗಣೆಯಾದ ಮೇಲೆ ಖಾನನು ವಿಶ್ರಮಿಸಿ ಕೊಳ್ಳುತ್ತಿದ್ದನು ದೌಲತ್ ಮತ್ತು ರಾಧಾರಾಣಿಯವರು ಕುದುರೆಗಳನ್ನು ಹತ್ತಿ ರಣಕ್ಷೇತ್ರದಲ್ಲಿ ಅರ್ಧಪ್ರಾಣವಿದ್ದು ಆರ್ತನಾದ ಮಾಡುತ್ತಿರುವ ಸೈನಿಕರ ಯೋಗಕ್ಷೇಮವನ್ನು ವಿಚಾರಿಸಲು ಹೊರಟು ಹೋದರು

ಅಪರಾಹ್ನ ಮೂರು ಗಂಟೆ ಸಮಯದಲ್ಲಿ ಶಿಬಿರದ ಹೊರವಳಯದ ಕಾವಲು ಗಾರರು ಬಂದು ಮರಾಟ ಸರದಾರರು ಭೇಟಿಗೆ ಬಂದಿದಾರೆಂದು ನಗರದ ನವಾಬರಿಗೆ ಅರಿಕೆ ಮಾಡಿದರು

ಇಯಜ್ ಖಾನರಿಗೆ ಆಶ್ಚರ್ಯವಾಯಿತು. ಮರಾಟಾ ಸರದಾರರು ನಮ್ಮಲ್ಲಿಗೆ ಬರಲು ಕಾರಣವೇನು ? ಬಹುಶಃ ಸಂಧಿಗಾಗಿ ಬಂದಿರಬಹುದು ಎಂದು ಊಹಿಸಿದನು ಅವರನ್ನು ಮರ್ಯಾದೆಯಿಂದ ಕರತರಬೇಕೆಂದು ಅಪ್ಪಣೆ ಮಾಡಿದನು ಮರಾಟ ಸರದಾರರು ಶಿಬಿರದೊಳಗೆ ನಿರ್ಭಯವಾಗಿ ಬರುತ್ತಿರುವುದನ್ನು ನೋಡಿ ಸೇನಾನಾ ಯಕರೆಲ್ಲರಿಗೂ ಆಶ್ಚರ್ಯವಾಯಿತು. ಮರಾಟ ಸರದಾರರು ಖಾನರವರ ಗುಡಾರದ ಬಳಿಗೆ ಬಂದು ನಿಂತರು. ಅವರಲ್ಲಿ ಮುಖಂಡನು ಮಾತ್ರ ಕುದುರೆಯಿಂದ ಇಳಿದು ಗುಡಾರದೊಳಗೆ ಪ್ರವೇಶಮಾಡಿದನು. ದ್ವಾರಪಾಲಕನು ಆ ಹೊಸವ್ಯಕ್ತಿಯನ್ನು ಮರ್ಯಾದೆಯಿಂದ ಒಳಗೆ ಕರೆದೊಯ್ದನು ಆಸನದಲ್ಲಿ ಕುಳಿತಿದ್ದ ಇಯಜ್ ಖಾನನೆದ್ದು ಆ ಮರಾಟ ಸರದಾರನನ್ನು ಬಹಳ ಗೌರವದಿಂದ ಸ್ವಾಗತಿಸಿ ಮರ್ಯಾದೆಯಿಂದ ಆಸನ ದಲ್ಲಿ ಕುಳ್ಳಿರಿಸಿದನು

ಆ ಸರದಾರನು ಇಯಜ್ ಖಾನನ ಪರಿಚಯವಾದಮೇಲೆ ತಾನು ಸ್ವಯಂ ಹರಿ ಪಂತನೆಂದು ಖಾನನಿಗೆ ತನ್ನ ಪರಿಚಯವನ್ನು ಹೇಳಿದನು

ಖಾನನು, ಪಂತನ ದಿಟ್ಟತನವನ್ನು ನೋಡಿ ಅಪ್ರತಿಭನಾದನು ಖಾನನು ಅತ್ಯಂತ ಗೌರವದಿಂದ—

ಪಂತಮಹಾಶಯ ! ತಮ್ಮ ಖ್ಯಾತಿಯು ಇಡೀ ಹಿಂದೂಸ್ಥಾನದಲ್ಲಿ ವ್ಯಾಪಿಸಿದೆ. ತಾವು ಈ ರಣಕ್ಷೇತ್ರದಲ್ಲಿ ಶತ್ರುಗಳಾದ ನಮ್ಮ ಶಿಬಿರಕ್ಕೆ ಏಕಾಕಿಗಳಾಗಿ ಬಂದು ದರ್ಶನ ವಿತ್ತುದು ಆಶ್ಚರ್ಯಕರವಾಗಿದೆ ಮಾಫ್ ಮಾಡಬೇಕು ಈಗಲೂ ನಾನು ಆ ಮಹಾ ಮಹಿಮರಾದ ಹರಿಪಂತರು ತಾವೇ ಎಂದು ನಂಬಲೇ !

ಪಂತನು—(ನಗುತ್ತಾ) ಖಾ ಸಾಹೇಬರವರೇ, ಪೇಶ್ವೆಯವರ ಚಾಕರನಾದ ಈ ಅಲ್ಪ ವ್ಯಕ್ತಿಯೇ, ಆ ಹರಿಪಂತನೆಂದು ನಂಬಬಹುದು ತಮ್ಮ ಶಿಬಿರದಲ್ಲಿರುವ ರಾಣಿಯವರುಗಳಿಗೆ ನನ್ನ ಪರಿಚಯವು ಚೆನ್ನಾಗಿದೆ ಅಷ್ಟೇ ಏಕೆ ? ಅವರುಗಳಿಗೂ ನಮಗೂ ಗೌರವ ವಿಶ್ವಾಸಗಳಿವೆ ಅವರುಗಳಿಂದ ತಮ್ಮ ಉದಾತ್ತ ಚರಿತ್ರೆಯನ್ನು ಕೇಳಿಯೇ ನಾನು ಏಕಾಂಗಿಯಾಗಿ ತಮ್ಮ ಸಹೋದರನಂತೆ ಈ ಶಿಬಿರಕ್ಕೆ ಬಂದಿದೇನೆ ಶ್ರೀರಂಗಪಟ್ಟಣದ ರಣ ಕ್ಷೇತ್ರದಲ್ಲಿ ಅಖಂಡವಾದ ಅಜೇಯವಾದ ಮಹಾರಾಷ್ಟ್ರ ಸೈನ್ಯ ವಿದೆ, ನಾನು ಏಕಾಂಗಿಯೆಂದು ರಣಧೀರರಾದ ತಾವು ಭಾವಿಸೋಣವಾಗುತ್ತದೆ ಯೇನು ?

ಮಾನ್ಯ ಪಂತರವರೇ ! ಕ್ಷಮಿಸಬೇಕು, ತಾವು ಏಕಾಂಗಿಯಾಗಿ ಬರಲಿ,

ಮಹಾಸೈನ್ಯಸಮೇತವಾಗಿ ಬರಲಿ, ತಾವು ಸ್ನೇಹಿತರಂತೆ ನಮ್ಮಲ್ಲಿಗೆ ಬಂದಿರುವಾಗ ತಮ್ಮನ್ನು ಗೌರವಿಸುವುದು ನಮ್ಮ ಧರ್ಮ

ಪಂತ—ಅದು ವೀರರ ಧರ್ಮ

ಖರ್ಾ—ತಾವು ದಯಮಾಡಿಸಿದ ರಾಜಕಾರ್ಯವನ್ನು ವಿವರಿಸಬಹುದು

ಪಂತ—ಖರ್ಾರವರೇ, ನಾನು ತಮ್ಮಲ್ಲಿ ಸಂಧಿಗಾಗಿ ಬಂದಿದ್ದೇನೆ ಈ ಸಂಧಿ ಸೂಚನೆಯು ಜಯಾಪಜಯಗಳ ಸಂಧಿಯೆಂದು ಭಾವಿಸಬೇಡಿರಿ ತಾವು ಒಪ್ಪುವುದಾದರೆ ಯುದ್ಧವು ಪ್ರಕೃತವಿಲ್ಲವೆಂದು ನಾನು ಭಾವಿಸಿದೇನೆ

ಖರ್ಾ—ಪಂತರವರೇ, ತಮ್ಮ ಸಂಧಿಪ್ರಸ್ತಾಪವು ಆಶ್ಚರ್ಯಕರವಾಗಿದೆ ತಾವು ಕುಂಪಣಿಯವರೊಡನೆ ಕರಾರು ಮಾಡಿಕೊಂಡು ಬ್ರಹ್ಮಾಂಡ ಸನ್ನಾಹದೊಂದಿಗೆ ದೊಡ್ಡ ಸೈನ್ಯವನ್ನು ತಂದಿದೀರಿ ಈಗ ರಣಕ್ಷೇತ್ರದಲ್ಲಿ ಸಂಧಿ ಪ್ರಸ್ತಾಪವೆಂದರೇನು ?

ಪಂತ—ಖರ್ಾರವರೇ, ನಾವು ಸುಲ್ತಾನರವರ ಮೇಲೆ ಯುದ್ಧಕ್ಕೆ ಬಂದೆವು ಮಧ್ಯೆ ನೀವು ನಗರದ ಸೈನ್ಯದೊಡನೆ ಬರುವಿರೆಂದು ನಾವು ಸ್ವಪ್ನದಲ್ಲಿಯೂ ಭಾವಿಸಿರಲಿಲ್ಲ.

ಖರ್ಾ—(ಆಶ್ಚರ್ಯದಿಂದ) ನಾನು ರಣಕ್ಷೇತ್ರಕ್ಕೆ ಬಂದುದರಿಂದ ತಮ್ಮ ಸಂಕಲ್ಪದಲ್ಲಿ ವ್ಯತ್ಯಾಸವಾದುದು ಹೇಗೆ ?

ಪಂತ—ಮಹತ್ತರವಾದ ವ್ಯತ್ಯಾಸವಾಗಿದೆ ತಮ್ಮ ಸೈನ್ಯವೆಲ್ಲ ಹಿಂದೂ ಸೈನ್ಯ. ಮರಾಟರು ಹಿಂದುಗಳೊಡನೆ ರಣಾರಣಿ ಯುದ್ಧ ಮಾಡುವುದಿಲ್ಲ ತಮ್ಮೊಡನೆ ರಾಣಿಯರಿಬ್ಬರೂ ರಣಕ್ಷೇತ್ರದಲ್ಲಿ ನಿಂತು ಯುದ್ಧ ಮಾಡುವುದಿಲ್ಲ.

ಖರ್ಾ—ತಮ್ಮ ಸಂಧಿಯನ್ನು ಕುಂಪಣಿಯವರು ಒಪ್ಪುತ್ತಾರೆಯೆ ?

ಪಂತ—ಪ್ರಕೃತದಲ್ಲಿ ನಾನು ಅವರನ್ನೊಪ್ಪಿಸುತ್ತೇನೆ ಮುಂದೆ ಅವರ ಇಷ್ಟ.

ಖರ್ಾ—ಪಂತರವರೇ, ತಾವು ರಾಜನೀತಿಯನ್ನು ಬಲ್ಲವರು ನಾನಾಪಡ್ನಾವೀಸರವರಂತಹ ರಾಜನೀತಿ ನಿಪುಣರು, ಈ ಕುಂಪಣಿಯವರು ಹಿಂದೂಸ್ಥಾನದಲ್ಲಿ ರಾಜ್ಯ ಕಟ್ಟುವುದೆಂದರೇನು ? ಅದಕ್ಕೆ ದೇಶಭಕ್ತರಾದ ಮಹಾರಾಷ್ಟ್ರರು ಒಪ್ಪುವುದೆಂದರೇನು, ನಿಮ್ಮ ಸಹಾಯವಿಲ್ಲದಿದ್ದರೆ ನಾನು ಒಂದೇ ವರ್ಷದಲ್ಲಿ ಈ ಕುಂಫಣಿಯವರನ್ನು ದಕ್ಷಿಣ ದೇಶದಿಂದ ಪೂರ್ತಿಯಾಗಿ ಓಡಿಸಿಬಿಡುತ್ತೇನೆ ನಿಮ್ಮ ಸಂಪೂರ್ಣ ಸಹಕಾರವು ದೊರಕರಂತೂ, ಈ ಹಿಂದೂಸ್ಥಾನದಲ್ಲಿ ಅವರಿಗೆ ಅಂಗ್ಲೆ ಅಗಲ ಜಾಗವಿಲ್ಲದಂತೆ ಮಾಡುತ್ತೇನೆ. ಈಗ ನಿಮ್ಮ ಸಂಧಿಯು ನಿಜವಾದರೆ ನೀವು ನಿಮ್ಮ ಸೈನ್ಯದೊಂದಿಗೆ ಹಿಂದಿರುಗಿರಿ, ನಾನು ಈ ಇಂಗ್ಲೀಷರ ದಂಡನ್ನು ಮೂರು ದಿನದಲ್ಲಿ ಧೂಳೀಪಟಮಾಡುತ್ತೇನೆ. ಯುದ್ಧಾನಂತರ ನಾನೇ ಸ್ವತಃ ಪುಣೆಗೆಬಂದು ಪೇಷ್ವೆಯವರ ದರ್ಶನ ಮಾಡುತ್ತೇನೆ.

ಪಂತ—ಖಾನರವರೇ, ತಮ್ಮ ಮಾತು ಸೂರ್ಯಚಂದ್ರರಷ್ಟು ಸತ್ಯವಾಗಿದೆ ಆದರೆ ಈಗ ನಾವೂ ಕುಂಫಣಿಯವರೂ ಜೊತೆಯಾಗಿ ಬಂದಿದೇವೆ ಈಗ ಯುದ್ಧವನ್ನು ನಿಲ್ಲಿಸಿ ಸಂಧಿ ಮಾಡಿಕೊಂಡು ಹೋಗೋಣ, ಮುಂದೆ ದೈವಚಿತ್ತವಿದ್ದಂತೆ ಆಗಲಿ.

ಖಾ—ಪಂತರವರೇ, ತಮ್ಮ ಮಾತಿನಮೇಲೆ ಗೌರವವಿಟ್ಟು ನಾನು ಒಪ್ಪುತ್ತೇನೆ, ಅದಕ್ಕೆ ಏನಾಗಬೇಕಾಗಿದೆ, ರಣಕ್ಷೇತ್ರದಲ್ಲಿ ಸ್ನೇಹ ವೀಳಯವನ್ನು ಪರಸ್ಪರ ಸ್ವೀಕರಿಸಿ ಯುದ್ಧವನ್ನು ನಿಲ್ಲಿಸೋಣ

ಪಂತ—ಅಂಥಾ ಮರ್ಯಾದಾ ಪುರಸ್ಸರವಾದ ಸಂಧಿಯು ಸಾಧುವಾದುದುದೇ ಸರಿ, ಆದರೆ ಯುದ್ಧವನ್ನು ನಿಲ್ಲಿಸಲು ನಮ್ಮದೊಂದು ಷರತ್ತಿದೆ

ಖಾ—ಷರತ್ತೆಂದರೆ ನನಗೆ ಆಶ್ಚರ್ಯವಾಗುತ್ತಿದ ತಾವು ಏನೋ ಉದ್ದೇಶದಿಂದ ಬಂದಿದ್ದೀರಿ. ತಮಗೆ ಬೇಕಾದ್ದು ಹೇಳಿರಿ, ಕೇಳುತ್ತೇನೆ, ಆದರ ಯುದ್ಧ ಮಧ್ಯದಲ್ಲಿ ತಮ್ಮ ಷರತ್ತನ್ನು ನಾನು ಕೇಳಬಹುದೆಂದು ತಮ್ಮಂಥಾ ಪ್ರಜ್ಞಾಶಾಲಿಗಳಗೆ ತೋರಿ ಬಂದಿದ್ದೇ ಆಶ್ಚರ್ಯ

ಪಂತ—ಆಶ್ಚರ್ಯವೇನೂ ಇಲ್ಲ, ರಾಣಿಯವರು ನಮ್ಮ ರಾಜಧಾನಿಗೆ ಬಂದಿದ್ದಾಗ ನಮ್ಮ ಕೋರಿಕೆಯನ್ನು ಸ್ವಯಂ ನಾನಾಫಡ್ನಾವೀಸರವರೇ ತಿಳಿಸಿದ್ದರು ರಾಣಿಯವರು ತಮ್ಮ ಅಭಿಮತವೂ ಅದೇ ಎಂದು ಸ್ಪಷ್ಟವಾಗಿ ನುಡಿದರು ಆ ಭರವಸೆಯ ಮೇಲೆ ನಾನು ತಮ್ಮಲ್ಲಿಗೆ ಬಂದಿದ್ದೇನೆ

ಖಾ—ನನಗೆ ಆಶ್ಚರ್ಯವು ಇನ್ನೂ ಹೆಚ್ಚುತ್ತಿದೆ, ಪಂತರವರೇ, ತಾವು ತಮ್ಮ ಆಶೆಯನ್ನು ಹೇಳೋಣವಾಗಲಿ

ಈ ಮೈಸೂರು ರಾಜ್ಯವು ಹಿಂದೂ ರಾಜ್ಯ, ನಿಮ್ಮ ಸುಲ್ತಾನರವರು ರಾಜಮನತನದವರನ್ನು ಮೂಲೆಗೆ ಕೂಡಿಸಿ ಸ್ವಯಂ ಪಟ್ಟಕಟ್ಟಿಕೊಂಡಿದಾರೆ, ದೊಡ್ಡ ನವಾಬರು ಆಮರಣಾಂತ ಹಿಂದೂರಾಜರ ದಳಪತಿಗಳಾಗಿದ್ದರು ಈಗ ಪುನಃ ಆ ರಾಜಮನತನದವರಿಗೆ ನೀವು ಪಟ್ಟ ಕಟ್ಟಿದರೆ ನಮ್ಮ ಅಭೀಷ್ಟವು ಸಿದ್ಧಿಸಿದಂತೆ! ಮೈಸೂರು ರಾಜ್ಯದಲ್ಲಿ ನಮಗೆ ಸೇರಿರುವ ರಾಜ್ಯವನ್ನೆಲ್ಲಾ ಬಿಟ್ಟು ಕೊಡುತ್ತೇವೆ ಇದು ನಿಮಗೂ ಅಭಿಮತವೆಂದು ಭಾವಿಸಿದೇವೆ.

ಪಂತರವರೇ, ನಿಮ್ಮ ಮಾತು ಅಕ್ಷರಶಃ ನ್ಯಾಯವಾಗಿದೆ. ಆದರೆ ಈ ಮಹಾಯುದ್ಧ ಮಧ್ಯದಲ್ಲಿ ಈ ಮಾತನ್ನೆತ್ತುವುದು ರಾಜನೀತಿಯೇ ಅಲ್ಲ ಮತ್ತು ಈ ವಿಷಯಕ್ಕು ಕುಂಫಣಿಯವರಿಗೂ ಯಾವ ಸಂಬಂಧವೂ ಇಲ್ಲ

ಪಂತ—ಹೌದು! ಕುಂಪಣಿಯವರಿಗೂ ಇದಕ್ಕು ಸಂಬಂಧವಿಲ್ಲ ಮಹಾರಾಷ್ಟ್ರರು ಮೈಸೂರಿನವರು ಸೇರಿಬಿಟ್ಟರೆ ಕುಂಪಣಿಯವರು ಇತ್ತಕಡೆ ತಿರುಗುವುದೇ

ಇಲ್ಲ. ಯುದ್ಧ ಮಧ್ಯದಲ್ಲಿ ಹಿಂದೂರಾಜರಿಗೆ ಪಟ್ಟ ಕಟ್ಟಬೇಕೆಂದು ನಾವು ಹೇಳುವುದು ಇಲ್ಲ ಸಂಧಿಯಾದಮೇಲೆ ರಾಜಮನತನದವರಿಗೆ ಪಟ್ಟ ಕಟ್ಟುವುದಾಗಿ ನೀವೂ ಸುಲ್ತಾನರವರು ವಾಗ್ದಾನ ಮಾಡಿರಿ ನಾವು ನಮ್ಮ ದಂಡನ್ನು ವಾಪಸು ತೆಗೆದು ಕೊಂಡು ಹೋಗುತ್ತೇವೆ

ಖಾ—ನಾನು ಸ್ವತಂತ್ರನಲ್ಲ. ಸುಲ್ತಾನರೊಡನೆ ಆಲೋಚಿಸಬೇಕು. ಒಂದು ವಾರ ಅವಕಾಶ ಕೊಡಿರಿ ತಮಗೆ ಉತ್ತರ ಕೊಡುತ್ತೇನೆ

ಪಂತ—ಆಗಬಹುದು ಅದುವರೆಗೆ ಉಭಯ ಪಕ್ಷದವರೂ ಯುದ್ಧವನ್ನು ನಿಲ್ಲಿಸಬೇಕು

ಖಾ—ಹೌದು! ಯುದ್ಧವನ್ನು ನಿಲ್ಲಿಸೋಣ ಆದರೆ ನೀವುಗಳು ಎಲ್ಲೆಲ್ಲಿ ದ್ದೀರೋ ಅಲ್ಲಿಯೇ ಇರಬೇಕು ಈ ಅವಕಾಶದಲ್ಲಿ ಮತ್ತೆಲ್ಲಿಂದಲೂ ಹೊಸ ಸೈನ್ಯಗಳು ಮೈಸೂರು ಗಡಿಯೊಳಗೆ ಬರಕೂಡದು

ಪಂತರು ಒಪ್ಪಿಕೊಂಡರು.

ಖಾ—ಪಂತರವರೇ! ಇದಕ್ಕೆ ಇಂಗ್ಲಿಷರು ಒಪ್ಪಿಕೊಂಡಿದಾರೆಯೆ?

ಪಂತ—ಇಲ್ಲ! ನಾನು ಅವರನ್ನು ಒಪ್ಪಿಸುತ್ತೇನೆ ಅವರು ಒಂದು ಹೆಜ್ಜೆ ಮುಂದಿಡದಂತೆ ನಾನು ಭರವಸೆ ಕೊಡುತ್ತೇನೆ.

ಖಾ—ನಮ್ಮ ಸುಲ್ತಾನರವರು ಇದಕ್ಕೆ ಒಪ್ಪಿಲ್ಲ ನಾನು ಅವರೊಡನೆ ಸಮಾ ಲೋಚನೆ ಮಾಡುತ್ತೇನೆ ಪಂತರವರೇ! ತಮ್ಮ ಈ ಸಲಹೆಗೆ ಪೇಷ್ವೆಗಳು ಶಾಶ್ವತ ವಾಗಿ ಕಟ್ಟು ಬೀಳುತ್ತಾರೆಯೇ?

ಪಂ—ಹೌದು! ಮಹದೇವನಾಣೆ, ಈ ಬಗ್ಗೆ ನಾನು ಸ್ವಯಂ ನಾನಾಫಡ್ನಾ ವೀಸರಿಂದಲೇ ಒಪ್ಪಿಗೆಯ ರಾಯಸವನ್ನು ತರಿಸುತ್ತೇನೆ ಆದರೆ ಇದೆಲ್ಲಾ ಗೋಪ್ಯ ವಾಗಿರಬೇಕು

ಇಬ್ಬರೂ ಪರಸ್ಪರ ವಂದನೆಗಳನ್ನು ಮಾಡಿದರು ಅಷ್ಟು ಹೊತ್ತಿಗೆ ಸಂಧ್ಯಾ ಕಾಲವಾಗಿತ್ತು ಹರಿಪಂತನೂ ಇಯಜ್‌ಖಾನರ ಅಪ್ಪಣೆ ಪಡೆದು ತನ್ನ ಶಿಬಿರಕ್ಕೆ ತೆರ ಳಿದನು. ಮಧ್ಯಮಾರ್ಗದಲ್ಲಿ ರಾಣಿಯರಿಬ್ಬರನ್ನು ಸಂಧಿಸಿದನು ಇಷ್ಟು ಮಿತಪರಿವಾರ ದೊಡನೆ ಶತೃ ಸೇನಾನಿಯಾದ ಪಂತನು ಖಾನರ ಶಿಬಿರದಿಂದ ಬರುತ್ತಿರುವುದನ್ನು ನೋಡಿ ರಾಣಿಯವರಿಗೆ ಆಶ್ಚರ್ಯವಾಯಿತು.

ಅವರುಗಳು ಪರಸ್ಪರ ಕ್ಷೇಮಲಾಭವನ್ನು ವಿಚಾರಿಸಿದರು.

ರಾಧಾರಾಣಿಯು, ಪಂತರವರೇ! ಈ ಸಂಧ್ಯಾಕಾಲದಲ್ಲಿ ಶತೃಸೇನಾನಿಗಳಾದ ತಾವು ನಮ್ಮ ಶಿಬಿರದ ಕಡೆಯಿಂದ ಬರುತ್ತಿರುವುದು ಆಶ್ಚರ್ಯವಾಗಿದೆ.

ರಾಣಿಯವರೇ ! ಇದರಲ್ಲಿ ಆಶ್ಚರ್ಯವೇನು ? ತಮ್ಮ ಸೌಜನ್ಯ ! ನಾನು ಖಾನರವರೊಡನೆ ಸಂಧಿಯ ಪ್ರಸ್ತಾಪಮಾಡಿ ಬರುತ್ತಿದೇನೆ

ರಾಣಿ—ಪಂತರೇ ! ಒಂದೇ ದಿನದ ಯುದ್ಧದಲ್ಲಿ ಸಂಧಿಯಾಗುವುದೇನು ?

ಪಂ—ಆಗುತ್ತದೆ !

ಇಬ್ಬರು ರಾಣಿಯರು ಸಂತೋಷ ! ಸಂತೋಷ ! ಎಂದು ತಲೆದೂಗುತ್ತಾ ಕುದುರೆಗಳನ್ನು ಮುಂದಕ್ಕೆ ಚುಕಾಯಿಸಿದರು ಅವರುಗಳು ಶಿಬಿರವನ್ನು ಸೇರಿದರು ಸೂರ್ಯದೇವನು ಅಸ್ತಂಜಲಿಯನ್ನು ಆಶ್ರಯಿಸಿದನು.

ರಾಣಿಯವರು ಶಿಬಿರಕ್ಕೆ ಬರುತ್ತಲೇ ಖಾನರವರ ಬಿಡಾರಕ್ಕೆ ಹೋಗಿ ಖಾನರವರ ಭೇಟಿ ಮಾಡಿದರು. ಖಾನರವರು ಬಹಳ ಹರ್ಷದಿಂದ ಹರಿಪಂತರ ಆಗಮನವನ್ನು ವಿವರಿಸಿದರು ದೌಲತ್ತಳು ಒಂದು ಮಾತನ್ನೂ ಆಡಲಿಲ್ಲಿ.

ರಾಧಾ—ಖಾನರವರೇ, ಈ ಸಂಧಿ ಪ್ರಸ್ತಾಪವನ್ನು ಸುಲ್ತಾನರೊಡನೆ ಯಾರು ಮಾಡಬೇಕು ?

ಖಾ—ನೀವು ಮಾಡಬೇಕು

ರಾಧಾ—ಈ ಸಂಧಿಯಿಂದ ಲಾಭವೇನು ?

ಖಾ—ಲಾಭವುಂಟು ! ಈಗ ಸಂಧಿಯಾದರೆ ಅದು ಶಾಶ್ವತವಾದ ಸಂಧಿ ಕುಂಫಣಿಯವರು ಹಿಂದೂಸ್ಥಾನದಲ್ಲಿ ರಾಜ್ಯಕಟ್ಟುವ ಮಾತು ಕೊನೆಮುಟ್ಟಿದಂತೆಯೇ ಸರಿ ! ಮಹಾರಾಷ್ಟ್ರರು ಉತ್ತರದಲ್ಲಿ ಡೆಲ್ಲಿಯವರಗೆ ನುಗ್ಗುತ್ತಿದಾರ ದಕ್ಷಿಣವೆಲ್ಲವೂ ಮೈಸೂರಿನವರದೇ ಇದೆ

ರಾಧಾ–ಈ ಯುದ್ಧದಲ್ಲಿ ಜಯವಾಗುವುದಿಲ್ಲವೆಂದು ನಿಮಗೆ ಸಂದೇಹ ಉಂಟಾಗಿದೆಯೇನು ?

ಖಾ—(ಉತ್ತೇಜಿತನಾಗಿ) ಏನು ರಾಣಿಯರೇ, ನಿನ್ನೆಯ ದಿನ ರಣಕ್ಷೇತ್ರದಲ್ಲಿ ನೀವು ನೋಡಲಿಲ್ಲವೇ ? ನಮ್ಮ ಮುಂದೆ ಕುಂಪಣಿಯವರು ನಿಲ್ಲಲಾರದೆ ಹೋದರಲ್ಲವೇ ?

ರಾಧಾ—ಹೌದು, ಖಾನರವರೇ, ತಮ್ಮ ಪರಾಕ್ರಮಕ್ಕೆ ಕುಂದಿಲ್ಲ. ಆದರೆ ಯುದ್ಧ ಕ್ಷೇತ್ರದಲ್ಲಿ ಸಂಧಿಯಮಾತೆಂದರೆ ? ಇದರಲ್ಲಿ ಏನೋ ಛದ್ಮ ಇದೆ

ಖಾ—ಇಲ್ಲ, ರಾಣಿಯವರೇ, ಇದರಲ್ಲಿ ಮಹತ್ತರವಾದ ರಾಜಕೀಯವಿದೆ ಈ ಸಂಧಿಯಿಂದ ಮೈಸೂರಿಗೆ ಲಾಭವಿದೆ.

ದೌ—ಖಾನರವರೇ, ತಾವು ಹೇಡಿಗಳಂತೆ ಮಾತನಾಡುತ್ತಿದ್ದೀರಿ ನಾವು ಇಲ್ಲಿಗೆ ರಾಜಕೀಯಕ್ಕೆ ಬಂದಿಲ್ಲ. ರಣಕ್ಷೇತ್ರದಲ್ಲಿ ಯುದ್ಧ ಮಾಡಲು ಬಂದಿದೇವೆ.

ನಾನು ಸಂಧಿಯನ್ನು ಒಪ್ಪುವುದೇ ಇಲ್ಲ ನಾವು ಈ ಯುದ್ಧದದಲ್ಲಿ ಸಂಪೂರ್ಣ ಜಯ ವನ್ನು ಹೊಂದಬೇಕು. ಇಲ್ಲವೇ ನಮ್ಮ ಮೂವರ ಪ್ರಾಣಗಳು ಶ್ರೀರಂಗಪಟ್ಟಣದ ಮಹಾದ್ವಾರದ ಮುಂದೆ ಹಾರಿಹೋಗಬೇಕು ಎಂದು ಹೇಳಿದಳು ದೌಲತ್ತಳ ಕಣ್ಣು ಗಳು ಕೆಂಡದಂತೆ ಕೆಂಪಗಿದ್ದುವು ಧ್ವನಿಯು ಮಾತು ಮಾತಿಗೂ ವಜ್ರದಂತೆ ಕಠೋರ ವಾಗುತ್ತಿತ್ತು, ಶರೀರಾದ್ಯಂತವೂ ಕಂಪನವಾಗುತ್ತಿತ್ತು ಖಾನನು ಆ ಕ್ರೋಧಾ ವೇಶಪೂರಿತಳಾದ ದೌಲತ್ತಳನ್ನು ಸಮಾಧಾನಪಡಿಸಲು ಎದ್ದು ಬಂದು ಅವಳ ಕೈ ಗಳನ್ನು ಹಿಡಿದುಕೊಂಡನು

ದೌಲತ್ತಳ ಆವೇಶದಿಂದ ಕೈಯನ್ನು ಕೊಡವಿ ಇಯಜ್‌ಖಾನನನ್ನು ತಳ್ಳಿ ಗುಡಾರದಿಂದ ಹೊರಟುಹೋದಳು ರಾಧಾರಾಣಿಯು ದೌಲತ್ತಳನ್ನು ಹಿಂಬಾಲಿಸಿ ಹೋದಳು ಖಾನನ ತಲೆಯು ಗಿರ್ರನೆ ತಿರುಗಲಾರಂಭಿಸಿತು, ಹೋಗಿ ಪರ್ಯಂಕದ ಮೇಲೆ ಬಿದ್ದನು.

ದೌಲತ್ತಳೂ, ರಾಧೆಯೂ, ತಮ್ಮ ವಾಸಗೃಹಕ್ಕೆ ಹೋಗಿ ಸೇರಿದರು ದೌಲ ತ್ತಳು ಮಾತನಾಡಲಿಲ್ಲ ದುಃಖದ ಆವೇಗವು ಆವರಿಸಿತ್ತು ರಾಧೆಯು ಬಹಳವಾಗಿ ಸಮಾಧಾನಪಡಿಸಿದಳು ಅವರಿಬ್ಬರು ರಾಣಿಯರೂ ಬಹಳ ಹೊತ್ತು ಆಲೋಚನೆ ಮಾಡಿದರು ನಾಳ ಪ್ರಾತಃಕಾಲದಲ್ಲಿ ಯುದ್ಧವು ಆರಂಭವಾಗಲೇಬೇಕು ಈ ಸಂಧಿಪ್ರಸ್ತಾಪವು ಟಿಪ್ಪೂಸುಲ್ತಾನನ ಕಿವಿಗೆ ಮುಟ್ಟದಂತೆ ಮಾಡಬೇಕೆಂದು ಇಬ್ಬರೂ ನಿರ್ಧಾರಮಾಡಿಕೊಂಡರು ಅವರಿಬ್ಬರೂ ತಮ್ಮ ವಾಸಗೃಹವನ್ನು ಬಿಟ್ಟುಹೋಟರು. ಒಬ್ಬೊಬ್ಬ ಪಾಳೆಯಗಾರರನ್ನು ಗುಪ್ತವಾಗಿ ಭೇಟಿಮಾಡಿದರು ಅವರನ್ನೆಲ್ಲಾ ಪ್ರೋ ತ್ಸಾಹಿಸಿ ಬೆಳಗಾಗುತ್ತಲೇ ಯುದ್ಧಕ್ಕೆ ಹೊರಡಲು ಸಿದ್ಧಪಡಿಸಿದರು ಸೇನೆಯು ಪ್ರತಿ ಯೊಂದು ತುಕಡಿಗೂ ಪ್ರಾತಃಕಾಲದಲ್ಲಿ ಯುದ್ಧಕ್ಕೆ ಸಿದ್ಧವಾಗಲು ಆಜ್ಞೆಯನ್ನಿತ್ತರು. ಇಬ್ಬರು ರಾಣಿಯರೂ ಆ ಮಹಾಶಿಬಿರವನ್ನೆಲ್ಲಾ ಸಂಚಾರಮಾಡಿ ತಮ್ಮ ವಾಸಭವ ನಕ್ಕೆ ಬರುವ ಹೊತ್ತಿಗ ಕತ್ತಲೆಯು ಹರಿದು ಬೆಳಗಾಗುತ್ತಿತ್ತು ದೌಲತ್ತಳು ಸ್ನಾನ ಮಾಡಿ ಸುಗಂಧ ದ್ರವ್ಯಗಳಿಂದ ಶರೀರವನ್ನು ಅಲಂಕರಿಸಿಕೊಂಡು ಯುದ್ಧದ ದಿರಸು ಗಳನ್ನು ತೊಟ್ಟಳು ವಾಸಭವನದ ಬಾಗಿಲಿನಲ್ಲಿ ಸಿದ್ಧವಾಗಿದ್ದ ಕುದುರೆಯನ್ನೇರಿ ಚುರಕಾಯಿಸಿ, ಇಯಜ್‌ಖಾನನ ಬಿಡಾರಕ್ಕೆ ಹೋದಳು ಖಾನನ ಅಂತರ್ಗೃಹ ದೊಳಗೆ ಹೋಗಿ ನೋಡಿದಳು ಖಾನನು ಇನ್ನೂ ಹಾಸಿಗೆಯನ್ನು ಬಿಟ್ಟು ಎದ್ದಿರ ಲಿಲ್ಲ ದೌಲತ್ತಳು ಗುಡಾರದೊಳಗೆ ಬಂದ ರಭಸಕ್ಕೆ ಖಾನನಿಗೆ ಎಚ್ಚರವಾಯಿತು. ಖಾನನು ಕಣ್ಣುಬಿಟ್ಟು ನೋಡಿದನು ಆ ರಣದುಡಿಗೆಯಲ್ಲಿ ದೌಲತ್ತಳನ್ನು ನೋಡಿ ಅಪ್ರತಿಭನಾದನು.

ದೌಲತ್ ! ಇದೇನು ? ಮುಂಜಾನೆ ಈ ದಿರಿಸಿನಲ್ಲಿ ಶಯನ ಗೃಹಕ್ಕೆ ಬಂದಿರುವೆ ?

ಖಾನರೇ ! ಏಳಿರಿ ! ಯುದ್ಧಕ್ಕೆ ಹೊರಡಿರಿ

ದೌಲತ್ ಇದೇನು ಆಶ್ಚರ್ಯ ? ಹುಡುಗಾಟವೆಂದು ಭಾವಿಸಿರುವೆಯೊ ? ಸೈನ್ಯದ ಸಿದ್ಧತೆಯಿಲ್ಲದೇ ನಾನು ನಿನ್ನೊಡನೆ ಎಲ್ಲಿಗೆ ಹೊರಡುವುದು ?

ದೌಲತ್ತಳು ಕೆಂಡದಂತೆ ಕೆಂಪಾಗಿರುವ ಕಣ್ಣುಗಳನ್ನಗಲಿಸಿ ಕ್ರೂರ ದೃಷ್ಟಿಯಿಂದ ನೋಡುತ್ತಾ—

ಖಾನರೇ ! ನಗರದ ಸೈನ್ಯವು ಸಿದ್ಧವಾಗಿ ಹೊರಟೇ ಬಿಟ್ಟದೆ ರಾಧಾರಾಣಿಯವರು ಪಾಳಯಗಾರರಿಂದ ಪರಿವೃತರಾಗಿ ಸೈನ್ಯದ ಮುಂದೆ ನಡೆಯುತ್ತಿದಾರೆ. ಅಗೋ ರಣದುಂದುಭಿಯು ಕೇಳಿಬರುತ್ತಿದೆ ಎದ್ದು ಹೊರಡಿರಿ ದೊಡ್ಡ ನವಾಬರ ವೀರಪುತ್ರರಂತೆ ರಣಭೂಮಿಗೆ ನುಗ್ಗಿರಿ

ಖಾನನು ಖತಿಗೊಂಡು, ದೌಲತ್ ! ನಾನು ಯುದ್ಧಕ್ಕೆ ಬರುವುದಿಲ್ಲ ನಿನ್ನೆ ಮಧ್ಯಾಹ್ನ ಮರಾಠಾಸರದಾರರಿಗೆ ವಾಗ್ದಾನ ಮಾಡಿದ್ದೇನೆ ನಾನು ನಮ್ಮ ಸೈನ್ಯದ ಎದುರು ನಿಂತು ಅವರನ್ನೆಲ್ಲಾ ಹಿಂದಿರುಗಿಸುತ್ತೇನೆ

ದೌಲತ್ತಳು ವಿಕಟವಾದ ನಗುವನ್ನು ನಕ್ಕು ಖಾನನೇ ಶತ್ರುಗಳ ಮೇಲೆ ಯುದ್ಧಕ್ಕೆ ಹೊರಟ ನಮ್ಮ ಸೈನ್ಯವನ್ನು ಹಿಂದಿರುಗಿಸುವಿಯಾ ? ಅದಕ್ಕಿಂತಲೂ ಕಾವೇರಿಯ ಮಡುವಿನಲ್ಲಿ ಧುಮಿಕಿ ಪ್ರಾಣಬಿಡುವುದು ಲೇಸು ಯಾರಿಗೆ ವಾಗ್ದಾನ ಮಾಡಿರುವೆ ? ಮರಾಟರಿಗೆ ವಾಗ್ದಾನ ಮಾಡಿದೆಯಾ ? ಯಾವ ಅಧಿಕಾರದಿಂದ ವಾಗ್ದಾನ ಮಾಡಿದೆ ?

ದೊಡ್ಡ ನವಾಬರ ಮೇಲೆ ಆಣೆ ಇಟ್ಟು ಮಾಡಿದ ಶಪಥವನ್ನು ಮರೆತೆಯಾ ?

ಇದೇ ವಾಸಭವನದಲ್ಲಿ ಟಿಪ್ಪೂಸುಲ್ತಾನನಿಗೆ ಮಾಡಿಕೊಟ್ಟ ವೀರಪ್ರತಿಜ್ಞೆ ಏನಾಯಿತು ?

ನನಗೆ ಆತ್ಮಸಾಕ್ಷಿಯಾಗಿ ಮಾಡಿಕೊಟ್ಟ ವಾಗ್ದಾನವೆಲ್ಲಿ ? ಎಂದು ಘರ್ಜಿಸುತಾ ನಡುಕಟ್ಟನಿಂದ ಕತ್ತಿಯನ್ನು ಹಿರಿದು,

ಖಾನನೇ ! ತೆಗೆದುಕೊ ಈ ಕರವಾಳವನ್ನು. ಇದರಿಂದ ನನ್ನ ಶಿರಚ್ಛೇದನ ಮಾಡಿ ನೀನು ಆತ್ಮಹತ್ಯ ಮಾಡಿಕೊ. ನಮ್ಮಿಬ್ಬರ ಈ ಘೋರ ಕಥೆಯು ಶ್ರೀರಂಗ ಪಟ್ಟಣದ ಚರಿತ್ರೆಯಲ್ಲಿ ಬರೆಯಲ್ಪಡಲಿ

ಖಾನನು ಅತ್ತಕಡೆ ದಿಗಂತವ್ಯಾಪಿಯಾಗಿರುವ ರಣದುಂದುಭಿಯನ್ನು ಕಿವಿಯಲ್ಲಿ ಕೇಳುತ್ತಿದಾನೆ ಇಲ್ಲಿ ಎದುರಿನಲ್ಲಿ ಕೆರಳಿದ ಕಣ್ಣುಗಳಿಂದ ಸುಡುತ್ತಾ ಬಿಚ್ಚಿದ ಕತ್ತಿಯನ್ನು ಚಾಚಿ ನಿಂತಿರುವ ಭೈರವಿಯನ್ನು ಕಣ್ಣುಗಳಿಂದ ನೋಡುತ್ತಿದಾನೆ. ಅಂದು

ಮೋಹಿನೀ ದೌಲತ್ತಳನ್ನು ಕಂಡ ಕಣ್ಣುಗಳಿಂದಲೇ ಇಂದು ಈ ಭೈರವಿದೌಲತ್ತಳನ್ನು ನಾನೇ ನೋಡುತ್ತಿದೇನೇನು ? ಎಂದು ದಿಗ್ಭ್ರಾಂತನಾಗಿದಾನೆ.

ದೌಲತ್ತಳು ಪುನಃ ನಗುತ್ತಾ ಏಳು! ಖಾನ್! ನೀನು ವೀರಪುರುಷನೆಂದು ಬಲ್ಲೆ ಈ ಮಹಾಯುದ್ಧವು ನಿನ್ನಿಂದ ಜಯವಾಗಬೇಕು. ದೊಡ್ಡ ನವಾಬರು ಕಟ್ಟಿದ ಈ ಮೈಸೂರುರಾಜ್ಯವು ಆಚಂದ್ರಾರ್ಕವಾಗಿ ಬೆಳಗಬೇಕು ಎಂದು ಉತ್ತೇಜಿಸಿದಳು

ಖಾನನು ಮಂತ್ರಮುಗ್ಧನಂತೆ ಎದ್ದು ಅಂಗರೇಕುಗಳನ್ನು ತೊಟ್ಟು ಆಯುಧಗಳನ್ನು ಧರಿಸಿ ಕ್ಷಣದಲ್ಲಿ ಯುದ್ಧಕ್ಕೆ ಸಿದ್ಧನಾದನು

ದೌಲತ್ತಳು ಆ ವೀರಮೂರ್ತಿಯನ್ನು ಆಲಿಂಗಿಸಿ ಚುಂಬಿಸಿದಳು

ಇಯಜ್ ಖಾನನೂ, ದೌಲತ್ತಳೂ ದಿವ್ಯಾಶ್ವಗಳನ್ನೇರಿ ದೌಡಾಯಿಸುತ್ತಾ ನಗರದ ಮಹಾಸೈನ್ಯದ ಅಗ್ರಭಾಗದಲ್ಲಿ ಹೋಗಿ ನಿಂತರು ಆ ಸೇನಾಮಹಾಸಾಗರದಿಂದ ಜಯಧ್ವನಿ ಎದ್ದು ಭೂಮ್ಯಾಕಾಶಗಳನ್ನು ವ್ಯಾಪಿಸಿತು

## ಮೃತ್ಯು ಮುಖದಲ್ಲಿ

ನಗರದ ಸೈನ್ಯವು ಇಂಗ್ಲೀಷ್ ಪಾಳಯದ ಮೇಲೆ ಲಗ್ಗೆ ಹತ್ತಲು ಹೊರಟೇ ಬಿಟ್ಟಿತು ಪಾಳಯಗಾರರೆಲ್ಲರೂ ತಮ್ಮ ತಮ್ಮ ದಂಡನ್ನು ಹೊರಡಿಸಿಕೊಂಡು ರಣೋತ್ಸಾಹದಿಂದ ಹೊರಟಿದ್ದರು ಆ ಮಹಾಸೈನ್ಯದ ಮುಂದುಗಡೆ ರಾಧಾರಾಣಿಯವರು ಕುದುರೆಯನ್ನೇರಿ ಸೈನ್ಯವನ್ನು ನಡೆಸುತ್ತಾ ಮುಂದೆ ಹೋಗುತ್ತಿದ್ದರು ರಣಭೇರಿಯು ದಿಕ್ತಟಗಳನ್ನು ಭೇದಿಸುತ್ತಿತ್ತು ಮಂತ್ರ ಮುಗ್ಧವಾದ ಸರ್ಪದಂತೆ ದೌಲತ್ತಳ ಕುದುರೆಯನ್ನು ಹಿಂಬಾಲಿಸುತ್ತಾ ಇಯಜ್ ಖಾನನು ಕರೀ ಕುದುರೆಯ ಮೇಲೆ ನಡೆಯುತ್ತಿದ್ದನು ಇಯಜ್ ಖಾನನ ಮನಸ್ಸು ತಲ್ಲಣಿಸುತ್ತಿತ್ತು ತಾನು ಮರಾಠಾ ಸರದಾರರಿಗೆ ನಿನ್ನೆ ಕೊಟ್ಟ ವಾಗ್ದಾನವೆಲ್ಲಿ ಹೋಯಿತು ? ಸಂಧಿಯಾಗುವುದೆಂಬ ನಂಬಿಕೆಯಿಂದ ಪ್ರಮತ್ತವಾಗಿರುವ ಇಂಗ್ಲೀಷ್ ಸೈನ್ಯದ ಮೇಲೆ ಹಠಾತ್ತಾಗಿ ಹೋಗಿ ಬೀಳುವುದು ಎಂತಹ ಅಧರ್ಮ! ಎಂದು ಚಿಂತಿಸುತ್ತಿದ್ದನು ದೌಲತ್ತಳ ರಣೋತ್ಸಾಹವನ್ನು ನೋಡಿ ಇಯಜ್ ಖಾನನು ಇದೆಲ್ಲವನ್ನೂ ಮರೆತನು ನಾನು ದೌಲತ್ತಳಿಗೆ ವಚನ ಕೊಟ್ಟಿದ್ದೇನೆ ಈ ಯುದ್ಧದಲ್ಲಿ ಸಂಪೂರ್ಣ ಜಯವನ್ನು ದೊರಕಿಸಿ ಕೊಡುವುದಾಗಿ ಟಿಪ್ಪೂಸುಲ್ತಾನನಿಗೆ ಅಭಯ ಕೊಟ್ಟಿದ್ದೇನೆ. ದೊಡ್ಡ ನವಾಬರಿಗೆ ನಾನು ಆಜನ್ಮ ಋಣಿಯಾಗಿದ್ದೇನೆ ಹರಿಪಂತನ ಸಂಧಿ ಪ್ರಸ್ತಾಪದಲ್ಲಿ ವಂಚನೆಯಿಲ್ಲವೆಂದು ಭರವಸೆ ಎಲ್ಲಿದೆ ? ಒಂದು ಪಕ್ಷ ಅವರಿಂದಲೇ ನಾವು ವಂಚಿತರಾದರೆ ಮೈಸೂರಿನ ಗತಿಯೇನು? ಸಂಧಿ ಪ್ರಸ್ತಾಪವನ್ನು ಮಾಡಲು ನಾನಾರು ? ನಾನು ಈ ಯುದ್ಧದಲ್ಲಿ ಜಯವನ್ನು ಗಳಿಸಲು ಬಂದಿದ್ದೇನೆ ಅದನ್ನು ಸಾಧಿಸುವುದೇ ನನ್ನ ಕರ್ತವ್ಯ ಎಂದುಕೊಂಡು

ಉತ್ಸಾಹವನ್ನು ತಂದುಕೊಳ್ಳುವನು. ಹೀಗೆ ಡೋಲಾಯಮಾನವಾದ ಮನಸ್ಸಿನಿಂದ ದಾರಿ ನಡೆಯುತ್ತಿದ್ದನು. ದೌಲತ್ತಳು ಎಷ್ಟು ಹೊತ್ತಾದರೂ ಒಂದು ಮಾತನ್ನಾದರೂ ಆಡಲಿಲ್ಲ ಇಯಜ್‌ಖಾನನು ತನ್ನ ಕುದುರೆಯನ್ನು ಮುಂದಕ್ಕೆ ಹಾರಿಸಿ, ದೌಲತ್ತಳ ಕುದುರೆಯ ಪಕ್ಕಕ್ಕೆ ಹೋಗಿ ನಿಂತನು ದೌಲತ್ತಳ ಕಡೆಗೆ ತಿರುಗಿ, ದೌಲತ್ ! ಮಾತನಾಡುವುದಿಲ್ಲವೇಕೆ ? ನಿನಗೆ ಇನ್ನೂ ನನ್ನ ಮೇಲಿನ ಕೋಪವು ಹಾಗೆಯೇ ಇದೆಯೇನು ?

ಖಾ ! ಕೋಪವೆಲ್ಲಿ ಬಂತು ನೀನು ಯುದ್ಧಕ್ಕೆ ಬರಲಿ, ಬಾರದಿರಲಿ, ನಾನು ಇಂದು ರಣಕ್ಷೇತ್ರದಲ್ಲಿ ಪ್ರಾಣವನ್ನರ್ಪಿಸುವುದನ್ನು ನಿಶ್ಚಯ ಮಾಡಿದ್ದೇನೆ ನೀನು ಮುಂದೆ ಬಂದರೆ ಬಾ, ಇಲ್ಲದಿದ್ದರೆ ಹಿಂದಕ್ಕೆ ಹೋಗು

ಖಾನನು ವಿಷಣ್ಣನಾಗಿ, ರಾಣಿಯವರೇ ! ಯುದ್ಧಕ್ಷೇತ್ರದಿಂದ ಹಿಮ್ಮೆಟ್ಟುವ ಹೇಡಿಯು ನಾನೆಂದು ತಿಳಿದೆಯಾ ? ನಿನಗಾಗಿ ಈ ಶರೀರದಲ್ಲಿ ಕಡೆಯ ರಕ್ತಬಿಂದು ಇರುವವರೆಗೂ ಯುದ್ಧ ಮಾಡುವೆನು, ಇಂದಿನ ಯುದ್ಧವನ್ನು ನೋಡು ಹಿಂದೆ ಎಂದೂ ಈ ದಕ್ಷಿಣಾಪಥದಲ್ಲಿ ಇಂತಹ ಯುದ್ಧವು ನಡೆದಿಲ್ಲವೆಂದು ಇಡೀ ಜಗತ್ತು ಸಾರುವಂತೆ ಮಾಡುವೆನು ಇನ್ನು ಈ ದಕ್ಷಿಣಾವರ್ತದಲ್ಲಿ ಫರಂಗಿಗಳ ಸುಳಿವಿಲ್ಲದೇ ಮಾಡುವೆನು.

ನೋಡು ! ಇಯಜ್‌ಖಾ ! ಈ ಯುದ್ಧವು ಸಾಮಾನ್ಯವಾದುದಲ್ಲ ಇಂದು ಶ್ರೀರಂಗಪಟ್ಟಣದ ಚಕ್ರಾಧಿಪತ್ಯವು ಉಳಿಯಬೇಕು, ಇಲ್ಲವೇ ಅಳಿಯಬೇಕು ಅದು ನಿನ್ನ ಕೈಯಲ್ಲಿದೆ. ಈ ಮಹತ್ತರವಾದ ಸೈನ್ಯವನ್ನು ನೋಡು, ಆ ಕುದುರೆಗಳ ಹೇಷಾರವವನ್ನು ಕೇಳು, ಬಾಯಿ ತೆರೆದು ಘರ್ಜಿಸುತ್ತಿರುವ ದೊಡ್ಡ ಫಿರಂಗಿಗಳನ್ನು ನೋಡು ಇಂದು ಈ ರಣಕ್ಷೇತ್ರದಲ್ಲಿರುವ ಫರಂಗಿಗಳ ದಂಡಾಗಲಿ, ಮರಾಟರ ಸೈನ್ಯವಾಗಲಿ ಇದಕ್ಕೆ ಎಣೆಯಾದೀತೇ ? ನಿನ್ನಂಥಾ ಮಹಾಸೇನಾನಿಯು ಮುಂದೆ ನಿಂತಿರುವಾಗ ಈ ಮಹಾಸೈನ್ಯವನ್ನು ಎದುರಿಸುವ ವೀರನಾವನಿರುವನು ? ಖುದಾನು ಈ ಮಹಾಯುದ್ಧದ ವೀರಮಾಲೆಯನ್ನು ನಿನ್ನ ಕೊರಳಿಗೆ ಹಾಕಿರುವನು. ನಡೆ ಮುಂದೆ ನಡೆ ಆ ಸೈನ್ಯದ ಮುಂದೆ ಹೋಗಿ ನಿಲ್ಲು

ದೌಲತ್, ಖುದಾನು ನನ್ನ ಮೇಲೆ ಅನುಗ್ರಹಿಸಿ, ನನ್ನ ಕೊರಳಿಗೆ ಹಾಕಿರುವ ವಿಜಯಮಾಲೆಯೇ ನೀನು. ಈ ಮಹಾಸೈನ್ಯದ ಜೀವಶಕ್ತಿಯು ರಾಧಾರಾಣಿ ನಿಮ್ಮಿಬ್ಬರ ಅನುಗ್ರಹದಿಂದ ಈ ಇಯಜ್‌ಖಾನನು ಈ ಯುದ್ಧದಲ್ಲಿ ವಿಜಯವನ್ನು ಸಂಪಾದಿಸುವನು ದೊಡ್ಡ ನವಾಬರ ಆಜನ್ಮ ಋಣಿ ನಾನು ದೌಲತ್ ! ಈ ಯುದ್ಧದ ಕೀರ್ತಿಯು ನನ್ನದು ಎಂದು ಹೇಳಿ ತನ್ನ ಕುದುರೆಯನ್ನು ದೌಡಾಯಿಸಿ ಆ ಮಹಾಸೈನ್ಯದ ಮುಂದೆ ಹೋಗಿ ನಿಂತನು.

ಆ ಸೈನ್ಯವು ಇಯಜ್‌ಖಾನನನ್ನು ಕಂಡು ಮಹಾಸಾಗರವು ಘೋರ್ಗರೆಯು ವಂತೆ ಜಯಕಾರವನ್ನು ಮಾಡಿತು

ಇಯಜ್‌ಖಾನನು ಸೈನ್ಯವನ್ನು ಇಬ್ಭಾಗಮಾಡಿ ವ್ಯೂಹರಚನೆ ಮಾಡಿ ಇಂಗ್ಲೀಷ್ ದಂಡನ್ನು ಸುತ್ತುಗಟ್ಟುವಂತೆ ಅಪ್ಪಣೆ ಮಾಡಿದನು ಇಷ್ಟು ಹೊತ್ತಿಗೆ ಪ್ರಾತಃಕಾಲ ಹತ್ತುಗಂಟೆಯಾಯಿತು ಇಂಗ್ಲೀಷ್ ದಂಡು ಆಹಾರ ವಿಹಾರಗಳಲ್ಲಿ ಪ್ರವೃತ್ತವಾಗಿತ್ತು ಈ ನಗರದ ದಂಡನ್ನು ದೂರದಿಂದಲೇ ಕಂಡು ಇಂಗ್ಲೀಷ್ ಸೇನಾನಿಯಾದ ಹ್ಯಾರಿಸ್ಸನ್ನನು ತನ್ನ ಸೈನಿಕರನ್ನೆಲ್ಲಾ ಎಬ್ಬಿಸಿ ಯುದ್ಧ ಸನ್ನಾಹ ಮಾಡಿದನು ಮೊದಲು ಫಿರಂಗಿ ಗಾಡಿಗಳನ್ನು ನಗರದ ಸೈನ್ಯವು ಬರುವ ದಾರಿಗಡ್ಡಲಾಗಿ ನಿಲ್ಲಿಸಿ ಗುಂಡು ಹಾರಿಸಿ ಉಡಾಯಿಸ ತೊಡಗಿದನು ಹಿಂದಿನಿಂದ ದಂಡು ಸಿದ್ಧಮಾಡಿಕೊಂಡು ಬರುವಂತೆ ಸಜ್ಜುಗೊಳಿಸಿದನು ಅಷ್ಟರಲ್ಲಿ ನಗರದ ಮತ್ತೊಂದು ಭಾಗದ ಸೈನ್ಯವು ಇಂಗ್ಲೀಷ್ ಶಿಬಿರದ ಮೇಲೆ ಬಿದ್ದೇ ಬಿಟ್ಟಿತು ಒಂದು ಕಡೆ ಇಂಗ್ಲೀಷರ ದಂಡು ನಗರದ ಸೈನ್ಯದೊಂದಿಗೆ ಫಿರಂಗಿಯುದ್ಧ ಮಾಡುತ್ತಿದ್ದರೂ, ಮತ್ತೊಂದು ಕಡೆ ರಾಧಾರಾಣಿಯ ದಂಡು ಇಂಗ್ಲೀಷ್ ದಂಡನ್ನು ಧ್ವಂಸ ಮಾಡುತ್ತಿದ್ದಿತು. ಇಯಜ್‌ಖಾನನು ಶರವೇಗದಿಂದ ಸೈನ್ಯದಲ್ಲಿ ಸಂಚರಿಸುತ್ತಾ, ಸೈನಿಕರನ್ನು ಹುರಿದುಂಬಿಸುತ್ತಾ ಇದ್ದನು ಸುಮಾರು ಮಧ್ಯಾಹ್ನ ಎರಡು ಗಂಟೆಯ ಹೊತ್ತಿಗೆ ಇಂಗ್ಲೀಷರ ದಂಡು ಅರ್ಧದಷ್ಟು ಛಿನ್ನವಾಗಿ ಹೋಗಿತ್ತು ಅಷ್ಟರಲ್ಲಿ ಮರಾಟರ ದಂಡು ಈ ಸಮಾಚಾರವನ್ನು ಕೇಳಿ ರೋಷಾವೇಶದಿಂದ ಯುದ್ಧಕ್ಕೆ ಬಂದೇ ಬಿಟ್ಟಿತು ರಾಧಾರಾಣಿಯು ಎಂಟುಮಂದಿ ಪಾಳಯಗಾರರನ್ನು ಕರೆದುಕೊಂಡು ಮರಾಟರ ಸೈನ್ಯಕ್ಕೆ ಎದುರಾಗಿ ಹೋಗಿ ನಿಂತಳು ಮರಾಟರ ಸೈನ್ಯಕ್ಕೂ ಪಾಳಯಗಾರರ ಸೈನ್ಯಕ್ಕೂ ಖಡಾಖಡಿ ಯುದ್ಧವಾಯಿತು ಅಪರಾಹ್ಣ ನಾಲ್ಕು ಗಂಟೆಯ ಹೊತ್ತಿಗ ಮರಾಟರ ಸೈನ್ಯವು ಹಿಮ್ಮೆಟ್ಟುತ್ತ ಬಂದಿತು ಈ ಹೋರಾಟದಲ್ಲಿ ಮರಾಟರ ಸೈನ್ಯವು ಇಂಗ್ಲೀಷರ ದಂಡನ್ನು ಸಂಧಿಸುವುದಕ್ಕ ಸಾಧ್ಯವಾಗಲಿಲ್ಲ ಹರಿಪಂತನು ತನ್ನ ಸೈನ್ಯವನ್ನು ಉತ್ತೇಜನಗೊಳಿಸುತ್ತ ಹುರುಪಿನಿಂದ ಯುದ್ಧ ಮಾಡುತ್ತಿದ್ದನು ರಾಧಾರಾಣಿಗೂ ಹರಿಪಂತನಿಗೂ ಹತ್ತಾರು ಬಾರುಗಳು ಬಿಟ್ಟಿತ್ತು ಜಾಂಗ್ಲೇ ಎಂಬ ಮರಾಟ ಸರದಾರನು ತನ್ನ ಆರು ಅಡಿ ಉದ್ದವಾದ ಕತ್ತಿಯನ್ನು ರಾಧಾರಾಣಿಯ ಕಡೆಗೆ ಬೀಸಿದನು ಹರಿಪಂತನು "ಹಾ! ಹಾ!" ಎಂದು ಅರಚುತ್ತಾ ತನ್ನ ಕತ್ತಿಯನ್ನು ಹಿರಿದು ಮರಾಠಾ ಸರದಾರನ ಕತ್ತಿಯ ಪೆಟ್ಟನ್ನು ತಡೆದನು ರಾಧಾರಾಣಿಯ ಕುದುರೆಯು ಚಿಮ್ಮಿ ಹಾರಿತು ಆ ಸಮಯದಲ್ಲಿ ಹರಿಪಂತನಿಂದ ರಾಧಾರಾಣಿಯ ಪ್ರಾಣವು ಉಳಿಯಿತೋ, ರಾಧಾರಾಣಿಯ ಅಶ್ವಪುತ್ರನಿಂದ ಉಳಿಯಿತೋ, ಹೇಳಲಾಗುವುದಿಲ್ಲ. ಹರಿಪಂತನು "ರಾಣಿಯವರೇ! ಮಹಾರಾಷ್ಟ್ರರು ಸ್ತ್ರೀಯರ ಮೇಲೆ ಕೈ ಎತ್ತುವುದಿಲ್ಲ.

ಎಂದು ಹೇಳಿ ಕುದುರೆಯನ್ನು ಅಡ್ಡಲಾಗಿ ತಿರುಗಿಸಿ ಮತ್ತೊಂದು ಕಡೆಗೆ ಹೋದನು ರಾಧಾರಾಣಿಯು ಕತ್ತಿಯನ್ನೆತ್ತಿ ಷಂತನಿಗೆ ಮುಜರೆ ಮಾಡಿ ವಾಮಪಾರ್ಶ್ವಕ್ಕೆ ಸರಿದಳು ಅಷ್ಟರಲ್ಲಿ ಮಹಾರಾಷ್ಟ್ರ ಸೈನ್ಯವು ಹಿಮ್ಮೆಟ್ಟಿತು ಹಿಂದೂಸೈನ್ಯ ಪರಿವೃತಳಾದ ಕ್ಷಾತ್ರತೇಜೋವಿರಾಜಮಾನಳಾದ ರಾಧಾರಾಣಿಯ ಎದುರಿನಲ್ಲಿ ನಿಂತು ಯುದ್ಧ ಮಾಡಲೊಲ್ಲದೇ ಮಹಾರಾಷ್ಟ್ರ ವೀರರು ಹಿಂದಿರುಗಿದರು ಸೂರ್ಯದೇವನು ಅಸ್ತಾಚಲವನ್ನು ಸೇರಿದನು ರಾಧಾರಾಣಿಯು ತನ್ನ ಸೈನ್ಯವನ್ನು ಹಿಂದಿರುಗಿಸಿ ದೌಲತ್ತಳನ್ನು, ಇಯುಜ್‌ಖಾನನನ್ನು ಅರಸುತಾ ಹೊರಟಳು

ದೂರದಲ್ಲಿ ಫಿರಂಗಿಗಳ ಶಬ್ದಗಳು, ಬಂದೂಕಗಳ ಶಬ್ದಗಳು ಕೇಳಿ ಬರುತ್ತಿತ್ತು ರಾಧಾರಾಣಿಯು ಕುದುರೆಯನ್ನು ಅತ್ತಕಡೆಗೆ ನಡೆಸಿದಳು

ಇಯುಜ್‌ಖಾನನು ಇಂಗ್ಲೀಷರ ದಂಡಿನೊಂದಿಗೆ ಪರಾಕ್ರಮದಿಂದ ಹೋರಾಡುತ್ತಿದ್ದನು ದೌಲತ್ತಳು ಅವನ ಜೊತೆಯಲ್ಲೇ ಇದ್ದಳು ಒಂದೊಂದು ಬಾರಿ ದೌಲತ್ತಳ ಕೃಪಾಕಟಾಕ್ಷವು ಬಿದ್ದರೆ ಇಯಜ್‌ಖಾನನು ಹತ್ತು ಪಾಲು ಪರಾಕ್ರಮದಿಂದ ಶತೃಗಳನ್ನು ವಧೆ ಮಾಡುತ್ತಿದ್ದನು ದೌಲತ್ತಳು ಇಯಜ್‌ಖಾನನ ಮೇಲೆ ಮಂದಹಾಸವನ್ನು ಬೀರಿದರೆ ಅವನ ಆಯಾಸವೆಲ್ಲವೂ ಪರಿಹಾರವಾಗಿ ಆ ರಣದಲ್ಲಿ ಶ್ರೀಕೃಷ್ಣ ಉತ್ತೇಜಿತನಾದ ಸವ್ಯಸಾಚಿಯಂತೆ ನುಗ್ಗುತ್ತಿದ್ದನು ಭಗವದಿಚ್ಛೆಯಲ್ಲಿ ಇಂದಿನ ಜಯವು ಇಯುಜ್‌ಖಾನನದಾಗಿತ್ತು ಕತ್ತಲೆಯು ಮುಸುಕುತ್ತಬಂದಹಾಗ ಇಂಗ್ಲೀಷರ ದಂಡು ಹಿಮ್ಮೆಟ್ಟುತ್ತಿತ್ತು ನಗರದ ದಂಡು ಬಹುದೂರ ಫಿರಂಗಿಗಳನ್ನು ಅಟ್ಟಿಸಿಕೊಂಡುಹೋಯಿತು

ಇಯಜ್‌ಖಾನನು ನಗುತ್ತಾ ಕುದುರೆಯನ್ನು ಹಿಂದಕ್ಕೆ ತಿರುಗಿಸಿದನು ದೌಲತ್ತಳು ಪಕ್ಕದಲ್ಲಿ ಬಂದು ನಿಂತಳು ಇಯಜ್‌ಖಾನನು ಕುದುರೆಯಿಂದ ಇಳಿದನು ದೌಲತ್ತಳು ಖಾನನನ್ನು ಆ ರಣಭೂಮಿಯಲ್ಲಿ ಆ ಪಾಳಯಗಾರರ ಮಧ್ಯದಲ್ಲಿ ಉನ್ಮತ್ತಳಾಗಿ ಆಲಿಂಗಿಸಿ ಚುಂಬಿಸಿದಳು

ಖಾನನಿಗ ಕಣ್ಣು ಕತ್ತಲ್ಲಿಟ್ಟಿತು, ತಲೆ ತಿರುಗಲಾರಂಭಿಸಿತು ಅವನ ಶರೀರವು ಭೂಮಿಯಮೇಲೆ ನಿಲ್ಲಲಾರದ ಒಂದು ಕಡೆಗೆವಾಲಿತು ಮುಖದಲ್ಲಿ ಮಾತ್ರ ಮಂದಹಾಸವು ಬೆಳಗುತ್ತಿತ್ತು ಪಾಳಯಗಾರರು ಇಯಜ್‌ಖಾನನನ್ನು ಹಿಡಿದುಕೊಂಡರು ಇಯಜ್‌ಖಾನನಿಗೆ ಸಂಪೂರ್ಣಜ್ಞಾನವಿರಲಿಲ್ಲ ಅರ್ಧಜ್ಞಾನವಿತ್ತು ಆ ಪಾಳಯಗಾರರು ಇಯಜ್‌ಖಾನನನ್ನು ಭೂಮಿಯ ಮೇಲೆ ಮಲಗಿಸಿದರು. ಗಾಳಿ ಬೀಸತೊಡಗಿದರು ಇಯಜ್‌ಖಾನನು ನಗುತ್ತಾ ಇಂದಿನ ಯುದ್ಧವು ನಮಗೆ ಜಯವಾಗಿದೆ ಎಂದನು ಪಾಳಯಗಾರರು ಹೌದು ! ಖಾನರವರೇ ! ತಮಗೆ ಪೆಟ್ಟು ತಗುಲಿದೆಯೇ ? ಎಂದು ಕೇಳಿದರು. ಇಲ್ಲ ! ಒಂದೆರಡು ಗುಂಡಿನೇಟುಗಳು ತಗಲಿರ

ಬಹುದು ಬಹಳ ಆಯಾಸವಾಗಿದೆ ಎಂದು ಹೇಳಿದನು ಹಾಗೆಯೇ ಪುನಃ ಮೂರ್ಛೆಯು ಬಂದಿತು ಅಲ್ಲಿ ಪಂಜಿನ ದೀವಟಿಗೆಗಳಿತ್ತು ಆ ಗುರ್ತು ಹಿಡಿದು ಬಹು ದೂರದಿಂದ ರಾಧೆಯು ಕುದುರೆಯ ಮೇಲೆ ಬಂದಳು ವೇಗವಾಗಿ ಬರಲು ಸಾಧ್ಯವಾಗಲಿಲ್ಲ ಮಧ್ಯೆ ಮಧ್ಯೆ ಪೆಟ್ಟು ತಿಂದ ಸೈನಿಕರು ಆರ್ತನಾದ ಮಾಡುತ್ತಾ ಬಿದ್ದಿದ್ದರು. ಶವಗಳು ರಾಶಿರಾಶಿಯಾಗಿ ಬಿದ್ದಿದ್ದಿತು ರಾಣಿಯು ದೀವಟಿಗೆಗಳಿದ್ದ ಸ್ಥಳಕ್ಕೆ ಬಂದಳು ಸುತ್ತಲೂ ಪಾಳಯಗಾರರು ನಿಶ್ಶಬ್ದವಾಗಿ ನಿಂತಿದ್ದರು ಮಧ್ಯದಲ್ಲಿ ದೌಲತ್ತಳು ಇಯಜ್‌ಖಾನನ ತಲೆಯನ್ನು ತನ್ನ ತೊಡೆಯಮೇಲಿಟ್ಟುಕೊಂಡು ಎವೆಯಿಕ್ಕದೇ ನೋಡುತ್ತಾ ಕುಳಿತಿದ್ದಳು ರಾಧಾರಾಣಿಯು ಕುದುರೆಯಿಂದ ಇಳಿದು ಸಮೀಪಕ್ಕೆ ಹೋಗಿ ಇಯಜ್‌ಖಾನನ ಮುಖದ ಮೇಲೆ ಬೆರಳಿಟ್ಟು ನೋಡಿದಳು. ಶ್ವಾಸವು ಸರಿಯಾಗಿ ಆಡುತ್ತಿತ್ತು ಅರೆಗಣ್ಣು ಮುಚ್ಚಿತ್ತು ಸ್ವಲ್ಪ ಹೊತ್ತಿನಲ್ಲಿ ಖಾನನು ಕಣ್ಣು ತೆರೆದನು ದೌಲತ್ತಳ ಮುಖವನ್ನು ನೋಡಿ ನಕ್ಕನು ರಾಧೆಯ ಕಡೆಗೆ ದೈನ್ಯ ದೃಷ್ಟಿಯನ್ನು ಬೀರಿದನು

"ದಾಹ! ದಾಹ!" ಎಂದು ಕಿರುಧ್ವನಿಯಿಂದ ಹೇಳಿದನು ರಾಧೆಯು ಕುದುರಯ ಮೇಲಿಂದ ನೀರಿನ ತಿತ್ತಿಯನ್ನು ತಂದಳು ದೌಲತ್ತಳು ಬೊಗಸೆ ತುಂಬಾ ನೀರು ತುಂಬಿದಳು ದೌಲತ್ತಳು ಇಯಜ್‌ಖಾನನ ಬಾಯಿಯಲ್ಲಿ ನೀರೆರೆದಳು ತಲೆಯ ಮೇಲೆ ನೀರು ಎರಚಿತಳು ಇಯಜ್‌ಖಾನನಿಗೆ ಪುನಃ ಜ್ಞಾನ ಬಂತು. "ದೌಲತ್! ಏನೂ ಆಗಿಲ್ಲ ಸ್ವಲ್ಪ ಹೊತ್ತಿನಲ್ಲಿ ಏಳುವ ಚೈತನ್ಯ ಬರುತ್ತದೆ" ಎಂದನು. ಎಲ್ಲರಿಗೂ ಸಮಾಧಾನವಾಯಿತು ಇಷ್ಟು ಹೊತ್ತಿಗೆ ರಾತ್ರಿ 11 ಗಂಟೆಯಾಯಿತು. ಪಾಳಯಗಾರರು ಪಲ್ಲಕ್ಕಿಯನ್ನು ತರಿಸಬೇಕೆಂದೂ, ಇಯಜ್‌ಖಾನರನ್ನು ಪಾಳಯಕ್ಕೆ ಕರೆದುಕೊಂಡು ಹೋಗಬೇಕಂದೂ, ಆಲೋಚಿಸಿದರು ಅಷ್ಟು ಹೊತ್ತಿಗೆ ರಾತ್ರಿ 12 ಗಂಟೆಯಾಯಿತು ಪಲ್ಲಕ್ಕಿಯೂ ಸಿದ್ಧವಾಯಿತು

ಅಷ್ಟರಲ್ಲಿ ಹತ್ತಾರು ಕುದುರೆಸವಾರರು ದೀವಟಿಗೆಗಳನ್ನು ಹಿಡಿದು ಕೊಂಡು ದೂರದಲ್ಲಿ ಬರುತ್ತಿದ್ದರು. ಆ ದೀವಟಿಗೆಗಳವರು ಈ ದೀಪವಿರುವ ಸ್ಥಳವನ್ನು ನಿರ್ದೇಶಿಸಿ ಬಂದರು ಅವರು ಸಮೀಪಕ್ಕೆ ಬರುತ್ತಲೇ ಪಾಳಯಗಾರರು ಒರೆಗಳಿಂದ ಕತ್ತಿಯನ್ನು ಹಿರಿದರು ಅಷ್ಟರಲ್ಲಿ ಕುದುರಯಿಂದ ಸ್ವಯಂ ಸುಲ್ತಾನರು ಇಳಿದರು ಮೊದಲು ರಾಧಾರಾಣಿಯು ಅವರನ್ನು ನೋಡಿದಳು. "ಸುಲ್ತಾನರವರೇ, ನಮ್ಮ ಸಮಾಚಾರವು ನಿಮಗೆ ಹೇಗೆ ತಿಳಿಯಿತು ಈ ಅರ್ಧರಾತ್ರಿಯಲ್ಲಿ ಇಲ್ಲಿಗ ಹೇಗೆ ಬಂದಿರಿ" ಎಂದು ಕೇಳಿದಳು.

ಸುಲ್ತಾನನು ಮಾತನಾಡಲಿಲ್ಲ ಗಾಬರಿಯಿಂದ ಮುಂದೆ ನುಗ್ಗಿ ಭೂಮಿಯ ಮೇಲೆ ಮಲಗಿರುವ ಶರೀರವನ್ನು ನೋಡಿದನು. ಕುಳಿತಿರುವ ದೌಲತ್ತಳನ್ನು ನೋಡಿ

ದನು ಶೋಕವಿಹ್ವಲನಾಗಿ ಸಮೀಪಕ್ಕೆ ಹೋಗಿ ಇಯಜ್‌ಖಾನನ ಕೈಗಳನ್ನು ಹಿಡಿದು ಕೊಂಡನು ಸುಲ್ತಾನರ ಎದೆಯು ಬಡಿದುಕೊಳ್ಳುತ್ತಿತ್ತು

ಸುಲ್ತಾನನಿಗೆ ಇಯಜ್‌ಖಾನನ ಪ್ರಾಣವು ಉಳಿದಿದೆಯೆಂದು ತೋರಲಿಲ್ಲ ಹೆದರುತ್ತ ಹದರುತ್ತ ಏನಾಗಿದೆ ಎಂದು ಕೇಳಿದನು

ದೌಲತ್ತಳು ಯುದ್ಧದಲ್ಲಿ ಆಯಾಸವಾಗಿದೆ ಅರ್ಧಜ್ಞಾನಾವಸ್ಥೆ ಎಂದಳು.

ಸುಲ್ತಾನನಿಗೆ ಪ್ರಾಣವು ಬಂದಹಾಗಾಯಿತು

ಸುಲ್ತಾನನು ಪಕ್ಕದಲ್ಲಿ ಹೋಗಿ ಕುಳಿತನು ಇಯಜ್‌ಖಾನನ ತಲೆ ಸವ ದನು ಖಾನನು ಪುನಃ ಕಣ್ಣು ಬಿಟ್ಟು ನೋಡಿದನು ಸುಲ್ತಾನರನ್ನು ನೋಡ. ತ್ತಲೇ ಖಾನನಿಗೆ ಚೈತ್ಯನ್ಯ ಬಂದ ಹಾಗಾಯ್ತು

ಸುಲ್ತಾನರೇ ! ಈ ದಿನದ ಯುದ್ಧವು ಜಯವಾಗಿದೆ ಇನ್ನೆರಡು ಯುದ್ಧಗಳಲ್ಲಿ ಶತೃಗಳ ದಂಡು ನಿರ್ನಾಮವಾಗುತ್ತದ

ಸುಲ್ತಾನನು ಗದ್ಗದ ಧ್ವನಿಯಿಂದ ಖಾನರವರೇ, ನನ್ನ ಅಪರಾಧಗಳನ್ನು ಮನ್ನಿಸಿರಿ ಎಂದು ಹೇಳಿದನು

ಖಾನನು ಸುಲ್ತಾನನನ್ನುಬಾಚಿ ತಬ್ಬಿಕೊಂಡನು ಖಾನನ ಎದೆ ಉಬ್ಬಿಬಂದಿತು ಪುನಃ ಮೂರ್ಛಾವಸ್ಥೆಯು ಬಂದಿತು ಬಹಳ ವೇದನಯಿಂದ ಕೊರಗುವ ಧ್ವನಿ ಕೇಳಿಸಿತು

ಸುಲ್ತಾನನು ಖಾನನ ಕವಚವನ್ನು ಸಡಿಲ ಮಾಡಿದನು. ಪಾರ್ಶ್ವದಿಂದ ರಕ್ತವ ಹರಿಯುತ್ತಿತ್ತು ಅಲ್ಲಿ ಕೈಯಿಟ್ಟು ನೋಡಿದನು ಕೈಯ್ಯೆಲ್ಲಾ ರಕ್ತವಾಯಿತು ಸುಲ್ತಾನನು ಚಿಟ್ಟನೆ ಅರಚಿದನು ಅಷ್ಟರಲ್ಲಿ ಖಾನನು ಪುನಃ ಕಣ್ಣುಬಿಟ್ಟು ನೋಡಿ ದನು ನಕ್ಕನು ! ಪ್ರಾಣವಾಯುವು ಹಾರಿಹೋಯಿತು

ಸುಲ್ತಾನನು ಸಣ್ಣ ಬಾಲಕನಂತೆ ಗಟ್ಟಿಯಾಗಿ ಅಳತೊಡಗಿದನು ಖಾನನ ಶರೀರದ ಮೇಲೆ ಬಿದ್ದು ಹೊರಳಾಡಿದನು ಮೈಸೂರು ಮಣ್ಣುಪಾಲಾಯಿತು ! ಎಂದು ದೀರ್ಘ ನಿಶ್ವಾಸವನ್ನು ಬಿಟ್ಟನು ಒಂದು ಬಾರಿ ದೌಲತ್ತಳ ಮುಖವನ್ನು ನೋಡಿ ದನು ನೀರಸ! ರಾಧಾರಾಣಿಯ ಮುಖವನ್ನು ನೋಡಿದನು ನೀರವ!! ಸುತ್ತಲೂ ನಿಂತಿದ್ದ ಪಾಳಯಗಾರರ ಮುಖಗಳನ್ನು ನೋಡಿದನು. ನಿಸ್ತೇಜ!!! ಪುನಃ ದುಃಖವು ಬಂದು ಸುಲ್ತಾನನನ್ನು ಆವರಿಸಿತು ಸುಲ್ತಾನನು ಮೂರ್ಛಿತ ನಾದನು ಅರಮನೆಯಿಂದ ಪಲ್ಲಕ್ಕಿಯು ಬಂದಿತು ಮಂತ್ರಿಗಳು, ಸರದಾರರು ಸೇನಾನಾಯಕರು ಎಲ್ಲರೂ ಬಂದು ಸೇರಿದರು ದೌಲತ್ತಳೂ, ಸುಲ್ತಾನನೂ ಖಾನನ ಶರೀರವನ್ನೆತ್ತಿ ಪಲ್ಲಕ್ಕಿಯಲ್ಲಿಟ್ಟರು ಎಲ್ಲರೂ ಪಲ್ಲಕ್ಕಿಯ ಮುಂದೆ ಮೌನವಾಗಿ ನಡೆದರು. ಕಾವೇರಿಯ ದಂಡೆಗೆ ಪಲ್ಲಕ್ಕಿಯು ತಲಪಿತು. ಅಲ್ಲಿ ಸುಲ್ತಾನನೇ ಖಾನನ

ಶರೀರವನ್ನು ಭೂಮಿಯಲ್ಲಿಟ್ಟು ಗೋರಿ ಮಾಡಿದನು ಮೌನಮುದ್ರೆಯನ್ನು ಒಡೆಯಲಿಲ್ಲ ಬೆಳಗಿನ ಝಾವದ ಕೋಳಿ ಕೂಗಿತು ತೋಪುಖಾನೆಯಲ್ಲಿ ಗುಂಡುಗಳಾಯಿತು ಸುಲ್ತಾನನು ದುಃಖದಿಂದ ಅಳುತ್ತಾ ಎಲ್ಲರಿಗೂ ಕೈ ಮುಗಿದು ತನ್ನನ್ನು ಏಕಾಂತವಾಗಿ ಅಲ್ಲಿಯೇ ಬಿಟ್ಟು ಹೋಗಬೇಕೆಂದು ಪ್ರಾರ್ಥಿಸಿದನು ಎಲ್ಲರೂ ಹೊರಟುಹೋದರು ಸುಲ್ತಾನನು ಆ ಗೋರಿಯ ಸಮೀಪದಲ್ಲಿ ಪ್ರಲಾಪಿಸುತ್ತ ಕುಳಿತಿದ್ದನು ಸೂರ್ಯೋದಯವಾಯಿತು ದೌಲತ್ತಳೂ, ರಾಧಾರಾಣಿಯೂ ಸುಲ್ತಾನನಿಗೆ ಎಷ್ಟೋ ಸಮಾಧಾನ ಮಾಡಿ ಸುಲ್ತಾನನನ್ನು ಅರಮನೆಗೆ ಕರೆದುಕೊಂಡು ಹೋಗಿಬಿಟ್ಟರು

ಸುಲ್ತಾನನು ಆ ಗೋರಿಯನ್ನು ಬಿಟ್ಟು ಹೊರಡುವಾಗ ದೌಲತ್ತಳ ಮುಖವನ್ನು ದುರದುರನೆ ನೋಡಿದನು ದೌಲತ್ತಳು ಮೌನವಾಗಿ ನಿಂತಿದ್ದಳು ಕಣ್ಣುಗಳಲ್ಲಿ ಕಣ್ಣೀರು ತೊಟ್ಟಿಕ್ಕುತ್ತಿತ್ತು

ಸುಲ್ತಾನನು ದೌಲತ್ತಳ ಸಮೀಪಕ್ಕೆಹೋಗಿ ನಿಂತುಕೊಂಡು ದೌಲತ್ ನಾನು ಈ ಪವಿತ್ರವಾದ ಗೋರಿಯ ಸಾನ್ನಿಧ್ಯದಲ್ಲಿ ಒಂದು ಅಭೇದ್ಯವಾದ ರಹಸ್ಯವನ್ನರಿಯಬೇಕೆಂದಿದ್ದೇನೆ ಎಂದು ಗಂಭೀರಧ್ವನಿಯಿಂದ ಹೇಳಿದನು

ದೌಲತ್ತಳು ತಲೆದೂಗಿದಳು

ದೌಲತ್! ನೀನು ಈ ಇಯಜ್‌ಖಾನರನ್ನು ಮದುವೆಯಾಗಿದ್ದೆಯಾ ?

ಹೌದು ! ನಾನು ಇಯಜ್‌ಖಾನರ ಧರ್ಮಪತ್ನಿ

ದೌಲತ್ ! ಈ ರಹಸ್ಯವನ್ನು ಇಷ್ಟು ದಿನ ಬಚ್ಚಿಟ್ಟೆಯೇಕೆ ?

ಸುಲ್ತಾನರೇ, ಇಂದಿನವರಗೆ ಅದು ರಹಸ್ಯ ಪರಮ ರಹಸ್ಯ ಇಂದು ಅದು ಬಹಿರಂಗ ಅದೇ ನವಾಬರ ಇಚ್ಛೆ ಬಡಾಫಕೀರರ ಆಜ್ಞೆ !

ಸುಲ್ತಾನನು ತಲೆಬಾಗಿದನು

## ಘೋರರಾತ್ರಿ

ಸುಲ್ತಾನನು ಅರಮನೆಯಲ್ಲಿ ದುಃಖಾಕ್ರಾಂತನಾಗಿ ಕುಳಿತಿದ್ದನು ಇಯಜ್‌ಖಾನನ ಮರಣಾನಂತರ ಪುನಃ ಯುದ್ಧವಾಗಲಿಲ್ಲ ಇಂಗ್ಲೀಷರು ಇದ್ದಲ್ಲಿಯೇ ಬೀಡುಬಿಟ್ಟುಕೊಂಡು ಬಲಾಬಲಗಳನ್ನು ಲೆಕ್ಕ ಹಾಕುತ್ತಿದ್ದರು ಸುಲ್ತಾನನು ಇಯಜ್‌ಖಾನನ ದುಃಖದಲ್ಲಿ ಮುಳುಗಿ ದಿಕ್ಕು ತೋಚದೆ ಚಿಂತಾಕ್ರಾಂತನಾಗಿದ್ದನು ದುಃಖ, ಕ್ರೋಧ, ದ್ವೇಷಗಳು ಟಿಪ್ಪೂಸುಲ್ತಾನನ ಹೃದಯದಲ್ಲಿ ತುಂಬಿ ಅಗ್ನಿಯನ್ನು ಕಾರುತ್ತಿದ್ದವು ಸುಲ್ತಾನನ ಸಮ್ಮುಖಕ್ಕೆ ಹೋಗಲು ಯಾರಿಗೂ ಧೈರ್ಯವಿರಲಿಲ್ಲ ಮಂತ್ರಿಗಳು ಸುಲ್ತಾನರ ಸನ್ನಿಧಿಗೆ ಹೋಗುತ್ತಿರಲಿಲ್ಲ ಸಂಧ್ಯಾಕಾಲದ ಸಮಯ ಸೂರ್ಯಾಸ್ತ

ಹೂನವಾಗುವ ಹೊತ್ತು. ಆ ಸಮಯದಲ್ಲಿ ಮೀರ್‌ಸಾದಕನು ಬಂದು ಸುಲ್ತಾನನ ಭೇಟಿ ಮಾಡಿದನು.

ಸುಲ್ತಾನನು ಮಾತನಾಡಲಿಲ್ಲ ಸ್ವಲ್ಪ ಹೊತ್ತಾದ ಮೇಲೆ ಮೀರ್‌ಸಾದಕನ ಕಡೆ ತಿರುಗಿ,

ಸಿದ್ದಿಕ್, ಎಲ್ಲಿಂದ ಬಂದೆ, ಎಲ್ಲಿಗೆ ಹೋಗಿದ್ದೆ, ಏನು ಸಮಾಚಾರ ?

ಹುಜೂರು ! ಶತ್ರು ಶಿಬಿರಕ್ಕೆ ಹೋಗಿದ್ದೆ, ಅಲ್ಲಿಯೇ ಇದ್ದೆ ನಗರದ ನವಾಬರ ಮರಣವಾರ್ತೆಯನ್ನು ಕೇಳಿ ಗಾಬರಿಗೊಂಡು ಸನ್ನಿಧಾನಕ್ಕೆ ಬಂದೆ

ಸಿದ್ದಿಕ್ ! ಖಾನರಂಥಾ ಪರಾಕ್ರಮಶಾಲಿಗಳನ್ನು ನಾನು ಕಂಡು ಕೇಳಿಲ್ಲ ಅವರು ರಣಕ್ಷೇತ್ರದಲ್ಲಿ ಅಸಮಸಾಹಸದಿಂದ ಯುದ್ಧ ಮಾಡಿದರು. ಇಂಗ್ಲೀಷರ ಅರ್ಧ ಸೈನ್ಯವನ್ನು ಬಲಿ ತೆಗೆದುಕೊಂಡರು ಕೊನೆಗೆ ಮೃತ್ಯುದೇವತೆಯು ನವಾಬರನ್ನೇ ಬಲಿ ತೆಗೆದುಕೊಂಡಿತು

ಜಹಾಪನಾ, ನಗರದ ನವಾಬರು ಜೀವಂತರಾಗಿದ್ದಿದ್ದರೆ ಈ ಯುದ್ಧಗಲ್ಲಿ ನಮಗೆ ಜಯವಾಗುತ್ತಲೇ ಇದ್ದಿತು ಭಗವಂತನ ಇಚ್ಛೆಯು ಹೇಗಿದೆಯೋ ? ಇದುವರೆಗೂ ನಮಗೆ ಒಂದು ಯುದ್ಧದಲ್ಲಿಯೂ ಜಯವಿಲ್ಲ ಇದೊಂದೇ ಜಯವು ನಮ್ಮ ಪಾಲಿಗೆ ಬಂದುದು ಖಾವಿಂದ್, ಶತ್ರು ಸೈನ್ಯವೆಲ್ಲಾ ಅಲ್ಲಕಲ್ಲೋಲವಾಗಿ ಹೋಗಿದೆ ಶ್ರೀರಂಗ ಪಟ್ಟಣದ ಈ ಮಹಾಸೈನ್ಯದ ಎದುರಿನಲ್ಲಿ ನಿಲ್ಲಲು ಅವರಿಗೆಲ್ಲಿ ಧೈರ್ಯವಿದೆ. ಆದರೆ ಒಳಸಂಚು, ಘೋರವಾದ ಒಳಸಂಚು ನಡೆದಿದೆ

ಸುಲ್ತಾನರು ಕೋಪದಿಂದ ಘರ್ಜಿಸುತ್ತಾ, ಛೀ! ವಿಶ್ವಾಸಘಾತುಕನೇ, ಹೊರಗೆ ಹೋಗು, ನಿನಗೆ ಮಾನವಿದೆಯೇ? ನೀನು ನಮ್ಮ ಎದುರಿನಲ್ಲಿ ಮುಖ ತೋರಿಸಬೇಡ ಯಾವಾಗಲೂ ದ್ರೋಹಿ ನೀನು, ಒಳಸಂಚು. ಒಳಸಂಚು, ಯಾರು ಒಳಸಂಚು ಮಾಡಿದವರು, ಸಾಬೀತು ಮಾಡಿಕೊಡು, ಇಲ್ಲದಿದ್ದರೆ ನಿನ್ನ ತಲೆ ಹೊಡೆಸಿ ಹಾಕುತ್ತೇನೆ

ಹಜ್ರಾಪಹಾ, ಮಾಫ್ ಮಾಡಬೇಕು, ದಾಖಲೆಗಳು ಇಲ್ಲಿವೆ, ಸ್ವೀಕರಿಸೋಣವಾಗಲಿ ಎಂದು ಹೇಳಿ ಕಿಸೆಯಿಂದ ಲಕ್ಕೋಟೆಯನ್ನು ತೆಗೆದು ಸುಲ್ತಾನರ ಕೈಗೆ ಒಪ್ಪಿಸಿದನು ಸುಲ್ತಾನನು ಆ ಕಾಗದಗಳನ್ನು ಕೈಗೆ ತೆಗೆದುಕೊಂಡು ಓದಿ ನೋಡಿದನು, ಪುನಃ ಓದಿದನು, ಮತ್ತೊಮ್ಮೆ ಓದಿದನು ದೀರ್ಘನಿಶ್ವಾಸವನ್ನು ಬಿಟ್ಟು, ಕೆಂಪೇರಿದ ಕಣ್ಣುಗಳಿಂದ ಕೋಪವನ್ನು ಕಾರುತ್ತಾ, ಕಟಕಟನೆ ಹಲ್ಲು ಕಡಿಯುತ್ತಾ, "ಹರಾಂ ಖೋರರುಗಳಿರಾ ? ಎಂತಹ ಪಾಪಿಗಳು ನೀವು ದೊಡ್ಡ ನವಾಬರ ಕಾಲದಿಂದ ನಮ್ಮ ಉಪ್ಪುಂಡ ನೀವು ಶತ್ರುಗಳ ಬಲೆಗೆ ಬಿದ್ದಿರಾ ?" ಎಂದು ಘರ್ಜಿಸಿದನು.

ಹೊರಗೆ ಕಾವಲಿದ್ದ ಅವಸರದವನನ್ನು ಕರೆದು ಅಂಗರಕ್ಷಕ ದಳದ ನಾಯಕ

ನಾದ ಅಹಮದ್‌ಖಾನನನ್ನು ಕರೆಸಿದನು ಫೌಜುದಾರ್ ಅಹಮದ್‌ಖಾನನು ಸನ್ನಿಧಾನಕ್ಕೆ ಬಂದು ಮುಜರೆ ಮಾಡಿ ನಿಂತನು

ಸುಲ್ತಾನನು, ವೀರವಾಣಿಯಿಂದ ಅಹಮದ್‌ಖಾನಿಗೆ ಅಪ್ಪಣೆ ಮಾಡಿದನು ಮಧುಗಿರಿಯ ಸುಲ್ತಾನ್‌ಖಾನ್, ಮಂಜರಾಬಾದಿನ ದಿಲಾರ್‌ಖಾನ್, ಚನ್ನಪಟ್ಟಣದ ನೊಹಯುದ್ದೀನ್, ಹಾಸನದ ಅಬ್ದುಲ್‌ಸತ್ತಾರ್, ಡಿಂಡಿಗಲ್ಲಿನ ಮೀರ್‌ಹುಸೇನ್, ಮಂಗಳೂರಿನ ಮಹಮ್ಮದ್‌ಬೇಗ್, ವೆಲ್ಲೂರಿನ ರಣದುಲ್ಲಾಖಾನ್, ನಾಮಕಲ್ಲಿನ ಅಬ್ದುಲ್ ಕರೀಂಖಾನ್, ಸೇಲಂನ ಬಹದ್ದೂರ್‌ಖಾನ್, ಮಳವಳ್ಳಿಯ ನೂರ್ ಅಹಮದ್, ಮಾಗಡಿಯ ಮಹಮದ್ ರುಸ್ತುಂ, ಚಂದಗಾಲದ ನಜಿರುಲ್ಲಾ ಮಿಯಾನ್‌ಖಾನ್, ಕೊಳ್ಳೇಗಾಲದ ಹದಯತುಲ್ಲಾಖಾನ್, ಕಿಲ್ಲೆಯ ಮೀರ್ ಮುತಜ್‌ಖಾನ್, ಈ ಹದಿನಾಲ್ಕು ಮಂದಿ ಸೇನಾನಾಯಕರನ್ನು ನಮ್ಮ ಸಮ್ಮುಖಕ್ಕೆ ಹಾಜರ್ಮಾಡತಕ್ಕದ್ದು ಮಂತ್ರಿಗಳನ್ನೂ ಸರದಾರರನ್ನೂ ದರಬಾರಿಗೆ ತಕ್ಷಣ ಬರಮಾಡತಕ್ಕದ್ದು ಎಂದು ಸುಲ್ತಾನನು ಅಪ್ಪಣೆ ಮಾಡಿದನು

ಸುಲ್ತಾನರ ಅಪ್ಪಣೆಯಂತೆ ದರಿಯಾದೌಲತ್ತಿನಲ್ಲಿ ಅವಸರದ ಸಭೆ ನೇರಿತು ಮಂತ್ರಿಗಳೂ ಸರದಾರರು ಎಲ್ಲರೂ ಸಭೆಯನ್ನು ಅಲಂಕರಿಸಿದರು ಸುಲ್ತಾನರವರು ಬಂದು ಆಸನವನ್ನಲಂಕರಿಸಿದರು ಫೌಜುದಾರ್ ಮಹಮುದ್‌ಖಾನರವರು ಸುಲ್ತಾನರ ಅಪ್ಪಣೆಯಂತೆ ಹದಿನಾಲ್ಕು ಮಂದಿ ಸೇನಾನಾಯಕರನ್ನು ಕರೆತಂದು ಸಮ್ಮುಖದಲ್ಲಿ ನಿಲ್ಲಿಸಿದರು

ಸುಲ್ತಾನರವರು ಕ್ರೋಧಾವೇಶದಿಂದ ಶ್ರೀರಂಗಪಟ್ಟಣದ ಸೇನಾನಾಯಕರುಗಳಿರಾ ? ಈ ದರಬಾರಿನಲ್ಲಿ ನಿಮ್ಮಗಳ ವಿಚಾರಣೆಯಾಗಬೇಕಾಗಿದೆ ನೀವುಗಳು ಈ ದರಬಾರಿಗೆ ಮಹತ್ತರವಾದ ದ್ರೋಹ ಮಾಡಿದ್ದೀರಿ ಮೈಸೂರಿನ ಸೈನ್ಯಕ್ಕೆ ಇದುವರೆಗ್ನ ಸೋಲಿನ ಮೇಲೆ ಸೋಲಾಗಿರುವುದರ ಗುಟ್ಟು ಈಗ ಬಯಲಾಯಿತು ನಿಮ್ಮಗಳನು ಗಲ್ಲಿಗೇರಿಸಬೇಕು, ಎಂದು ಘರ್ಜಿಸಿದನು

ತರುಣ ಸೇನಾಧಿಪತಿಯಾದ ಮೀರ್ ಹುಸೇನ್‌ಖಾನನು ಧೈರ್ಯ ಮಾಡಿ ಹುಜೂರು. ಮಾಫ್ ಮಾಡಬೇಕು, ಯಾರೋ ಚಾಡಿಕೋರರು ಖಾವಿಂದರ ಸನ್ನಿಧಿಯಲ್ಲಿ ಸುಳ್ಳು ಹೇಳಿದಾರೆ, ಅವರನ್ನು ಈ ದರಬಾರಿಗೆ ಕರೆತರಿಸಿ ಸಾಬೀತು ಮಾಡಿಸಬೇಕು.

ಸುಲ್ತಾನ್—ಮುಚ್ಚು ಬಾಯಿ, ನಾಲಿಗೆಯನ್ನು ಸೀಳಿಸುತ್ತೇನೆ, ನೋಡು. ಈ ಪತ್ರಗಳನ್ನು, ನೋಡು ದಾಖಲೆಗಳು ಇಲ್ಲಿವೆ, ಇವುಗಳೆಲ್ಲಾ ನೀವು ಒಬ್ಬೊಬ್ಬರಾಗಿ ಕುಂಪಣಿಯವರಿಗೆ ಬರದ ಪತ್ರಗಳು ಎಂದು ಆ ಗುಪ್ತ ಪತ್ರಗಳನ್ನು ದರಬಾರಿನಲ್ಲಿ ಎಸೆದನು.

ಮಂತ್ರಿ ಪೂರ್ಣಯ್ಯನವರೆದ್ದು ಆ ಪತ್ರಗಳನ್ನು ಆರಿಸಿ ಕೈಗೆ ತೆಗೆದುಕೊಂಡರು ಅವುಗಳನ್ನು ಮನಸ್ಸಿನಲ್ಲಿಯೇ ಓದಿಕೊಂಡರು, ಅವರ ಮುಖವು ವಿವರ್ಣವಾಯಿತು

ಸುಲ್ತಾನ್—ಮಹಾಮಂತ್ರಿಗಳೇ, ಅವುಗಳೆಲ್ಲಾ ಈ ಸೇನಾಧಿಪತಿಗಳ ಸ್ವಹಸ್ತಾಕ್ಷರಗಳೇ ತಾನೆ, ಈಗ ತಾವೇ ಹೇಳಿರಿ, ಈ ಪಾಪಿಗಳಿಗೆ ಶಿಕ್ಷೆಯೇನು ?

ದರಬಾರೆಲ್ಲವೂ ಬಚ್ಚಿ ಬಿದ್ದು ಹಾ ! ಹಾ ! ಕಾರ ಮಾಡಿದರು ದರಬಾರಿನ ಮೌಲ್ವಿಗಳು ಮುಂದೆ ಬಂದು ನಿಂತು ಮುಜರೆಮಾಡಿ ಹುಜೂರು ಇವರೆಲ್ಲರೂ ಉಪ್ಪುಂಡ ಮನಗೆ ಎರಡು ಬಗೆದ ಸ್ವಾಮಿ ದ್ರೋಹಿಗಳು ಇವರನ್ನು ತೋಪಿನ ಬಾಯಿಗೆ ಕಟ್ಟಿ ಕೊಲ್ಲಿಸಬೇಕು ಅದೇ ಇವರಿಗೆ ತಕ್ಕ ಶಿಕ್ಷೆ ಎಂದರು

ಸುಲ್ತಾನರು ಮಂತ್ರಿ, ಸರದಾರರ ಕಡೆ ತಿರುಗಿದರು ಎಲ್ಲರೂ ತಲೆದೂಗಿದರು

ಸುಲ್ತಾನ್—ಮಹಾಮಂತ್ರಿಗಳೇ, ತಮ್ಮ ಅಭಿಪ್ರಾಯವೇನು ? ಎಂದು ಕೇಳಿದರು

ಪೂರ್ಣಯ್ಯನವರೆದ್ದು ಕೈಮುಗಿದು ಸುಲ್ತಾನರವರೇ, ನನ್ನ ಮಾತನ್ನು ಆಲಿಸಬೇಕು ಈಗ ಯುದ್ಧದ ಸಮಯ, ಮುಕ್ತಾಯಕ್ಕೆ ಬರುತ್ತಿದ ವಿಜಯಲಕ್ಷ್ಮಿಯು ನಮ್ಮ ಕಡೆಗೆ ಒಲಿಯುತ್ತಿದಾಳೆ ಈ ಸೇನಾನಾಯಕರು ಮಹಾಪರಾಧ ಮಾಡಿದಾರೆ ಈಗ ಇವರ ತಪ್ಪನ್ನು ಮನ್ನಿಸಬೇಕು ಇವರನ್ನೇ ಈಗ ಯುದ್ಧಕ್ಕ ಕಳುಹಿಸಬೇಕು ಎಂದು ವಿನಯದಿಂದ ಬಿನ್ನೈಸಿದರು

ಸುಲ್ತಾನರು, ಅಪರಾಧಿಗಳಾದ ಸೇನಾನಾಯಕರ ಕಡ ತಿರುಗಿ ನೀವೇನು ಹೇಳುವಿರಿ ? ಈ ಗುಪ್ತಪತ್ರಗಳು ನಿಮ್ಮ ಸ್ವಹಸ್ತಾಕ್ಷರಗಳೆಂದು ಒಪ್ಪಿಕೊಳ್ಳುವಿರಾ ? ದಿಂಡಿಗಲ್ಲಿನ ಮೀರ್ ಹುಸೇನರವರು ಧೈರ್ಯದಿಂದ ಮುಂದೆ ಬಂದು ನೆಲಮುಟ್ಟಿ ಸಲಾಂ ಮಾಡಿ—

ಖಾವಂದರವರೇ, ಮಾಫ್‌ಮಾಡಬೇಕು, ಅವು ನಮ್ಮ ಪತ್ರಗಳೇ ಹೌದು ಒಂದೊಂದು ಸಮಯದಲ್ಲಿ ಹುಜೂರಿನ ಆಗ್ರಹಪಾತ್ರರಾಗಿದ್ದಾಗ ಪ್ರಲೋಭದಿಂದ ಒಬ್ಬೊಬ್ಬ ಸೇನಾಧಿಪತಿಗಳು ಬರೆದುಕೊಟ್ಟ ಪತ್ರಗಳು ಅವು ಅವುಗಳಿಗೆ ಏನೂ ಕಿಮ್ಮತ್ತಿಲ್ಲ ಈ ಸಮಯದಲ್ಲಿ ನಾವು ಹಣಾಹಣಿ ಯುದ್ಧ ಮಾಡಿದ್ದೇವೆ ಕುಂಪಣಿಯ ದಂಡು ಬರುತ್ತಿರುವ ಮಾರ್ಗದಲ್ಲಿ ಸೋಲಾದದು ನಮ್ಮ ಅಪರಾಧವಲ್ಲ ಅಲ್ಲಲ್ಲಿ ಅಧಿಕಾರ ನಡೆಸುತ್ತಿರುವ ಕಿಲ್ಲೇದಾರರು ಫೌಜುದಾರರುಗಳ ಅಪರಾಧವೇ ಅದು ಮಹಾಸ್ವಾಮಿ, ನಮ್ಮಗಳ ಅಪರಾಧವನ್ನು ಮನ್ನಿಸಿ ಅಪ್ಪಣೆ ಕೊಡೋಣವಾಗಲಿ, ನಾವು ನಮ್ಮ ಪ್ರಾಣಗಳನ್ನು ಪಣವಾಗಿಟ್ಟು ಶತ್ರುಗಳೊಡನೆ ಹೋರಾಡುವೆವು ಈ ಯುದ್ಧದಲ್ಲಿ ವಿಜಯವನ್ನು ಪಡೆಯದೇ, ನಾವು ಈ ಕೋಟೆಯೊಳಗೆ ಮುಖವನ್ನು ತೋರುವುದಿಲ್ಲ ಎಂದು ಪ್ರತಿಜ್ಞಾಪುರಸ್ಸರವಾಗಿ ನುಡಿದರು

ಮಂತ್ರಿಗಳೆಲ್ಲಾ ಅದಕ್ಕೆ ಒಪ್ಪಿಗೆಯನ್ನು ಸೂಚಿಸಿದರು ಸುಲ್ತಾನನು ಕ್ರೋಧ ದಿಂದ ಆಸನವನ್ನು ಬಿಟ್ಟು ಎದ್ದು ದ್ರೋಹಿಗಳಿರಾ ! ವಿಶ್ವಾಸಘಾತುಕರಾ ? ಸ್ವಾಮಿ ದ್ರೋಹಿಗಳಿರಾ ? ನಿಮ್ಮನ್ನು ಕ್ಷಮಿಸುವುದೇ ! ನಿಮ್ಮಂಥಾ ದ್ರೋಹಿಗಳನ್ನು ಪುನಃ ಯುದ್ಧ ಭೂಮಿಗೆ ಕಳಿಸುವುದೇ ? ನೀವುಗಳು ಒಂದು ಕ್ಷಣವೂ ಈ ಭೂಮಿಯಮೇಲೆ ಇರಕೂಡದು ನಾನೊಬ್ಬನೇ ಈ ರಣಕ್ಷೇತ್ರದಲ್ಲಿ ನಿಂತು ಯುದ್ಧವನ್ನುಜಯಿಸುತ್ತೇನೆ. ನೀವು ನರಕದಲ್ಲಿ ನಿಂತು ನೋಡುತ್ತಿರಿ ಎಂದು ಘರ್ಜಿಸಿದನು

ಅರಮನೆಯ ಮುಂಭಾಗದ ಅಂಗಳದಲ್ಲಿ ಹದಿನಾಲ್ಕು ತೋಪುಗಳನ್ನು ಕಟ್ಟಿ ಈ ಹದಿನಾಲ್ಕು ಮಂದಿ ಸೇನಾನಾಯಕರನ್ನು ಈ ರಾತ್ರಿಯೇ ಉಡಾಯಿಸಬೇಕೆಂದು ಕಟ್ಟಪ್ಪಣೆಮಾಡಿ ಕೋಪದಿಂದ ಘುಡಿಘುಡಿಸುತ್ತಾ ಸಭೆಯನ್ನು ಬಿಟ್ಟು ಹೊರಟು ಹೋದರು ಮಹಾಮಹಾ ಸರದಾರರೆಲ್ಲರೂ ವಿಷಣ್ಣವದನರಾಗಿ ಮನೆಗಳಿಗೆ ತೆರಳಿದರು

ಸುಲ್ತಾನರ ಅಪ್ಪಣೆಯಂತೆ ಅರಮನೆಯ ಮುಂಭಾಗದ ವಿಶಾಲವಾದ ಅಂಗಳ ದಲ್ಲಿ ದೊಡ್ಡ ದೊಡ್ಡ ದೀಪಗಳು ಉರಿಯುತ್ತಿದ್ದವು ಸುತ್ತಲೂ ಸುಲ್ತಾನರ ಖಾಸ್ ಸೈನ್ಯದ ಸೈನಿಕರೂ ಸೇನಾಧಿಕಾರಿಗಳೂ ಸುತ್ತುಕಟ್ಟಿ ಶಿಸ್ತಿನಿಂದ ನಿಂತರು. ತೋಪು ಖಾನೆಯಿಂದ ಹದಿನಾಲ್ಕು ತೋಪುಗಳನ್ನು ತಂದು ಮೈದಾನದಲ್ಲಿ ಎತ್ತಿಕಟ್ಟಿದರು. ರಣವಾದ್ಯಗಳು ಬಾರಿಸಲ್ಪಟ್ಟವು ವಧ್ಯಸ್ಥಾನದಲ್ಲಿ ಮೌಲ್ವಿಗಳೂ ಸರದಾರರೂ ಬಂದು ನಿಂತರು ಖಾಸ್ ಭಕ್ಷಿಯವರಾದ ಫೌಜುದಾರ್ ಮಹಮದ್ ಖಾನರು ಬಿಚ್ಚುಕತ್ತಿ ಸಹರೆಯಲ್ಲಿ ಹದಿನಾಲ್ಕು ಮಂದಿ ಸೇನಾನಾಯಕರನ್ನು ವಧ್ಯಸ್ಥಾನಕ್ಕೆ ಕರತಂದನು ಒಂದೊಂದು ತೋಪಿನ ಮುಂದೆ ಒಬ್ಬೊಬ್ಬ ಸೇನಾನಾಯಕರನ್ನು ಕಂಬಕ್ಕೆ ಕಟ್ಟಿ ಬಿಗಿದರು ಫೌಜುದಾರರು ಸ್ವಯಂ ಸುಲ್ತಾನರವರ ರಾಜಾಜ್ಞೆ ಯನ್ನು ಉಚ್ಚಕಂಠದಿಂದ ಒತ್ತಿ ಹೇಳಿದರು ರಣವಾದ್ಯಗಳು ಭೋರ್ಗರೆದವು. ಅಷ್ಟ ರಲ್ಲಿ ದೂರದಿಂದ ಒಂದು ಮಹಾಶ್ವವು ಓಡಿಬಂದು ವಧ್ಯಸ್ಥಾನದಲ್ಲಿ ನಿಂತಿತು. ಆ ಕುದುರೆಯ ಮೇಲಿನಿಂದ ಆಜಾನುಬಾಹುವಾದ ಭವ್ಯವಾದ ಬಿಳಿಯ ಗಡ್ಡದಿಂದ ಶೋಭಿಸುವ ತೇಜೋವಿರಾಜಮಾನವಾದ ಮಹಾಪುರುಷನೊಬ್ಬನು ಬಂದುನಿಂತನು. ಅವನ ದರ್ಶನದಿಂದ ಆ ಮೃತ್ಯುಲೋಕದಂತಿದ್ದ ವಧ್ಯಸ್ಥಾನವು ದೇವಲೋಕದಂತೆ ಪ್ರಕಾಶಮಾನವಾಯಿತು. ಎಲ್ಲ ಕಡೆಯೂ ನಿಶ್ಶಬ್ದ ಆ ಮಹಾಪುರುಷನನ್ನು ಕಾಣು ತ್ತಲೇ ಫೌಜುದಾರ್ ಮಹಮದ್‌ಖಾನನು ತಲೆಬಾಗಿ ವಂದಿಸಿದನು ಆ ದೇವಲೋ ಕದ ಪುರುಷನು ಮತ್ತಾರೂ ಅಲ್ಲ ಬಡಾಫಕೀರರೆಂದು ಎಲ್ಲರಿಗೂ ಅರಿವಾಯಿತು. ವಧ್ಯಸ್ಥಾನದಲ್ಲಿ ಬಂಧಿತರಾಗಿದ್ದ ಸೇನಾನಾಯಕರು ಬದುಕಿದೆವು' ಎಂಬ ಭಾವನೆ

ಯಿಂದ ಅರಳಿದ ಕಣ್ಣುಗಳಿಂದ ಆ ಮಹಾಪುರುಷನನ್ನು ನೋಡುತ್ತಾ ದೈನ್ಯದಿಂದ ಪ್ರಾಣಭಿಕ್ಷೆಯನ್ನು ಬೇಡಿದರು

ಬಡಾಫಕೀರರು ಅವರ ಕಡೆಗೆ ಮಂದಹಾಸವನ್ನು ಬೀರಿ ಫೌಜುದಾರ್ ಮಹಮದ್ ಖಾನನ ಕಡೆ ತಿರುಗಿ ಭಕ್ಷಿಯವರೇ ಇದೇನು ಕಾರ್ಯ? ಯಾರು ಅಪ್ಪಣೆ ಮಾಡಿದರು ಎಂದು ಕೇಳಿದರು.

ಭಕ್ಷಿಯವರು ಗಡಗಡನೆ ನಡುಗುತ್ತಾ ಖಾವಿಂದ್ ಇದು ಸುಲ್ತಾನರ ಖುದ್ದು ಹುಕ್ಕುಂ ಎಂದು ಹೇಳಿದರು

ಬಡಾಫಕೀರರು ಉಚ್ಚಕಂಠದಿಂದ ಖುದಾನ ಮೇಲೆ ಆಣೆ ಇದೆ ದೊಡ್ಡ ನವಾಬರ ಮೇಲಿನ ಆಣೆ ಇದೆ ಈ ಕಠೋರವಾದ ಆಜ್ಞೆಯನ್ನು ಜಾರಿಮಾಡಕೂಡದು ನಾನು ಇಲ್ಲಿಗೆ ಸುಲ್ತಾನರನ್ನು ಕರತಂದು ಇವರುಗಳಿಗ ದ[illegible]ಭಿಕ್ಷೆಯನ್ನು ಕೊಡಿಸುತ್ತೇನೆ. ನಾನು ಇಲ್ಲಿಗೆ ಬರುವವರೆಗೆ ಇಲ್ಲಿ ಒಂದು ಹುಲ್ಲುಕಡ್ಡಿ[illegible] ಅಲ್ಲಾಡಕೂಡದು ಎಂದು ಅಪ್ಪಣೆ ಮಾಡಿದರು ಅಲ್ಲಿಂದ ಸರಸರನೆ ಅರಮನೆಯನ್ನು ಪ್ರವೇಶಮಾಡಿದರು. ಟಿಪ್ಪೂಸುಲ್ತಾನರವರು ಇರುವ ಖಾಸ್ ಮಹಲನ್ನು ಪ್ರವೇಶ ಮಾಡಿದರು ಅಲ್ಲಿ ಕಟ್ಟಲ್ಪಟ್ಟಿದ್ದ ಎರಡು ಹುಲಿಗಳು ಪ್ರೀತಿಯಿಂದ ಗುಟ್ರುಹಾಕಿದುವು ಬಡಾಫಕೀರರು ಆ ಹುಲಿಗಳ ಬೆನ್ನು ಸವರಿ ತಲೆ ಸವರಿದರು ಅಲ್ಲಿಂದ ಒಳಗಿನ ಭವನವನ್ನು ಹೊಕ್ಕರು ಹುಲಿಗಳ ಘರ್ಜನೆಯನ್ನು ಕೇಳುತ್ತಲೇ ಟಿಪ್ಪೂಸುಲ್ತಾನರು ಆಸನದಿಂದ ಎದ್ದು ಬರುತ್ತಿದ್ದರು ಎದುರಿನಲ್ಲಿ ಬಡಾಫಕೀರರನ್ನು ಕಂಡು ಅವರಿಗೆ ಆಶ್ಚರ್ಯವಾಯಿತು ಸುಲ್ತಾನರು ಅತ್ಯಂತ ಆದರದಿಂದ ಫಕೀರರಿಗೆ ಹಸ್ತಲಾಘವನ್ನು ಕೊಟ್ಟು ಮಹಲಿನೊಳಗೆ ಕರದೊಯ್ದು ಆಸನದಲ್ಲಿ ಕುಳ್ಳಿರಿಸಿದರು

ಫಕೀರಜಿ ! ಎಷ್ಟೊಂದು ಕಾಲದ ಮೇಲೆ ತಮ್ಮ ದರ್ಶನವಾಯಿತು ಈ ಮಹಾ ಯುದ್ಧದ ಕೊನೆಯ ಘಟ್ಟದಲ್ಲಿಯಾದರೂ ತಮ್ಮ ದರ್ಶನ ದೊರತಿದ್ದು ನನ್ನ ಭಾಗ್ಯ

ಸುಲ್ತಾನರವರೇ, ನನಗೆ ರಾಜಧಾನಿಯ ವಿಚಾರಗಳೆಲ್ಲಾ ಆಮೂಲಾಗ್ರವಾಗಿ ಗೊತ್ತಿದೆ. ಇಯಜ್ ಖಾನರವರ ಮತ್ತು ನಿಮ್ಮ ಸಮಾಗಮವನ್ನು ಕೇಳಿ ಈ ಯುದ್ಧದ ವಿಜಯವನ್ನು ನಿರೀಕ್ಷಿಸುತ್ತಲಿದ್ದೆ ಇಯಜ್ ಖಾನರ ಮರಣವನ್ನು ಕೇಳಿ, ಎಂದೂ ಅಧೈರ್ಯಪಡದ ನನ್ನ ಮನಸ್ಸು ಕಳವಳಗೊಂಡಿತು ಆದರೂ ನಿಮಗೇ ಜಯವಾಗುವುದೆಂದೂ ಖುದಾನ ಅನುಗ್ರಹವು ನಿಮ್ಮ ಮೇಲಿದೆಯೆಂದೂ ಧೈರ್ಯಮಾಡಿಕೊಂಡಿದ್ದ ಇಂದಿನ ಪ್ರಕರಣದಿಂದ ಮೈಸೂರು ಧ್ವಂಸವಾಗಿ ಹೋಗುವುದೆಂದು ಕಾತುರಗೊಂ ಕಡೆಯ ಕ್ಷಣದಲ್ಲಿ ಆ ಸೇನಾನಾಯಕರ ಪ್ರಾಣಭಿಕ್ಷೆಯನ್ನು ಕೇಳಲು ನಿನ್ನಲ್ಲಿಗೆ ಬಂ[illegible] ಅವರ ತಪ್ಪನ್ನು ಕ್ಷಮಿಸು, ನಿನಗೆ ಈ ಯುದ್ಧದಲ್ಲಿ ಸಂಪೂರ್ಣ ಜಯ ವಾಗುವುದು

ಬಡಾಫಕೀರರವರೇ, ನನ್ನ ಅಪರಾಧವನ್ನು ಕ್ಷಮಿಸಬೇಕು. ಅವರ ತಪ್ಪು

ಮಾತೀತವಾದುದು ! ಭರದರಬಾರಿನಲ್ಲಿ ವಿಚಾರಣೆಯಾಗಿ ಅವರಮೇಲೆ ರಾಜಾಜ್ಞೆ
ಾಗಿದೆ ಅವರನ್ನು ಕ್ಷಮಿಸುವುದಕ್ಕಿಂತ ನಾನು ಆತ್ಮಹತ್ಯಮಾಡಿಕೊಳ್ಳುವುದು
)

ಸುಲ್ತಾನನೇ, ಅಂದು ಮುಹಮ್ಮದಾಲಿಯವರ ವಧೆಯನ್ನು ಮಾಡಲೂ ನೀನು
ನೇ ವರ್ತಿಸಿದೆ ಇಯಜ್‌ಖಾನರ ವಿಷಯದಲ್ಲಿ ಕೊನೆಯುವರೆಗೂ ಕೃತ್ರಿಮ
ೇ ನಡೆದೆ ಇಂದು ಈ ಮಹಾಯುದ್ಧವು ಪ್ರಾಪ್ತವಾಗಿರುವಾಗ ಈ ಸೇನಾನಾ
ನ್ನು ಗುಂಡಿನ ಬಾಯಿಗೆ ಕಟ್ಟಿಸುವುದು ಆತ್ಮಹತ್ಯಕ್ಕಿಂತಲೂ ದೊಡ್ಡ ಅಪರಾಧ
ಗಪಟ್ಟಣದ ರಾಜ್ಯವು ಇಂದೇ ಧ್ವಂಸವಾಗಿ ಹೋಗುವುದು ಆ ಸೇನಾನಾಯಕ
ಕ್ಷಮಾಭಿಕ್ಷ ಕೊಡು ! ನಾಳೆ ಪ್ರಾತಃಕಾಲ ಯುದ್ಧವನ್ನು ಹೂಡು ನಿನಗೆ
ಂಡಜಯವಾಗುವುದು !

ಇಲ್ಲ, ಫಕೀರಜಿ ! ಈ ಲೋಕವು ನಾನು ಅವರಿಗೆ ಕ್ಷಮಾಭಿಕ್ಷೆ ನೀಡಿದೆನೆಂದು ಭಾವಿಸುವುದಿಲ್ಲ ಟಿಪ್ಪೂಸುಲ್ತಾನನು ಯುದ್ಧವನ್ನು ಗೆಲ್ಲಲಾರದೆ ರಾಜ್ಯದ ಅಪರಾಧಿಗಳ ಶರಣು ಹೊಕ್ಕನೆಂದು ಲೋಕವು ನನ್ನನ್ನು ಹಳಿಯುವುದು ಇಷ್ಟು ಅಪಮಾನವನ್ನು ಹೊಂದಿದ ಆ ಸೇನಾನಾಯಕರು ಈಗ ಪುನಃ ಸ್ವಾಮಿಭಕ್ತರಾಗುವುದಿಲ್ಲ. ಅವರು ಶತ್ರುಗಳ ಕಡೆಯೇ ಹೋಗಿ ಸೇರಿಕೊಳ್ಳುವರು ನನ್ನನ್ನು ಸೆರೆಹಿಡಿದು ಶತ್ರುಗಳಿಗೆ ಒಪ್ಪಿಸುವರು ಅಂಥಾ ಅಪಮಾನವನ್ನು ನಾನು ಸಹಿಸಲಾರೆ ನಾನೊಬ್ಬನೇ ಈ ಯುದ್ಧವನ್ನು ಜಯಿಸುವೆನು, ಇಲ್ಲವೇ ರಣಕ್ಷೇತ್ರದಲ್ಲಿ ವೀರನಂತೆ ಮಡಿಯುವೆನು ಈ ರಾಜಕೀಯದಲ್ಲಿ ಮಧ್ಯೆ ತಾವು ಬರಬೇಡಿರಿ ಶ್ರೀರಂಗಪಟ್ಟಣವನ್ನು ಆಶೀರ್ವದಿಸಿರಿ.

ಬಡಾಫಕೀರನು ವಿಷಣ್ಣವದನನಾಗಿ, "ಬೇಟಾ ! ಭಗವಂತನ ಪ್ರೇರಣೆ ! ಆ ಜಗದೀಶನ ಇಚ್ಛೆ ! ಇಂದೇ ಕಡೆಯ ದಿನ" ಎಂದು ಹೇಳುತ್ತಾ ಹೊರಟು ಹೋದನು

ಸ್ವಯಂ ಟಿಪ್ಪೂಸುಲ್ತಾನನು ವಧ್ಯಭೂಮಿಗೆ ಆಗಮಿಸಿದನು ವೇದಿಕೆಯ ಮೇಲೆ ನಿಂತು—"ಅಪರಾಧಿಗಳ ಮೇಲೆ ತೋಫು ಉಡಾಯಿಸಿರಿ" ಎಂದು ಕರ್ಕಶ ಕಂಠದಿಂದ ಆಜ್ಞೆ ಮಾಡಿದನು.

ಈ ಸಮಾಚಾರವು ಎಲ್ಲ ಸೈನ್ಯ ಶಿಬಿರಗಳಲ್ಲಿಯೂ ಗೊತ್ತಾಗಿ ಹೋಗಿದ್ದಿತು. ನಗರದ ಶಿಬಿರದಲ್ಲಿಯೂ, ದೌಲತ್ ಮತ್ತು ರಾಧಾರಾಣಿಯರು ಈ ವಾರ್ತೆಯನ್ನು ಕೇಳಿ ಈ ದುರ್ಘಟ ಪ್ರಮೇಯವನ್ನು ತಪ್ಪಿಸಬೇಕೆಂದು ಕುದರೆಗಳನ್ನೇರಿ ದೌಡಾಯಿಸುತ್ತಾ ಬಂದರು

ಆ ಕುದುರೆಗಳು ಸುಲ್ತಾನರು ನಿಂತಿದ್ದ ವೇದಿಕೆಯ ಮುಂಭಾಗದಲ್ಲಿ ಬಂದು ನಿಂತವು ರಾಣಿಯರಿಬ್ಬರೂ ಆ ವೇದಿಕೆಯನ್ನೇರಿ ಸುಲ್ತಾನರ ಮುಂದೆ ನಿಂತರು.

ಹಿಂದುಗಡೆ ಹದಿನಾಲ್ಕು ತೋಪುಗಳು ಢಂ ಢಂ ಎಂದು ಹಾರಿದುವು ನಭೋಮಂಡಲವೆಲ್ಲವೂ ಧೂಮಾವೃತವಾಯಿತು ದೌಲತ್ತಳು ಹಿಂದಿರುಗಿ ನೋಡಿದಳು 14 ಸೇನಾನಾಯಕರು ಸತ್ತು ಬಿದ್ದಿದ್ದರು ದೌಲತ್ತಳು ಸಾಮಾನ್ಯ ಸ್ತ್ರೀಯಂತೆ ಕಿಟ್ಟನೆ ಕಿರುಚುತ್ತಾ ಮೂರ್ಛಿತಳಾಗಿ ಭೂಮಿಯ ಮೇಲೆ ಬಿದ್ದಳು ರಾಧೆಯು ಬಿರುಗಣ್ಣಿನಿಂದ ಈ ದೃಶ್ಯವನ್ನು ನೋಡುತ್ತಿದ್ದಳು ಸುಲ್ತಾನನು ಶಿಲಾಪ್ರತಿಮೆಯಂತ ಇದಲ್ಲವನ್ನೂ ನೋಡುತ್ತಿದ್ದನು ಅರಮನೆಯ ಅಂಗಳವೆಲ್ಲವೂ ಆರ್ತನಾದಗಳಿಂದ ತುಂಬಿ ಹೋಯಿತು

## ದುರ್ದಿನದ ಪ್ರಭಾವ

ಹದಿನಾಲ್ಕು ಮಂದಿ ಸೇನಾನಾಯಕರನ್ನು ತೋಪಿಗೆ ಕಟ್ಟಿಸಿದ ಭಯಂಕರ ವಾರ್ತೆಯು, ಕಾಡು ಕಿಚ್ಚಿನಂತೆ ಆ ಸೈನ್ಯಸಾಗರದಲ್ಲಿ ಹರಡಿತು ಎಲ್ಲರಿಗೂ ಭಯ ತಮ್ಮ ತಮ್ಮ ಸೇನಾನಾಯಕರಿಗೆ ಪ್ರಾಪ್ತವಾದ ಅವಸ್ಥೆಯಿಂದ ಇಡೀ ಸೈನ್ಯಸಾಗರವು ಕ್ಷುಬ್ಧವಾಗಿ ಹೋಯಿತು ಸೈನಿಕರೆಲ್ಲರೂ ಟಿಪ್ಪೂಸುಲ್ತಾನನನ್ನು ಶಪಿಸುತಾ ದಿಕ್ಕಾಪಾಲಾಗಿ ಓಡಲಾರಂಭಿಸಿದರು ಸೈನ್ಯಾಧಿಕಾರಿಗಳು ಅವರುಗಳನ್ನು ನಂಬಿ ಭಯಗಳಿಂದ ತಡೆಗಟ್ಟಲು ಪ್ರಯತ್ನ ಪಟ್ಟರು ಎಲ್ಲಾ ವ್ಯರ್ಥವಾಯಿತು ಈ ಸಮಾಚಾರವನ್ನು ದೂತರು ಭಯ ಭೀತರಾಗಿ ಸುಲ್ತಾನರಲ್ಲಿ ಅರಿಕೆ ಮಾಡಿದರು ಸುಲ್ತಾನರು ಮರುಮಾತಾಡಲಿಲ್ಲ ಶ್ರೀರಂಗಪಟ್ಟಣದ ಮಂತ್ರಿಗಳು ಸರದಾರರು ಈ ಸಮಾಚಾರವನ್ನು ಕೇಳಿದರು. ದಿಕ್ಕು ತೋಚದೆ ಚಿಂತಾಕ್ರಾಂತರಾದರು ಆ ರಾತ್ರಿಯ ಕಡೆಯ ಝಾಮದಲ್ಲಿ ದೌಲತ್ತಳು ಮೂರ್ಛೆಯಿಂದ ಎದ್ದಳು ರಾಧಾರಾಣಿಯು ಪಕ್ಕದಲ್ಲಿಯೇ ಕುಳಿತಿದ್ದಳು ದೌಲತ್ತಳು ರಾಧೆಯ ಕಡೆ ತಿರುಗಿ "ರಾಣಿಯವರೇ, ಇನ್ನು ಶ್ರೀರಂಗಪಟ್ಟಣಕ್ಕೆ ಉಳಿಗಾಲವುಂಟೆ ? ಸುಲ್ತಾನರಿಗೆ ಈ ಯುದ್ಧದಲ್ಲಿ ಜಯವುಂಟೇ" ಎಂದು ನಿಟ್ಟುಸಿರು ಬಿಟ್ಟಳು ರಾಧೆಯು ಗದ್ಗದಸ್ವರದಿಂದ "ಏಳು! ಸಹೋದರಿ! ಜಯಾಪಜಯಗಳು ಭಗವಂತನ ಅಧೀನ ಇನ್ನೂ ನಮ್ಮ ಕರ್ತವ್ಯವು ಉಳಿದಿದೆ ಧೈರ್ಯದಿಂದ ಮೇಲಕ್ಕೇಳು ಶ್ರೀರಂಗಪಟ್ಟಣದ ಸೈನ್ಯಗಳು ಛಿನ್ನಭಿನ್ನವಾಗಿ ಓಡುತ್ತಿವೆ ಅವುಗಳನ್ನು ಹಿಂದಕ್ಕೆ ತಿರುಗಿಸೋಣ, ದೇವರಿದ್ದಾನೆ ಎಂದು ಹೇಳಿ ದೌಲತ್ತಳನ್ನು ಎಬ್ಬಿಸಿದಳು

ಇಬ್ಬರೂ ಒಂಟೆಗಳ ಮೇಲೆ ಚಿನ್ನದ ಮೊಹರುಗಳ ಥೈಲಿಗಳನ್ನು ಹ[illegible] ಕೊಂಡು ಶ್ರೀರಂಗಪಟ್ಟಣದ ಉತ್ತರ, ದಕ್ಷಿಣ ಗಡಿಗಳಿಗೆ ಹೋಗಿ ನಿಂತರು ಟಿಪ್ಪೂ ಸುಲ್ತಾನರನ್ನು ಶಪಿಸುತ್ತಾ ಪಲಾಯನ ಮಾಡುತ್ತಿರುವ ಸೈನಿಕರನ್ನು ತಡೆದು ಸಿ[illegible] ಅವರಿಗೆಲ್ಲಾ ಚಿನ್ನದ ಮೊಹರಾಗಳನ್ನು ಭೂರಿದಕ್ಷಿಣೆ ಕೊಡುತ್ತಾ ಹಿಂದಿರುಗಿಸುತ್ತಿ

ಕೆಲವರು ಸೈನಿಕರು ಹಿಂದಿರುಗಿದರು ಮತ್ತೆ ಕೆಲವರು ಚಿನ್ನದನಾಣ್ಯಗಳನ್ನು
ೊಂಡು ಬೇರೆ ಬಾಗಿಲಿನಿಂದ ಊರುಬಿಟ್ಟು ಹೊರಟುಹೋಗುತ್ತಿದ್ದರು.
ರಾಣಿಯರೂ ನಿರಾಶಾಹೃದಯದಿಂದ ಆ ಸೈನಿಕರನ್ನು ತಡೆಗಟ್ಟುತ್ತಲೇ
ು

ಸ್ವಯಂ ಸುಲ್ತಾನನು ಓಡಿಹೋಗುತ್ತಿರುವ ಸೈನಿಕರನ್ನು ತಡೆಗಟ್ಟಲು ಎಷ್ಟೋ
ಯತ್ನಪಟ್ಟನು.

ಅಷ್ಟರಲ್ಲಿ ಇಂಗ್ಲೀಷರ ದಂಡು ಶ್ರೀರಂಗಪಟ್ಟಣದ ಮೇಲೆ ಹಲ್ಲಾ ಹತ್ತುತ್ತಿದೆ
ಯೆಂಬ ಸಮಾಚಾರವು ಸುಲ್ತಾನರ ಕಿವಿಗೆ ಬಿತ್ತು ಸುಲ್ತಾನನು ಅರಮನೆಯನ್ನು
ಪ್ರವೇಶಿಸಿ ಯುದ್ಧದ ದಿರಸನ್ನು ತೊಟ್ಟು ಬ್ರಾಹ್ಮಣರಿಗೂ, ಫಕೀರರಿಗೂ ಹೇರಳವಾದ
ಾನ ದಕ್ಷಿಣೆಗಳನ್ನು ಕೊಟ್ಟು, ತನ್ನ ಸೈನ್ಯದೊಡಗೂಡಿ ಯುದ್ಧಕ್ಕೆ ಹೊರಟನು.
ಂಗ್ಲೀಷರ ದಂಡು ಕೋಟೆಯಮೇಲೇರಿ ಬರುತ್ತಿತ್ತು, ಸುಲ್ತಾನನು ವೀರಾವೇಶ
ಒಂದೊಂದು ಏಟಿಗ ಹತ್ತು ಹತ್ತು ಸೈನಿಕರನ್ನು ಸಂಹರಿಸುತ್ತಾ ಇಂಗ್ಲೀಷ್
ನ ಮೇಲೆ ಆಕ್ರಮಣ ಮಾಡುತ್ತಿದ್ದನು ಯುದ್ಧವು ಬಹಳ ಬಿರುಸಿನಿಂದ
ತ್ತು

ಇತ್ತ ಶ್ರೀರಂಗಪಟ್ಟಣದಿಂದ ಅನೇಕರು ಸಂಸಾರಸಮೇತ ಪಟ್ಟಣವನ್ನು
ೊರಡುತ್ತಿದ್ದರು ಇದೇ ಸಮಯದಲ್ಲಿ ವರ್ತಕನೊಬ್ಬನು ಎರಡು ಒಂಟೆಗಳ
ಾಮಾನು ಹೇರಿಕೊಂಡು, ಅವಕುಂಠನವತಿಯೊಬ್ಬಳನ್ನು ಜೊತೆಯಲ್ಲಿ
ು ಲಗುಬಗೆಯಿಂದ ಪಟ್ಟಣವನ್ನು ಬಿಟ್ಟು ಹೊರಡುತ್ತಿದ್ದನು ದಾರಿ
ಾರು ಇಮಾಮನು ಸೈನಿಕನ ಉಡುಪನ್ನು ಧರಿಸಿ ಕುದುರೆಯ ಮೇಲೆ
ಏನೋ ಸಂದೇಹದಿಂದ ಆ ವರ್ತಕನನ್ನು ಕುರಿತು, "ಸೇಟರೇ, ಎಲ್ಲಿಗೆ
ಳ ಮೇಲೆ ಇರುವುದೇನು? ಈ ಅವಕುಂಠನವತಿಯಾದ ಬೀಬಿ
ರಹದಾರಿ ಇದೆಯೋ?" ಎಂದು ಕೇಳಿದನು.

ತಬ್ಬಿಬ್ಬಾಗಿ ಆ ಯೋಧನ ಕಡೆ ತಿರುಗಿ ನೋಡಿದನು ಅವಕುಂಠ
ತ್ತ ಚಿನ್ನದ ಮೊಹರುಗಳನ್ನು ತೆಗೆದು ಸೈನಿಕನ ಕೈಗೆ ಕೊಡಲು
ೈನಿಕನಿಗೆ ಸಂದೇಹವುಂಟಾಯಿತು ಅವನು ಒರೆಯಿಂದ ಕತ್ತಿಯನ್ನು
ಯ ಕಡೆ ಬೀಸಿದನು ಅವಕುಂಠನವತಿಯು ಆ ಪೆಟ್ಟು ವರ್ತಕನಿಗೆ
ಭಾವಿಸಿ ಕಿರುಚಿಕೊಳ್ಳುತ್ತಾ ಮುಸುಕನ್ನು ತೆಗೆದಳು.

ಮಾಮನು ಅವಳ ಮುಖವನ್ನು ನೋಡಿ, "ಓಹೋ! ಹುಚ್ಚಿ! ಸಾವಿತ್ರಿ!
ಪಯಣ? ಈ ಜೋಡಿ ಯಾರು? ಮೀರ್‌ಸಾದಕನು ಎಲ್ಲಿ ಹೋದನು?"

ಹಿಂದೆ ಕೇಳುತ್ತಾ ಕುದುರೆಯಿಂದ ಕೆಳಗಿಳಿದು ಅವಳ ಕೈಯನ್ನು ಭದ್ರವಾಗಿ ಹಿಡಿದು ಕೊಂಡನು ಒಂಟೆಯ ಮೇಲಿದ್ದ ಗಂಟನ್ನು ಹಿಡಿದು ಎಳೆದನು ಆ ಥೈಲಿಯು ಕೆಳಗೆ ಬಿದ್ದು ಚಿನ್ನದ ನಾಣ್ಯಗಳು ನೆಲದಮೇಲೆ ಚೆಲ್ಲಿದವು ಅದನ್ನು ನೋಡಿ ಇಮಾ ಮನಿಗೆ ಆಶ್ಚರ್ಯವಾಯಿತು ಅಷ್ಟರಲ್ಲಿ ಆ ವರ್ತಕನು ಸಾವಿತ್ರಿಯನ್ನು ಬಿಡಿಸಿ ಕೊಳ್ಳಲು ಇಮಾ ... ನ ಮೇಲೆ ಆಕ್ರಮಣ ಮಾಡಲು ಹೊರಟನು ಇಮಾಮನು ಸಮೀ ಪದಲ್ಲಿ ಆ ವರ್ತಕನ ಮುಖವನ್ನು ನೋಡಿದನು ಗುರುತು ಹಿಡಿದು ಪಕಪಕ ನಕ್ಕನು

ಏನು! ಸುಲ್ತಾನರ ದರಬಾರಿನ ಸಂದಾರರೇ, ಕಳ್ಳರಂತೆ ಓಡುತ್ತಿರುವುದೇನು ಮೀರ್‌ಸಾದಕ್! ನಿನ್ನಂಥಾ ದ್ರೋಹಿಯು ಈ ಭೂಮಂಡಲದಲ್ಲಿ ಎಲ್ಲಿಯೂ ಇಲ್ಲ ನಿನಗೆ ಶಿಕ್ಷೆಯಾಗದೇ ಇದ್ದರೆ ದೇವರು ಮೆಚ್ಚುವುದಿಲ್ಲ ಎಂದು ಹೇಳಿ ಕತ್ತಿಯನ್ನು ಬೀಸಿದನು ಮೀರ್‌ಸಾದಕನ ತಲೆಯು ಭೂಮಿಯ ಮೇಲೆ ಬಿತ್ತು

ಹುಚ್ಚಿ ಸಾವಿತ್ರಿಯು, "ಇಮಾಂ! ನೀನು ನನ್ನ ಪತಿಯನ್ನು ಅನ್ಯಾಯವಾಗಿ ಕೊಂದಿರುವೆ. ದೌಲತ್‌ರಾಣಿಯವರಲ್ಲಿ ಹೇಳಿ ನಿನಗೆ ತಕ್ಕ ಶಿಕ್ಷೆ ಮಾಡಿಸುತ್ತೇನೆ' ಎಂದು ಹೇಳಿ ಇಮಾಮನನ್ನು ನಾನಾವಿಧವಾಗಿ ಬೈಯುತ್ತಾ, ಶಪಿಸುತ್ತಾ ಶ್ರೀರಂಗ ಪಟ್ಟಣದ ಕೋಟೆಯೊಳಕ್ಕೆ ಹಿಂದಿರುಗಿ ಹೋದಳು

ಇಮಾಮನು ಕುದುರೆಯ ಮೇಲೆ ಕುಳಿತು ಕೋಟೆಯೊಳಗೆ ಪ್ರವೇಶಮಾ... ದನು. ಮಧ್ಯಾಹ್ನದ ಸಮಯವಾಗಿತ್ತು ಫಿರಂಗಿ ಗುಂಡುಗಳ ಶಬ್ದವು ಕೇಳಿಬರು ತ್ತಿತ್ತು. ಇಂಗ್ಲೀಷ್ ದಂಡು ಕೋಟೆಯನ್ನು ಒಡೆದು ಶ್ರೀರಂಗಪಟ್ಟಣವನ್ನು ಪ್ರವೇ ಮಾಡಿತು ಸುಲ್ತಾನನು ಹೆಜ್ಜೆಹೆಜ್ಜೆಗೂ ಪರಾಕ್ರಮದಿಂದ ಯುದ್ಧ ಮಾಡಿದ... ಕೋಟೆಯ ಸಮೀಪದಲ್ಲಿ ಸುಲ್ತಾನನು ಗುಂಡಿನೇಟು ತಗಲಿ ಕೆಳಗೆ ಬಿದ್ದನು ... ನಡೆಯುತ್ತಲೇ ಇತ್ತು

ದೌಲತ್ತಳು ಕೋಟೆಯ ಬತೇರಿಯ ಮೇಲೆ ಇಂಗ್ಲೀಷರ ಧ್ವಜವನ್ನು ಅಲ್ಲಿಂದ ಕುದುರೆಯನ್ನು ಹಿಂದಿರುಗಿಸಿ ಇಯಜ್‌ಖಾನನ ಸಮಾಧಿಯಿದ್ದೆ... ದಳು. ಸಮಾಧಿಯ ಮುಂದೆ ಕುಳಿತು ಬಿಕ್ಕಿಬಿಕ್ಕಿ ಅಳತೊಡಗಿದಳು ... ವಾಗುತ್ತ ಬಂದಿತು ದೌಲತ್ತಳು ಆ ದುಃಖದ ವೇಗವನ್ನು ತಡೆಯಲಾರ... ಸಮಾಧಿಗೆ ವಂದಿಸಿದಳು ಆ ಸಮಾಧಿಯ ಪಕ್ಕದಲ್ಲಿದ್ದ ಮಹಾವೃಕ್ಷವನ್ನು ತಲೆ... ನೋಡಿದಳು ದೌಲತ್ತಳ ಮನಸ್ಸಿನ ಮೇಲೆ ತನ್ನ ಬಾಲ್ಯದಿಂದ ಅಂದಿನವರೆಗಿನ ಘಟ ನೆಗಳೆಲ್ಲಾ ಒಂದೊಂದಾಗಿ ಮನಸ್ಸಿನ ಮೇಲೆ ಬಂದವು.

ದೌಲತ್ತಳು, "ಜಗದೀಶ! ಅಂದಿನ ನನ್ನ ಆಶಾಕಲ್ಪನೆಗಳೆಲ್ಲಾ ಏನಾದುವು, ಸುಲ್ತಾನಿನೀ ಚಕ್ರಾಧಿಪತ್ಯದ ಕಲ್ಪನೆಯು ಏನಾಯಿತು, ನನ್ನ ಪ್ರಣಯಕ್ಕಾಗಿ ಸರ್ವಸ್ವ